# ಸಮಾಜ ಗರ್ಭದಲ್ಲಿ

ಸಿ. ಬಿ. ಚಂದ್ರಶೇಖರ್

**ವಾಹಿನಿ ಪ್ರಕಾಶನ**

**ಜಯಚಾಮರಾಜ ರಸ್ತೆ, ಬೆಂಗಳೂರು-೨**

ಆಗತಾನೆ ಸ್ನಾನದ ಮನೆಯಿಂದ ಹೊರಬಿದ್ದ ಶಾಂತಳಿಗೆ ಅತ್ಯಂತ ಬೇಸರವಾಯಿತು! .... .... ಇನ್ನೂ ಹೊಗೆಯಾಡುವ ತನ್ನ ಕೆಂಪು ದೇಹಕ್ಕೆ ಮಡಿಸೀರೆಯನ್ನು ಮತ್ತೂ ಬಿಗಿಯಾಗಿ ಅವಚಿ, ಅಲ್ಲೇ ಒಂದು ಕ್ಷಣ ನಿಂತು ನೋಡಿದಳು.

ಹೌದು, ಅದು ಆಗತಾನೆ ಅಭ್ಯಂಜನ ಮುಗಿಸಿ ಬಂದ ಯಾವ ಕೋಮಲ ಜೀವಿಗಾದರೂ ಬೇಸರ ತರುವ ಪರಿವರ್ತನೆಯೇ! ಅವಳು ತಲೆಗೆ ಎಣ್ಣೆ ಒತ್ತಿಕೊಳ್ಳುತ್ತಿದ್ದಾಗ ಉರಿಉರಿ ಬಿಸಿಲು ಗಗನಾದ್ಯಂತ ನಿಗಿನಿಗಿಸುತ್ತಿತ್ತು. ಆ ಮೂಲೆ, ಈ ಮೂಲೆಯಲ್ಲಿ ಅಲ್ಪಸ್ವಲ್ಪ ಕಾರ್ಮೋಡಗಳೂ ನಿಂತಿದ್ದುವು. ಆಗವಳಿಗೆ ಇಂದು ಮಳೆಗರೆಯ ಬಹುದು ಎನಿಸಿರಲಿಲ್ಲ.

ಆದರೆ ಈಗ! .. ....

ಸೂರ್ಯನ ಒಂದು ಬಿಸಿಕಿರಣವೂ ಕಾಣದು. ಎತ್ತೆತ್ತ ನೋಡಿದರೂ ಕರಿಮುಗಿಲು, ವರ್ಷಧಾರೆ, ಹುಚ್ಚುಗಾಳಿ, ಗುಡುಗಿನ ಅಬ್ಬರ, ತೊನೆದು ತೊನೆದು ಮೇಲೆರಗುವ ಥಂಡಿ ಇರುಚಲು, ಹಾದಿ-ಬೀದಿಗಳೆಲ್ಲೆಲ್ಲಾ ಹೊಳೆಹೊಳೆಯಾಗಿ ಹರಿಯುವ ಮಳೆಯ ನೀರು!........ಇಳೆ ಮುಗಿಲುಗಳ ಈ ಸಂಪೂರ್ಣ, ಸ್ವಚ್ಛಂದ, ಸುದೀರ್ಘ ಉಗ್ರ-ಸಂಯೋಗಾಲಿಂಗನವನ್ನು ನಿಂತು ನೋಡುವುದಾದರೂ ಎಷ್ಟುಹೊತ್ತು ಸಾಧ್ಯ.

ದೊಡ್ಡ ನಿಟ್ಟುಸಿರೊಂದನ್ನು ಬಿಡುತ್ತಾ ಶಾಂತ ತನ್ನ ಕೊಠಡಿಯತ್ತ ನಡೆದಳು. ಕನ್ನಡಿಯ ಮುಂದೆ ನಿಂತು, ಲಘುವಾಗಿ ಸೀರೆಯುಟ್ಟು, ರಭಸದಿಂದ ತಲೆ ಒರೆಸಿಕೊಳ್ಳಲಾರಂಭಿಸಿದಳು. ನೆನೆದ ತಲೆ, ಸುರಿವ ಮಳೆ, ಇವೆರಡು ಸಂಗತಿಗಳೂ ಅವಳ ಮನದಲ್ಲಿ ಸಂಘರ್ಷಣೆಯಾದುವು.

'ಥೂ!........ನಾನು ತಲೆ ನೆನೆಸಿದ ದಿನವೇ ಮಳೆಗರೆಯಬೇಕೆ? ........ಎಂಥ ಕೆಟ್ಟಮಳೆ!' ಎಂದುಕೊಂಡಳು. ಆದರೆ ಮರುಕ್ಷಣದಲ್ಲೇ 'ಥೂ!........ಮಳೆ ಬರುವ ದಿನವೇ ತಾನು ತಲೆ ನೆನೆಸಬೇಕೆ?........ ಎಂಥ ಕೆಟ್ಟಹುಡುಗಿ!' ಎಂಬ ಪ್ರತಿಯೋಚನೆಯೊಂದು ಅವಳ ಮನದಲ್ಲಿ ಮಿಂಚಿತು.

ಶಾಂತ ತನ್ನಲ್ಲಿ ತಾನೇ ನಸುನಕ್ಕಳು. ಕನ್ನಡಿಯಲ್ಲಿ ಮೂಡಿದ್ದ ಅವಳ ಪ್ರತಿಬಿಂಬವೂ ನಕ್ಕಿತು. ಅದನ್ನು ಕಂಡು ಅವಳಿಗೆ ತುಂಬಾ ಕೌತುಕವಾಯಿತು. ಟವಲಿನಿಂದ ತಲೆ ಒರೆಸುವುದನ್ನು ಒಂದು ಕ್ಷಣ ನಿಲ್ಲಿಸಿ, ಕನ್ನಡಿಯಲ್ಲಿ ತನ್ನನ್ನು ತಾನೇ ಆಸಕ್ತಿಯಿಂದ ನೋಡಿಕೊಳ್ಳುತ್ತಾ, ಮತ್ತೊಮ್ಮೆ ಹಿಂದಿನಂತೆಯೇ ನಕ್ಕಳು. ಈಗವಳಿಗೆ ಮತ್ತೂ ಆಶ್ಚರ್ಯವಾಯಿತು.

ತಲೆಕೂದಲನ್ನು ಬಾಚದೆ, ಹೀಗೆ ಸ್ವಚ್ಛಂದವಾಗಿ ಬಿಟ್ಟಿರುವಾಗ ತಾನೆಷ್ಟು ಸುಂದರಿ, ಎಂದವಳಿಗೆ ಇದುವರೆಗೂ ಅರಿವಾಗಿರಲಿಲ್ಲ. ಈ ತನ್ನ ನವರೂಪ ಶೋಧನೆಯಿಂದ ಅವಳ ದೇಹಾದ್ಯಂತ ಉತ್ಸಾಹದ ತುಂಬುಹೊಳೆಯೊಂದು ಹರಿದಾಡಿತು.

ತಲೆ ಒರೆಸಿ ಗಂಟುಹಾಕಿದುದಾಯಿತು.........ಬಳಿಯಿದ್ದ ಬಾಚಣಿಗೆ ಅವಳ ಕೈಗೆ ಬಂದಿತು. ಅವಳ ಸಂಶಯಗ್ರಸ್ತ ನೋಟ ಅಚೆ-ಈಚೆ ಹೊರಳಿತು. ಮರುಕ್ಷಣವೇ ನಿಶ್ಚಿಂತೆ. ನಿರ್ಭಯದ ನೆಮ್ಮದಿಯಿಂದ ಅವಳ ಸೆರಗು ಎದೆಯ ಮೇಲಿಂದ ನಿಧಾನವಾಗಿ ಕೆಳಗೆ ಜಾರಿತು. ತುಂಬಿದೆದೆಯ ಸುಂದರ ಸರೋವರದಿಂದ ಕೆಂದಾವರೆಯ ಜೋಡಿ ಮೊಗ್ಗುಗಳೆರಡು ಹೊರಗೆ ತಲೆಯಿರಿಸಿದುವು. ಕನ್ನಡಿಯಲ್ಲಿ ತೇಲಿನಿಂತ ಅವುಗಳ ಮೋಹಕ ಆಕೃತಿಯನ್ನೇ ಮಂತ್ರಮುಗ್ಧಳಂತೆ ದಿಟ್ಟಿಸಿ

ನೋಡಿದಳು ಶಾಂತ !

.. .....ಅವುಗಳಲ್ಲಿ ಪೂರ್ಣವಾಗಿ ಅರಳಿ, ಉಗ್ರಪರಿಮಳ ಕಾರುವ ಪ್ರೌಢಪುಷ್ಪಗಳ ಉನ್ಮಾದಕತೆಯಿರಲಿಲ್ಲ. ತಮ್ಮ ಸುಪೂರ್ಣ ಸವಿ ಸೌಂದರ್ಯಗಳನ್ನು ದಶದಿಕ್ಕಿಗೂ ಎರಚಿ ಮೆರೆಯುವ ಅಪಾರ ಔದಾರ್ಯ, ಅಜೇಯ ಆತ್ಮವಿಶ್ವಾಸಗಳೂ ಇರಲಿಲ್ಲ. ಅದಕ್ಕೆ ಬದಲು ಅವು ಹಸಿಹಸಿಯಾದ ಎಳಸು ಕಂಪನ್ನು ಪಡೆದಿದ್ದುವು ತಮ್ಮ ಸುಪ್ತ ಸವಿಸೌರಭಗಳನ್ನು ವೃದ್ಧಿಪಡಿಸಿಕೊಂಡು ಆ ಉತ್ತುಂಗ ಉನ್ಮಾದಕ ಪದವಿಗೇರಲು, ಕ್ಷಣಕ್ಷಣವೂ ಅವು ವಿಕಸನದ ಪರಿಮಳಿತ ಪಥದಲ್ಲಿ ತಮ್ಮ ಅಗೋಚರಯಾತ್ರೆ ಬೆಳೆಸುತ್ತಿದ್ದುವು.

ಅವುಗಳನ್ನು ದಿಟ್ಟಿಸಿ ನೋಡಿದಂತೆಲ್ಲಾ ಅವಳ ಮನಕಲ್ಪನೆಯ ಗರಿ ಕೆದರಿ, ಹೃದಯ ಹೆಮ್ಮೆಯಿಂದುಕ್ಕಿ, ಅಂಗಾಂಗಗಳೆಲ್ಲಾ ಯಾವುದೋ ಅವರ್ಣನೀಯ ಪುಳಕಕ್ಕೀಡಾದುವು. ಅವಳ ತುಟಿಗಳ ಮೇಲೆ ಸೊಕ್ಕು ಸಂತೃಪ್ತಿಗಳ ಮಾದಕ ನಗೆಯೊಂದು ವಿಜೃಂಭಿಸಿತು.

ಮರುನಿಮಿಷವೇ ಅವಳ ದೇಹ ಸೆಟೆದು ನಿಂತಿತು. ಕನ್ನಡಿ ಯಲ್ಲವಳು ತನ್ನನ್ನು ತಾನೇ ದಿಟ್ಟಿಸಿ ನೋಡಿಕೊಂಡಳು. 'ಥೂ! ...... ಲಜ್ಜೆಗೆಟ್ಟವಳೆ!' ಎಂದಿತು ಅವಳ ವಿವೇಕ. ಶಾಂತ ತುಟಿ ಅದುಮಿ ನಗುತ್ತಾ, ತಲೆ ತಗ್ಗಿಸಿ ಬಾಡಿಯ ಗುಂಡಿ ಹಾಕಿಕೊಂಡಳು

ಕೂಡಲೇ ಅವಳು ತತ್ತರಿಸಿ ನೆಲಕ್ಕೆ ಬೀಳುವಂತಾಯಿತು. ಹೆದರಿಕೆಯಿಂದ ಬೆಚ್ಚಿ, ಅಂಗಾಂಗಗಳೆಲ್ಲಾ ಹತೋಟಿ ಮೀರಿ ನಡುಗ ಲಾರಂಭಿಸಿದುವು.... ಹೊರಗಿನ ಭೀಷಣ ಪ್ರಕೃತಿ ಅವಳ ನೆತ್ತಿಯ ಮೇಲೇ ಒಂದು ಭಯಂಕರ ಬರಸಿಡಿಲನ್ನು ಬಾರಿಸಿತ್ತು....!

ಅವಳ ತಂಗಿ, ಶ್ಯಾಮಲ, ಹಟಾತ್ತನೆ 'ಅಕ್ಕಾ!' ಎಂದು ಚೀರಿ ಅವಳೆಡೆಗೆ ಓಡಿಬಂದಳು. ತನ್ನ ಮುಖವನ್ನು ಅವಳ ಎದೆಯಲ್ಲಿ ಹುದುಗಿಸಿ ಹೆದರಿಕೆಯಿಂದ ಅಳತೊಡಗಿದಳು. ಅವಳ ಮೈ ಸವರಿ ಸಮಾಧಾನಪಡಿಸುವಾಗ ಶಾಂತಳ ಕೈಕಾಲುಗಳೂ ಕಂಪಿಸುತ್ತಿದ್ದುವು. ....'ಅಬ್ಬಾ! ಎಂಥ ದೆವ್ವಸಿಡಿಲು!... ....ಅದು ಬಾರಿಸಿದಾಗ ನನ್ನ ಎದೆಯೇ ಒಡೆದಂತಾಯ್ತು. ಪಾಪ!........ ಒಂದು ಚಿಕ್ಕ ಇಲಿಗೂ

ಹೆದರುವ ಶ್ಯಾಮಲ ಇನ್ನೆಷ್ಟು ಹೆದರಿಕೊಂಡಳೋ!' ಎಂದುಕೊಂಡು.

"ಎಲ್ಲಿದ್ಯೇ..... ತುಂಬಾ ಹೆದರಿಕೊಂಡೆಯಾ. ?"

ಎಂದು ಅವಳ ಗಲ್ಲವನ್ನು ಮೇಲೆತ್ತಿ ಕೇಳಿದಳು.

ಹೆದರುತ್ತಲೇ ತಲೆಯೆತ್ತಿದ ಶ್ಯಾಮಲಳ ತುಟಿ ಮೂತಿಯೆಲ್ಲವೂ ಸಕ್ಕರೆಮಯವಾಗಿತ್ತು. ಅದನ್ನು ಕಂಡು ಶಾಂತಳಿಗೆ ಹೊಟ್ಟೆ ಬಿರಿಯುವಂತೆ ನಗು ಬಂತು. 'ಪಾಪ! ನನ್ನ ತಲೆಗೆ ನೀರುಹಾಕಿ ಮುಗಿದ ಕೂಡಲೇ ನೇರವಾಗಿ ಅಡಿಗೆ ಮನೆಗೆ ಹೋಗಿ ಸಕ್ಕರೆ ಕದಿಯುತ್ತಿದ್ದಳೇನೋ ........ ಕಳ್ಳತನ ಮಾಡುತ್ತಿರಬೇಕಾದರೇ ಅಂಥ ಸಿಡಿಲು!' ಎಂದುಕೊಂಡು ಅವಳ ಮುಖವನ್ನು ನೋಡಿನೋಡಿ ನಗುವುದಕ್ಕೆ ಆರಂಭಿಸಿದಳು.

ಶ್ಯಾಮಲಳಿಗೆ ತನ್ನ ತಪ್ಪು ಇನ್ನೂ ತಿಳಿದುಬಂದಿರಲಿಲ್ಲ. ಅಕ್ಕನನ್ನೇ ಕಕ್ಕಾವಿಕ್ಕಿಯಾಗಿ ನೋಡುತ್ತಿದ್ದಳು. ಆಗ ಶಾಂತ ಅವಳ ಮೂತಿಯ ಮೇಲೊಂದು ಪ್ರೇಮದ ಏಟು ಹಾಕುತ್ತಾ,

"ಸರಿಯಾಗಿ ಆಗಿದೆ ಶಾಸ್ತಿ" ಎಂದಳು.

ಆಶ್ಚರ್ಯದಿಂದ "ಏಕೇ ?" ಎಂದು ರಾಗವೆಳೆದ ಶ್ಯಾಮಲ, ತಕ್ಷಣ ತಾನೇನು ಮಾಡುತ್ತಿದ್ದೆನೆಂಬುದನ್ನು ಜ್ಞಾಪಿಸಿಕೊಂಡಳು.

"ನಾನೇನು ಅಡಿಗೆ ಮನೇಲಿ ಸಕ್ಕರೆ ತಿನ್ನುತ್ತಿರಲಿಲ್ಲ....... ಸಕ್ಕರೆ ಕಂಡರೇ ನನಗಾಗೋಲ್ಲ...."

ಎಂದು ಅವಸರವಸರವಾಗಿ ಮೂತಿ ಒರೆಸಿಕೊಳ್ಳಲಾರಂಭಿಸಿದಳು. ಅವಳ ಅವಸ್ಥೆಯನ್ನು ನೋಡಿ ಶಾಂತ ಕಿಲಕಿಲನೆ ನಗುತ್ತಾ ..

"ಪಾಪ....ಪಾಪ! ಇವಳಿಗೆ ಸಕ್ಕರೆ ಕಂಡರೇ ಆಗದು.. .ಅದನ್ನು ಬಾಯಲ್ಲಿ ಹಾಕಿದರೂ ಏನು ಮಾಡಬೇಕೆಂದು ಗೊತ್ತಿಲ್ಲ....ಹೋಗಲಿ, ಅಡಿಗೆ ಮನೇಲಿ ಇಷ್ಟೊತ್ತೂ ಮೂತಿ ಒರೆಸಿಕೊಳ್ಳೋ ಇನ್ನಾವ ಕೆಲಸ ಮಾಡ್ತಿದ್ದೆ ಹೇಳು"

ಎಂದಳು. ಶ್ಯಾಮಲ ಉಗುಳು ನುಂಗಲು ಯತ್ನಿಸುತ್ತಾ ತೊದಲಿದಳು.

"ಇಲ್ಲ ಕಣೇ!....ನಿನಗೆ....ನಿನಗೆ ಊಟಕ್ಕೆ ಇಡೋಣ ಅಂತ

ಕಾಯ್ತಿದ್ದೆ....

"ಅಬ್ಬಾ! ........ ಸುಳ್ಳು ಹೇಳುವುದರಲ್ಲಿ ಎಷ್ಟು ಪ್ರವೀಣೆ ಆಗಿಬಿಟ್ಯೇ ನೀನು!........ಹು; ಹೋಗಲಿ ಊಟಕ್ಕಾದರೂ ಇಡು, ಬಾ. ನಿನ್ನ ಕೈಯಿನ ಊಟಾನಾದ್ರೂ ಇವತ್ತು ಮಾಡಿ ಪುಣ್ಯಕಟ್ಟಿ ಕೊಳ್ಳೋಣ."

ಎಂದು ತಲೆಕೂದಲನ್ನು ಸಡಿಲವಾಗಿ ಗಂಟು ಹಾಕುತ್ತಾ ಅಡಿಗೆ ಮನೆಗೆ ನಡೆದಳು.

ಎಣ್ಣೆಯಲ್ಲಿ ನೆತ್ತಿ ಚೆನ್ನಾಗಿ ನೆನೆಯಲೆಂದು ಅವಳು ಸ್ನಾನವನ್ನು ನಿಧಾನ ಮಾಡಿದ್ದಳು. ಆದ್ದರಿಂದಲೇ ಅವಳ ಊಟವೂ ನಿಧಾನ ವಾಗಿತ್ತು. ಮನೆಯವರೆಲ್ಲರೂ ಅವಳು ಸ್ನಾನಕ್ಕೆ ಕೂರುವ ಮೊದಲೇ ಊಟ ಮಾಡಿದ್ದರು.

ಒಂಟಿಯಾಗಿ ಊಟ ಮುಗಿಸಿ ಬಂದ ಶಾಂತ ಕೈಯಲ್ಲೊಂದು ಕಾದಂಬರಿ ಹಿಡಿದು ಹಾಸಿಗೆಯಲ್ಲುರುಳಿಕೊಂಡಳು. ಅವಳ ಮೈ-ಮನ ಗಳೆಲ್ಲವನ್ನೂ ಒಂದು ಬಗೆಯ ಉಲ್ಲಾಸಕರ-ಆಲಸ್ಯ ಆವರಿಸಿತ್ತು. ನಿನ್ನೆ ರಾತ್ರೆಯಿಂದಲೂ ಅವಳಿಗೆ ಸರಿಯಾಗಿ ವಿಶ್ರಾಂತಿಯಿರಲಿಲ್ಲ. ಈಗ ಕಾದಂಬರಿಯನ್ನೋದುವುದಕ್ಕಿಂತಲೂ ಅರ್ಧಗಂಟೆ ನಿದ್ದೆ ಮಾಡುವುದು ಮೇಲು ಎನಿಸುತ್ತಿತ್ತು. ಆದರೂ ಅವಳಿಗೆ ಕಾದಂಬರಿ ಯನ್ನು ಓದಿ ಮುಗಿಸುವ ಆಸೆಯೇ ಅತಿಯಾಗಿತ್ತು. ಅದರ ಸುಶಿಕ್ಷಿತ ನಾಯಕಿ ಗಂಡನ ದುರ್ವರ್ತನೆಯನ್ನು ಎದುರಿಸಿ ಸ್ವತಂತ್ರವಾದ ಹೊಸ ಬಾಳನ್ನು ರೂಪಿಸಿಕೊಳ್ಳಲು ಹೋರಾಡುತ್ತಿದ್ದಳು. ಅವಳ ಗತಿ ಏನಾಗುವುದೋ ಎಂದು ತಿಳಿಯಲು ಶಾಂತ ತುಂಬ ಆತುರಳಾಗಿದ್ದಳು. ಅಂಥ ವಿಚಾರಗಳಲ್ಲೆಲ್ಲಾ ಅವಳಿಗೆ ಅತ್ಯಂತ ಆಸಕ್ತಿ.

ನಿದ್ರೆ ಕಣ್ಣನ್ನು ಕಿತ್ತು ತಿನ್ನುತ್ತಿದ್ದರೂ ಲೆಕ್ಕಿಸದೆ ಉಳಿದ ಮುವ್ವತ್ತು ಪುಟಗಳನ್ನೋದಿ, ಕಾದಂಬರಿಯನ್ನು ಪೂರ್ತಿಗೊಳಿಸಿದಳು. ಅನಂತರವೂ ಅವಳಿಗೆ ಸಂಪೂರ್ಣ ತೃಪ್ತಿಯಾಗಲಿಲ್ಲ. ನಾಯಕಿ ಗಂಡನನ್ನು ಬಿಟ್ಟು, ತಾಯಿಯಮನೆಗೆ ಹೋಗಿ, ಅಲ್ಲಿಂದ ತನ್ನ ಆಶೋತ್ತರಗಳೆಲ್ಲವನ್ನೂ ಆಪ್ತ ಗೆಳೆಯನೊಬ್ಬನಿಗೆ ಪತ್ರಮುಖೇನ

ತಿಳಿಸಿದ್ದಳು. ಆ ಪತ್ರದ ಕೊನೆಯಲ್ಲಿ 'ಯಾರವಳೂ ಅಲ್ಲದ' ಎಂದು ತನ್ನ ಹೆಸರನ್ನು ಬರೆದಿದ್ದಳು. ಅವಳ ನಿರ್ಧಾರ ಮತ್ತು ಆತ್ಮವಿಶ್ವಾಸವನ್ನು ಕಂಡು ಶಾಂತಳಿಗೆ ಸಮಾಧಾನವಾಯಿತು. ಕನಸು-ಮನಸಿನಲ್ಲೂ ಪ್ರಿಯತಮನಂತೆಯೇ ಇದ್ದ ಆ ಆಪ್ತಮಿತ್ರನಿಗೂ, ನಾಯಕಿಗೂ ಪುನಸ್ಸಮಾಗಮವಾಗಿ, ಅವರಿಬ್ಬರೂ ದಿಟ್ಟತನದಿಂದ ಹೊಸ ಬಾಳನ್ನು ಆ ಕೊಳಕು ವ್ಯಕ್ತಿಗಳೆದುರಿಗೇ ನಡೆಸಿದರೆ ಬಹು ಸೊಗಸಾಗಿರುವುದಿಲ್ಲವೆ-ಎಂದು ಆಶಿಸಿದಳು. ಬಹುಶಃ ಆ ಆಸೆ ಕೆಟ್ಟದ್ದೇನೋ.... ಹಾಗೆ ಮಾಡಿದರೆ ಟಾಲ್‌ಸ್ಟಾಯರ ಅನಾಕೆರೀನಾಳಿಗೆ ಬಂದ ದುರ್ಗತಿ ಅವಳಿಗೂ ಬರಬಹುದೇನೋ!....ಥೂ!....ಅನಾ ರೈಲಿಗೆ ಸಿಕ್ಕಿ ಸಾಯುವುದನ್ನು ನೆನೆಸಿಕೊಂಡರೆ ಸಾಕು, ಹೆಣ್ಣು ಹೊಸಲು ದಾಟಲೇ ಬಾರದು ಎನ್ನಿಸಿಬಿಡುತ್ತೆ. ಗಂಡಿನ ದಾಸಿಯಾಗೇ ನೋವನ್ನೋ ನಲಿವನ್ನೋ ಅನುಭವಿಸಿಕೊಂಡಿದ್ದು ಬಿಡಬೇಕು ಎಂದೆನಿಸುತ್ತೆ... ಟಾಲ್‌ಸ್ಟಾಯ್ ಅಂಥ ಪ್ರತಿಗಾಮಿ ಭಾವನೆಗಳನ್ನು ಬೆಳೆಸುವವನಲ್ಲ! ಹಾಗಾದರೂ ಅನಾಳಿಗೆ ಆ ಅಂತ್ಯವನ್ನೇಕೆ ತಂದಿಟ್ಟ ..?

—ಎಂದು ಆಳವಾಗಿ ಯೋಚಿಸಿದಳು.

ಕಡೆಗೆ ಅವಳ ಸಮಸ್ಯೆಗೆ ಉತ್ತರ ಹೊಳೆಯಿತು.. ಅನಾಳ ದುರಂತಕ್ಕೆ ಭೋಗ, ಪಾಪ. ಇವುಗಳನ್ನು ಮಾತ್ರ ಗೌರವಿಸುತ್ತಿದ್ದ ಅಂದಿನ ಸಮಾಜವೇ ಕಾರಣವಲ್ಲ. ಅವುಗಳಿಗೆ ಆಸೆ ಬಿದ್ದು ತಾನು ಪ್ರೇಮಿಸದಿರುವ ಶ್ರೀಮಂತ ಪೆದ್ದನೊಬ್ಬನನ್ನು ಅವಳು ವಿವಾಹವಾದದೂ ಕಾರಣ. ಅವಳ ದುರ್ಗತಿಗೆ ಅವಳ ಮನೋದೌರ್ಬಲ್ಯವೂ ಮುಖ್ಯ ಕಾರಣ.

ಅಂತೂ, ಸ್ವಾತಂತ್ರ್ಯ, ಸಮತೆ ಸುಖಗಳನ್ನು ಬಯಸಿ, ಹೋರಾಡುವ ಹೆಣ್ಣಿನ ಬಾಳು ಬಹು ಜಟಿಲ! ಎಂದುಕೊಂಡಳು.

ಅವಳಿಗೆ ತನ್ನ ಭವಿಷ್ಯ ಜೀವನ ಬಹು ಕುತೂಹಲಗೊಳಿಸಿತು.... ಈ ವರ್ಷಕ್ಕೆ ಹತ್ತೊಂಬತ್ತು ವಯಸ್ಸು ತುಂಬಿತು. ಪಾಸಾದರೆ ಬಿ.ಎ. ಪದವಿಯೂ ಕೈಗೆ ಬರುತ್ತದೆ.

ಅನಂತರ ಮುಂದೇನು? ....ವಿವಾಹವೆ?.... ಉದ್ಯೋಗವೇ?

ಎಂಬ ಎರಡು ಪ್ರಶ್ನೆಗಳೂ ಏಕಕಾಲದಲ್ಲಿ ಮನದ ಮುಂದೆ ಕುಣಿಯ ಲಾರಂಭಿಸಿದುವು. ಸ್ವಲ್ಪ ಕಾಲ ಯೋಚಿಸಿ,

'ವಿವಾಹ ಬೇಕಾಗಿಲ್ಲ....ಉದ್ಯೋಗ, ಸ್ವತಂತ್ರ ಜೀವನ!' ಎಂದು ತನಗೆ ತಾನೇ ನಿರ್ಧರವಾಗಿ ಹೇಳಿಕೊಂಡಳು. ಮರುಕ್ಷಣವೇ ಮತ್ತೊಂದು ಯೋಚನೆ—

'ಸ್ವತಂತ್ರ ಜೀವನ!....ಆ ಸ್ವತಂತ್ರ ಜೀವನದಲ್ಲಿ ವಿವಾಹ ವಾಗುವ ಸ್ವಾತಂತ್ರ್ಯವೂ ಇಲ್ಲವೆ?........ಮನ ಮೆಚ್ಚಿದವರನ್ನು, ಹೃದಯ ಒಲಿದವರನ್ನು ಪ್ರೇಮಿಸಿ, ಮಧುರ ಮಿಲನದಲ್ಲಿ ಜೀವಿಸುವ ಸ್ವಾತಂತ್ರ್ಯವೂ ಇರಕೂಡದೆ? ಸಾಯುವವರೆಗೂ ಒಂಟಿಯಾಗಿಯೇ, ಒಂದು ಮರದಂತೆ ನಿಂತಿದ್ದು, ಯೌವನ ಅಳಿದು, ದೇಹವೊಂದು ಮುದಿ ಕೊರಡಾಗಿ, ಒಂದು ದಿನ ಕೆಳಗುರುಳಿ ಮಣ್ಣಿನೊಡನೆ ಮಣ್ಣಾಗಿ ಬೆರತು ಹೋಗುವುದೇ? .ಅದಕ್ಕಾಗಿಯೇ ಈ ಸುಕೋಮಲ ದೇಹ, ಈ ಮೋಹಕ ರೂಪು, ಮತ್ತು ಸುಮಧುರ ಯಾತನೆಯ ಈ ಬಿಸಿ ಯೌವನ!'

— ಎಂಬ ಪ್ರಶ್ನೆಗಳು ಮನದೊಳಗೆ ಪುಟಿಪುಟಿದು ಮೇಲೇಳ ತೊಡಗಿದವು. ಅದರೊಡನೆಯೇ ಅವಳ ಎಕನಾಮಿಕ್ಸ್ ಲೆಕ್ಚರರ್, ಐವತ್ತು ವರ್ಷದ ಮಿಸ್. ಲೀಲಾಂಬಳ ನೆನಪು ಓಡಿ ಬಂತು. ಜೀವನದ ಅರ್ಧ ಶತಮಾನವನ್ನೂ ವಿವಾಹ, ಪ್ರೇಮ, ಸರಸ-ಸಲ್ಲಾಪಗಳಿಲ್ಲದೆ ಬಾಳಿದ್ದ ಕೋಲು ಮುಖ, ಕನ್ನಡಕದ ಕಣ್ಣು, ಗೂನುಬೆನ್ನಿನ ಸಿಡುಕಿ ಹೆಂಗಸನ್ನು ನೆನೆದು ಶಾಂತ ಅಸಹ್ಯದಿಂದ ತಲ್ಲಣಿಸಿದಳು. ಅಬ್ಬಾ! ಚಿನ್ನದ ಕಟ್ಟಿನ ಕನ್ನಡಕದ ಮೂಲಕ ತೋರಿಬರುವ ಅವಳ ಭಯಂಕರ ಕಣ್ಣುಗಳನ್ನು ಒಮ್ಮೆ ನೋಡಿದರೆ ಸಾಕು!.... ಇಡೀ ಜಗತ್ತನ್ನೇ ಸುಟ್ಟುಬಿಡುವ ವಿಷ, ದ್ವೇಷದ ದಳ್ಳುರಿಯನ್ನು ಅವು ಕಾರುತ್ತವೆ.....ಛೀ! ಅಂತಹ ಜೀವವನ್ನು ಸುಡಬೇಕು.

— ಎನಿಸಿತು. ಕೊನೆಗೆ, ತಾಳ್ಮೆ ತಪ್ಪಿ ಅವಳು ತನಗೆ ತಾನೇ ಹೇಳಿಕೊಂಡಳು·

ನನಗೆ ಉದ್ಯೋಗ—ವಿವಾಹ, ಇವೆರಡೂ ಬೇಡ

'ಹಾಗಾದರೆ, ಜೀವನವೇ ಬೇಡ, ಎಂದ ಹಾಗಾಯಿತು, ಹುಚ್ಚಿ!' ಎಂದು ಕೂಗಿತು ಮತ್ತೊಂದು ವಾಣಿ .... ಶಾಂತ ತಲೆ ಕೂದಲಲ್ಲಿ ಬೆರಳಾಡಿಸಿದಳು.

'ಥೂ! .. ಇದೊಳ್ಳೆ ಪೀಕಲಾಟವಪ್ಪಾ!....ಇದೆಲ್ಲಾ ಏಕೆ?... ಅವೆರಡೂ ಇದ್ದು ಬಿಟ್ಟರೆ ಎಷ್ಟು ಚೆನ್ನಾಗಿರುತ್ತೆ!... ನನಗೆ ಉದ್ಯೋಗವೂ ಇರಲಿ, ವಿವಾಹವೂ ಇರಲಿ!'

ಎಂದುಕೊಂಡಳು. ತಕ್ಷಣ, 'ಮೊದಲು ಉದ್ಯೋಗ. ನಂತರ....ನಂತರ ವಿವಾಹ!.... ಅರ್ಹರಾದವರು ದೊರೆತರೆ....' ಎಂದು ತಿದ್ದುಪಡಿ ಮಾಡಿಕೊಂಡಳು.

'ಆಮೇಲೆ.. . ಅಲ್ಲಿಯವರೆವಿಗೂ....!'

ಎಂದು ದಿಂಬನ್ನಪ್ಪಿ ಕಣ್ಣು ಮುಚ್ಚಿದಳು. ಅವಳ ಭವಿಷ್ಯ ಜೀವನದ ಕನಸುಗಳೇ ಅವಳ ಕಣ್ಣೆವೆಗಳಲ್ಲಿ ಸೆರೆಯಾಗಿದ್ದವು. ಅವಳ ತುಟಿಗಳಮೇಲೆ ನಗೆಮಲ್ಲಿಗೆಯೊಂದು ಅರಳಿತು. ಅವಳ ತುಟಿಗೆ ತುಟಿ, ದೇಹಕ್ಕೆ ದೇಹ ಬೆರಸಿ, ಮೃದುಮೈಯಿನ ಮಧುರ ಮೋಹಿನಿಯೊಬ್ಬಳು ಅವಳನ್ನು ಮರೆವಿನ ಸಾಮ್ರಾಜ್ಯಕ್ಕೆ ಕರೆದೊಯ್ದಳು.

ಅವಳಿಗೆ ಎಚ್ಚರವಾದಾಗ ಮಧ್ಯಾಹ್ನದಿಂದಲೂ ಸುರಿದ ಮಳೆ ನಿಂತಿದ್ದಿತು. ಶಾಂತ ಗಡಿಯಾರವನ್ನು ನೋಡಿದಳು. ಆಗಲೇ ನಾಲ್ಕೂವರೆ ಗಂಟೆಯಾಗಿತ್ತು. 'ಓ!....ಬರುಬರುತ್ತಾ ನಾನೆಷ್ಟು ಸೋಮಾರಿಯಾದೆ....ನಾಲ್ಕೂವರೆ ಗಂಟೆಯವರೆಗೂ ನಿದ್ರಿಸುವುದೇ!' ಎಂದು ಬೇಗ ಮೇಲೆದ್ದು ಮುಂಗುರುಳು ಸರಿಪಡಿಸಿಕೊಳ್ಳುತ್ತಾ ಕಿಟಕಿಯ ಬಳಿಗೆ ಬಂದಳು. ಸಂಜೆಯ ಕೋಲು–ಕೋಲು ಬಿಸಿಲು ಬಿದ್ದು, ರಸ್ತೆಯ ತಗ್ಗುಗಳಲ್ಲಿ ನಿಂತ ನೀರು ಚಿನ್ನದ ಚಿಲುಮೆಗಳಂತೆ ಥಳಥಳಿಸುತ್ತಿತ್ತು. ಮಳೆಯ ತಂಪು, ವಾತಾವರಣವನ್ನೆಲ್ಲಾ ಆಹ್ಲಾದ ಮಯಗೊಳಿಸಿತ್ತು. ಶಾಂತ ಬೀದಿಯಲ್ಲಿ ಆಗಲೇ ವಿಹಾರ, ವಿನೋದ ಗಳಿಗೆ ಹೊರಡುತ್ತಿರುವ ದಂಪತಿಗಳನ್ನು ನೋಡಿದಳು. ಆಗವಳಿಗೆ ತಾನೂ ಒಂದು ಸಿನಿಮಾಗೆ ಹೋಗಿ ಬರಬೇಕೆನಿಸಿತು. ಆದರೆ,

'ಥೂ!.... ಈ ತಲೆ ಇನ್ನೂ ಸ್ವಲ್ಪ ತಂಪು–ತಂಪಾಗಿಯೇ

ಇದೆ. .. ಈ ವಾತಾವರಣದಲ್ಲಿ ಹೊರಗೆ ಹೊರಟರೆ ರಾತ್ರಿಯೇ ನೆಗಡಿ–ತಲೆನೋವು ಖಂಡಿತ ಸಿನಿಮಾ ಇಲ್ಲದಿದ್ದರೂ ಚಿಂತೆಯಿಲ್ಲಪ್ಪ, ಸಧ್ಯ ಆ ನೆಗಡಿ, ತಲೆನೋವು ಬೇಡ. ಹಾಳು ಈ ರೋಗಗಳನ್ನೆಲ್ಲಾ ದೇವರು ಏಕೆ ಮನುಷ್ಯನ ಬೆನ್ನಿಗೆ ಬುತ್ತಿ ಕಟ್ಟಿ ಕಳಿಸಿದನೋ.... ಏನನ್ನೂ ಸ್ವಲ್ಪ ಹೆಚ್ಚು–ಕಡಮೆ ಮಾಡುವಂತಿಲ್ಲ, ಆಗಲೇ ಹಿಂದಿನಿಂದ ನಾನಿಲ್ಲೇ ಇದ್ದೇನೆ .... ರೋಗದ ರಾಮುಜ್ಜ! . . ಎಂದು ತಲೆ ನಡುಗಿಸುತ್ತಾ, ದೊಣ್ಣೆ ಹಿಡಿದು, ಗೂನು ಬೆನ್ನು ಹೊತ್ತು ಬಂದು ಬಿಡುತ್ತೆ. .. ಹೋಗಲಿ, ಈಗ ಮಾಡುವುದಾದರೂ ಏನು ? '...

ಎಂದು ಯೋಚಿಸಿದಳು.

'ಶ್ಯಾಮಲ ಕರೆದು ಪಗಡೆಯಾದರೂ ಆಡೋಣವೇ ಎಂದರೆ ಅವಳು ಆಗಲೇ ಚಕ್ಕರ್. ಎಲ್ಲಿ ಹೊರಟಳೋ ಪೋಕರಿ.. ಮನೆ-ಮನೆ ಚೀಲಿಯಂತೆ ಹತ್ತು ಮನೆ ಸುತ್ತಿ ಬಂದುಬಿಡುತ್ತಾಳೆ .. ಅವಳಿಗೆ ಸರಿಯಾಗಿ ಪಾಠ ಕಲಿಸಬೇಕು ಹೇಳದೇ ಕೇಳದೆ ಹೋಗಿ ಬಿಡೋದೆ ?. '

ಎಂದುಕೊಳ್ಳುತ್ತಾ ಸರಿಯಾಗಿ ತಲೆಬಾಚಿಕೊಂಡು, ಒಳ್ಳೆಯ ಉಡುಪು ಧರಿಸಿ, ಅಲಂಕಾರ ಮಾಡಿಕೊಂಡು, ಸಿದ್ಧಳಾದಳು. ಮನೆಯಲ್ಲಿ ತಾಯಿ ಮತ್ತು ಅಣ್ಣ ಇಬ್ಬರೂ ಇದ್ದರು. ಅವರೆದುರಿಗೆ ಒಂಟಿಯಾಗಿ ಹೊರಕ್ಕೆ ಹೊರಡುವುದು ಸಾಧ್ಯವಿರಲಿಲ್ಲ. ಅದನ್ನು ಕಂಡು,

'ಹೋಗಲಿ .. ಹೊರಗೆ ಹೋದ ಮೇಲಾದರೂ ಎಲ್ಲಿಗೆ ಹೋಗುವುದು !' ಎಂದೆನಿಸಿತು.

ಅವಳ ಗೆಳತಿಯರಾರೂ ಅಂದು ಬೆಂಗಳೂರಿನಲ್ಲಿರಲಿಲ್ಲ. ಎಲ್ಲರೂ ನಂದಿಗೆ ವನವಿಹಾರ ಹೊರಟು ಬಿಟ್ಟಿದ್ದರು. ಅವರೆಷ್ಟು ಬಲವಂತ ಮಾಡಿದ್ದರೂ ತಾನೇಕೆ ಹೋಗಲಿಲ್ಲ ?.... ಕೇವಲ ಹತ್ತು ರೂಪಾಯಿಗಳ ದೆಸೆಯಿಂದ !.. ಎಂಬ ನೆನಪು ಬಂದ ಕೂಡಲೇ ಅವಳ ಮುಖ ಸಪ್ಪೆಯಾಯಿತು. ತಲೆಬಾಗಿಸಿ. ಒಂದೆರಡು ನಿಮಿಷ ಆಳವಾಗಿ, ತೀಕ್ಷ್ಣವಾಗಿ ಯೋಚಿಸಿದಳು. ಅನಂತರ ನಿರ್ಧಾರದಿಂದ ತಲೆಯೆತ್ತಿ ತುಟಿ

ಕಚ್ಚಿಕೊಂಡು ತನಗೆ ತಾನೇ ಹೇಳಿಕೊಂಡಳು .... ' ಆಗಲಿ.... ಇದೂ ಎಷ್ಟುದಿನ .... ಈ ವರ್ಷ ಕಳೆಯುವವರೆಗೆ! ಅನಂತರ ...ಐ ಆಮ್ ಮೈ ಓನ್ ಬಾಸ್! ನನಗೆ ಇಷ್ಟ ಬಂದಿದ್ದನ್ನು ಯಾರ ನೆರವೂ ಇಲ್ಲದಂತೆ ನಾನೇ ಅನುಭವಿಸಬಹುದು....ಅಲ್ಲಿಯವರೆಗೆ .... ಇಂಥ ಸಿಟ್ಟು ಸಿರೇ! .... ಆ ಸ್ಥಿತಿ ಮುಟ್ಟುವವರೆಗೆ ಇನ್ನೂ ಇಂಥ ಎಷ್ಟು ಸಿಟ್ಟು ಸಿರುಗಳೋ!....'

ಮರುಕ್ಷಣವೇ ತಾನು ಆ ಪಿಕ್‌ಸಿಕ್‌ಗೆ ಹೋಗಿದ್ದರೂ ಅಷ್ಟು ಚೆನ್ನಾಗಿರುತ್ತಿರಲಿಲ್ಲ ... ಆ ಜಗಳಗಂಟಿ ಶಕ್ಕು, ಪೋಲಿ ಮಾತಿನ ರುಕ್ಕು, ಎಲ್ಲದಕ್ಕೂ ನಗುತ್ತಾ ಕುರಿಯಂತೆ ತಲೆಬಾಗುವ ಪದ್ಮಾ. ಗಂಡಸರನ್ನೇ ದುರುಗಟ್ಟಿ ನೋಡುವ ಸುಗುಣ, ಗಂಡಸು ಎಂದ ಕೂಡಲೆ ಹುಲಿ ಕಂಡವಳಂತೆ ಹೆದರಿ ನೆಲಕ್ಕಿಳಿದು ಹೋಗುವ ಸುಮಾ. ಇವರೆಲ್ಲರ ಜೊತೆಗೆ ಹೋಗುವುದಕ್ಕಿಂತ ಮನೆಯಲ್ಲಿ ಉಳಿದುಕೊಂಡಿದ್ದೇ ಉತ್ತಮ ಎಂದು ತೋರಿತು.

ಆಗ ಅವಳ ಮನಸ್ಸಿಗೆ ಸ್ವಲ್ಪ ನೆಮ್ಮದಿಯಾಯಿತು. ಆದರೆ ಮಾಡಲು ಯಾವ ಕೆಲಸವೂ ಇರಲಿಲ್ಲ. ಬೇಸರ ಮನವನ್ನಾವರಿಸಿತು. ಆ ಬೇಸರದಲ್ಲಿ ಒಂದು ಪರೀಕ್ಷೆಯಾದರೂ ಹತ್ತಿರವಿರಬಾರದೇ ?. ..ಆಗ ಮನೆಯಲ್ಲೇ ಪಟ್ಟಾಗಿ ಓದುತ್ತ ಕುಳಿತುಬಿಡಬಹುದಾಗಿತ್ತಲ್ಲ ಎನಿಸಿತು. ಆ ಯೋಚನೆಯನ್ನು ಕಂಡು ಅವಳಿಗೇ ವಿನೋದವಾಯಿತು. ಕಾಲೇಜು ಪುನರಾರಂಭವಾಗಿ ಇನ್ನೂ ಒಂದು ತಿಂಗಳು ಸಹ ಆಗಿಲ್ಲ.. ಆಗಲೇ ಪರೀಕ್ಷೆ! ಬೇಡಪ್ಪಾ ... ಅದೆಲ್ಲಿದೆಯೋ ಅಲ್ಲೇ ಇದ್ದುಬಿಡಲಿ .... ಅದನ್ನು ನೆನೆಸಿಕೊಂಡರೆ ಸಾಕು, ಮೈಯೆಲ್ಲಾ ಜುಂ! ಎನಿಸಿಬಿಡುತ್ತೆ. ..ಎಂದುಕೊಂಡು ಪುನಃ ಕಿಟಕಿಯ ಬಳಿ ಬಂದಳು.

ದೂರದ ಮನೆಯೊಂದರಿಂದ ರೇಡಿಯೋವಿನ ಸಂಗೀತ ಕೇಳಿ ಬರುತ್ತಿತ್ತು. ಅದನ್ನು ಕೇಳಿದ ಕೂಡಲೇ ಪಕ್ಕದ ಮನೆಯ ನಾಗಮ್ಮನವರ ನೆನಪು ಬಂತು.

' ಅವರಾದರೂ ಇದ್ದಿದ್ದರೆ....ಅಲ್ಲಿಗೆ ಹೋಗಿ, ಅವರ ಜೊತೆ ಹರಟೆ ಹೊಡೆಯುತ್ತಾ. ರೇಡಿಯೋ ತಿರುಗಿಸಿಕೊಂಡು ಕುಳಿತಿರ

ಬಹುದಾಗಿತ್ತು ಎಂಬ ಯೋಚನೆ ಹೊಳೆಯಿತು. ಅದರ ಜೊತೆಗೇ ನಾಗಮ್ಮನವರ ಸಹವಾಸದ ಮಧುರಚಿತ್ರ ಅವಳೆದುರು ಸುಳಿಯು ತೊಡಗಿತು.

' ಅವರೆಷ್ಟು ಒಳ್ಳೆಯವರು ! ತುಂಬಾ ಸುಂದರಿ, ಸುಸಂಸ್ಕೃತೆ. ಅಷ್ಟು ವಿದ್ಯೆ ಇಲ್ಲದಿದ್ದರೂ ಇನ್ನೆಲ್ಲ ವಿಚಾರಗಳಲ್ಲೂ ನಮ್ಮೆಲ್ಲರಿಗಿಂತಲೂ ಮೇಲಾದವರು. ಅವರ ಮನೆಗೆ ಹೋಗಿ ಬರುವುದೇ ಒಂದು ಆನಂದ. ಮುತ್ತಿನಂಥ ಗಂಡ ಚಂದ್ರಪ್ಪ, ಒಬ್ಬಳೇ ಒಬ್ಬ ಮಗಳು ಸುಧಾ, ಸೊಗಸಾದ ಮನೆ, ಅಷ್ಟೇ ಸೊಗಸಾದ ಕಾರು, ರೇಡಿಯೋ, ಸೋಫಾಗಳು, ಒಳ್ಳೇ ಉಡುಪುವಸ್ತ್ರಗಳು ... ಅಬ್ಬಾ ! ತುಂಬಾ ಅದೃಷ್ಟವಂತೆ ಅವರು ! ಈಗೆಷ್ಟು ದಿನಗಳಾಯ್ತು ಅವರ ಮುಖ ಕಂಡು ?.. ದಿನವೂ ಅವರ ಮನೆಗೆ ಹೋಗಿ ಬರುತ್ತಿದ್ದೆನಲ್ಲ ತೌರುಮನೆಗೆ ಎಂದು ಗಂಡ ಮಕ್ಕಳೊಂದಿಗೆ ಹೋದವರು ಹದಿನೈದು ದಿನವಾದರೂ ಬಂದಿಲ್ಲ. ..ಅವರೆಂದು ಬರುತ್ತಾರೋ ?....'

ಎಂದುಕೊಂಡಳು. ಅವರ ಸೌಭಾಗ್ಯಕ್ಕೆಲ್ಲಾ ಕಾರಣಕರ್ತರಾದ ಅವರ ಪತಿ ಚಂದ್ರಪ್ಪನನ್ನು ಶಾಂತಳ ಮನ ಸಂಪೂರ್ಣವಾಗಿ ಮೆಚ್ಚಿತು. 'ವಾಟ್ ಎ ಫೈನ್ ಫಲೋ. ಒಳ್ಳೇ ರೂಪು, ಒಳ್ಳೇ ವಿದ್ಯೆ, ಯೌವ್ವನ, ಅಧಿಕಾರ, ಬಿಗಿಮನಸ್ಸು, ಶುಚಿ–ರುಚಿಯಾದ ಸರಸ ಪ್ರವೃತ್ತಿ, ಇವೆಲ್ಲ ಇವೆ. ಆದರೂ ಸ್ವಲ್ಪವೂ ಗರ್ವವಿಲ್ಲ. ಸ್ವಲ್ಪವೂ ಒರಟುತನ ಇಲ್ಲ. ಅಂದರೆ ತೀರ ಮೃದುವೂ ಅಲ್ಲ....ಎಲ್ಲ ಗುಣಗಳನ್ನೂ ಹದವಾಗಿ ಬೆಳೆಸಿಕೊಂಡಿರುವ ಸಂಪೂರ್ಣವ್ಯಕ್ತಿ ... ಗಂಡಸು ಎಂದರೆ ಹಾಗಿರಬೇಕು !'—ಎಂದು ಯೋಚಿಸುತ್ತಿದ್ದಳು.

ಕೂಡಲೇ ಅವಳ ವಿಕಟ–ವಿವೇಕ ಅವಳಿಗೆ 'ಓಹೋ !..ಏನ್ರೀ.. ಬೇರೆಯವರ ಗಂಡನನ್ನು ತುಂಬಾ ಹೊಗಳಲು ಪ್ರಾರಂಭಿಸಿದಿರಲ್ಲಾ. . ಊಹೂ !'

ಎಂದು ಗೇಲಿ ಮಾಡಿತು. ಕೂಡಲೇ ಅವಳ ಮನ

' ಥೂ ! ... ಎಂಥ ಕೆಟ್ಟ ಮಾತು ! ಸುಂದರ ವ್ಯಕ್ತಿಯೊಬ್ಬನನ್ನು ಸುಂದರ ಎಂದೂ ಭಾವಿಸಕೂಡದೆ ?'

ಎಂದು ಕೆರಳಿ ಪ್ರಶ್ನಿಸಿತು.

ಕೊನೆಗೆ ಅವಳೇ, ತನ್ನ ಆಲೋಚನೆಗಳ ಸುಪ್ತ-ಉಗಮಗಳನ್ನು ಶೋಧಿಸಲು ಹೊರಟಳು. 'ಅಂಥ ಪಾಪಯೋಚನೆ ತನ್ನ ಸುಪ್ತ ಮನದಲ್ಲಾದರೂ ಅಡಗಿದೆಯೆ?' ಎಂದವಳಿಗೆ ಬಹು ಗಾಬರಿಯಾಯಿತು. ನಾಗಮ್ಮನವರ ಬಗೆಗೆ ತನ್ನ ಭಾವನೆಗಳನ್ನು ಎಳೆ-ಎಳೆಯಾಗಿ ಬಿಡಿಸಿ ನೋಡತೊಡಗಿದಳು...

'ಇಲ್ಲ .... ನನಗವರು ಈಗಿರುವಂತೆಯೇ ಸುಖವಾಗಿರುವುದು ಬೇಕು, ಅವರಾಗಲಿ, ಅವರ ಪತಿಯಾಗಲಿ, ಒಂದು ಕ್ಷಣ ಅಸುಖದಿಂದಿರುವುದನ್ನು ನಾನು ಸಹಿಸಲಾರೆ. ನನಗೆ ಈಗ ಸುಖವಿಲ್ಲದಿರಬಹುದು .... ಆದರೆ ನನ್ನ ಸುಖಕ್ಕಾಗಿ ಮತ್ತೊಬ್ಬರ ಸುಖವನ್ನು ಹಾಳುಮಾಡಲು ಆಲೋಚಿಸುವಂಥ ಪಾಪಿಯಲ್ಲ ನಾನು. ನನ್ನ ಮನ ಅಷ್ಟು ಹೀನ ಸ್ಥಿತಿಗೆ ಇಳಿದಿಲ್ಲ. ಅಂಥ ಯೋಚನೆ ನನ್ನ ಮನಸ್ಸಿನಲ್ಲಿ ಒಂದು ಬಾರಿ ಹೊಳೆದರೂ ಸಾಕು ....ರೈಲಿಗೆ ಸಿಕ್ಕಿ ಸಾಯುತ್ತೇನೆ! .... ಅಂಥ ಹೀನ ಬಾಳನ್ನು ಬದುಕಿಯೂ ಏನು ಸಾರ್ಥಕ?.. ಥೂ .... ಆ ಆಲೋಚನೆಗಳೆಲ್ಲಾ ಈಗೇಕೆ?' ಎಂದುಕೊಂಡಳು. ಮರುನಿಮಿಷವೇ,

'ಒಳ್ಳೆಯದಾಯಿತು.. ನನ್ನ ಮನಸ್ಸೇ, ನನ್ನ ಭಾವನೆಗಳೇ ಈಗ ಸುಸ್ಪಷ್ಟವಾಯಿತಲ್ಲ .... ಅಲ್ಲ, ನಾನು ಎಂದಾದರೂ ಹಾಗೆ ಯೋಚಿಸುವುದು ಸಾಧ್ಯವೇ? .. ನಾಗಮ್ಮ! .. ಚಂದ್ರಪ್ಪ!... ಸುಧಾ!.... ಇಂಥ ಸಂಸಾರವನ್ನು ನಾನು ಎಂದೂ ಕಂಡಿಲ್ಲ. ನನಗೆ ಅವರ ಮೇಲೆ ಸ್ವಲ್ಪವೂ ಅಸೂಯೆಯಿಲ್ಲ. ಅದಕ್ಕೆ ಬದಲು ಅವರ ಸುಖ—ಸಂತಸಗಳು ನೂರ್ಮಡಿಯಾಗಿ ಅಧಿಕವಾಗಲಿ ಎಂದು ಹೃದಯದಾಳದಿಂದ ಹಗಲಿರುಳೂ ಹಾರೈಸುತ್ತೇನೆ. ಅವರಂತೆಯೇ ನಾನೂ ಒಂದು ದಿನ ಬಾಳಲು ಆಶಿಸುತ್ತೇನೆ... ಹಾಗೇ ಬಾಳುತ್ತೇನೆ. . ಅದರಲ್ಲಿ ಲವಲೇಶವೂ ಸಂದೇಹವಿಲ್ಲ.. ಇಲ್ಲ! .'ಎಂದು ತನಗೆ ತಾನೇ ಹೇಳಿಕೊಂಡಳು.

ಕೂಡಲೇ ಆ ಯೋಚನೆಯ ಗೋಲಿ ಅವಳ ಮನದ ಮೈದಾನ

ದಲ್ಲಿ ಹಟಾತ್ತನೆ ನಿಂತಿತು. ಶಾಂತಳ ವದನ ಗಂಭೀರವಾಯಿತು. ಆಗ ಮನದ ಮೂಲೆಯಿಂದ ಮತ್ತೊಂದು ಯೋಚನೆಯ ಗೋಲಿ ಹೊರಬಿದ್ದು ಮೊದಲನೆಯ ಗೋಲಿಯ ಬಳಿ ನಿಂತು, ಏನನ್ನೋ ಅದರ ಕಿವಿಯಲ್ಲುಸುರಿತು.

'ಹಾಗಾದರೆ; ವಿವಾಹ, ಕೌಟುಂಬಿಕ ಜೀವನ ಇವೇ ನಿನ್ನ ಬಾಳಿನ ಮಹದಾಸೆಯೆ? ಎಂದಿತು ಆ ತುಂಟ ಗೋಲಿ!

ಶಾಂತಳ ವದನದಲ್ಲಿ ಕಿರುನಗೆಯೊಂದು ಮೂಡಿತು. ಅದು ಉಸುರಿದ್ದ ಪಿಸುಮಾತಿನ ಪ್ರಶ್ನೆಯನ್ನೇ ವಿನೋದದಿಂದ ಪರಿಶೀಲಿಸಿದಳು. ಅನಂತರ....'ಹೌದು; ಪ್ರೇಮ, ವಿವಾಹ, ಪತಿ, ಮಕ್ಕಳು ಇವರು ನನಗೂ ಬೇಕು. ಅದನ್ನು ಆಗಲೇ ತೀರ್ಮಾನಿಸಿಕೊಂಡಿರುವೆನಲ್ಲ' ಎಂದುಕೊಂಡಳು ಶಾಂತ.

'ಹಾಗಾದರೆ; ನಿನ್ನ ಉದ್ಯೋಗದ ಪ್ರೇಮ ಅಷ್ಟೇನೂ ಕೊಚ್ಚಿಕೊಳ್ಳುವಂಥಾದ್ದಲ್ಲ!'

ಎಂಬ ಮರುಪ್ರಶ್ನೆ ಬಂತು. ಕೂಡಲೆ ಶಾಂತ ಸೆಟೆದು ನಿಂತಳು.

'ಕೊಚ್ಚಿಕೊಳ್ಳುವಂಥಾದ್ದಲ್ಲ ಎಂದು ಯಾರು ಹೇಳಿದವರು? ಮೊದಲು ಉದ್ಯೋಗ ಎಂದು ಆಗಲೇ ಹೇಳಿಲ್ಲವೆ? ಮೊದಲು ಉದ್ಯೋಗ!... ಅದಾದ ನಂತರ ಇನ್ನೆಲ್ಲಾ. .ಈ ವಿಚಾರದಲ್ಲಿ ಸುಮ್ಮನೆ ತೊಳಲಾಟಬೇಡ....ಉದ್ಯೋಗ ಮೊದಲು! ಮೊದಲು.. ಮೊದಲು!! . ತಿಳಿಯಿತೇ?'

ಎಂದು ಗುಡುಗಿತು ಮೊದಲನೆಯ ಗೋಲಿ. ... ..ತುಂಟಗೋಲಿ ಸೋಲನ್ನೊಪ್ಪಿ, ರೆಪ್ಪೆಗಳನ್ನಿಳಿಸಿ, ಬಾಯಿಮುಚ್ಚಿಕೊಂಡು ಪಲಾಯನ ಮಾಡಿತು.

ಅದರಿಂದ ಅವಳಿಗೆ ತುಂಬಾ ಸಮಾಧಾನವಾಯಿತು. ತನ್ನ ದೃಢನಿಶ್ಚಯಕ್ಕಾಗಿ ಶಾಂತ ತನ್ನನ್ನು ತಾನೇ ಬೆನ್ನು ಚಪ್ಪರಿಸಿಕೊಂಡಳು.

ಆಗವಳ ಮನ ಪಂಕಜಳನ್ನು ನೆನೆಯಿತು.

'ಪಂಕಜ ನನಗಿಂತಲೂ ಸೀನಿಯರ್. ಆಗಲೇ ಗ್ರ್ಯಾಜುಯೇಟ್

ಆಗಿ ಸ್ವತಂತ್ರಜೀವನ ನಡೆಸುತ್ತಿದ್ದಾಳೆ. ಮದರಾಸಿನಲ್ಲಿ ಟ್ರೈನಿಂಗ್ ಪಡೆದು, ...... ಟೆಲಿಫೋನ್ ಆಪರೇಟರ್ !........ಗ್ರಾಜುಯೇಟ್ ಆಗಿ ಟೆಲಿಫೋನ್ ಆಪರೇಟರಾಗುವುದೇ ?.. ಥೂ! . ಆಗ ಎಂತೆಂಥ ಕಾಲ್'ಗಳು ಬರುತ್ತವೆಯೋ! ನಾನು ಹೀಗೇ ಯೋಚಿಸುತ್ತಾ ಕುಳಿತುಕೊಂಡರೆ ಯಾರಾದರೂ 'ಬಿಸ್ಸಿ' ನ್ಯಾನ್ಸಾ. ಆಪರೇಟರ್ ! .......ಆರ್ ಯು ಡೋಸಿಂಗ್?....ಪುಟ್ ಮಿ ಥ್ರೂ ಟು ಬಾಂಬೆ.. ... ಇಮ್ಮೀಡಿಯಟ್‌ಲಿ....ಆರ್....ಎಂದು ಗದರಿಕೊಂಡರೆ! ಆಗ ನಾನವನ ಮುಖಕ್ಕೇ ಬಾರಿಸಬೇಕೆಂದು ಮನಸ್ಸಾಗುವುದಿಲ್ಲವೇ ? ಅಥವ ಯಾರಾದರೂ ಪೋಕರಿಗಳು ಬಂದು, ಓ! ಹಲ್ಲೋ ಮಿಸ್ ಶಾಂತಾ!.... ಓ ಮೈ ಸ್ವೀಟೀ! ... .... ಓ ಮೈ ಹನೀ! ಲಾಲ್‌ಬಾಗಿನಲ್ಲಿ ಭೇಟಿಯಾಗ್ತೀಯಾ? — ಎಂದೆಲ್ಲಾ ಹರಟೆ ತೊಡಗಿದರೆ!....ಥೂ! ಅದೂ ಒಳ್ಳೇ ಫಜೀತಿ ಕೆಲಸವಪ್ಪಾ!.... ಅನಾಯಾಸವಾಗಿ ಕುಳಿತಕಡೆ ಕುಳಿತೇ ನೂರಿಪ್ಪತ್ತು ರೂಪಾಯಿ ಗಿಟ್ಟಿಸಬಹುದು. ಆದರೆ... ನಾನೂ ಪಂಕಜಳಂತೆ ಟೆಲಿಫೋನ್ ಆಪರೇಟರಾಗುವುದೇ? ... ಹಾಗೆ ಮಾಡಿದರೆ ಬೆಂಗಳೂರಿನಲ್ಲೇ ಇರಬಹುದು. ಮನಸ್ಸು ಮಾಡಿದರೆ ಮದ್ರಾಸಿಗೂ ಹೋಗಬಹುದು ...ಥೂ! ಅವೆಲ್ಲಾ ಬೇಡ.....ನನಗೆ ಸಿಟಿ ಜೀವನವೇ ಬೇಡ....ತುಂಬಾ ಬೇಸರವಾಗಿ ಬಿಟ್ಟಿದೆ.. ....ನಾವೆಲ್ಲ ಚಿಕ್ಕವರಾಗಿದ್ದಾಗ, ನಮ್ಮ ತಂದೆ ವಾಸಿಸುತ್ತಿದ್ದ ಹಳ್ಳಿಯೇ ಸಾಕು...' ಎಂದುಕೊಂಡಳು.

'ನೀನು ಹಳ್ಳಿಯಲ್ಲಿ ಕುಳಿತರೆ ನಿನಗ್ಯಾರು ಅಲ್ಲಿ ಉದ್ಯೋಗ ಕೊಡುತ್ತಾರೆ? ಅಲ್ಲಿ ಕುಳಿತು ನೀನು ಮಾಡುವಂತಹ ಉದ್ಯೋಗ ಒಂದೇ....ಮಕ್ಕಳು ಹಡೆಯುವುದು, ಯಾರಿಗಾದರೂ ಅನ್ನ ಬೇಯಿಸಿಡುವುದು........ಆ ಉದ್ಯೋಗವೇ ನಿನಗೆ ಸಾಕೇ ?' ಎಂದು ಅವಳ ಮನದ ಮತ್ತೊಂದು ಮೂಲೆ ಕೇಳಿತು. ಕೂಡಲೇ ಅವಳಿಗೆ ಅವಮಾನವಾಯಿತು.

'ಉದ್ಯೋಗ ಬೇಕು, ಎನ್ನುವಾಗಲೇ ಹಳ್ಳಿಯ ಜೀವನವೂ ಬೇಕು ಎನ್ನುತ್ತೇನೆ.. ... ಎಂಥ ವಕ್ರ ಮನಸ್ಸು ನನ್ನದು!' ಎಂದು

ಕೊಂಡಳು.

ಆಗವಳಿಗೆ ಮತ್ತೊಂದು ಯೋಚನೆ ಹೊಳಯಿತು.. ಗರ್ಲ್ಸ್ ಹೈಸ್ಕೂಲಿರುವ ಯಾವುದಾದರೂ ಒಂದು ಪುಟ್ಟ ನಗರ ಸಾಕು. ಅಲ್ಲಿ ಹಳ್ಳಿಯ ವಾತಾವರಣವೂ ಇರುತ್ತೆ, ನಗರದ ವಾತಾವರಣವೂ ಇರುತ್ತೆ ....ಅದೇ ಸರಿ. ಅಲ್ಲದೆ. ನನಗೆ ಉಪಾಧ್ಯಾಯಿನಿಯಾಗಬೇಕೆಂಬ ಚಪಲವೂ ಇದ್ದೇ ಇದೆ....ಅದೊಂದು ನೋಬಲ್ ಪ್ರೊಫೆಷನ್!....... ಚಿಕ್ಕ ಹುಡುಗಿಯರಿಗೆ ಕಥೆ ಹೇಳಿಕೊಂಡು ಇದ್ದು ಬಿಡಬಹುದು....... ಎಂದುಕೊಂಡಳು. ಈಗಾಗಲೇ ಮಂಡ್ಯದಲ್ಲಿ ಉಪಾಧ್ಯಾಯಿನಿಯಾಗಿ ರುವ ಗೆಳತಿ ಚಂಪಾಳ ಜ್ಞಾಪಕ ಬಂತು....ಓ!....ಅವಳನ್ನು ನೋಡಿ ಆಗಲೇ ಎಷ್ಟು ದಿನಗಳಾದವು. ಈಗ ನಾಲ್ಕೈದು ತಿಂಗಳ ಹಿಂದೆ ಒಮ್ಮೆ ಮನೆಗೇ ಹುಡುಕಿಕೊಂಡು ಬಂದಿದ್ದಳು. 'ಕೆಲಸ ಹೇಗಿದೆ?' ಎಂದು ಕೇಳಿದಾಗ, 'ಸ್ವಲ್ಪ ದಿನದಲ್ಲೇ ರಾಜೀನಾಮೆಕೊಟ್ಟು ಬರು ತ್ತೇನೆ' ಎಂದಿದ್ದಳು......ಏಕೆ? ಎಂದು ಕೇಳಿದಾಗ ಕಾರಣ ಅರಿವಾಗಿತ್ತು ........ಅಲ್ಲಿನ ಶ್ರೀಮಂತ ನಿವಾಸಿಗಳ ಆದರ ಮಿತಿಮೀರಿತ್ತಂತೆ.... . . ಥೂ! ಹೆಂಗಸನ್ನು ಕಾಣದವರಂತೆ ಹಿಂಬಾಲಿಸುತ್ತಿದ್ದರಂತೆ....ತಾನು ಅವರ ಮುಖ ಎತ್ತಿನೋಡದೆ ಹೊರಟುಹೋಗುತ್ತಿದ್ದಳಂತೆ....ಅದರಿಂದ ಹೊಟ್ಟೆ ಉರಿದು, ಏನೇನೋ ಹೊಲಸು ಕಥೆ ಕಟ್ಟಿ, ಹೈಸ್ಕೂಲಿನ ಗೋಡೆ, ಗೇಟಿನ ಮೇಲೆಲ್ಲಾ ಬರೆದಿದ್ದರಂತೆ.

ಪಾಪ!....ತನ್ನ ಹೆಸರನ್ನು ಸಾರ್ವಜನಿಕ ಗೋಡೆಗಳ ಮೇಲೆ ಬರೆದಿರುವುದನ್ನು ಕಂಡ ಚಂಪಾಳ ಎದೆಗೆ ಚೂರಿ ಇಟ್ಟಂತಾಗಿರ ಬಹುದು........ಪೂರ್ ಗರ್ಲ್! ಎಂದು ಮರುಗಿದಳು. ತನಗೂ ಅಂಥ ಸ್ಥಿತಿಯೊದಗಬಹುದೇ?....ಎಂದು ಬೆದರಿದಳು.

ಆಗವಳಿಗೆ ಪಟ್ಟಣದ ಜೀವನವೇ ಸರಿ ಎನಿಸಿತು. ಇಲ್ಲಿ ನಮ್ಮ ಕಲ್ಪನೆಯ ನವನಾಗರೀಕತೆ ಸಂಪೂರ್ಣವಾಗಿ ಸೃಷ್ಟಿಯಾಗದಿದ್ದರೂ, ಸ್ವಲ್ಪಮಟ್ಟಿಗಾದರೂ ಮೂಡಿದೆ. ದುಡಿಮೆಯ ಹೆಣ್ಣನ್ನು ಅಷ್ಟು ಗೋಳು ಹೊಯ್ದುಕೊಳ್ಳಲಾಗುವುದಿಲ್ಲ. ಎಷ್ಟೇ ಆಗಲಿ, ಸ್ವಲ್ಪ ಆಧುನಿಕ ಭಾವನೆಗಳು ಬೆಳೆದಿರುವ ಸ್ಥಳ! ಅಲ್ಲಿ? . . ಚಿಕ್ಕ ಸ್ಥಳ!

ಚಿಕ್ಕ ಜನ! ಚಿಕ್ಕಬುದ್ಧಿ! ...... ಬೇಡಪ್ಪಾ ...... ಚಿಕ್ಕ ಊರುಗಳ ಸಹವಾಸವೇ ಬೇಡ........ನನಗೆ ಇಂಥ ದೊಡ್ಡ ಪಟ್ಟಣವಿರಲ ಇಲ್ಲ ದಿದ್ದರೆ ಪುಟ್ಟ ಹಳ್ಳಿಯಿರಲಿ.

ಪುನಃ ಪುಟ್ಟ ಹಳ್ಳಿ!........

'ಅಲ್ಲಿ ಹೇಗಾದರೂ ನೀನು ಸ್ವತಂತ್ರ ಜೀವನ ನಡೆಸಲು ಸಾಧ್ಯ! ನಿಮ್ಮ ತಂದೆ ಜಮೀನ್ದಾರರೇ?....ಅವರಿಗೆ ನೀನೊಬ್ಬಳೇ ಪುತ್ರಿಯೇ! ........ಒಂದುವೇಳೆ, ಆ ರೀತಿ ಇದ್ದಿದ್ದರೆ, ಆ ಪುಟ್ಟಹಳ್ಳಿಗೆ 'ಶಾಂತಿ-ಗ್ರಾಮ' ಎಂದು ನಿನ್ನ ಹೆಸರನ್ನೇ ಇಟ್ಟುಕೊಂಡು, ರಾಣಿಯಂತೆ ಇರ ಬಹುದಾಗಿತ್ತು.. .. .ಯಾರಾದರೂ ಒಬ್ಬ ಮುಗ್ಧ ರೈತ ಯುವಕನನ್ನು ಪ್ರೇಮಿಸಿಕೊಂಡು!' ಎಂದು ಅವಳ ಕುಚೇಷ್ಟೆಯ ವಿವೇಕ ಮೂದಲಿಸಿತು.

ಶಾಂತ ದೊಡ್ಡ ಗೊಂದಲಕ್ಕೆ ಬಿದ್ದಳು.. .

'ಹಾಗಾದರೆ....ಹಾಗಾದರೆ, ನನಗೆ ಈ ನಗರ ನಾಗರೀಕತೆಯೇ ಗತಿಯೇ?....ಟೆಲಿಫೋನ್ ಆಪರೇಟರ್!..... ಏಯ್ ಆಪರೇಟರ್! ಜ್ಞಾನವಿದೆಯೋ ಇಲ್ಲವೊ? ....... ಓ ಹನಿ!........ ಲಾಲ್‌ಬಾಗಿಗೆ ಬರ್ತೀಯಾ?....'

'ಥೂ!' ಎಂದಳು ಶಾಂತ. ಅವಳಿಗೆ ಕಣ್ಣೀರು ಬಂತು. 'ನಾನು ಬಿ.ಎ. ಆನರ್ಸ್ ಆದರೂ ತೆಗೆದುಕೊಂಡಿದ್ದರೆ. ಕಾಲೇಜಿನಲ್ಲಿ ಲೆಕ್ಚರರ್ ಆಗುವಂತಿದ್ದರೆ ... ಎಷ್ಟು ಚೆನ್ನಾಗಿರುತ್ತಿತ್ತು. .!' ಎಂದುಕೊಂಡಳು. 'ಅದೂ ಕಷ್ಟದ ಕೆಲಸವೇ!' ಎಂದು ತೋರಿತು. ತಮ್ಮ ಲೆಕ್ಚರರ್‌ಗಳಿಗೆ ತಾವೆಲ್ಲ ಕೊಡುತ್ತಿದ್ದ ಕಿರುಕುಳವನ್ನೆಲ್ಲಾ ಈಗ ನೆನೆಸಿಕೊಂಡಳು. ಅವಳ ಮನ ಮರುಗಿತು....'ಅಯ್ಯೋ ಪಾಪ! . . ಅವರನ್ನು ಬೆಳೆಪ ಹುಡುಗಿಯರಾದ ನಾವು ಎಷ್ಟು ಹೀಯಾಳಿಸುತ್ತೇವೆ?........ ಅವರ ಉಡುಪು, ಅವರ ಸ್ಟೈಲು, ಅವರು 'ಸಪ್ಪೋಸ್ ಯು ಆರ್ ಕ್ವೆಸ್‌ಚೆನ್ಡ್' ಎಂದು ಉಚ್ಚಾರ ಮಾಡುವ ಮಾತಿನ ವೈಖರಿ, ಅವರ ವಯಸ್ಸು, ಅವರ ಗಂಡ, ಗೆಳೆಯರು, ಹಾಸಿಗೆ ಜೀವನ .ಇವೆಲ್ಲವನ್ನೂ ಎಷ್ಟು ಮಾನವಿಲ್ಲದವರಂತೆ ಚರ್ಚಿಸುತ್ತೇವೆ. . ಆಗ ಅವರ ಮಡಿಮೊಸ್ಥ

ಬದುಕನ್ನು ಕಾಣುವ ನಮ್ಮ ಮನ ಹೆಣ್ಣಿನ ಸ್ವಭಾವಜನ್ಯ, ಅಸೂಯೆ ಅಥವ ರೂಪಿನ ಹೆಮ್ಮೆಯಿಂದ ದೂಷಿತವಾಗಿರುವುದಲ್ಲವೆ? ಇನ್ನು ಮುಂದೆ ಅಂಥ ಕುಹಕಗಳನ್ನೆಲ್ಲ ನಿಲ್ಲಿಸಿಬಿಡಬೇಕು. ನಾವೂ ಬೆಳೆದವರು....ಜವಾಬ್ದಾರಿಯುಳ್ಳ ಪ್ರೌಢೆಯರು ಎನ್ನುವುದನ್ನು ತೋರಿಸಿಕೊಳ್ಳಬೇಕು ಎನಿಸಿತು.... ಆದರೆ ಆ ಮಿಸ್ ಸುಂದರಿ! .... ಅಂದು ನನ್ನ ಕಡೆಗೆ ಕೋಪದಿಂದ ನೋಡುತ್ತಾ, 'ಯು ಶಾಂತಾ! .... ಯು ಗೆಟ್ ಅಪ್, ಅಂಡ್ ಪ್ಲೀಸ್ ಗೋ ಅವೇ........ಎಲಾಂಗ್ ವಿತ್ ಯುವರ್ ಬುಕ್ಸ್'— ಎಂದಾಗ, ಅವಳ ಮುಖಕ್ಕೇ ಪುಸ್ತಕದಿಂದ ಬಾರಿಸಿಬಿಡಬೇಕೆನಿಸಿತ್ತಲ್ಲವೆ? .... ಅಂದು ನಾನು ಮಾಡಿದ್ದ ಅಪರಾಧವಾದರೂ ಏನು? ........ ಅವಳ ಪಾಠ ತಲೆಗೆ ಹಿಡಿಸುತ್ತಿರಲಿಲ್ಲ. ಆಗ ಶಕ್ಕು ಒಂದು ಜೋಕ್ ಕಟ್ ಮಾಡಿದ್ದಳು....

"ಮಿಸ್ ಸುಂದರೀ....<br>ನೀವೇಕೆ ಲೆಕ್ಚರರ್ ಆಗಿ ಬಂದ್ರೀ,....<br>ನಮ್ಮೆಲ್ಲರನ್ನೂ ನಿಮ್ಮ ಪಾಠದಿಂದ ಕೊಂದಿರೀ....ಹಾಯ್"

ಎಂದು ಪ್ರಾಣ ಬಿಡುವವಳಂತೆ ಕಣ್‌ಗುಡ್ಡೆ ತೇಲಿಸಿ, ಕತ್ತು ಹೊರಳಿಸಿದ್ದಳು. ಎಲ್ಲಿ ಹಿಂದಿನ ಬೆಂಚಿನಲ್ಲಿ ಕುಳಿತುಕೊಂಡೇ ....! ಆಗ ಎಲ್ಲರೂ ನಕ್ಕುಬಿಟ್ಟಿದ್ದರು... ಸರಿ, ನಾನೂ ನಕ್ಕುಬಿಟ್ಟೆ.... ಅಷ್ಟಕ್ಕೆ ನನ್ನೊಬ್ಬಳನ್ನೇ ಹಿಡಿದುಕೊಂಡು ಬಿಡಬೇಕೆ?... ಗೆಟ್ ಔಟ್! ಎನ್ನುವುದಕ್ಕೆ?....ನಾನು ಮಾತ್ರಗೆ ಕಾಣುತ್ತಿದ್ದೆನಲ್ಲ, ಅದಕ್ಕೇ ಹೇಳಿರಬಹುದು. ಆದರೆ ಈಗ ತಿಳಿದಿರಬಹುದು ಅಮ್ಮಣ್ಣಿಗೆ....'ಶಾಂತ ಟಫ್ ಗರ್ಲ್' ಎಂದು!...ಅವಳು ಕೂಗಿ, ಕೂಗಿ ಪಾಠ ನಿಲ್ಲಿಸಿದರೂ ನಾನು ಹೋಗಲಿಲ್ಲ. ಅವಳು ಬೋರ್ಡಿನ ಕಡೆಗೆ ಬೆನ್ನು ತಿರುಗಿಸಿದ ಕೂಡಲೇ ನಮ್ಮ ಗ್ಯಾಂಗ್ ಎಲ್ಲ ಹೊರಕ್ಕೆ ಹೋಗಿ ಬಿಟ್ಟಿತು.... ಹಾಗಿರಬೇಕು, ಗೆಳತಿಯರು ಎಂದ್ರೆ!........

'ಆದರೆ ಇವತ್ತು ನನ್ನನ್ನು ಬಿಟ್ಟೇ ಹೊರಟು ಬಿಟ್ರಲ್ಲಾ ಪಿಕ್‌ನಿಕ್‌ಗೆ!....ಪಾಪ, ಅವರದೇನು ತಪ್ಪು?....ಎಷ್ಟು ಬಲವಂತ ಮಾಡಿದರೂ ತಂದೆಯವರ ಹತ್ತಿರ ಹಣ ಕೇಳಲು ಮನಸ್ಸಿಲ್ಲದೆ ನಾನೇ

ಏನೇನೋ ಸುಳ್ಳು ಹೇಳಿ ನಿಂತುಹೋದೆ. ಬರೀ ದುಡ್ಡಿನ ಪ್ರಶ್ನೆಯೇ ಆಗಿದ್ದಿದ್ದರೆ ಸುಮ್ಮನೆ ಕೊಟ್ಟು ಬಿಡುತ್ತಿದ್ದಳು. ನನ್ನನ್ನು ಕಂಡರೆ ಅವಳೇಕೋ.... ಹೀರೋ ಅಲ್ಲ.... ಹೀರೋಯಿನ್‌ಳಂತೆ ಪೂಜಿಸುತ್ತಾಳೆ ....ತುಂಬಾ ಮೃದು ಹುಡುಗಿ!....ನನ್ನ ಪಾಡೇ ಇಷ್ಟು ಗೊಂದಲವಾದರೆ ಅಂಥವರ ಪಾಡು ಹೇಗೆ?....ಆದರೆ ಹೇಗೋ....ಅವರಿಗೆಲ್ಲಾ ದೇವರೇ ಒಂದು ದಾರಿ ತೋರಿಸಿಬಿಡ್ತಾನೆ... ನನ್ನಂಥವರಿಗೇ....

'—ಏನು....?'

ಎಂದು ಶಾಂತ ಹಠಾತ್ತನೆ ತನ್ನನ್ನು ತಾನೇ ಪ್ರಶ್ನಿಸಿಕೊಂಡು, ಮುಂದಿದ್ದ ಕಗ್ಗತ್ತಲ ಭವಿಷ್ಯವನ್ನೇ ಧೈರ್ಯದಿಂದ ನೋಡಿ ನಕ್ಕಳು.

ಕೂಡಲೇ ಥಳಥಳನೆ ಹೊಳೆಯುವ ಕಪ್ಪು ಕಾರೊಂದು ರಸ್ತೆಯಲ್ಲಿನ ನೀರಿನ ಪಾತಿಗಳನ್ನು ಲೊಚ್! ಲೊಚ್! ಎಂದು ಚಿಮ್ಮುತ್ತಾ ಪಕ್ಕದ ಮನೆಯ ಮುಂದೆ ನಿಂತಿತು.

ಶಾಂತ ಕಿಟಕಿಗೆ ಓಡಿ ಬಂದು ನೋಡಿದಳು.

'ಓ!.... ನಾಗಮ್ಮನವರ ಕಾರು!.... ನಾನು ಯೋಚಿಸಿದ ದಿನವೇ ಬಂದು ಬಿಟ್ರು....ಅವರಿಗೆ ನೂರುವರ್ಷ ಆಯಸ್ಸು!.... ಕಾರಿನಿಂದ ಚಂದ್ರಪ್ಪ ಇಳಿದರು, ನಾಗಮ್ಮ ಇಳಿದರು, ಸುಧಾ ಇಳಿದಳು, ....ಓ!....ಇನ್ನೊಬ್ಬ ಯುವಕ!!....ತಲೆಯೆತ್ತಿ ಚಂದ್ರಪ್ಪನ ಮನೆಯನ್ನು ನೋಡುತ್ತಿದ್ದಾನೆ....ಅಬ್ಬಾ, ಎಷ್ಟು ಸುಂದರ!....ಎತ್ತರವಾದ ದೇಹ, ಗುಂಗುರು ಕೂದಲು, ಹಸನ್ಮುಖ, ಬಿಳಿಯ ಷರಟು, ಖಾಕಿ ಗ್ಯಾಬರ್ಡೀನ್ ಪ್ಲಾಂಟ್,....ಷ್ಯೂಸ್!....ಈಗ ತಲೆಯಮೇಲೆ ನಯವಾಗಿ ಎರಡು ಕೈಗಳನ್ನೂ ಒಂದಾದಮೇಲೊಂದು ಆಡಿಸುತ್ತಿದಾನೆ ....ಮುಂಗೈನ ವಾಚ್ ಬಿಸಿಲಿನಲ್ಲಿ ಒಮ್ಮೆ ಹೊಳೆಯಿತು....ಎಂಥ ದಪ್ಪ ಬಾಹುಗಳು....ವಿಶಾಲ ಎದೆ!....ಈಗ ಸುಧಾಳ ಕೈ ಹಿಡಿದುಕೊಂಡ, ಬಲಗೈಯಲ್ಲೊಂದು ಸೂಟ್ ಕೇಸ್ ಹಿಡಿದ,....ಮನೆಯ ಕಡೆಗೆ ಹೊರಟ....ಎಷ್ಟು ಶಿಸ್ತಿನಿಂದ ಹೆಜ್ಜೆ ಹಾಕುತ್ತಾನೆ!....ಲೆಫ್ಟ್!.. ರೈಟ್!....ಲೆಫ್ಟ್....ಲೆಫ್ಟ್....ಲೆಫ್ಟ್....ಅಯ್ಯೋ!....ನನ್ನನ್ನು ನೋಡಿಬಿಟ್ಟ!....ಈಗೇನು ಮಾಡಲೀ?....ಹಿಂದೆ ಸರಿಯಲೇ?....ಅವನ

ನೋಟದೊಡನೆ ಬೆರೆತ ನೋಟ ಕೀಳಲೇ ?. ಥೂ !.... ಏನು ಮಾಡಲಿ ?....ಅವನು ನೋಡುತ್ತಾ ಅಡಿಯಿರಿಸುತ್ತಲೇ ಇದಾನೆ.... ಅವನೂ ದೃಷ್ಟಿ ಕೀಳಲಾರನೇನೋ !....ಅಯ್ಯೋ....ಆ ಗುಂಡಿಯಲ್ಲಿ ಕಾಲಿರಿಸಿ ಬಿಟ್ಟ........ ಪಾಪ ಪ್ಯಾಂಟೆಲ್ಲ ಒದ್ದೆಯಾಗಿ ಹೋಯಿತು ........ಅವನಿಗದು ಗೊತ್ತಾಗೇ ಇಲ್ಲ....ನನ್ನನ್ನೇ ನೋಡುತ್ತಿದಾನೆ.... ಪೂರ್ ಫೆಲೋ !... ಓಡಿಹೋಗಿ ಆ ಪಾಂಟ್ ಮೇಲಿನ ಕೊಳಚೆ ನೀರನ್ನು ಸೆರಗಿನಿಂದ ಒರೆಸೋಣವೆನಿಸುತ್ತೆ........ಇನ್ನೂ ನೋಡುತ್ತಲೇ ಇದಾನೆ....ಮುಂದೆಯೇ ಮತ್ತೊಂದು ನೀರಿನ ಗುಂಡಿ !.... ಎಲ್ಲಿ ಕಾಲಿರಿಸುವನೋ !....ಇಲ್ಲ ಸಧ್ಯ.........ಲೆಫ್ಟ್.. ರೈಟ್ .... ಲೆಫ್ಟ್....ಲೆಫ್ಟ್....ಈಗ ಸರಿಯಾಗಿ ಹೆಜ್ಜೆ ಹಾಕುತ್ತಿಲ್ಲ .. ನನ್ನನ್ನೇ ನೋಡುತ್ತಿದಾನೆ .... . ಅಯ್ಯೋ !....ನೋಡುತ್ತಾ ನೋಡುತ್ತಾ, ಕಣ್ಮರೆಯಾಗಿಬಿಟ್ಟ '

ಎಂದು ಶಾಂತ ಕಿಟಕಿಯ ಕಂಬಿ ಹಿಡಿದು ಬಾಗಿ ನೋಡಿದಳು. ಅವನು ಮರೆಯಾಗಿದ್ದ.

ಈಗ ಚಂದ್ರಪ್ಪನ ಮನೆಯ ಆಳು ಕಾರಿನಲ್ಲಿದ್ದ ಹಾಸಿಗೆ, ಟ್ರಂಕ್ ಇವುಗಳೆಲ್ಲವನ್ನೂ ಮನೆಯೊಳಗೊಯ್ಯುತ್ತಿದ್ದ. ಶಾಂತಳ ಎದೆ ವಿಚಿತ್ರ ರೀತಿಯಲ್ಲಿ ಹೊಡೆದುಕೊಳ್ಳುತ್ತಿತ್ತು.... ಆಳವಾಗಿ ನಿಡುಸುಯ್ಯುತ್ತಾ ಹಿಂದೆ ಸರಿದಳು. ಮುತ್ತಿ ಬಂದ ಆ ಕ್ಷಣಿಕ ಮೈಮರೆವಿನಲ್ಲಿ ಅವಳಿಗೆ ಈಗ ಒಂದೆರಡು ನಿಮಿಷಗಳಿಂದಲೂ ಶ್ಯಾಮಲ ತನ್ನ ಬಳಿಯೇ ಬಂದು ನಿಂತಿದ್ದುದೂ, ' ಓ ! ನಾಗಮ್ಮ ಬಂದ್ರು !' ಎಂದು ಚಪ್ಪಾಳೆ ತಟ್ಟಿ ಹೊರಗೆ ಓಡಿದುದೂ ಭಾಸವಾಗಲೇ ಇಲ್ಲ.

* * *

ಅರ್ಧ ಗಂಟೆಯಾಯಿತು. ಶ್ಯಾಮಲ ಹಿಂತಿರುಗಲೇ ಇಲ್ಲ. ಅವಳನ್ನೇ ಎದುರು ನೋಡುತ್ತಿದ್ದ ಶಾಂತ ತುಂಬ ಅಸಮಾಧಾನಗೊಂಡಳು ... ಆ ಅಸಮಾಧಾನದಲ್ಲೇ ಅಡಿಗೆ ಮನೆಯಲ್ಲಿ ಕಾಫಿ ಸೋಸುತ್ತಿರುವಾಗ ಕೈಬೆರಳನ್ನೂ ಸುಟ್ಟುಕೊಂಡು ಬಿಟ್ಟಳು.

ಅದರ ಉರಿಯನ್ನು ಪರಿಹರಿಸಲೋ ಎಂಬಂತೆ ಮುಗುಳು ನಗುವ

ಮುದ್ದು ಜೀವಿಯೊಂದು ಅವಳ ಮನೆಯ ಹೊಸಲಿನೊಳಕ್ಕೆ ಅಡಿಯಿರಿಸಿತು. ವಿರಾಮ ಕುರ್ಚಿಯಲ್ಲಿ ಕುಳಿತ ಶಾಂತಳ ತಂದೆ, ಕೇಶವಯ್ಯಂಗಾರರು ಕೇಳಿದರು.

"ಏನಮ್ಮಾ ಸುಧಾ!... ಅಜ್ಜಿ ಮನೆಯಿಂದ ಯಾವಾಗ ಬಂದೆ ?"

"ಈಗ ತಾನೆ ಬಂದ್ವಿ... "

ಎಂದು ಲಜ್ಜೆಯಿಂದ ನುಡಿದು ಸುಧಾ, ಮುಸುಕು ಮುಚ್ಚಿದ ಬೆಳ್ಳಿ ತಟ್ಟೆಯೊಂದನ್ನು ಎರಡು ಕೈಗಳಲ್ಲೂ ಹೊತ್ತು, ಅವರ ಪತ್ನಿ ಕುಳಿತೆಡೆಗೆ ನಡೆದಳು. ವೃತ್ತಾಕಾರದ ಮಣೆಯೊಂದರ ಮೇಲೆ ಅಕ್ಕಿ ಆರಿಸುತ್ತಿದ್ದ ಶಾಂತಳ ತಾಯಿ ಆ ತಟ್ಟೆಯ ಕಡೆಗೆ ದೃಷ್ಟಿ ಬೀರುತ್ತಾ ಕೇಳಿದರು,

"ಇದೇನೇ ಸುಧಾ. ..?"

"ಏನೂ ಇಲ್ಲ ಕಣ್ರೀ....ನಮ್ಮ ತಾಯಿ ಕಳಿಸಿದ್ರು "

ಎಂದು ಅವರೆದುರು ತಟ್ಟೆಯಿಳಿಸಿದಳು ಸುಧಾ.

ಶಾಂತಳ ತಾಯಿಗೆ ತಟ್ಟೆಯೊಳಗಿರುವ ವಸ್ತುವಿಗಿಂತಲೂ ಅದರ ಮೇಲೆ ಮುಚ್ಚಿದ ಕಸೂತಿಯ ಕೈವಸ್ತ್ರವೇ ಅತಿ ಪ್ರಾಮುಖ್ಯವೆಂದು ತೋರಿತು. ಅದನ್ನು ಕೈಗೆತ್ತಿಕೊಂಡು, ಎಳೆ-ಎಳೆಯಾಗಿ ಅದರ ಅಂದ-ಚೆಂದದ, ಅಂಕು-ಡೊಂಕಿನ ರೂಪ ರೇಖೆಯೆಲ್ಲವನ್ನೂ ತನ್ಮಯರಾಗಿ ನೋಡಿದರು. ಒಂದೆರಡು ನಿಮಿಷಗಳಾದರೂ ಆ ತಟ್ಟೆಯಲ್ಲಿದ್ದ ಸೊಗಸಾದ ಹನ್ನೆರಡು ಮಾವಿನ ಹಣ್ಣುಗಳು ಅವರ ಗಮನಕ್ಕೆ ಬಂದಿರಲಿಲ್ಲ.

ತಂದೆಗೆ ಟೀ ತಂದುಕೊಟ್ಟು ಶಾಂತ, ತಾಯಿಯ ಮುಂದೆಯೂ ಒಂದು ಲೋಟ ಟೀ ಇರಿಸಿದಳು. ಕೇಶವಯ್ಯಂಗಾರರು

"ಸುಧಾಳಿಗೂ ಒಂದು ಲೋಟ ತಂದು ಕೊಡಮ್ಮಾ... "ಎಂದು, ಅದಕ್ಕಾಗಿಯೇ ಪುನಃ ಅಡಿಗೆ ಮನೆಗೆ ಹೋದ ಶಾಂತಳಿಗೆ ಹೇಳಿದರು

ಸುಧಾಳಿಗೂ ಟೀ ಬಂತು. ಆದರೆ ಅದನ್ನವಳು ಮುಟ್ಟಲಿಲ್ಲ. ಅವಳಿಗೆ ಟೀ ಸೇರುತ್ತಲೇ ಇರಲಿಲ್ಲ. ಏನಿದ್ದರೂ ಕಾಫಿ....! ಅದು

ಹೇಗಾದರೂ ಇರಲಿ, ಎಷ್ಟಾದರೂ ಇರಲಿ, ಒಂದು ಘಳಿಗೆಯಲ್ಲಿ ಗಟ ಗಟನೆ ಕುಡಿದು ಬಿಡುತ್ತಿದ್ದಳು.

ಅದನ್ನು ಜ್ಞಾಪಿಸಿಕೊಂಡ ಶಾಂತ, ತಾನು ಈ ನೋಡ ಕವಿದ ದಿನ ಎರೆದುಕೊಂಡ ತಪ್ಪಿಗೆ, ನೆಗಡಿಯು ಶಿಕ್ಷೆಯಾಗದಿರಲೆಂದು ಮುನ್ನೆಚ್ಚರಿಕೆಯಿಂದ ತಯಾರಿಸಿಕೊಂಡಿದ್ದ ಒಂದು ಡೋಸ್ ಕಾಫಿಯನ್ನೇ ಅವಳ ಮುಂದೆ ನಗುತ್ತಾ ತಂದಿಟ್ಟು, ತಟ್ಟೆಯಲ್ಲಿದ್ದ ಹಣ್ಣುಗಳನ್ನು ಚಿತ್ರದ ಕೈ-ಬುಟ್ಟಿಯೊಂದಕ್ಕೆ ತುಂಬಿಕೊಂಡಳು.

ಸುಧಾ ಕಾಫಿಯನ್ನು ಆಪೋಷನ ಮಾಡುವಷ್ಟರಲ್ಲಿ ಶಾಂತಳ ತಾಯಿ ಕಸೂತಿ ಕೈವಸ್ತ್ರದ ಪರಿಶೀಲನೆಯನ್ನು ಮುಗಿಸಿದ್ದರು. ಈಗವರ ದೃಷ್ಟಿ ದಂತದ ಹಿಡಿಗಳಿದ್ದ ಬಾದಾಮಿಯಾಕೃತಿಯ ದೊಡ್ಡ ಬೆಳ್ಳಿಯ ತಟ್ಟೆಗೆರಗಿತು. ತಟ್ಟೆ ಅವರ ಕೈಗೆ ಬಂದಿತು. ಅದರ ತೂಕದ ಅಂದಾಜು ಮುಗಿಯಿತು. ಈಗ ಅದರ ಹಿಡಿ, ಅಂಚುಗಳ ಅಲಂಕಾರ, ಕತ್ತನೆ ಕೆಲಸಗಳ ಮೇಲೆ ಅವರ ನೋಟ ಓಡುತ್ತಿತ್ತು.

ಇದೆಲ್ಲವನ್ನೂ ಸೂಕ್ಷ್ಮವಾಗಿ, ಕನ್ನಡಕದಂಚಿನಿಂದಲೇ ಇಷ್ಟು ಹೊತ್ತೂ ಅವಲೋಕಿಸುತ್ತಿದ್ದ ಕೇಶವಯ್ಯಂಗಾರರು, ಏನನ್ನೋ ನೆನೆದು ಚಕಿತಗೊಂಡವರಂತೆ ತಮ್ಮ ನೋಟವನ್ನು ಬೇಗನೆ ಕೈಲಿದ್ದ ವೃತ್ತಪತ್ರಿಕೆಯ ಕಡೆಗೆ ಹೊರಳಿಸಿದರು. ಇನ್ನೊಂದು ಕ್ಷಣವೇನಾದರೂ ಅವರು ತಡಮಾಡಿದ್ದರೆ, ತಮ್ಮ ಪತ್ನಿಯ ದೂಷಣಾನೇತ್ರಗಳ ಕ್ರೌರ್ಯಕ್ಕೆ ಸಿಕ್ಕಿಬಿದ್ದು ಹಿಂಸಪಡಬೇಕಾಗುತ್ತಿತ್ತು. ಈಗಾಗಲೇ ಅವಳು ದ್ವೇಷ, ದೂಷಣೆ, ಅಣಕ ಮಿಶ್ರಿತ ನೋಟದಿಂದ ತನ್ನನ್ನು ಸುಡುತ್ತಿರುವಳೆಂಬ ಅರಿವು ಅವರಿಗಾದರೂ, ಅತ್ತಕಡೆಗೆ ನೋಟ ಹೊರಳಿಸಲಿಲ್ಲ. ನೇರವಾಗಿ ತಮ್ಮ ಪತ್ರಿಕೆಯನ್ನೇ ಬುಡದಿಂದ ತುದಿಯವರೆಗೂ ನೋಡಿ, ಕನ್ನಡಕ ಸರಿಪಡಿಸಿಕೊಂಡರು.

ಇದೆಲ್ಲವನ್ನೂ ಗಮನಿಸಲಾಗಲೀ, ಅರ್ಥ ಮಾಡಿಕೊಳ್ಳಲಾಗಲೀ ಸಾಧ್ಯವಿಲ್ಲದಿದ್ದ ಸುಧಾ ಶಾಂತಳ ಬಳಿಗೆ ಎದ್ದು ಬಂದು,

"ರೀ ... ನಿಮ್ಮನ್ನು ನಮ್ಮ ತಾಯಿ ಕರಕೊಂಡು ಬಾ ಅಂದ್ರು

ಎಂದಳು. ಶಾಂತ ನಸುನಕ್ಕು ತಲೆಯಾಡಿಸುತ್ತಾ ಹೇಳಿದಳು,

"ಇಲ್ಲಮ್ಮ.... ಮನೆಯಲ್ಲಿ ನಿಮ್ಮ ಅಣ್ಣ ಇರ್ತ್ತಾರೆ.... ನಾನು ಬರೋಲ್ಲ."

"ಇಲ್ಲ ಕಣ್ರೀ.... ನಮ್ಮಣ್ಣ ಆಗಲೇ ಎಲ್ಲಿಗೋ ಹೋದ್ರು.... ಈಗ ಮನೇಲಿ ಗಂಡಸರು ಯಾರೂ ಇಲ್ಲ."

"ಯಾರೂ ಇಲ್ಲವೇ !.... ನಿಮ್ಮ ಕಾರಿನಲ್ಲಿ ನಿಮ್ಮಣ್ಣನ ಜೊತೆ ಬಂದ್ರಲ್ಲಾ....ಮನೆಯೊಳಗೆ ಹೋಗುವಾಗ ನಿನ್ನ ಕೈ ಹಿಡಿದುಕೊಂಡಿದ್ರಲ್ಲಾ.... ಅವರು ?"

"ಅವರೂ ಇಲ್ರೀ.... ಯಾರೂ ಇಲ್ಲ.... ನೀವೀಗ ಬರಬೇಕು."

"ಬರ್ತೀನಿ.... ಸ್ವಲ್ಪ ಅ,.... ಆ ಇನ್ನೊಬ್ಬರು ಯಾರೇ ಸುಧಾ ?"

"ಅವರು ನಮ್ಮ ಚಿಕ್ಕ ಮಾಮ....!"

"ಹುಷ !.... ಸ್ವಲ್ಪ ಮೆತ್ತಗೆ ಮಾತಾಡು....!"

ಎಂದು ಶಾಂತ ತೀವ್ರತೆಯಿಂದ ಉಸುರಿದಳು. ಸುಧಾಗೆ ಈ ಗೋಪ್ಯವೇಕೋ ಅರ್ಥವಾಗಲಿಲ್ಲ. ಆದರೂ ಮುಗ್ಧನಗು ಬೀರ ತೊಡಗಿದಳು. ಆಗ ಶಾಂತ ಅವಳೆಡೆಗೆ ತುಂಬಾ ಪ್ರೇಮ ಬೀರುವ ನೋಟವನೆಸೆಯುತ್ತಾ, ಪಿಸುಮಾತಿನಲ್ಲಿ ಕೇಳಿದಳು...

"ಅವರು ಓದ್ತಿದಾರಾ ?"

"ಹೂ.... ಬಿ.ಎ; ಎಮ್.ಎ: ಅದೇನೇನೋ ಓದ್ತಾರೆ.. ಅವರತ್ರ ಇಷ್ಟಿಷ್ಟು ದಪ್ಪ ಪುಸ್ತಕಗಳಿವೆ...."

ಎಂದು ಕಣ್ಣುಗಳನ್ನರಳಿಸಿ, ಕೈತೋರಿಸಿ ಹೇಳಿ.

"ಆದರೆ.... ಅದರಲ್ಲೆಲ್ಲಾ ಒಳ್ಳೇ ಗೊಂಬೆಗಳೇ ಇಲ್ಲ...."

ಎಂದು ವಿಷಾದದಿಂದ ನುಡಿದಳು. ಶಾಂತ ಅವಳ ಮುಗ್ಧ ಹೃದಯವನ್ನು ಕಂಡು ನಸು ನಗುತ್ತಾ ಕೇಳಿದಳು :

"ಅವರು ಯಾವ ಊರಿನಲ್ಲಿ ಓದುತ್ತಿದ್ದರೇ ?"

"ನಮ್ಮ ಅಜ್ಜಿ ಮನೇಲ್ಲೇ ಓದ್ತಿದ್ರು.... ಈಗ ಇಲ್ಲಿಗೆ ಬಂದಿದ್ದಾರೆ...."

ಶಾಂತಳಿಗೆ ತುಂಬಾ ವಿಸ್ಮಯವಾಯಿತು. 'ಅಜ್ಜೀ ಮನೇಲ್ಲೇ ಓದ್ತಿದ್ರು .... ಬಿ.ಎ; ಎಮ್.ಎ: ನ !....' ಅವಳಿಗೆ ಬೇಕಾಗಿದ್ದ

ವಿಷಯಗಳೆಲ್ಲವೂ ಸ್ಪಷ್ಟವಾಗಿ, ಸಂಪೂರ್ಣವಾಗಿ ತಿಳಿದು ಬರಲಿಲ್ಲ. ಇನ್ನು ಹೆಚ್ಚಿಗೆ ಸುಧಾಳಿಂದ ತಿಳಿಯ ಬಯಸುವುದೂ ಅಸಾಧ್ಯ ಎಂದುಕೊಂಡು, ಕಡೆಯದಾಗಿ ಕೇಳಿದಳು.....

" ಇನ್ಮೇಲೆ ನಿಮ್ಮಾವ ಇಲ್ಲೇ ಇರ್ತಾರೇನು ? "

" ಹೂ...."

ಎಂದು ತಲೆ ಹಾಕಿದಳು ಸುಧಾ.

ಅದನ್ನರಿತು ಶಾಂತಳಿಗೆ ಏನೋ ಒಂದು ಬಗೆಯ ಸಮಾಧಾನ ವಾಯಿತು. ಕನ್ನಡಿಯಲ್ಲೊಮ್ಮೆ ನೋಡಿಕೊಂಡು, ಸುಧಾಳ ಜೊತೆ ಯಲ್ಲಿ ಉತ್ಸಾಹದಿಂದ ಹೊರಗೆ ಹೊರಟಳು. ಹೊಸಲು ದಾಟುವಾಗ ಅವಳ ತಾಯಿ ಹಠಾತ್ತನೆ " ಸ್ವಲ್ಪ ತಡಿ " ಎಂದು ನಿಲ್ಲಿಸಿ, "ಯಾವಾಗ ಮಾಡಿಸಿದ್ರೇ ಈ ಲೋಲಾಕುಗಳನ್ನು....? " ಎಂದು ಎದ್ದು ಬಂದು, ಸುಧಾಳ ಕಿವಿಯಲ್ಲಿದ್ದ ಲೋಲಾಕುಗಳನ್ನು ಮುಟ್ಟಿನೋಡಿದರು.

" ನಮ್ಮ ತಾತ ಮಾಡಿಸಿಕೊಟ್ರು ಕಣ್ರೀ...."

ಎಂದು ಸುಧಾ ಕತ್ತು ಹೊರಳಿಸಿ ನಿಂತಳು.

ಎರಡು ನಿಮಿಷಗಳಾದರೂ ಅವರು ಕಿವಿಗೆ ಸ್ವಾತಂತ್ರ್ಯ ಕೊಡ ಲಿಲ್ಲ.... ' ಎಷ್ಟು ಸವರನ್ ?....ಎಷ್ಟು ವಜ್ರಗಳಿವೆ?. ಎಷ್ಟು ಬೆಲೆ?.... ನಿಮ್ಮ ತಾಯಿಗೇನು ಮಾಡಿಸಿಕೊಟ್ಟಿದ್ದಾರೆ ? " ಎಂಬ ಪ್ರಶ್ನೆಗಳನ್ನು ಕೇಳುತ್ತಾ ನಿಲ್ಲಿಸಿಕೊಂಡರು.

ಅದೆಲ್ಲವನ್ನೂ ಕೇಳುತ್ತಾ ಶಾಂತಳಿಗೆ ತುಂಬಾ ಬೇಸರವಾಯಿತು. ಕೇಶವಯ್ಯಂಗಾರರಿಗೆ ದೃಷ್ಟಿ ಮಂಕಾಗಿ, ಹುಬ್ಬು ಗಂಟಿಕ್ಕಿ, ಮನ ಕಗ್ಗತ್ತಲಾಯಿತು...

ಕೊನೆಗೆ ಅವರ ಪತ್ನಿ ಸುಧಾಳ ಕಿವಿಗೆ ಸ್ವಾತಂತ್ರ್ಯ ಕೊಟ್ಟು,

" ಹೂ, ಹೋಗಮ್ಮಾ.... ಈ ತಟ್ಟೆ, ಚೌಕ ತಗೊ...."

ಎಂದು ಸುಧಾಳ ಕೈಗೆ ಅವುಗಳನ್ನಿತ್ತರು. ಶಾಂತ, ಸುಧಾಳ ಕೈಹಿಡಿದು ಮೆಟ್ಟಿಲಿಳಿಯತೊಡಗಿದಳು.

ಅವರು ಕಣ್ಮರೆಯಾಗುವವರೆಗೂ ಕೇಶವಯ್ಯಂಗಾರರ ಪತ್ನಿ ಅಲ್ಲೇ ನಿಂತು ಇಬ್ಬರನ್ನೂ ಎವೆಯಿಕ್ಕದೆ ನೋಡಿದರು. ಅನಂತರವೂ

ಅವರು ಅಲ್ಲಿಂದ ಕದಲಲಿಲ್ಲ....ಶಿಲಾಪ್ರತಿಮೆಯಂತೆ ಅಲ್ಲೇ ಏನನ್ನೋ ಗಾಢವಾಗಿ ಆಲೋಚಿಸುತ್ತಾ ನಿಂತುಕೊಂಡರು. ಆಗ ಯಾವ ಆಸೆಯ ಪ್ರೇತಗಳು ಅವರೆದೆಯ ಪಾಳು ಪೀಠದ ಮೇಲೆ ಕೊಳ್ಳಿ ಹಿಡಿದು ಕುಣಿದುವೋ, ಮತ್ತಾವ ವಿವೇಕ ಜಲಧಿ ಅವರೆದೆಯ ಕೊರಗಿನ ಕೊಳ್ಳಿಚ್ಚನ್ನು ಕೆಡಿಸಿತೋ, ... ಒಂದೆರಡು ನಿಮಿಷಗಳಲ್ಲೇ ಅಗಾಧ ನಿಟ್ಟುಸಿರೊಂದು ಅವರೆದೆಯಿಂದ ಹೊರಬಿದ್ದಿತು. ತಾವದುವರೆಗೂ ಆರಿಸಿಟ್ಟ ಅಕ್ಕಿಯನ್ನೆತ್ತಿಕೊಂಡು ಅವರು ಅಡಿಗೆ ಮನೆಗೆ ನಡೆದರು.

## ೨

ಸುಧಾಳ ಬೆನ್ನ ಹಿಂದೆ ಶಾಂತ ಸರಸರನೆ ಮೆಟ್ಟಿಲುಗಳನ್ನೇರಿದಳು. ಮಹಡಿಯ ಮುಂಭಾಗದಲ್ಲಿದ್ದ ರೂಮಿನ ಬಾಗಿಲು ತೆರೆದಿತ್ತು. ಸೊಂಟಕ್ಕೆ ಸೆರಗನ್ನು ಸಿಕ್ಕಿಸಿ, ಆ ರೂಮಿನ ಕಸಗುಡಿಸುತ್ತಿದ್ದ ನಾಗಮ್ಮನವರು ಶಾಂತಳನ್ನು ಕಂಡೊಡನೆಯೇ ಮುಗುಳ್ನಗೆ ಬೀರಿ "ಬನ್ರೀ" ಎಂದರು.

ಅಲ್ಲಿನ ಮಂಚದ ಮೇಲೆ ಅಸ್ತವ್ಯಸ್ತವಾಗಿ ಬಿಚ್ಚಿ, ಬಿಸಾಡಲ್ಪಟ್ಟ ಒಂದು ಹಾಸಿಗೆಯ ಸುರುಳಿ, ಕುರ್ಚಿಯೊಂದರಮೇಲೆ ಬಿಟ್ಟ ಟವಲ್ ಮೇಜಿನ ಮೇಲಿದ್ದ ಪುಸ್ತಕಗಳ ರಾಶಿ, ಒಂದು ದೊಡ್ಡ ಟ್ರಂಕ್, ಎಲ್ಲವನ್ನೂ ಆಸಕ್ತಿಯಿಂದ ಅವಲೋಕಿಸುತ್ತಾ ಶಾಂತ ನಿಧಾನವಾಗಿ ಒಳಗೆ ಬಂದಳು. ಕಸವನ್ನು ಹೊರಗೆ ತಳ್ಳಿ, ಆಳು ರಾಮುಸಿಗೆ ಅದನ್ನು ಬಿಸಾಡುವಂತ ಹೇಳಿದ ನಾಗಮ್ಮ, ಕೈಒರೆಸಿಕೊಳ್ಳುತ್ತಾ,

"ಕಾಲೇಜು ಮುಗಿಯಿತೇನ್ರೀ....?"

ಎಂದು ಕೇಳಿದರು. ಮೇಜಿನ ಅಂಚಿನ ಮೇಲೆ ಲಘುವಾಗಿ ಕುಳಿತು ಯಾವುದೋ ಒಂದು ಪುಸ್ತಕದ ಪುಟ ತಿರುವಿಹಾಕಲಾರಂಭಿಸಿದ್ದ ಶಾಂತ,

"ಇವತ್ತು ಶನಿವಾರ....ಕಾಲೇಜಿಗೆ ರಜವಲ್ಲವೇ !"

ಎಂದು ನಕ್ಕಳು. ನಾಗಮ್ಮನವರೂ ನಗುತ್ತಾ..

"ಓ !....ಆಗಲೇ ಮರತೇ ಹೋಗಿತ್ತು ನೋಡಿ."

ಎಂದರು. ಶಾಂತ ಅವರನ್ನೇ ಮುಗುಳು ನಗೆ ಸೂಸುವ ಕಣ್ಣು ಗಳಿಂದ ನೋಡುತ್ತಾ,

"ಏನು, ತೌರುಮನೆಗೆ ಇಷ್ಟು ದಿನ ಹೋಗಿ ಬಿಟ್ರಲ್ಲಾ.... ಈ ಮನೆ ಬಹುಶಃ ನಿಮಗೆ ಮರತೇಹೋಯಿತೇನೋ ಎನಿಸಿತು ನನಗೆ"

ಎಂದಳು. ನಾಗಮ್ಮನವರು ಮುಗುಳುನಕ್ಕು, ಒಂದು ಬಗೆಯ ಬೇಸರದಿಂದ ಹೇಳಿದರು—

"ಹೂ, ಈ ಮನೆಯನ್ನು ಮರೆಯೋದೆಲ್ಲಿ ಬಂತು. ಎಲ್ಲಿದ್ರೂ ಈ ಕಡೆಯೇ ಯೋಚನೆ. ನಾಲ್ಕುದಿನ ಮನೆಬಿಟ್ಟು ಹೋದರೆ ಸಾಕು, ಪುನಃ ಬರೋ ಹೊತ್ತಿಗೆ, ಹೊಸ ಸಂಸಾರ ಹೂಡಿದಂತಾಗುತ್ತೆ; ನೋಡಿ...ಈ ಕಸ ! ಈ ಧೂಳು!.. ಮನೆ ಬಾಗಿಲು ತೆಗೆದ ತಕ್ಷಣ ಒಂದು ಅಂಗುಲ ಸರಿಯಾಗಿ ಬಿದ್ದಿತ್ತು. ಇನ್ನು ನೀವು ಅಡಿಗೆಮನೆ ನೋಡಬೇಕ್ರೀ ... ಅಬ್ಬಬ್ಬಾ ! .. ಯಾವ ಮೂಲೆ, ಯಾವ ಪಾತ್ರೆ ನೋಡಲೀ ಸಾವಿರ ಸಾವಿರ ಜಿರಲೆಗಳು. ಅದೆಲ್ಲಿಂದ ಬಂದುವ್ರೋ.... ಹಾಳು ! ಯಾವುದೋ ಬೆಕ್ಕು ಬೇರೆ ಕವಾಟಿನಲ್ಲಿದ್ದ ಗಾಜಿನ ಟೀ ಸೆಟ್ ಉರುಳಿಸಿಬಿಟ್ಟಿದೆ. ....ನೀವೇ ನೋಡಿದ್ದೀರಲ್ರೀ . . . ಎಷ್ಟು ಚೆನ್ನಾಗಿತ್ತು! ಸುಧಾ ಹುಟ್ಟುವ ಮುಂಚೆ ಅವರ ಜೊತೆ ಬೊಂಬಾಯಿಗೆ ಹೋಗಿದ್ದಾಗ, ಅದನ್ನೆಷ್ಟು ಗೋಗರೆದು ಕೊಂಡು ಕೊಂಡಿದ್ದೆ. ಅದನ್ನು ನೆನೆಸಿಕೊಂಡರೆ ಹೊಟ್ಟೆ ಉರಿಯುತ್ತೆ.... ಆ ಹಾಳು ಬೆಕ್ಕು ನನ್ನ ಕೈಗೆ ಸಿಗಲಿ!...."

ಎಂದು ಭೀಷಣ ಪ್ರತಿಜ್ಞೆಯನ್ನು ಮಾಡಿದ ನಂತರ, ಶಾಂತ ಚಿತ್ತರಾಗಿ....

"ಇದೆಲ್ಲಾ ನನ್ನ ತಪ್ಪು ಕಣ್ರೀ....ಹೀಗೆಲ್ಲಾ ಆಗುತ್ತೆ ಎಂದು ಗೊತ್ತಿದ್ದೂ ಗೊತ್ತಿದ್ದೂ ಊರಿನಲ್ಲಿ ಹದಿನೈದು ಇಪ್ಪತ್ತು ದಿನ ರಾಣಿ ಯಂತೆ ಕುಳಿತುಕೊಂಡುಬಿಟ್ಟೆ. ಅಲ್ಲದೆ, ನಾನು ಹೊರಟರೂ ನಮ್ಮ ತಂದೆ-ತಾಯಿ ಬಿಡುತ್ತಾರೇನ್ರೀ ? ಇವತ್ತು ಅಮಾವಾಸ್ಯೆ, ನಾಳೆ

ಮಂಗಳವಾರ, ಸಾಡಿದ್ದು ಈ ಹಬ್ಬ, ಆಚೆನಾಡಿದ್ದು ಆ ಉತ್ಸವ ಎಂದು ತಡೆಹಾಕಿಬಿಟ್ರು. ನ್ಯಾಯವಾಗಿ ನಿನ್ನೆಯೇ ನಾವು ಹಿಂತಿರುಗಬೇಕಾಗಿತ್ತು....ಶುಕ್ರವಾರ ಎಂದು ಪುನಃ ತಡೆದುಬಿಟ್ರು....ಅಂತೂ ಈವತ್ತು ತಪ್ಪಿಸಿಕೊಂಡು ಬಂದ್ವಿ ನೋಡಿ ...."

ಎಂದು ಮಂಚದ ಮೇಲಿನ ಹಾಸಿಗೆ ಸುರುಳಿಯನ್ನು ಬಿಡಿಸಿ, ಅದರಲ್ಲಿದ್ದ ಪಂಚೆ, ಒಳಉಡುಪು, ಟೂತ್‌ಬ್ರಷ್ ಮುಂತಾದುವುಗಳೆಲ್ಲವನ್ನೂ ಬೆತ್ತದ ಕುರ್ಚಿಯ ಮೇಲೆಸೆದು, ಹಾಸಿಗೆಯನ್ನು ಸಿದ್ಧಪಡಿಸತೊಡಗಿದರು.

ಶಾಂತ ಮೇಜಿನ ಅಂಚಿನ ಮೇಲೆ ಕೈಯೂರಿ ಸರಿಯಾಗಿಕುಳಿತುಕೊಂಡಳು. ಅನಂತರ ಕಾಲುಗಳನ್ನಾಡಿಸುತ್ತಾ,

"ಹೂ....ತೌರುಮನೆ ಹೇಗಿತ್ತು....?"

ಎಂದು ವಿನೋದದಿಂದ ಕೇಳಿದಳು, ನಾಗಮ್ಮ ಅಷ್ಟು ಉತ್ಸಾಹ ತೋರಿಸದೆ—

"ಇನ್ನು ಹೇಗಿರುತ್ತೆ ಹೇಳಿ .. ಚೆನ್ನಾಗೇ ಇತ್ತು. ಸುಧಾ ಹುಟ್ಟಿದಾಗ ಒಂದು ಸಲ ಹೋಗಿದ್ವಿ. ಆಮೇಲೆ ಈಗ ನಾಲ್ಕೈದು ವರ್ಷಗಳಿಂದ ಅಲ್ಲಿಗೆ ಹೋಗೋಕೇ ಆಗಿರಲಿಲ್ಲ. ಅಲ್ಲಿಗೆ ಹೋಗಿ ನಮ್ಮ ತಾಯಿ, ತಂದೆ, ಹೊಲ, ಮನೆ, ತೋಟ ಎಲ್ಲವನ್ನೂ ನೋಡಿ ಬರಬೇಕೆಂದು ನಾಗರದಲ್ಲಿರುವಾಗಲೇ ತುಂಬಾ ಬಯಕೆಯಾಗಿತ್ತು. ಬೆಂಗಳೂರಿಗೆ ವರ್ಗವಾಗಿ ಬಂದು ಎರಡು ತಿಂಗಳಾದರೂ ಅದು ಕೂಡಿ ಬಂದಿರಲಿಲ್ಲ. ಈಗ....ಅದು ತೀರಿತು ನೋಡಿ... "

ಎಂದು ನಕ್ಕು, ಕೈಲಿದ್ದ ದಿಂಬಿಗೆ ತಾವೇ ಎಂಬ್ರಾಯಿಡರಿ ಮಾಡಿದ್ದ ಒಂದು ಬಿಳಿಯ ಕವರನ್ನು ಹಾಕುತ್ತಾ,

"ನಾವು ಹೆಣ್ಣುಮಕ್ಕಳು ಗಂಡನ ಮನೆಗೆ ಬಂದುಬಿಟ್ಟ ಮೇಲೆ, ತೌರುಮನೆ ಎಷ್ಟು ಚೆನ್ನಾಗಿದ್ದರೇನ್ರೀ... ನಮಗೆ ಇದೇ ಗತಿ .. ನಿಮ್ಮ ಹಾಗೇ ನಾನೂ ಸ್ವಲ್ಪ ಓದಿದ್ರೆ, ಹೀಗೆಲ್ಲಾ ಎಲ್ಲಿ ಆಗ್ತಿತ್ತು.... "

ಎಂದು ವಿಷಾದಪೂರಿತ ಗತ್ತಿನಿಂದ ಹೇಳಿದರು ಅದನ್ನು ಕೇಳಿ ಶಾಂತಳಿಗೆ ತುಂಬ ನಗುಬಂತು. ಅದನ್ನು ತಡೆಯುತ್ತಾ,

"ಒಂದು ವೇಳೆ ನೀವು ಓದಿದ್ರೆ ಏನು ಮಾಡ್ತಿದ್ರೀ....?"

ಎಂದು ಕೇಳಿದಳು. ಕೂಡಲೇ ನಾಗಮ್ಮ ಮೊಳಕಾಲ ಮೇಲೆ ಕುಳಿತು, ಸೊಂಟಕ್ಕೆ ಸೆರಗನ್ನು ಬಿಗಿದು...

"ಹು,....ನಾನು ಓದಿದ್ರೆ....ಆಗ ತೋರಿಸುತ್ತಿದ್ದೆ....?"

ಎಂದು ಠೀವಿಯಿಂದ ಕೈ ಬೀಸಿ ಹೇಳ ತೊಡಗಿದರು....

"... ಆ ಡಾ.ಅಹಲ್ಯಾಬಾಯಿ ಇಲ್ವೆ ? .... ಹಾಗೆ ನಾನೂ ಒಬ್ಬ ಲೇಡಿ ಡಾಕ್ಟರ್ ಆಗಿಬಿಟ್ಟು, ದೊಡ್ಡದೊಡ್ಡ ಮನೆಯವರನ್ನು ಟ್ರೀಟ್ ಮಾಡ್ತಾ, ಒಂದು ಹೆರಿಗೆ ಮಾಡಿದ್ರೆ ಇನ್ನೂರು, ಟೈಫಾಯ್ಡ್ ಆಗಿದ್ರೆ ಮುನ್ನೂರು. ನ್ಯೂಮೋನಿಯಾಗೆ ನಾನೂರು, ಹೀಗೆ ವಸೂಲ್ಮಾಡುತ್ತಾ, ಅವಳ ಹಾಗೇ ಒಂದು ನರ್ಸಿಂಗ್-ಹೋಂ ಇಡ್ತಿದ್ದೆ. ಇಂಗ್ಲೆಂಡ್, ಅಮೆರಿಕಾಗೆ ಹೋಗಿ ಬರ್ತಿದ್ದೆ....ಹೀಗೆ ಒಲೆ ಊದಿಕೊಂಡು, ಕಸೂತಿ ಹಾಕ್ತಾ ಕುಳಿತು ಕೊಳ್ತಿರಲಿಲ್ಲ...."

ಎಂದರು. ಶಾಂತ ಅವರ ಮುಖದ ಮೇಲಿನ ವಿನೋದ ಮಿಶ್ರಿತ ಆವೇಗ, ಕೈಗಳ ಎಸೆದಾಟ, ಕಣ್ಣಿನ ಹೊಳಪು, ಮಾತಿನ ರಭಸ, ಅವು ಬಣ್ಣಿಸಿದ ಅಸಾಧ್ಯ ಕನಸಿನ ಲೋಕ ಇವುಗಳೆಲ್ಲವನ್ನೂ ನೋಡಿ ಸ್ವಲ್ಪ ಬೆರಗಾದಳು. ತುಂಬಿದ ಸರೋವರದಂತಿರುವ ಸೊಗಸಾದ ಸಂಸಾರ ನಡೆಸುತ್ತಿರುವ ನಾಗಮ್ಮ, ಇಂಥ ಆಸೆಗಳನ್ನು ತನ್ನೆದೆಯ ಕತ್ತಲು ಕೋಣೆಯಲ್ಲಿ ಹೂತು ಹಾಕಿರುವರೆಂಬ ಸಂಗತಿಯನ್ನು ಅವಳಿಂದ ನಂಬಲು ಸಾಧ್ಯವಾಗಲಿಲ್ಲ. ಮೆಚ್ಚಿಗೆ, ಅಪನಂಬಿಕೆಗಳಿಂದ ನಗುತ್ತಾ ಶಾಂತ ತಲೆಯಾಡಿಸಿದಳು. ಅದನ್ನು ಕಂಡು ನಾಗಮ್ಮ ಉದ್ವೇಗದಿಂದ ಹೇಳಿದರು,

"ಇಲ್ರೀ ಶಾಂತ....ನಾನು ಹೇಳೋದು ಸ್ವಲ್ಪವೂ ಸುಳ್ಳಲ್ಲ. ನಾನೇನಾದರೂ ಒಂದು ವಕ್ಷ ಓದಿದ್ದರೆ, ಮದುವೆಯಾಗದೇ ಇದ್ದಿದ್ದರೆ, ಪ್ರಮಾಣವಾಗಿಯೂ ಹಾಗೇ ಮಾಡ್ತಿದ್ದೆ...."

"ಓದಿದ್ದರೆ !.... ಮದುವೆಯಾಗದೇ ಇದ್ದಿದ್ದರೆ !.... ಬರೀ.... 'ರೆ' ಪ್ರಪಂಚ ತಾನೇ ?"

ಎಂದಳು ಶಾಂತ ವಿನೋದಹಾಸ ಸೂಸುತ್ತಾ. ನಾಗಮ್ಮ

ಒಂದು ಕ್ಷಣ ಯೋಚಿಸಿ ನಿಟ್ಟುಸಿರು ಬಿಡುತ್ತಾ,

"ಹು; ಬರೀ 'ರೆ' ಪ್ರಪಂಚವೇ ಕಣ್ರೀ....ಆದರ ನೋಡಿ, ಹೀಗೆ ಸುಮ್ಮನೆ ಗಂಡಸಿನ ಬೆನ್ನಿಗೆ ಬಿದ್ದು, ಮನೇಲ್ಲಿ ಕೊಳೀತಾ ಕುಳಿತಿರೋದಕ್ಕಿಂತ, ನಾವು ಸ್ವತಂತ್ರವಾಗಿ ಇದ್ದು ಬಿಡೋದು ಮೇಲ್ರೀ....ಹಾಗೆ ಬಾಳಬೇಕು ಎಂದು ನೀವೆಲ್ಲಿ ಕಲಿತುಕೊಂಡು ಬಂದಿದ್ದೀರಿ....ನಮಗೆಲ್ಲಾ ಅದೆಲ್ಲಿ!.... ನಾವು ಕಲಿತುಕೊಂಡು ಬಂದಿರೋದು ಈ ಬಾಳನ್ನೇ.... "

ಎಂದು ದಿಂಬನ್ನು ಹಾಸಿಗೆಯ ಮೇಲೆ ಹಾಕಿ, ಅದಕ್ಕೆರಡು ಏಟು ಬಿಗಿದು, ಕೈಯಿಂದ ಸುಕ್ಕುಗಳನ್ನು ಸವರುತ್ತಾ ಹೇಳಿದರು. ಶಾಂತ ಕೈಲಿದ್ದ ಪುಸ್ತಕದ ಹಾಳೆ ತಿರುವಿ ಹಾಕುತ್ತಾ,

"ಈಗ ನಿಮಗೇನ್ರೀ ಆಗಿದೆ ?... ಇಷ್ಟು ಸಂಕಟ ಪಡ್ತೀರಿ... ಏನಾದ್ರೂ ಜಗಳ-ಗಿಗಳ....!"

ಎಂದು ನಕ್ಕು ಅರ್ಧಕ್ಕೇ ನಿಲ್ಲಿಸಿದಳು.

ನಾಗಮ್ಮ ಹೊಡೆದೆಬ್ಬಿಸಿದವರಂತೆ ಎಚ್ಚೆತ್ತು, ತಮ್ಮ ಇದುವರೆಗಿನ ಮನೋಸ್ಥಿತಿಯನ್ನು ಕಂಡು, ಈಗ ತಮ್ಮನ್ನು ತಾನೇ ದೂಷಿಸಿಕೊಳ್ಳುವವರಂತೆ ಅರಕ್ಷಣ ತಡೆದು ಹೇಳತೊಡಗಿದರು

"ಹಾಗೇನೂ ಇಲ್ಲ ಶಾಂತ....ಹಳ್ಳಿಯಿಂದ ಇವತ್ತು ನನ್ನ ತಮ್ಮ ಬೇರೆ ಬಂದ. ಒಳ್ಳೆ ವಿಚಿತ್ರ ಹುಡುಗ ಅವನು!... ಏನೇನೋ ಮಾತಾಡಿ....ಮನಸ್ಸನ್ನೆಲ್ಲಾ ತಲೆ ಕೆಳಕು ಮಾಡ್ಬಿಟ್ಟಿದ್ದಾನೆ.. .. .ಅಲ್ಲದೆ ನಾನು ಹಳ್ಳಿಗೆ ಹೋಗಿದ್ದಾಗ ಇನ್ನಾರೋ ಒಬ್ಬ ಹುಡುಗೀನೂ ಆ ಹಳ್ಳಿಗೆ ತೌರುಮನೆಗೆ ಬಂದಿದ್ದಳು. ಅವಳಿಗೆ ತಾಯಿ ಇರಲಿಲ್ಲ. ತುಂಬಾ ಚಿಕ್ಕ ಹುಡುಗಿ. ಹದಿನಾಲ್ಕು-ಹದಿನೈದು ವರ್ಷವಿರಬಹುದು .... ಅವಳಿಗೆ ಮದುವೆಮಾಡಿ, ಮೈನೆರದ ಕೂಡಲೇ ಗಂಡನ ಮನೆಗೆ ಕಳಿಸಿದ್ದರು .. ಅಲ್ಲಿ ಅವಳಿಗೆ ಚಿತ್ರಹಿಂಸೆ ಕೊಡುತ್ತಿದ್ದರಂತೆ. ತಡೆದು ಕೊಳ್ಳಲಾರದೆ ಅವಳು ತೌರುಮನೆಗೆ ಓಡಿಬಂದಿದ್ದಳು. ಗಂಡಿನ ಕಡೆಯವರೂ ಹುಡುಕಿಕೊಂಡು ಅಲ್ಲಿಗೆ ಬಂದಿದ್ದರು. ತಂದೆ, ಆ ಮಗಳಿಗೆ, ಗಂಡಿನ ಕಡೆಯವರಿಗೆ ಇಬ್ಬರಿಗೂ ಬುದ್ಧಿ ಹೇಳಿ, ಅವಳನ್ನು ಪುನಃ ಗಂಡನ ಮನೆಗೆ

ಕಳಿಸಲು ತೀರ್ಮಾನಮಾಡಿಬಿಟ್ಟ. ಹುಡುಗಿ ಒಪ್ಪಲಿಲ್ಲ. ಅವಳ ಅಪ್ಪ, 'ನೀನು ಹೋಗಲೇ ಬೇಕು. ನಾಳೆ ಬೆಳಗ್ಗೆ ನಮ್ಮ ಮನೆಯಲ್ಲಿ ಇರ ಕೂಡದು' ಎಂದುಬಿಟ್ಟನಂತೆ. ಸರಿ, ಆ ಹುಡುಗಿ ನಾಳೆ ಬೆಳಗ್ಗೆ ಕಾಣಲಿಲ್ಲ. ಆ ರಾತ್ರಿಯೇ ದನದ ಕೊಟ್ಟಿಗೆಯಲ್ಲಿ ನೇಣು ಹಾಕಿ ಕೊಂಡು ಪ್ರಾಣ ಬಿಟ್ಟುಬಿಟ್ಟಳು. ಅದೇಕೋ ಆ ಅಭಾಗ್ಯೆ ಜ್ಞಾಪಕಕ್ಕೆ ಬಂದಳು. ಹೊಟ್ಟೆಗೆ ಬೆಂಕಿ ಬಿದ್ದಂತಾಯ್ತು. ನಾನಿಷ್ಟು ದಿನ ಕಂಡಿದ್ದ ಕೇಳಿದ್ದ ಹೆಂಗಸರ ಗುಲಾಮ ಬದುಕಿನ ಗೋಳೇ ಮನಸ್ಸಿಗೆ ನುಗ್ಗಿ ಬಂದಂತಾಯ್ತು .... ಅದಕ್ಕೇ ಹಾಗೆ ಹೇಳಿದೆ ಕಣ್ರೀ....ಪಾಪ! ಆ ಹುಡುಗಿಯೂ ವಿದ್ಯಾವಂತೆಯಾಗಿ, ಒಬ್ಬ ಡಾಕ್ಟರೋ, ನರ್ಸೋ ಆಗಿದ್ದಿದ್ದರೆ!"

ಎಂದು ಅಮರುಳ ಅವ್ವಡು ಕಚ್ಚಿ, ಕಲ್ಲಿನಂತೆ ಕುಳಿತರು. ಅದಾವುದೋ ದೂರನೋಟದಲ್ಲಿ ನೆಟ್ಟ ಅವರ ಕಣ್ಣಂಚಿನಿಂದ ಒಂದು ಹನಿ ಕಂಬನಿ ಕಳಚಿ ಹಾಸಿಗೆಯ ಮೇಲೆ ಬಿತ್ತು.

ಶಾಂತ ಅವರನ್ನೊಂದು ಕ್ಷಣ ದಿಟ್ಟಿಸಿ ನೋಡಿ ತಲೆ ತಗ್ಗಿಸಿದಳು. ಆ ಬಾಲೆಯ ದುರಂತ ಸಂಗತಿಯನ್ನು ಕೇಳುವುದಕ್ಕೆ ಮುಂಚೆ, ನಾಗಮ್ಮ ಎಲ್ಲೋ ತಮ್ಮ ಪತಿಯೊಡನೆ ಸ್ವಲ್ಪ ಬೇಸರ ತಾಳಿರಬಹುದು ಎಂದುಕೊಂಡಿದ್ದಳು. ಆಗ, 'ನಿಮ್ಮ ಪತಿಯಂಥವರು ದೊರೆತರೆ ಜಾಣ ಓದಿದ ಹುಡುಗಿಯೂ ಕೆಲಸ ಬಿಟ್ಟು ಓಡಿ ಬಂದಾಳು' ಎಂದು ಹೇಳಿಬಿಡುವುದರಲ್ಲಿದ್ದಳು. ಆದರೆ ಈಗವಳಿಗೆ ಅದನ್ನು ಹೇಳದಿದ್ದುದೇ ಮೇಲೆನಿಸಿತು.

ಹೆಚ್ಚಿಗೆ ಓದದ, ಮದುವೆಯಾಗಿ ಮಕ್ಕಳನ್ನು ಹೆತ್ತಿರುವ ಇವ ರಿಗೇ ತನ್ನ ಹೆಂಗಳೆಯರ ಬಗೆಗೆ ಇಷ್ಟು ಸಹಾನುಭೂತಿ, ಅವರ ಆರ್ಥಿಕ – ಸಾಮಾಜಿಕ ಸುಧಾರಣೆಯಲ್ಲಿ ಇಷ್ಟು ಆಸಕ್ತಿ ಇರುವಾಗ ವಿದ್ಯಾವತಿ, ಅವಿವಾಹಿತೆಯಾಗಿರುವ ನನಗೆ ಎಷ್ಟು ಆಸಕ್ತಿ ಇರಬೇಕು? ಉತ್ಸಾಹವಿರಬೇಕು? ಎಂದು ಯೋಚಿಸಿದಳು.

ತಾನಾಗಲೀ, ತನ್ನ ಹೆಚ್ಚು ಮಂದಿ ಗೆಳತಿಯರಾಗಲೀ, ಅಂಥ ಆಲೋಚನೆಗಳನ್ನೇ ಮಾಡುತ್ತಿರಲಿಲ್ಲ ಎಂಬುದು ಅವಳಿಗೆ ತೋರಿ

ಬಂತು. ಅವರಲ್ಲಿ ಅನೇಕರು ಓದುತ್ತಿದ್ದುದು ಶ್ರೀಮಂತ ಯುವಕರನ್ನು ಆಕರ್ಷಿಸಲು. ಅವರ ಭೋಗ ಮಂದಿರಗಳನ್ನು ಸೇರಲು.

ಹಾಗಾಗಬೇಕೆಂದೇ ಅವರನ್ನು ಓದಿಗೆ ಕಳುಹಿಸಿದ್ದ ಹಿರಿಯರ ಹೆಬ್ಬಯಕೆಯೂ ಆಗಿತ್ತು. ಹಳ್ಳಿಯ ಆ ನಿರ್ಭಾಗ್ಯೆಯನ್ನು ಕಲ್ಲೆಡೆಯಿಂದ ನೇಣಿಗೆ ಕಳಿಸುವ ಮನೋಭಾವದ ಹಿರಿಯರೇ ಅವರೆಲ್ಲರನ್ನೂ ಇಲ್ಲಿ ಕಾಲೇಜಿಗೂ ಕಳಿಸುತ್ತಿದ್ದರು. ಎಲ್ಲ ಹಿರಿಯರ ಗುರಿ ಒಂದೇ ಆಗಿದ್ದರೂ ಆ ನಿಸ್ಸಹಾಯಕ ಅವಿದ್ಯಾವಂತ ಗ್ರಾಮ ಬಾಲೆಗಿದ್ದ ಸ್ವಾತಂತ್ರ್ಯ, ಬಾಳ್ವೆಯ ದುರ್ಭರ ಅವಶ್ಯಕತೆ, ಉತ್ಕಟ ಹಂಬಲ ಈ ಸಹಸ್ರ ಸಹಸ್ರ ಮಂದಿ ವಿದ್ಯಾವತಿಯರಿಗೆ ಇರಲಿಲ್ಲ. ಅವರಿಗೆ ವಿಮೋಚನೆ ಒಂದು ಸಾವು ಬದುಕಿನ ಸಮಸ್ಯೆಯಾಗಿರಲಿಲ್ಲ.

ಯಾಂತ್ರಿಕವಾಗಿ, ಕೈಗೆ ಸಿಕ್ಕಿದ ಪುಸ್ತಕಗಳ ಹಾಳೆಯನ್ನೆಲ್ಲಾ ಒಂದೊಂದಾಗಿ ತಿರುವಿಹಾಕುತ್ತಿದ್ದ ಶಾಂತ, ಈ ಆಲೋಚನೆಗಳಲ್ಲಿ ಮುಳುಗಿರುವಾಗ ನಾಗಮ್ಮ — "ಒಂದು ನಿಮಿಷ ಇರ್ರೀ ಕಾಫಿಗೆ ಇಟ್ಟು ಬರ್ತೀನಿ" ಎಂದು ಒಳಗೆ ಹೋದರು.

ಶಾಂತ ಮೇಜಿನಮೇಲೆ ಕುಳಿತು, ತನ್ನ ಬಳಿ ರಾಶಿರಾಶಿಯಾಗಿ ಬಿದ್ದಿದ್ದ ಪುಸ್ತಕಗಳೆಲ್ಲವನ್ನೂ ನೋಡಲಾರಂಭಿಸಿದಳು. ಈಗ ಅವಳ ಕಣ್ಣುಗಳಿಗೆ ಕಟ್ಟಿದ್ದ ಆಲೋಚನೆಗಳ ಮಂಕು ಹರಿದು, ಅರಿವಿನ ಬೆಳಕು ಬಂದಿತ್ತು. ಅವಳ ಕೈಗೆ ಸಿಗುತ್ತಿದ್ದ ಪುಸ್ತಕಗಳೆಲ್ಲ.. ....ಅವಳನ್ನು ವಿಸ್ಮಯಗೊಳಿಸಿದವು. 'ದಿ ಟ್ರಾವಪೋಲ್ ಸಿಸ್ಟಮ್ ಆಫ್ ಅಗ್ರಿಕಲ್ಚರ್, ಥಿಯರಿ ಆಫ್ ಬೇಸಿಕ್ ಡೆವಲಪ್‌ಮೆಂಟ್ ಆಫ್ ಪ್ಲಾಂಟ್ಸ್, ರೋಡ್ ಟು ಸರ್ವೈವಲ್, ಅಗ್ರೇರಿಯನ್ ರಿಫಾರ್ಮ್ಸ ಲಾ, ಎಕನಾಮಿಕ್ ಡೆವೆಲಪ್‌ಮೆಂಟ್ ಆಫ್ ಏಷ್ಯಾ, ರಿವೋಲ್ಟ್ ಆಫ್ ಏಷ್ಯಾ, ಟಿ. ವಿ. ಎ., ಮಿಚುರಿನಿಸ್ಟ್ ಮೆಥೆಡ್ ಆಫ್ ಬ್ರೀಡಿಂಗ್ ನ್ಯೂ ಪ್ಲಾಂಟ್ ವೆರೈಟೀಸ್, ರೀ ಮೇಕಿಂಗ್ ನೇಚರ್—ಮುಂತಾದ ಕಠಿಣ ಗ್ರಂಥಗಳೇ !.. ಒಂದು ಕಥೆ ಪುಸ್ತಕವಿಲ್ಲ, ಒಂದು ಕಾದಂಬರಿಯಿಲ್ಲ, ಕಡೆಗೆ ಪಠ್ಯ ಪುಸ್ತಕಗಳೂ ನಹಿ!....ಎಲ್ಲಿ ಕೈಯಿಡಲಿ ಅಗ್ರೋ ಬಯಾಲಜಿ, ಅರ್ಥಶಾಸ್ತ್ರ, ಪ್ರಕೃತಿಯ ಜೀರ್ಣೋದ್ಧಾರ, ಭೂಮಿಯ ಪುನರ್ಹಂಚಿಕೆ

ಸಹಕಾರ ವಿಧಾನಗಳು, ಈ ವಿಷಯುಗಳ ಮೇಲೇ ನೂರಾರು ಪುಸ್ತಕ ಗಳು, ಹತ್ತಾರು ಟಿಪ್ಪಣಿ ಪುಸ್ತಕಗಳು – ಇವೇ ಕೈಗೆ ಬರುತ್ತಿದ್ದುವು.

ಇವುಗಳೆಲ್ಲ ಯಾವ ಕಾಲೇಜಿನ ಪಠ್ಯ ಪುಸ್ತಕಗಳು? ಇವುಗಳ ನ್ನೋದಿದರೆ ಎಂಥ ಪದವಿ ಕೈಗೆ ಸಿಗುತ್ತದೆ? ...... ಬಹುಶಃ ಈತ 'ಬಿ. ಎಜಿ' ವಿದ್ಯಾರ್ಥಿಯೆ? ಬಾಟನಿ ವಿದ್ಯಾರ್ಥಿಯೆ? ಎಂದು ಶಂಕಿಸುತ್ತ ನಾಗಮ್ಮನವರನ್ನೇ ವಿಚಾರಿಸುವುದೆಂದು ಮನಸ್ಸು ಮಾಡಿ ಕೊಳ್ಳುತ್ತಿರುವಾಗ ಅವಳ ಕೈಗೊಂದು ಫೋಟೋ ಆಲ್ಬಮ್ ಸಿಕ್ಕಿತು.

ಅದನ್ನು ಶಾಂತ ಬೇಗನೆ ಕೈಗೆ ತೆಗೆದುಕೊಂಡಳು. ಬೇಸರ ಪರಿಹರಿಸಲು ಕಡೆಗೆ ಇದಾದರೂ ಸಿಕ್ಕಿತಲ್ಲ ಎಂದು ಕುತೂಹಲದಿಂದ ಅದನ್ನು ತೆರೆದಳು. ಅದರಲ್ಲಿದ್ದ ಚಿತ್ರಗಳನ್ನು ಕಂಡು ಅವಳ ಆಶ್ಚರ್ಯ ಮತ್ತೂ ಅಧಿಕವಾಯಿತು. ಆಲ್ಬಮ್ಮಿನ ಪುಟಪುಟಗಳಲ್ಲೂ ಕೆಲಸದಲ್ಲಿ ತಲ್ಲೀನರಾಗಿರುವ ಗುಂಪು ಗುಂಪು ಹಳ್ಳಿಯ ಜನರ ಚಿತ್ರಗಳೇ! ಅವ ರೆಲ್ಲರೂ ಚರಂಡಿ ತೆಗೆದು, ಬೀದಿ ಗುಡಿಸಿ, ಹೊಲ ಉತ್ತು, ಕಾಲುವೆ ತೋಡಿ, ಪೊದೆ ಕಡಿದು, ಸಸಿ ನೆಟ್ಟು, ಗೊಬ್ಬರ ಹಾಕಿ, ನೀರು ಹೊಯ್ದು, ಬೆವರು ಸುರಿಸಿ, ಕೆರೆಗಳಲ್ಲಿ ಮಿಂದು, ಸಾಲುಸಾಲಾಗಿ ಊಟಕ್ಕೆ ಕುಳಿತ ಸಮೂಹ ದೃಶ್ಯಗಳೇ! ಕೊನೆಯ ಪುಟದಲ್ಲಿ ಮಾತ್ರ ಕೆರೆಯೊಂದರಲ್ಲಿ ಬಿಟ್ಟ ಒಂದು ಒಂಟಿ ಕೆಂದಾವರೆಯ ಸುಂದರ ಚಿತ್ರವಿತ್ತು, ಅಷ್ಟೆ.

ಅವಳಿಗೆ ಈ ವಿಚಿತ್ರ ವ್ಯಕ್ತಿಯ ಬಗ್ಗೆ ತುಂಬಾ ಕುತೂಹಲ ಹುಟ್ಟಿತು. ನಾಗಮ್ಮ ಹಿಂತಿರುಗಿ ಬಂದು, ಅವಳ ಕೈಗೊಂದು ಕಾಫಿಯ ಬಟ್ಟಲನ್ನು ಕೊಟ್ಟ ಕೂಡಲೇ ಪ್ರಶ್ನಿಸಿದಳು.

"ರೀ.... ನಿಮ್ಮ ತಮ್ಮ ಏನು ಓದ್ತಾರ್ರೀ?"

"ಸೀನಿಯರ್ ಬಿ.ಎಸ್‌ಸಿ..... ನೋಡಿ, ಜೂನಿಯರ್ ಆದ ಮೇಲೆ ನಾಲ್ಕುವರ್ಷ ಕಾಲೇಜಿಗೆ ಹೋಗಲಿಲ್ಲ.....ಇಲ್ಲದಿದ್ರೆ ಇಷ್ಟು ಹೊತ್ತಿಗೆಲ್ಲಾ ಪಾಸ್ ಆಗಿ, ಬಿ.ಇ. ಓದುತ್ತಿರಬಹುದಾಗಿತ್ತು...."

"ಜೂನಿಯರ್ ಆದ ಮೇಲೆ ಏಕೆ ಓದಲಿಲ್ಲ?"

"ಅಯ್ಯೋ.... ಅದೊಂದು ದೊಡ್ಡ ಕಥೆ.... ನೋಡಿ ನಮ್ಮ ಪಕ್ಕದ

ಹಳ್ಳಿಯಲ್ಲೇ ಅವನ ಸ್ನೇಹಿತರು ಒಬ್ಬರಿದ್ದಾರೆ... ಅವರಿಗೂ ಇವನಂಥ ಹುಚ್ಚೇ.. ಓದಿದವರು ಹೊಲ ಉಳಬೇಕು, ಹಳ್ಳಿ ಸೇರಬೇಕು ಎನ್ನೋ ಹುಚ್ಚು! ಸರಿ, ಅವರ ಜೊತೆ ಸೇರಿ ಇವನೂ ಅವರಂತೆಯೇ ಆಗಿ ಬಿಟ್ಟ. ಅದೇನು ಗ್ರಹಚಾರವೋ, ಇಬ್ಬರೂ ಕಾಲೇಜು ಬಿಟ್ರು, ಚರಂಡಿ ತೋಡೋದು, ಗೊಬ್ಬರ ಹೊರೋದು, ಸಾಯೋ ಮುದು ಕರಿಗೆ ಪಾಠ ಹೇಳೋದು, ಈ ಕೆಲಸಕ್ಕೆ ನಿಂತು ಬಿಟ್ರು. ಅಷ್ಟು ದಿನವೂ ಅವನು ಮನೆ ಸೇರಿ, ಹೊತ್ತಿಗೆ ಸರಿಯಾಗಿ ಊಟ, ನಿದ್ರೆ ಮಾಡಿದ್ದರೆ!...."

ಎಂದು ಹೇಳಿ ಮುಗಿಸುವಷ್ಟರಲ್ಲೇ,....ಒಂದು ಗಂಡು ದನಿ,

"ಹೋಗ್ಲೀ ನಾಗಕ್ಕಾ....ಈಗ ನಮ್ಮ ಹಳ್ಳಿಯಾದ್ರೂ ಹೇಗೆ ಕಾಣುತ್ತೆ... ನೀನೇ ನೋಡಿ ಬಂದೆಯಲ್ಲ.... ಅಲ್ಲಿಗೆ ಹೊಸಕಳೆ ಬಂದಿಲ್ಲವೇ?...." ಎಂದು ಹಠಾತ್ತನೆ ಕೇಳಿತು.

ಶಾಂತ ಬೆಚ್ಚಿಬಿದ್ದು ಬಾಗಿಲೆಡೆಗೆ ನೋಡಿದಳು.....ಅಲ್ಲೇ ಆ ಯುವಕ ನಿಂತಿದ್ದ!.. ಅವನ ಭಾವಪೂರ್ಣನಯನಗಳ ಉಜ್ವಲನೋಟ ನಾಗಮ್ಮನವರನ್ನು ನಿಟ್ಟಿಸುತ್ತಿತ್ತು. ಸ್ತಂಭಿತ ಕಿರುನಗೆಯೊಂದು ಅವನ ಅದುಮಿದ ತುಟಿಗಳ ಮೇಲೆ ನಲಿಯುತ್ತಿತ್ತು. ಶಾಂತ ಬೆಕ್ಕಸ ಬೆರಗಾಗಿ, ಅವನನ್ನೇ ಪೂರ್ಣ ದೃಷ್ಟಿಯಿಂದ ನೋಡಿದಳು. ಅವನ ನಿಲುವು-ನೋಟದಲ್ಲಾಗಲೀ, ವಿಶ್ವಾಸ ಪುಟಿಸಿ ಬರುವಂತಿದ್ದ ಸುಂದರ ವದನದಲ್ಲಾಗಲೀ ಸ್ವಲ್ಪವೂ ಮುಚ್ಚು ಮರೆಯಿರಲಿಲ್ಲ. ಅವನ ಕಣ್ಣು ಗಳು ನಿಷ್ಠುರತೆ, ಸಹೃದಯತೆ, ಪ್ರಾಮಾಣಿಕತೆ, ಮತ್ತು ಇನ್ನಾ ವುದೋ ಒಂದು ಬಗೆಯ ಅವರ್ಣನೀಯ ತೇಜಸ್ಸಿನಿಂದ ಹೊಳೆಯುತ್ತಿ ದ್ದುವು. ಶಾಂತ ಅವನ ಎತ್ತರವಾದ ದೃಢಕಾಯ, ಅದನ್ನು ಅಲಂಕರಿಸಿದ್ದ ಆಧುನಿಕ ಉಡುಪು, ಎರಡು ಕೈಗಳಲ್ಲೂ ಇದ್ದ ಪುಸ್ತಕ, ಪೇಪರ್, ಇಂಕ್‌ಬಾಟಲ್, ಅಲಂಕಾರ ಸಾಮಗ್ರಿಗಳು, ಇವೆಲ್ಲವುಗಳ ಮೇಲೂ ಒಮ್ಮೆ ನೋಟ ಹರಿಸಿದಳು. ಆದರೆ ಅವನ ಕಣ್ಣುಗಳನ್ನೇ ಮತ್ತೆ ಮತ್ತೆ ನೋಡಬೇಕೆನಿಸಿತು ಅವಳಿಗೆ.

ಹೀಗೆ ಹಠಾತ್ತನೆ ಬಂದ ರಾಜಣ್ಣನನ್ನು ಕಂಡು ನಾಗಮ್ಮ

ಚಕಿತಗೊಂಡು ನಿಂತರು. ಮರುಕ್ಷಣವೇ ಅವರ ವದನ ವಿಶಾಲ ಮುಗುಳು ನಗೆಯಿಂದರಳಿತು. ಆಶ್ಚರ್ಯ ಸಂತಸಗಳಿಂದ,

"ಇದೇನು! . ಎಲ್ಲಿಗೆ ಹೋಗಿದ್ದೆ? ಹೀಗೆ ಆಕಾಶದಿಂದ ಇಳಿದವನಂತೆ ಬಂದು ಬಿಟ್ಟ್ಯಲ್ಲ...'

ಎಂದು ಕೇಳಿದರು. ಅವನು ತನ್ನ ಕೈಲಿದ್ದ ವಸ್ತುಗಳನ್ನೆಲ್ಲಾ ತಾನು ನಿಂತಲ್ಲಿಂದಲೇ ಹಾಸಿಗೆಯ ಮೇಲೆಸೆದು,

"ಇನ್ನೇನು ... ಇದೆಯಲ್ಲ ಗೋಳು.... ಈ ಪುಸ್ತಕ. ಪೇಪರ್‌ಗಳನ್ನೆಲ್ಲಾ ತರಲು ಹೋಗಿದ್ದೆ."

ಎನ್ನುತ್ತಾ ರೂಮಿನಲ್ಲಿದ್ದ ಮತ್ತೊಂದು ವ್ಯಕ್ತಿಯ ಕಡೆಗೆ ನೋಟ ಹೊರಳಿಸಿದ.

'ಯಾರು ನೀವು?. ಓ!. .. ಪಕ್ಕದ ಮನೆಯವರಲ್ಲವೇ?' ಎಂದು ಗಾಂಭೀರ್ಯ, ಗೆಳೆತನ, ಮಾಧುರ್ಯಗಳಿಂದ ಕೇಳಿತು ಅವನ ನೋಟ. ಅವನ ನೋಟದಿಂದ ನೋಟ ಕಿತ್ತು ..., ತನ್ನಲ್ಲಿ ತಾನೇ ಉಗ್ರ ಸಂಯಮದ ಚೆಲುವಿನಿಂದ ಮುಗುಳುನಗೆ ಸೂಸುತ್ತಿದ್ದ ಶಾಂತಳ ಕಣ್ಣುಗಳು. 'ಹೌದು' ಎಂದು ಉತ್ತರ ಹೇಳುತ್ತಿದ್ದುವು.

ಆ ಯುವಕ ತೃಪ್ತಿಹೊಂದಿದವನಂತೆ ಹಾಲಿನ ಕಡೆಗೆ ತಿರುಗಿ ನಿದ. ಆದರೆ ಅದೇಕೋ, ಮರುಕ್ಷಣವೇ ಏನನ್ನೋ ಜ್ಞಾಪಿಸಿಕೊಂಡವನಂತೆ ನಿಂತು, ಹಿಂತಿರುಗಿ ಆ ಯುವತಿಯನ್ನೇ ಹಠಾತ್ತನೆ ಮತ್ತೊಮ್ಮೆ ನೋಡಿದ. ಶಾಂತಳ ನೋಟ ಅವನ ನೋಟದೊಡನೆ ಮತ್ತೊಮ್ಮೆ ಬೆರೆಯಿತು. ಅವನ ಕಣ್ಣುಗಳಲ್ಲಿ ತೀಕ್ಷ್ಣತೆಯ ಹೊಳಪು ಮಸೆದು ಮೇಲೆದ್ದಿತು. ವದನ ಇದ್ದಕ್ಕಿದ್ದಂತೆಯೇ ಉಗ್ರ ಗಾಂಭೀರ್ಯ ತಾಳಿತು. ತೀವ್ರ ಆಲೋಚನೆಯಿಂದ ಹುಬ್ಬು ಗಂಟಿಕ್ಕಿತು.

ಶಾಂತ ಬೆದರಿ, ಬೆವರೊಡೆದಳು ಆ ದೃಷ್ಟಿಯ ಬಿಸುಗೆಯಿಂದ ತನ್ನ ನೋಟವನ್ನು ಕೀಳಲು ಯತ್ನಿಸಿದಳು. ಆದರೆ, ಆ ಯುವಕನಿಗೇ ತನ್ನ ಪ್ರೈಮರಿವು ತೆರಳಿತೇನೋ ಅವನು ಮತ್ತೆ ಹಾಲಿನ ಕಡೆಗೆ ಹೊರಟ.

ಕೂಡಲೇ ಶಾಂತ ತಲೆ ತಗ್ಗಿಸಿದಳು. ಬಹುಕಾಲ ಅವಳಿಗೆ ತಲೆ

ಎತ್ತಲು ಧೈರ್ಯವಾಗಲಿಲ್ಲ. ಅವಳಿಗೆ ಆ ಒಂದೆರಡು ಕ್ಷಣಗಳಲ್ಲಿ ಯಾವುದೋ ಒಂದು ಅವರ್ಣನೀಯ ಅನುಭವವಾಗಿದ್ದಿತು. ನೀಲ ನಭದಲ್ಲಿ ವೇಗವಾಗಿ ಸಂಚರಿಸುವಾಗ, ಕ್ಷಣಕಾಲ ಅಚಲವಾಗಿ ನಿಂತು, ತೀವ್ರ ಸ್ಪಂದನದಿಂದ ರೆಕ್ಕೆ ಬಡಿದು, ಅವಳೆದೆಯ ಗೂಡ ಸರಸ್ಸಿನ ಗರ್ಭದಾಳಕ್ಕೆ ಹಠಾತ್ತನೆ ಎರಗಿ, ಆಳ ಆಳವಾಗಿ ಮುಳುಗಿ, ಏನನ್ನೋ ಅರಸಿ, ಅನಂತರ ಅಷ್ಟೇ ಹಠಾತ್ತನೆ ನೀಲನಭದತ್ತ ಮೇಲೆ ಮೇಲೇರಿ ಹೋದ ಒಂದು ಸುಂದರ ಬನಪಕ್ಷಿಯಂತೆ ತೋರಿತು - ಅವನ ಆ ನೋಟ! ಅವಳ ಹೃದಯದಲ್ಲಿ ಭೀತಿ, ಲಜ್ಜೆ, ಆನಂದದ ಬುಗ್ಗೆ ಚಿಮ್ಮತೊಡಗಿತು. ತನ್ನ ಕೆಂಪೇರಿದ ಮುಖ ನಾಗಮ್ಮನಿಗೆ ಕಾಣದಂತೆ ಅವಳ ಬಾಗಿದ ತಲೆ ಬಾಗಿದೆಂತೆಯೇ ಇತ್ತು.

ನಾಗಮ್ಮನವರು, 'ಕಾಫಿ ಕೊಟ್ಟು ಬಂದೆ' ಎಂದು ರೂಮಿನಿಂದ ಹೊರಗೆ ನಡೆದರು. ಶಾಂತ, ಒಂದೆರಡು ಬಾರಿ ಆಳವಾಗಿ ಉಸಿರೆಳೆದು ಕಾಫಿ ಬಟ್ಟಲನ್ನು ಎರಡೇ ಗುಟುಕಿನಲ್ಲಿ ಖಾಲಿ ಮಾಡಿದಳು. ಅನಂತರ ಬಾಗಿಲ ಬಳಿಗೆ ಬಾಗಿ, ಹಾಲಿನತ್ತ ಎಚ್ಚರಿಕೆಯಿಂದ ನೋಡಿದಳು.

ಆ ಯುವಕ ಒಂದು ಸೋಫಾದಲ್ಲೊರಗಿ, ಕಾಲಿನಮೇಲೆ ಕಾಲು ಹಾಕಿ, ಕೈಯಲ್ಲಿ ಹಿಡಿದ ದಿನಪತ್ರಿಕೆಯಮೇಲೆ ತಲೆಬಾಗಿಸಿದ್ದ.. ಮರುನಿಮಿಷದಲ್ಲೇ ನಾಗಮ್ಮ ಕಾಫಿ ತಂದರು. ಅದನ್ನು ಕೈಗೆ ತೆಗೆದುಕೊಳ್ಳುತ್ತಾ, ತಲೆಯೆತ್ತಿ ಮುಗುಳ್ನಕ್ಕು,

"ಏನು? ........ನಿಮ್ಮ ಸ್ನೇಹಿತರಿಗೆ ನನ್ನಮೇಲೆ ಏನೇನೋ ದೂರು ಹೇಳ್ತಿದ್ದಂತೆ ಇತ್ತು! .....ಇಷ್ಟುಹೇಳಿದ ಮೇಲೂ ನಾನು ಮಾಡಿದ ಕೆಲಸ ಸರಿ ಎಂದು ನಿನಗೆ ತೋರೋಲ್ಲವೇನು?"

ಎಂದು ಕೇಳಿದ. ನಾಗಮ್ಮನವರು ನಗುನಗುತ್ತಲೇ ನಿಷ್ಠುರವಾಗಿ ನುಡಿದರು.

"ನೀನೊಂದು ವೇಳೆ ಕೋಪಿಸಿಕೊಂಡರೂ ಸರಿ, ..ನನಗೇನೋ ಖಂಡಿತ ಸರಿ ಎಂದು ತೋರೋಲ್ಲಪ್ಪ....ನಿನ್ನ ಕೆಲಸ ಕಾಲೇಜಿನಲ್ಲಿ ಓದುವುದು, ಬರೆಯುವುದು, ಪರೀಕ್ಷೆಗಳಲ್ಲಿ ಪಾಸಾಗುವುದು, ....... ಅದನ್ನಷ್ಟೇ ನೀನು ನೋಡಿಕೊಳ್ಳಬೇಕು... ಊರಿನ ಕಷ್ಟ-ವ್ಯಸನ

ವೆಲ್ಲ ನಿನಗೇಕೆ ?"

"ನಮ್ಮ ಊರಿನ ಕಾಷ್ಟಾ-ವ್ಯಸನ ನಮಗೇ ಇಲ್ಲದಿದ್ದಮೇಲೆ ಇನ್ನಾರಿಗಿರುತ್ತೆ. ನಮ್ಮ ಊರಿಗೆ ಆಗಬೇಕಾಗಿರುವ ಕೆಲಸಗಳನ್ನು ಪಕ್ಕದ ಊರಿನವರು ಬಂದು ಮಾಡಿಕೊಡ್ತಾರೇನು ? ಈಗ ನಾನಲ್ಲಿ ಸ್ವಲ್ಪ ದಿನ ನಿಂತು ಕೆಲಸ ಮಾಡಿದ್ದರಿಂದ ನಮ್ಮ ಹಳ್ಳಿ ಹುಟ್ಟಿದಾಗಿ ನಿಂದ ಇಲ್ಲದಿರುವಷ್ಟು ಶುಚಿಯಾಗಿಲ್ಲವೆ ?.... ಅಂದವಾಗಿಲ್ಲವೆ ?"

"ಸರಿ ; ಇರಬಹುದು. ಆದರೆ ಅದರಿಂದ ನಿನಗೆ ಬಂದ ಕಿರೀಟವೇನು ?"

"ನನಗೆ ಯಾವ ಕಿರೀಟವೂ ಬೇಡ. ನನಗೆ ಹಾಗೆ ಮಾಡ ಬೇಕು, ಅದರಿಂದ ನಮ್ಮ ಹಳ್ಳಿಗೆ ಅನುಕೂಲವಾಗುತ್ತೆ ಎನಿಸಿತು. ಅದನ್ನೇ ನಾನು ಮಾಡ್ದೆ.. ಯಾರಾದರೂ ನನಗೆ ಕಿರೀಟ ಕೊಡ್ಲಿ ಎಂದು ಏನನ್ನೂ ಮಾಡ್ಲಿಲ್ಲ....ಹೋಗಲಿ, ಈಗ ನಮ್ಮ ಹಳ್ಳಿಯ ವರನ್ನೇ ಕೇಳಿ ನೋಡು, ನಿಮಗದರಿಂದ ಅನುಕೂಲವಾಗಿದೆಯೋ, ಇಲ್ಲವೋ" ಎಂದು ಎನ್ನುತ್ತಿರುವಾಗಲೇ, ನಾಗಮ್ಮ ವಿನೋದ ಪ್ರತೀ ಕಾರದಿಂದ "ನಾನೆಲ್ಲ ಕೇಳಿ ನೋಡಿದೆ....ಅವರೆಲ್ಲ ಏನು ಹೇಳ್ತಾರೆ ಗೊತ್ತೆ. ನಿನ್ನಂಥವರು ತಲೆ ಎತ್ತಿಕೊಂಡು, ಮಳೆ-ಬೆಳೆಯೇ ನಾಯಿ ವಾಯ್ತು ಎನ್ನುತ್ತಾರೆ... "

ಎಂದು ನುಡಿದು ಶಾಂತಳಿದ್ದ ರೂಮಿನ ಕಡೆಗೆ ಸರ–ಸರನೆ ನಡೆದು ಬಂದರು.

ಆ ಯುವಕ ಕ್ಷಣ ಕಾಲ ತೆಪ್ಪಗಾದ. ನಾಗಮ್ಮ, ಶಾಂತ ಇಬ್ಬರೂ ಬಾಯಿ ಮುಚ್ಚಿಕೊಂಡು ನಕ್ಕರು. ಅಷ್ಟರಲ್ಲಿ ಅವನು ಅಸಹಾಯಕನಂತೆ,

"ಎಲ್ಲಾ ಸುಳ್ಳು !.. ಈ ಹೆಂಗಸರ ಜೊತೆ ಮಾತಾಡೋದ ಕ್ಕಿಂತ ಬಾಯಿಗೊಂದು ದೊಡ್ಡ ಬೀಗ ಹಾಕ್ಕೊಳ್ಳೋದು ಒಳ್ಳೇದು. ಇರಲಿ, ಆ ಮಳೆ-ಬೆಳೆಗೂ ಏನಾದರೂ ಮಾಡ್ತೀವಿ..." ಎಂದು ಕೊಳ್ಳುತ್ತಿದ್ದ.

ಸುಳ್ಳೋ – ನಿಜವೋ ಅಂತೂ ಏನೋ ಒಂದನ್ನು ಹೇಳಿ

ವಾದದಲ್ಲಿ ಜಯಶೀಲರಾಗಿ ಬಂದಿದ್ದ ನಾಗಮ್ಮ. ತಮ್ಮಲ್ಲಿ ತಾವು ನಗುತ್ತಾ, "ಸಧ್ಯ: ಅಲ್ಲಿ ಪುನಃ ಇನ್ನೇನೂ ಮಾಡೋಕೆ ಹೋಗ ಬೇಡ....ತೆಪ್ಪಗೆ ಓಟಕೋ.. ಒಂದೋ ಎರಡೋ ಡಿಗ್ರಿಗಳು ಬಂದ ಮೇಲೆ ನಿನಗಿಷ್ಟ ಬಂದಿದ್ದನ್ನು ಮಾಡಿಕೊಳ್ಳುವೆಯಂತೆ. ಆಗ ನೀನೂ ಒಬ್ಬ ವಿನೋಬಾಜೀ, ಜಯಪ್ರಕಾಶ್.. ಎಂದು ಜನ ಕರೀತಾರೆ" ಎಂದು ಪರಿಹಾಸ್ಯ ಮಾಡಿದರು

ಆ ಯುವಕ ಏನನ್ನೂ ಹೇಳಲಿಲ್ಲ. ಒಂದು ಕ್ಷಣ ಕಾಯ್ದು ನೋಡಿ, ತಮ್ಮ ಜಯವನ್ನು ಅಂತಿಮವಾಗಿ ನಿರ್ಧರಿಸಿಕೊಂಡ ಅವರು, ಶಾಂತಳನ್ನು ನೋಡಿ ಮುಗುಳುನಗೆ ಬೀರಿದರು. ಶಾಂತಳೂ ಅವ ರೊಡನೆ ನೋಟ ಬೆರೆಸಿ ನಸು ನಗುತ್ತಾ,

"ನಾನಿನ್ನು ಬರ್ತೀನ್ರೀ..."

ಎಂದು ಹೊರಡಲು ಅನುವಾದಳು....ನಾಗಮ್ಮನವರು.

"ಆಗಲೇ ಹೊತ್ತಾಯ್ತೇನ್ರೀ...." ಎಂದರು.

"ಹು: ಆಗಲೇ ಎಂಟು ಗಂಟೆಯಾಗಿರಬೇಕು . ನಾನಿನ್ನು ಬರ್ತೀನೆ. "

ಎಂದು ಹೊರಟಳು ನಾಗಮ್ಮನವರೂ ಅವಳ ಜೊತೆಗೇ ಮಹಡಿಯ ಮೆಟ್ಟಿಲಿಳಿದು ಬರುತ್ತಾ

"ಇವತ್ತು ಏಂದಿಯನ್ನಾದರೂ ಓಲೀಲಿಲ್ಲ ನೋಡಿ....ಬರೀ ಹರಟೆಯಲ್ಲೇ ಕಾಲ ಕಳೆಯಿತು" ಎಂದರು.

ಆದರೆ, ಶಾಂತಳಿಗೆ ಅದು ಒಣ ಹರಟೆಯಲ್ಲೇ ಕಳೆದುಹೋದ ಸಂಜೆಯಂತೆ ಕಾಣಲಿಲ್ಲ ಅದಕ್ಕೆ ಬದಲು ಅದೊಂದು ಅಪೂರ್ವ ಸಂಜೆ ಎಂದು ತೋರಿತು.

## ೪

ಒಂದೆರಡು ವಾರಗಳಿಂದಲೂ ನಾಗಮ್ಮನವರ ಮಧುರ ಸ್ನೇಹ ವಿಲ್ಲದೆ ನೀರಸಗೊಂಡಿದ್ದ ಶಾಂತಳ ಮನ, ಈಗ ನೀರೆರೆದ ಲತೆಯಂತೆ ಪ್ರಫುಲ್ಲಗೊಂಡಿತ್ತು. ಅಲ್ಲದೆ ಅವರ ಸೋದರನ ಅನಿರೀಕ್ಷಿತ ಆಗಮನ ದಿಂದ ಅವಳೆದೆಯಲ್ಲಿ ಅಸ್ಪಷ್ಟ ಪುಳಕದ ತರಂಗಗಳೆದ್ದು ಮನಮೋಹಕವಾಗಿ ನರ್ತಿಸಲಾರಂಭಿಸಿದ್ದುವು. ಅವಳೆಷ್ಟು ಯತ್ನಿಸಿ ದರೂ ಅವನು ಕ್ಷಣಕಾಲ ಬೀರಿದ್ದ ಆ ತೀಕ್ಷ್ಣ, ಅನ್ವೇಷಕ ನೋಟವನ್ನು ಮರೆಯಲಾಗಲಿಲ್ಲ. ಆ ರೀತಿ ಅವನು ಏಕೆ ನೋಡಿದ? ಏನನ್ನು ನೋಡಿದ?. ಅವನಿಗೇನು ಕಂಡಿತು?.... ಎಂಬ ಪ್ರಶ್ನಾ ಪುಷ್ಪಗಳು ಅವಳ ಮನದ ಕಲಕಿದ ಸರೋವರದಲ್ಲಿ ಉರುಳಿ-ಉರುಳಿ ತೇಲುತ್ತಿದ್ದುವು...

ಅವಳಿಷ್ಟು ದಿನವೂ ಯಾರಿಂದಲೂ ದಿಟ್ಟಿಸಿನೋಡಿಸಿಕೊಳ್ಳ ದಂತೆ, ತೆರೆಯ ಮರೆಯಲ್ಲಿರಲಿಲ್ಲ. ಯೌವನೋದಯವಾಗಿ, ಅಂಗಾಂಗಗಳು ಅರಳಿದಂದಿನಿಂದ ಅವಳು ಕಾಲೇಜಿಗೆ ಹೋಗಿ ಬರುವಾಗ, ಬಸ್ಸಿನಲ್ಲಿ ಕುಳಿತಾಗ, ಬೀದಿಯಲ್ಲಿ ನಡೆದಾಗ, ನೂರಾರು ಯುವಕರು, ಪುರುಷರು ಅವಳನ್ನು ದಿಟ್ಟಿಸಿ ನೋಡಿದ್ದರು. ಅವರ ನೋಟಗಳೆಲ್ಲವನ್ನೂ ನಾಲ್ಕು ಸ್ಥೂಲ ವಿಧಗಳಾಗಿ ವಿಂಗಡಿಸಬಹು ದಾಗಿತ್ತು.

ಸ್ವಲ್ಪ ಕಾವ್ಯಾಭಿರುಚಿಯ ಮೆತ್ತ ಯುವಕರು, ತಮ್ಮ ಮುದ್ದು ಮುಖ, ಕನಸಿನ ಕಣ್ಣುಗಳನ್ನು ಪ್ರದರ್ಶಿಸಿ ಅವಳನ್ನು ದೇವತೆಯೆಂದು ಪೂಜಿಸುವ ನೋಟ ಬೀರಿದ್ದರೆ, ಸೂಟು-ಬೂಟಿನ ಶ್ರೀಮಂತ ಮೋಜುಗಾರರು, ತಮ್ಮ ಠೀವಿ, ಐಶ್ವರ್ಯಗಳನ್ನು ಪ್ರದರ್ಶಿಸಿ, ತೃಪ್ತಿ, ಹೆಮ್ಮೆ, ಮತ್ತು ಗುಪ್ತ ಬಯಕೆಗಳಿಂದ ಮುಗುಳು ನಗೆ ಬೀರಿದ್ದರು. ಯುವಕರಂತೆ ನಾಚದೆ, ಬಹುದೂರ ಮುಂದುವರಿಯುವ ಪ್ರೋಕ್ಷತಹೆಯ, ಬೊಜ್ಜು ಹೊಟ್ಟೆಯ ನಡುವಯಸ್ಕರು, ಬಳಿಯಲ್ಲೇ

ಕುಳಿತ ಹಕ್ಕಿಯನ್ನು ನೋಡುವ ಹಾವಿನಂತೆ ದುರುಗುಟ್ಟಿ ನೋಡಿ, ತಿಣಿಕಿ, ಒದ್ದಾಡಿದ್ದರೆ, ನಾಚಿಕೆ, ಮಾನ, ಮರ್ಯಾದೆ ಎಲ್ಲವನ್ನೂ ತೊರೆದ ಕೆಲವು ಲಂಪಟರು ಅವಳನ್ನು ತಮ್ಮ ಮನದಲ್ಲೇ ವಿವಸ್ತ್ರ ಗೊಳಿಸುವ ಕಾಮದ ಉರಿಗಣ್ಣಿನಿಂದ ನೋಡಿದ್ದರು.

ಈ ಜೀವಜಾತ್ರೆಯ ರಾಗಭಾವಗಳ ಸೌಮ್ಯ ಉದ್ರಿಕ್ತ ಪ್ರದರ್ಶನ ವೆಲ್ಲ ಅವಳ ನಿಷ್ಕಪಟ, ಸಂಯಮಪೂರ್ಣ ಮನೋಪಟಲದ ವಜ್ರ ಕಠೋರತೆಯ ಮೇಲೆ ಬಿದ್ದು, ದಿಕ್ಕಾಪಾಲಾಗಿ ಸಿಡಿದು–ನೂರೆ ಯಾಗಿದ್ದುವು. ಆದರೆ, ಇಂದು ಆ ಯುವಕ ಬೀರಿದ ಅಪೂರ್ವ ನೋಟ ಈ ಯಾವೊಂದು ಬಗೆಯ ರಾಗ ಪ್ರದರ್ಶನದಿಂದಲೂ ದೂಷಿತ ವಾಗಿರಲಿಲ್ಲ. ಸುಂದರ, ಸಶಕ್ತ ದುಂಬಿಯೊಂದು, ಬಣ್ಣದ ಹೂವಿನ ಮೇಲೆ ಕ್ಷಣಕಾಲ ಕುಳಿತು, ಅದರೊಡಲಿನ ಮಕರಂದವನ್ನು ಹೀರಿ ಉನ್ಮಾದದಿಂದ ಹಾರಿ ಹೋಗುವಂತೆ, ಅವನ ನೋಟವೂ ಅವಳೆದೆಯ ಆಳ ಆಳಕ್ಕಿಳಿದು ಅದರ ಸ್ಪಂದನದೊಡನೆ ಸ್ಪಂದಿಸಿ, ಏಳುತ್ತ-ಬೀಳುತ್ತಾ ಮುಂದೆ ಸಾಗಿದ್ದಿತು.

ಅದನ್ನು ನೆನೆದು ಶಾಂತಳ ಮನ ಆಸೆ, ಭೀತಿ, ಸ್ವಪ್ರಶಂಸೆ, ಆತ್ಮನಿಂದೆಗಳಿಂದ ಝೇಂಕರಿಸತೊಡಗಿತು. ಮೊಟ್ಟ ಮೊದಲನೆಯ ದಾಗಿ 'ನಾನವನನ್ನು ತುಂಬಾ ದಿಟ್ಟಿಸಿ ನೋಡಿದೆನೇ..?. ಅದನ್ನು ಕಂಡು ನಾನೊಬ್ಬ ಲಜ್ಜೆಗೆಟ್ಟವಳೆಂದು ಅವನು ಪರಿಗಣಿಸಿದನೆ ?' ಎಂಬ ಶಂಕೆ ಅವಳನ್ನು ಕಾಡತೊಡಗಿತು

ಹಲವಾರು ನಿಮಿಷ ಯೋಚಿಸಿದ ನಂತರ ಅವಳಿಗೆ ಹೊಳೆ ಯಿತು 'ಇಲ್ಲ, ನಾವಿಬ್ಬರೂ ಒಬ್ಬರನ್ನೊಬ್ಬರು ದಿಟ್ಟಿಸಿ ನೋಡಿ ದರೂ....ಅವನಿಗೆ ಹಾಗೆ ತೋರಿರಲಾರದು. ..ನನಗೆ ಅವನ ವಿಚಾರದಲ್ಲಿ ತುಂಬಾ ಕುತ್ಕೂಹಲ ಉದಿಸಿತ್ತು. ಅವನು ಹಠಾತ್ತನೆ ನಾವಿದ್ದೆಡೆಗೆ ಬಂದಾಗ ಅವನನ್ನು ಮೊದಲು ನಾನೊಬ್ಬಳೇ ಕಣ್ತುಂಬ ನೋಡಿದೆ. ಹೌದು ; ಅವನು ನಿಜವಾಗಿಯೂ ಸುಂದರ. ಆದರೆ ಅವನ ನೋಟ ದಲ್ಲೇನೋ ಯಾತನೆಯಿದೆ. ಹುಬ್ಬು ಗಂಟಿಕ್ಕೇ ಇರುತ್ತದೆ. ಗಲ್ಲ ಅದುಮಿದಂತೆಯೇ ಇರುತ್ತದೆ. ತನ್ನ ಆಲೋಚನೆಗಳಲ್ಲೇ ಮುಳುಗಿ

ಹೋಗಿರುವಂತೆ ಕಾಣುತ್ತಾನೆ. ಬಹುಶಃ ಹಳ್ಳಿಯಲ್ಲೇ ತನ್ನ ಪ್ರಿಯತಮೆಯನ್ನೇನಾದರೂ ಬಿಟ್ಟು ಬಂದಿರುವನೋ !....ಛಿ !.... ಹಾಗಿರಲಾರದು....ಇವನಿನ್ನೂ ಎಳೆ ಯುವಕ.. ಅಲ್ಲದೆ, ತುಂಬಾ ಬಿಗಿ ಮನಸ್ಕನಂತೆಯೂ ಕಾಣುತ್ತಾನೆ....ಅಂತೂ ಈಗಲೇ ಏನು ಯೋಚನೆಯೋ ಪಾಪ ! ಎಂದುಕೊಳ್ಳುತ್ತಿದ್ದೆ.

'ಆಗವನು ನನ್ನೆಡೆಗೆ ದೃಷ್ಟಿಯೆಸೆದ ಎಂಥ ಸವಿ, ಸ್ನೇಹ, ಸೌಜನ್ಯಗಳಿತ್ತು ಅದರಲ್ಲಿ ... ಆದರೆ ಸ್ವಲ್ಪ ಹೊತ್ತಾದ ಮೇಲೆ ಮತ್ತೊಮ್ಮೆ ನೋಡಿದಾಗ ಎಷ್ಟು ಪರಿವರ್ತನೆಯಾಗಿತ್ತು ಅವನಲ್ಲಿ ! ಅವನು ಬೀರಿದ ನೋಟವೋ ! . ದಯೆ ದಾಕ್ಷಿಣ್ಯಗಳಿಲ್ಲದ, ದೀಕ್ಷಾ ಮನೋಭಾವದವನ ಸಂಶಯಗ್ರಸ್ತ ನೋಟ ! ನನ್ನ ವಿಷಯದಲ್ಲಿ ಅವನಿಗೆಂಥ ಅನುಮಾನ ಹುಟ್ಟಿತು?. ಅನುಮಾನ!.... ಅನುಮಾನ!!
ಅಥವ ಆಸೆಯೋ ? ... ಎಂಥ ಆಸೆ? .. ಇವಳು ಆ ಆಸೆಗೆ ಅರ್ಹಳೇ ?... ಅದನ್ನು ತೀರಿಸಬಲ್ಲಳೇ,. ..ಎಂದು ನೋಡಿರಬಹುದೆ? . ಹೌದು....ಅದೇ ಇರಬೇಕು. ಇಲ್ಲದಿದ್ದರೆ ಅವನಿಗೆ ನನ್ನಲ್ಲೆಂಥ ಅನುಮಾನ ?....ಆಸೆ-ಅನುಮಾನಗಳೆರಡೂ ಒಂದೇ ಮನೋಭಾವದ ಎರಡು ಮುಖಗಳಲ್ಲವೆ !....ನಾನು ತಪ್ಪು ತಿಳಿದಿದ್ದೆ. ಅವನಿಗೆ ನನ್ನಲ್ಲಿ ಅನುಮಾನವಿಲ್ಲ ; ಏನೋ ಆಸೆಯಿದೆ....ಇದು ಖಂಡಿತ, ಇದು ಸತ್ಯ.'

ಎಂದು ಹಿಗ್ಗಿ ನುಡಿಯಿತು ಅವಳ ಹೃದಯ. ಉತ್ಸಾಹದ ಉತ್ತುಂಗ ತೆರೆಯೊಂದು ಅವಳ ದೇಹಾದ್ಯಂತ ಪ್ರವಹಿಸಿತು. ಅವಳ ಮನ ಹಕ್ಕಿಯಂತೆ ಕಲ್ಪನೆಯ ಕೆಂಪು ಬಾನಿನಲ್ಲಿ ಹಾರಿ, ವಿಹರಿಸ ತೊಡಗಿತು.

ರಾತ್ರಿಯ ತಂಪುಗಾಳಿಯೊಡನೆ ದೂರದ ಗಂಟೆಯ ಮಂಜುಳನಾದ ಹನ್ನೊಂದು ಗಂಟೆಯೆಂದು ಗಂಭೀರವಾಗಿ ಘೋಷಿಸತೊಡಗಿದಾಗ ಶಾಂತ ತನ್ನ ಕನಸಿನರಾಜ್ಯದಿಂದ ಎಚ್ಚೆತ್ತಳು....ಅವಳ ಮುಂದೆ, ತೆರೆದ ಪುಸ್ತಕ ತೆರೆದಂತೆಯೇ ಇತ್ತು; ಬಿಟ್ಟ ಓದು ಬಿಟ್ಟೆಡೆಯೇ ನಿಂತಿದ್ದಿತು. ತನ್ನೆರಡು ಕಣ್ಣುಗಳನ್ನೂ ಮುಚ್ಚಿ, ತಂಪು ಕೈಬೆರಳುಗಳಿಂದ ಅವುಗಳನ್ನೊಮ್ಮೆ ಸವರಿ, ಶಾಂತ ತನ್ನಲ್ಲಿ ತಾನೇ ನಸುನಕ್ಕಳು.

ಅವಳಿಗೆ ಇಂದು ಓದು ಸಾಗುವಂತ ಕಾಣಲಿಲ್ಲ. ಪುಸ್ತಕ ಮುಚ್ಚಿ ಮೇಲೆದ್ದಳು. ಆಗಲೇ ಸುಖನಿದ್ದೆಯಲ್ಲಿ ಮುಳುಗಿದ್ದ ಶ್ಯಾಮಲ, "ಅಡಿಗೆ ಮನೇಲಿ ನಾನು ಸಕ್ಕರೆ ಕದೀಲಿಲ್ಲ! ಹು. ನಾನೇನು ಕದೀಲಿಲ್ಲ ಕಣೇ!" ಎಂದು ಕನವರಿಸಿದಳು. ಶಾಂತಳಿಗೆ ಮಧ್ಯಾಹ್ನದ ಜಡಿಲು ನೆನಪಾಗಿ, ನಗು ಬಂತು.

ತನ್ನ ಹಾಸಿಗೆಯನ್ನು ಉರುಳಿಸಿ, ದೀಪ ಆರಿಸಿ, ಮಲಗಿದಳು. ನಿದ್ರೆ ಕೂಡಲೇ ಕಣ್ಣಿಗೆ ಹತ್ತಲಿಲ್ಲ. ತೆರೆದ ಕಿಟಕಿಯ ಮೂಲಕ ಬೀಸುವ ತಂಗಾಳಿ. ಅದಕ್ಕೆ ಸಿಕ್ಕಿ ನಲಿಯುವ ಸಂಪಿಗೆ ಮರದ ರೆಂಬೆ. ಅದರ ಮೇಲೆಯೇ ನಿಂತಂತೆ ಕಾಣುವ ಪೂರ್ಣಚಂದ್ರ. ಒಂದೆರಡು ಹೊಳೆವ ತಾರೆಗಳು. ಒಂಟಿ ಮೋಡ, ಇವುಗಳು ಮನವನ್ನು ಮಧುರಾಲೋಚನೆಗಳತ್ತ ಸೆಳೆಯುತ್ತಿದ್ದವು. ಆದರೆ ಶಾಂತ ಒಂದು ಕ್ಷಣ ವಿಚಾರದ ಕಡಿವಾಣ ಎಳೆದು. ಚಂಚಲ ಮನದ ಓಟ ನಿಲ್ಲಿಸಿ. ನಾಳೆ ಮಾಡಬೇಕಾಗಿದ್ದ ಕೆಲಸಗಳೆಲ್ಲವನ್ನು ಮನಸ್ಸಿನಲ್ಲೇ ಪಟ್ಟಿ ಮಾಡಲಾರಂಭಿಸಿದಳು.... ಬಟ್ಟೆ ಒಗೆಯುವುದು. ಕ್ಲಾಡಿಯಸ್ ಪಾತ್ರದ ಟಿಪ್ಪಣಿ ಬರೆಯುವುದು. ಸೋಷಿಯಾಲಜಿ ನೋಟ್ಸ್ ಬರೆಯುವುದು. ಕಲಾಯಿ ಮಾಡಿಸಿ ಸಗಣಿಯ ನೀರು ತುಂಬಿಟ್ಟಿದ್ದ ಪಾತ್ರೆಗಳೆಲ್ಲವನ್ನೂ ಬೆಳಗಿಡುವುದು. ಮನೆಯೆಲ್ಲವನ್ನೂ ಒಮ್ಮೆ ತೊಳೆಯುವುದು. ಬಟ್ಟೆಗಳನ್ನೆಲ್ಲಾ ಇಸ್ತ್ರಿ ಮಾಡುವುದು-ಆಮೇಲೆ....

ಏನೂ ಇಲ್ಲ... ಪಟ್ಟಿ ಮುಗಿಯಿತು.... ಅದೇಕೋ ಆ ವಿಚಾರಗಳಲ್ಲಿ ಮನ ದೀರ್ಘಕಾಲ ನಿಲ್ಲಲೊಲ್ಲದು! ತಲೆಯ ಕೆಳಗೆ ಕೈ ಕಟ್ಟಿ ಒಂದೆರಡು ನಿಮಿಷ ಕಿಟಕಿಯ ಹೊರಗೆ ಕಾಣುವ ಸುಂದರ ಪ್ರಕೃತಿಯನ್ನೇ ನೋಡಿದಳು....

'ಈಗ ಆ ಯುವಕ ನನ್ನನ್ನು ಕುರಿತು ಯೋಚಿಸುತ್ತಿರುವನೆ?' ಎಂಬ ಆಲೋಚನೆ ಬಂತು.

'ಇಲ್ಲ....ಅವನು ಇನ್ನೊಬ್ಬಳನ್ನು ಕುರಿತು ಯೋಚಿಸುತ್ತಿದಾನೆ ....ಅವನಿಗೊಬ್ಬ ಪತ್ನಿ ಇದ್ದಾಳೆ!'

ಎಂದಿತು ಮನದ ಯಾವುದೋ ಮೂಲೆಯ ವಾಣಿ

ಶಾಂತಳ ಗಂಟಲು ಕಟ್ಟಿಕೊಂಡಿತು. ಎದೆ ದುಃಖದಿಂದ ಒತ್ತಿದಂತಾಯ್ತು. ಉದ್ವೇಗದಿಂದ ಅವಳ ಹೃದಯ ನುಡಿಯಿತು.

'ಇಲ್ಲ, ಸುಳ್ಳು ಅವನಿಗೆ ಮದುವೆಯಾಗಿಲ್ಲ. . ಅವನಿನ್ನೂ ಅವಿವಾಹಿತ....ನಾನದನ್ನು ಅವನ ನೋಟದಿಂದಲೇ ಹೇಳಬಲ್ಲೆ....'

'ಹೇಗೆ ಹೇಳ ಬಲ್ಲೆ ?'

'ಹೇಗೆ ಎಂದರೆ. ಅವನು ಈ ದಿನವೆಲ್ಲಾ ನನ್ನನ್ನು ನೋಡಿದಂತೆ ಇದುವರೆಗೆ ಯಾರೂ ನೋಡಿಲ್ಲ. ನನ್ನನ್ನು ನೋಡುತ್ತಿರುವಾಗಲೇ ಆ ನೀರಿನ ಗುಂಡಿಗೆ ಕಾಲಿರಿಸಿಬಿಟ್ಟ ಪ್ಯಾಂಟೆಲ್ಲ ಒದ್ದೆಯಾದ್ದೂ ಅವನಿಗೆ ತಿಳಿಯಲಿಲ್ಲ... ಅದನ್ನು ನನ್ನ ಸೆರಗಿನಿಂದ ಒರೆಸೋಣವೆನಿಸಿತು. ಹಾಗೆ ಮಾಡಬೇಕೆಂದು ಯಾರನ್ನು ನೋಡಿದಾಗಲೂ ನನಗೆ ಎನಿಸಿರಲಿಲ್ಲ.. '

'ಇಷ್ಟರಿಂದಲೇ ಅವನಿಗೆ ಮದುವೆಯಾಗಿಲ್ಲ ಎಂದು ತಿಳಿಯುವೆಯಾ.. ಹುಚ್ಚಿ !'

'ನಾನು ಹುಚ್ಚಿಯಲ್ಲ .. ನಾನು ಬಗೆದಿರುವುದೇ ಸರಿ.. ಮದುವೆಯಾದವರು ಯಾರೂ... ನನ್ನನ್ನು ನೋಡಿ ಹಾಗೆ ವರ್ತಿಸಿಲ್ಲ... ಅವರೆಲ್ಲ ನನ್ನನ್ನು ನಾಲ್ಕನೇಜಾತಿ ನೋಟದಿಂದಲೇ ನೋಡಿದ್ದಾರೆ. .'

ಎನ್ನುತ್ತಿರುವಾಗಲೇ. ಅವಳಿಗೆ ತಾನೇನು ಮಾಡುತ್ತಿರುವೆನೆಂಬುದು ಅರಿವಾಯಿತು. ಕೂಡಲೇ ನಿರ್ಧರಿ ಮನಸ್ಸಿನಿಂದ,

'ಥೂ !....ಈಗ ನೀನು ನಡಿ... ಸುಮ್ಮನೆ ನನ್ನನ್ನು ಕಾಡಿಸಬೇಡ....ಅವನಿಗೆ ಮದುವೆ ಆಗಿಲ್ಲ ! ... ಅವನನ್ನು ಮದುವೆಯಾಗುವವರೂ ಇಲ್ಲಿ ಯಾರೂ ಇಲ್ಲ....ನಾನು ಮೊದಲು ಗ್ರ್ಯಾಜುಯೇಟ್ ಆಗಬೇಕು.. .ಕೆಲಸಕ್ಕೆ ಸೇರಬೇಕು. ಹು , ಹೋಗು... ಪ್ರೋಕರಿ !'

ಎಂದು ಮದುವೆಯ ಸುದ್ದಿ ಹೊತ್ತು, ಮೂಲೆಯಿಂದೋಡಿ ಬಂದಿದ್ದ ಯೋಚನೆಯನ್ನು ಹೊಡೆದು ದೂರ ಅಟ್ಟಿದಳು.

ರಗ್ಗನ್ನು ಕಿವಿಗಳವರೆಗೂ ಎಳೆದುಕೊಂಡು, ದೇಹದ ಅಂಗಾಂಗಗಳನ್ನೆಲ್ಲಾ ಸಡಿಲಬಿಟ್ಟು ಆಸೆ ತುಂಟತನ ತುಂಬಿದ ಕಣ್ಣುಗಳನ್ನು ಮುಚ್ಚಿ, ನಿದ್ರೆ ಹೋಗಲು ಯತ್ನಿಸಿದಳು.

ಹೆತ್ತು ನಿಮಿಷವಾದರೂ ನಿದ್ದೆ ಬರಲಿಲ್ಲ.. ಹದಿನೈದು ನಿಮಿಷವಾದರೂ ಬರಲಿಲ್ಲ....'ಓ !....ಹೀಗೆ ಕಾಲ ಕಳೆದರೆ ಆಗದು. ಬೇಗ ನಿದ್ದೆ ಮಾಡಬೇಕು'—ಎಂದುಕೊಂಡು, ಮೂರು, ಆರು, ಒಂಬತ್ತು, ಹನ್ನೆರಡು—ಹದಿನೈದು ! ಎಂದು ಮೂರರ ಮೆಟ್ಟಿಲುಗಳನ್ನು ಮನಸ್ಸಿನಲ್ಲೇ ಕಟ್ಟಿಕೊಂಡು ಮೇಲೆ-ಮೇಲೆ ಸಾಗಿದಳು. ಐದು ನಿಮಿಷದ ಆ ವ್ಯಾಯಾಮದಿಂದಲೇ ಅವಳ ದಣಿದ ಮನ ಮತ್ತೂ ದಣಿದು. ನಿದ್ರೆಯು ತುಂಬು ತೋಳುಗಳಿಗೆ ಸೋತು ಉರುಳುತ್ತಿತ್ತು.

ಕೂಡಲೇ ಬಾಗಿಲಿನ ಮೇಲೆ, 'ಧಡಧಡ' ಸದ್ದು, 'ಬಾಗಿಲು.... ಬಾಗಿಲು'—ಎಂಬ ಗಡಸು ಕರೆ. ಶಾಂತ ಜಕ್ಕನೆ ಮೇಲೆದ್ದು, ದೀಪ ಹಾಕಿ, ಮುಂಬಾಗಿಲನ್ನು ತೆರೆದಳು. ಅವಳ ಅಣ್ಣ ಮನೆಯೊಳಗೆ ಬಂದ. ನಿದ್ರೆಯಿಲ್ಲದೆ ಕಣ್ಣುಜ್ಜಿಕೊಳ್ಳುತ್ತಾ ನಿಂತಿದ್ದ ತಂಗಿಯೆಡೆಗೆ ತಿರಸ್ಕಾರ ಮಿಶ್ರಿತ ನೋಟ ಬೀರಿ ಕೈಲಿದ್ದ ದೊಣ್ಣೆಯನ್ನು ಮೂಲೆಗೆಸೆದು, ಬೆಲ್ಟು, ಖಾಕಿಯ ನಿಕ್ಕರ್, ಕರಿಯ ಟೋಪಿಯೊಡನೆಯೇ ಬಚ್ಚಲು ಮನೆಗೆ ನಡೆದ.

ಶಾಂತ ಮುಂಬಾಗಿಲನ್ನು ಮುಚ್ಚಿ, ಚಿಲಕ ಹಾಕಿ, ಅಡಿಗೆ ಮನೆಗೆ ನಡೆದಳು. ಎಲೆಹಾಕಿ, ನೀರು ತುಂಬಿರಿಸಿ, ಅಣ್ಣ ಬರುವುದನ್ನೇ ಕಾಯುತ್ತಾ ನಿಂತಳು. ಅವನು ಹಿಂತಿರುಗಿ ಬಂದು ಕಾಲಿನಲ್ಲಿ ಎಲೆ ಸರಿಪಡಿಸಿ ಕುಳಿತ.

ಶಾಂತ ಅನ್ನ ಬಡಿಸಲು ಬಾಗಿದಳು. ಹಾಕಿದ್ದ ಜಡೆ ಭುಜದ ಮೇಲೆ ಜಾರಿ, ಎಲೆಯ ಮೇಲೆ ನೇತಾಡಿತು ವರದ ಅದನ್ನೇ ಅಸಹನೆಯಿಂದ ನೋಡಿ, ಹಲ್ಲು ಕಡಿದು ಒಮ್ಮೆ ಬಲವಾಗಿ ಅವಳ ಜಡೆ ಹಿಡಿದು ಜಗ್ಗಿದ. ಶಾಂತ ಚಕಿತಳಾಗಿ, ನೋವಿನಿಂದ ನರಳಿ ಸೆಟೆದು ನಿಂತಳು. ಅವಳ ಕಂಬನಿದುಂಬಿದ ನಿದ್ರೆ ಕಣ್ಣುಗಳು ದ್ವೇಷದಿಂದ ಉರಿಯುತ್ತಿದ್ದುವು. ವರದ, ತುಂಬಾ ಸುಖ ಪಟ್ಟವನಂತ ತನ್ನ ಮೀಸೆಯ ಕೆಳಗಿನ ಬಿಳಿಯ ಹಲ್ಲುಗಳನ್ನು ಕಿರಿದು ನಗುತ್ತಾ, ಸೊಂಟದಲ್ಲಿದ್ದ ತನ್ನ ಚಾಕುವನ್ನು ಮುಟ್ಟಿ, "ಇನ್ನೊಂದು ಬಾರಿ ಹಾಗೆ ಜಡೆ ಬೀಳಿಸು . . ಅದನ್ನು ಬುಡಮುಟ್ಟ ಕೊಯ್ದು ಕೈಗೆ

ಕೊಡ್ತೀನೆ....ಆಗ ತುಂಬಾ ಚೆನ್ನಾಗಿರುತ್ತೆ....ಹೇಗಿದ್ರೂ ಈಗಾಗಲೇ ಕಾಲೇಜಿಗೆ ಹೋಗ್ತಿದೀಯೆ .. ಆಗ ಗಂಡಸರಂತೆ, ಕ್ರಾಪೂ ಬಿಟ್ಕೊಂಡು ಹೋಗಬಹುದು .. ....ಹಯ್ಯಾ !....ನಿನ್ನ ಮುಖ !... ಏನು ಹಾಗೆ ನೋಡ್ತೀಯೆ ? . ಅನ್ನ ಹಾಕು !" ಎಂದು ಗರ್ಜಿಸಿದ.

ಶಾಂತ ಅವನನ್ನು ಸುಟ್ಟು ಬಿಡುವವಳಂತೆ ಒಮ್ಮೆ ನೋಡಿ, ಅನ್ನದ ಪಾತ್ರೆ ನೆಲಕ್ಕೆ ಬಡಿದು, ಜಡೆಯನ್ನು ಕೈಯಲ್ಲಿ ಹಿಡಿದು, ತನ್ನ ರೂಮಿನತ್ತ ನಡೆದಳು ... " ಹು—ಹೋಗು—ಹೋಗು !. . ನನಗೇನು ಕೈಗಳಿಲ್ಲವೆ ?—ಸರಿಯಾದವನೊಬ್ಬ ಸಿಗುವವರೆಗೂ ನೀನು ಹಾಗೇ.. .! " ಎಂಬ ಕ್ರೂರವಾಣಿ ಕಿವಿಗೆ ಬೀಳುತ್ತಿತ್ತು. ಶಾಂತ ತನ್ನ ಕೋಣೆಯ ಕದವನ್ನು ದಢಾರನೆ ಬಡಿದು, ಅಗಣಿ ಹಾಕಿದಳು. ಹಾಸಿಗೆಯಲ್ಲಿ ಕುಸಿದು ಉರುಳಿ ಕಗ್ಗತ್ತಲ ಕೋಣೆಯ ಮೇಲ್ಛಾವಣಿಯನ್ನೇ ಅನಾಥಳಂತೆ ದಿಟ್ಟಿಸಿ ನೋಡಿದಳು. ದುಃಖ ಸಂಕಟಗಳಿಂದ ಅವಳ ಎದೆಯೊತ್ತಿ ಬಂದು, ಕಣ್ಣಿನಲ್ಲಿ ಕಂಬನಿ ತುಂಬಿತು.

ತನ್ನ ಅಣ್ಣನ ಆ ಬಗೆಯ ದುರ್ವರ್ತನೆ ಅವಳಿಗೆ ಹೊಸದೇನೂ ಆಗಿರಲಿಲ್ಲ. ಅವಳು ಕಾಲೇಜಿಗೆ ಸೇರಿದಂದಿನಿಂದ ಅವನ ದುಷ್ಟ ವರ್ತನೆಗೆ ಬಲಿಯಾಗಿದ್ದಳು. ಅವಳ ಪುಸ್ತಕಗಳನ್ನು ಕದ್ದು ಮಾರಿ, ಅವಳ ಬಸ್ ಪಾಸ್ ಬಚ್ಚಿಟ್ಟು, ಅವಳ ಮೇಲೆ ಇಲ್ಲದ ಸಲ್ಲದ ದೂರು ಅಪವಾದಗಳನ್ನು ತಂದೆತಾಯಿಗಳ ಮುಂದೆ ಹೇಳಿ, ಅವಳ ವಿದ್ಯಾರ್ಜನೆಗೆ ಅವನೊಬ್ಬ ಹುಟ್ಟು ಶತ್ರುವಿನಂತೆ ಅಡ್ಡನಿಂತಿದ್ದ. ಶಾಂತ ಅದೆಲ್ಲವನ್ನೂ ಸಹಿಸಿದ್ದಳು. ದಕ್ಕಿಸಿಕೊಂಡಿದ್ದಳು. ಅವನ ಯಾವ ಕ್ರೌರ್ಯವೂ ಅವಳ ಮನಸ್ಸನ್ನು ಅಷ್ಟಾಗಿ ವೇದನೆಗೊಳಿಸುತ್ತಿರಲಿಲ್ಲ.

ಆದರೆ ಇಂದೇಕೋ ಅವಳ ಮನದ ಮಾಯ್ದ ಗಾಯ, ಮತ್ತೊಮ್ಮೆ ಕೆರಳಿ ರಕ್ತ ಕಾರತೊಡಗಿತು. ' ನನಗೇಕೆ ಇಂಥ ಅಣ್ಣ ದೊರೆತ ? ಚಂದ್ರಪ್ಪ - ಅಥವ ಆ ನವಯುವಕನಂಥ ಅಣ್ಣನೊಬ್ಬ ನನಗಿರಬಾರದಾಗಿತ್ತೇ — ಅಯ್ಯೋ ! ' ಎಂದು ಚೀರಿತು ಅವಳ ಹೃದಯ.

ಬುದ್ಧಿ ಕಂಡ ದೀರ್ಘ ಬಾಳ್ವೆಯಲ್ಲಿ, ತಾನು ಕಂಡ ಕಷ್ಟ, ಉಂಡ

ಅಪಮಾನ, ಅನುಭವಿಸಿದ ನೋವು ಸಂಕಟಗಳ ಪ್ರೇತಗಣ ಅವಳ ಮನೋಮಂದಿರಕ್ಕೆ ನುಗ್ಗಿದವು. ಆ ದಿನವೆಲ್ಲಾ ಬೆಳೆದು, ಅರಳಿದ್ದ ಆಸೆಯ ಸ್ವಪ್ನಮಂದಿರ ಅವುಗಳ ಧಾಳಿಯಿಂದ ಚೂರುಚೂರಾಗಿ ಉರುಳಿಹೋಯಿತು. ಉಕ್ಕಿ ಬರುವ ಕಂಬನಿಯ ಸುಡುಧಾರೆ ಕಪೋಲಗಳ ಮೇಲೆ ಹರಿದು ಹರಿದು ಬತ್ತುವ ಮುನ್ನವೇ, ನಿದ್ರೆ ಕರುಣೆ ತೋರಿ ಅವಳ ಮನದ ಮೇಲೆ ಮರೆವಿನ ಮುಸುಕನ್ನೆಳೆದುಹೋಯಿತು

೪

ಬೆಳಕು ಹರಿಯಿತು. ರಾಜಣ್ಣ ಹಾಸಿಗೆಯಲ್ಲಿ ಬಲಮಗ್ಗುಲಿಗೆ ಹೊರಳಿದ. ಅವನಿಗೆ ಮಸಕು ಮಸಕಾಗಿ ಎಚ್ಚರಿಕೆಯಾಯಿತು. ಅವನ ಕಣ್ಣುಗಳು ಭದ್ರವಾಗಿ ಮುಚ್ಚಿಕೊಂಡೇ ಇದ್ದುವು ಬೆಳಗಿನ ಛಳಿಯಲ್ಲಿ ಹೊದಿಕೆಯನ್ನು ಕಿವಿಗಳವರೆಗೂ ಅವನು ಎಳೆದುಕೊಂಡ ಆದರೆ ಹೊರಗಿನ ಎಚ್ಚೆತ್ತ ಜಗದ ನಾದಗಳು ಅವನ ಕಿವಿಗೆ ತಾಕಲು ಪ್ರಾರಂಭಿಸಿದ್ದುವು. ಆಗವನಿಗೆ ಇಷ್ಟುದಿನವೂ ಚಿರಪರಿಚಿತವಾಗಿದ್ದ ಕಾಡುನವಿಲುಗಳ 'ಮೀ ಯಾವ್! ಮೀ ಯಾವ್!' ಕೂಗು ಆಗಲಿ, ದನಕರುಗಳ 'ಅಂಬಾ!' ಎನ್ನುವ ಅರಚುವಿಕೆಯಾಗಲೀ ಕೊಟ್ಟಿಗೆ ಗುಡಿಸುವ ಒರಟು ಪೊರಕೆಗಳ ಕರಕ, ರಾಗಿಕಲ್ಲುಗಳ ಮೊರೆತವಾಗಲೀ, ರೈತರ ಗಡಸು ಧ್ವನಿಗಳಾಗಲೀ ಕೇಳಿಬರಲಿಲ್ಲ ಅದಕ್ಕೆ ಬದಲು ಕಿಟಕಿಯ ಬಳಿ ಕೆಲವು ಗುಬ್ಬಚ್ಚಿಗಳ ಚಿಲಿಪಿಲಿ ನಾದ, ಎಳೆಯ ಬಾಲಕರ ವಿವಿಧ ಭಾಷೆಯ ಚೀರಾಟ. ರಸ್ತೆಯಲ್ಲಿ ಸಾಗುವ ಬೈಸಿಕಲ್‌ಗಳ ಟ್ರಿಣ್-ಟ್ರಿಣ್ ಸದ್ದು. ಸೊಪ್ಪು ಮಾರುವ ಹೆಣ್ಣೊಬ್ಬಳ 'ಅಮ್ಮಾ! ಕೋಸು, ಬಟಾಣಿ, ಬದನೆಕಾಯಿ ..!', ಮನೆಯ ರೇಡಿಯೋವಿನ ಮೆಲುದನಿಯ ರಾಗ, ಮೊದಲಾದ ನವೀನ ಅಪರಿಚಿತ ನಾದಗಳೇ ಒಂದಾದಮೇಲೊಂದು ಕೇಳಿಬರುತ್ತಿದ್ದುವು

ಅವನಿಗೆ ತುಂಬಾ ಗಾಬರಿಯಾಯಿತು. ತಾನಿನ್ನೂ ಹಳ್ಳಿಯ ಷಾರೂನ ಗುಡ್ಡದ ತಪ್ಪಲಿನ ಮನೆಯಲ್ಲಿ ಮಲಗಿರುವೆನೆಂಬ ಭ್ರಾಂತಿಯಲ್ಲೇ ಅವನಿದ್ದ. ಬೆಂಗಳೂರಿಗೆ ಬಂದು, ಮಲ್ಲೇಶ್ವರದ ಕೊನೆಯಲ್ಲಿರುವ ತನ್ನ ಭಾವನ ಮನೆಯ ಮುಂಭಾಗದ ಕೊಠಡಿಯಲ್ಲಿ ತಾನೊಬ್ಬನೇ ಮಲಗಿರುವೆನೆಂಬ ಅರಿವು ಅವನಲ್ಲಿ ಮೆಲ್ಲಮೆಲ್ಲನೆ ಮೂಡತೊಡಗಿತು. ಕೂಡಲೇ ಕೆನ್ನೆಯ ಮೇಲಿಂದ ಹೊದಿಕೆ ಸರಿಸಿ, ಕಣ್ಣು ತೆರೆದು ನೋಡಿದ.

ಹೌದು, ನಿಜವಾಗಿಯೂ ಅವನು ಬೆಂಗಳೂರಿಗೆ ಬಂದಿದ್ದ. ಅದನ್ನು ಸ್ಪಷ್ಟವಾಗಿ ಅರಿತ ಕೂಡಲೇ, ತಾನಿಲ್ಲಿ ಮಾಡಲು ಬಂದಿದ್ದ ನೂರೆಂಟು ಕಾರ್ಯಗಳ ನೆನಪು ಅವನ ಮನಕ್ಕೆ ನುಗ್ಗಿತು.

ಕಾಲೇಜಿಗೆ ಪುನಃ ಸೇರಬೇಕು, ಹಳೆಯ ಗೆಳೆಯರು ಎಲ್ಲೆಲ್ಲಿ ಇರುವರೋ? ಏನೇನು ಮಾಡುತ್ತಿರುವರೋ? - ಅದನ್ನು ಪತ್ತೆ ಹಚ್ಚಬೇಕು. ಬೆಂಗಳೂರಿನ ಅನೇಕ ಜ್ಞಾನ ಕೇಂದ್ರಗಳನ್ನು ಭೇಟಿ ಮಾಡಬೇಕು, ತಾನು ಹಳ್ಳಿಯಲ್ಲಿ ನಡೆಸಲು ಹಾತೊರೆಯುತ್ತಿದ್ದ ಜ್ಞಾನದ ಸಾಧನೆಗೆ ತಕ್ಕ ಏರ್ಪಾಡು ಮಾಡಿಕೊಳ್ಳಬೇಕು. ಒಟ್ಟಿನಲ್ಲಿ ಇಲ್ಲಿರುವ ಒಂದು ವರ್ಷದ ಅವಧಿಯನ್ನು ಸಂಪೂರ್ಣವಾಗಿ ಸದುಪಯೋಗಪಡಿಸಿಕೊಳ್ಳಬೇಕು - ಎಂದು ಯೋಚಿಸಿದ. ಅನಂತರ ಒಂದು ಕ್ಷಣವೂ ತಡಮಾಡದೆ, ಬೆಚ್ಚನೆಯ ಹಾಸಿಗೆಯಿಂದ ಹೊರಕ್ಕೆ ನೆಗೆದು, ಪಂಚೆಯುಟ್ಟು, ಟವಲಿನ ಅಂಚಿನಿಂದ ಕಣ್ಣೊರೆಸಿಕೊಳ್ಳುತ್ತಾ, ಮಹಡಿಯ ಮುಂಭಾಗಕ್ಕೆ ಬಂದ

ಅಲ್ಲೇ ಕೆಲವು ಕಾಲ ನಿಂತು ನೋಡಿದ ರಾಜಣ್ಣನಿಗೆ, ಚಂದ್ರಪ್ಪನ ಮನೆಯಿದ್ದ ಸನ್ನಿವೇಶ ತುಂಬಾ ಒಪ್ಪಿಗೆಯಾಯಿತು... ಎದುರಿಗೆ ಪುಟ್ಟಪುಟ್ಟ ಉದ್ಯಾನಗಳಿದ್ದ ಸಾಲು ಸಾಲು ಮನೆಗಳು; ಅವುಗಳ ಮುಂದೆ ಬಣ್ಣಬಣ್ಣದ ಹೂವಿನ ಗಿಡಗಳು, ತಲೆ ಬಾಚಿಸಿಕೊಂಡು ಶಾಲೆಗೆ ಹೊರಡುತ್ತಿದ್ದ ಚಿಕ್ಕ ಬಾಲಕ ಬಾಲಕಿಯರು; ಅವಸರಅವಸರವಾಗಿ ರಂಗೋಲಿ ಇಡುತ್ತಿದ್ದ ಸುಮಂಗಲಿಯರು; ತಮ್ಮ ಕೈ, ತೋಟಗಳನ್ನು ತಾವೇ ಆಸಕ್ತಿಯಿಂದ ಆರೈಕೆ ಮಾಡುತ್ತಿದ್ದ

ವಿರಾಮವೇತನದ ವೃದ್ಧರು, ಆಗಲೇ ತುಟಿಗೆ ಕೆಂಪು ಬಳಿದು, ಕಥೆ ಪುಸ್ತಕ ಹಿಡಿದು, ಎಳೆಬಿಸಿಲಿಗೆ ಮೈಯೊಡ್ಡಿ ನಿಂತ ಕೆಲವು ಸೋಮಾರಿ ಯುವತಿಯರು. ಮನೆಯ ಎಡಕ್ಕೆ ಸ್ವಲ್ಪದೂರದಲ್ಲೇ ಹಸುರೆಲೆಯ ಸಾಲುಮರಗಳಿದ್ದ, ನೇರವಾದ ಸುಂದರ ರಸ್ತೆ. ಅಲ್ಲಿ ಸತತವಾಗಿ ತಿರುಗುವ ಮನೋಹರ ವಾಹನಗಳು. ದೂರದ ಶ್ರೀಮಂತ ಭವನದ ಪಾಳಿಯವೊಂದರಲ್ಲಿ ಬ್ಯಾಡ್‌ಮಿಂಟನ್ ಆಡುತ್ತಿದ್ದ ಹತ್ತಾರು ಬಣ್ಣ ಬಣ್ಣದ ಯುವಕ-ಯುವತಿಯರು, ತನ್ನ ಚಂಡಿ ಮಗುವಿನ ಸೋಟೆಗೆ ತಿವಿದು ಕೆಲಸಕ್ಕೆ ಧಾವಿಸುವ ಒಬ್ಬ ಮುಸುರೆ ಉಜ್ಜುವ ದುಡಿಮೆಯ ಹೆಣ್ಣು, ರಸ್ತೆಯಲ್ಲೇ ಹೊರಳಾಡಿ ಕರುಳು ಕಿವುಚುವಂತೆ ರೋದಿಸುವ ಆ ಬಡಪಾಯಿ ಹಸುಳೆ. ಇವುಗಳೆಲ್ಲದರ ಮೇಲೂ ಅವನ ನೋಟ ಹಾಯ್ದು ಬಂತು.

ಆಗ ತನ್ನ ಪಕ್ಕದಲ್ಲೇ ಬಂದು ನಿಂತು, ಮಹಡಿಯ ಮುಂಭಾಗ ದಿಂದ ಕೆಳಕ್ಕೆ ಬಾಗಿ, ಕೈಗೆಟುಕುವ ಸಂಪಿಗೆ ಹೂವುಗಳನ್ನು ಕೊಯ್ಯಲು ಯತ್ನಿಸುತ್ತಿದ್ದ ಹನ್ನೆರಡು ವರ್ಷದ ಬಾಲೆಯೊಬ್ಬಳು ಅವನ ಗಮನಕ್ಕೆ ಬಂದಳು. ರಾಜಣ್ಣ ಅವಳನ್ನೇ ಆಸಕ್ತಿಯಿಂದ ನೋಡಿದ. 'ನಿನ್ನೆ ನಾನಿಲ್ಲಿಗೆ ಬಂದಕೂಡಲೇ ಮನೆಗೆ ಓಡಿಬಂದ ಬಾಲೆ ಇವಳೇ ಅಲ್ಲವೆ? ....ಹೌದು....' ಎಂದು ಅವನು ಗುರುತು ಹಚ್ಚಿದ. ಅವಳು ತನ್ನ ಕೈಗೆ ಎಟುಕದ ಹೂವುಗಳ ಮೇಲಿನ ಆಸೆ, ಅದನ್ನು ತಾನೇ ಕೀಳಲಾಗದ ಅಸಹಾಯಕತೆ ಇವುಗಳನ್ನು ಸೂಸುವ ಒಂದೆರಡು ನೋಟಗಳನ್ನು ಅವನೆಡೆಗೆ ಬೀರಿ. ತನ್ನ ಅಪಾಯಕರ ಯತ್ನದಲ್ಲೇ ಮುಂದುವರೆಯು ತ್ತಿದ್ದಳು.

ರಾಜಣ್ಣ ಅವಳ ಬಳಿಗೆ ಸರಿದ. ಅದನ್ನು ಕಂಡು, ಅವಳು ತನ್ನ ಪ್ರಯತ್ನ ನಿಲ್ಲಿಸಿ, ಸಂಕೋಚದಿಂದ ತಲೆಬಾಗಿಸಿದಳು. ರಾಜಣ್ಣ ಅವಳ ಕೈಯಲ್ಲಿದ್ದ ಪುಟ್ಟ ಕೊಕ್ಕೆಗೆ ಕೈ ಹಾಕಿದ. ಅವಳು ಪ್ರತಿ ಭಟಿಸಲಿಲ್ಲ. ಅದಕ್ಕೆ ಬದಲು ನಗೆಗಣ್ಣುಗಳನ್ನೆತ್ತಿ ಅವನನ್ನೊಮ್ಮೆ ನೋಡಿದಳು.

ಅವನು ಮಹಡಿಯ ಮುಂದೆ ಬಾಗಿ, ಹತ್ತಿಪ್ಪತ್ತು ಹೂವು

ಗಳನ್ನು ಕೊಯ್ದು, ನಂತರ ಅವುಗಳನ್ನು ಒಂದೊಂದಾಗಿ ಅವಳೆಡೆಗೆ ಎಸೆಯುತ್ತಾ,

"ಯಾರು ತಾವು....?"

ಎಂದು ಕೇಳಿದ. ಅವಳು ಹಿಂದೆ ಮುಂದೆ ನೋಡಿ ನಗುತ್ತಾ ಮೆಲುದನಿಯಲ್ಲಿ ಉಸುರಿದಳು:

"ಪಕ್ಕದ ಮಹಡಿಯವರು...."

"ಏನು !....ಕೇಶವಯ್ಯಂಗಾರರ ಮಕ್ಕಳೇ ?"

"ಹು...."

"ತಮ್ಮ ಹೆಸರೇನು ?"

"ಶ್ಯಾಮ....ಶ್ಯಾಮಲಾ...."

"ತಾವು ಓದುತ್ತಿರುವಿರೇನೋ . "

"ಹು—"

"ಯಾವ ಕ್ಲಾಸಿನಲ್ಲಿ—"

"ಜೂನಿಯರ್ ಇಂಟರ್...."

"ಜೂನಿಯರ್ ಇಂಟರ್ !"

"ಹು..."

—ರಾಜಣ್ಣ ಆ ಬಾಲೆಯನ್ನೇ ಆಶ್ಚರ್ಯ ಚಕಿತನಾಗಿ ನೋಡಿದ. ಏಕೆಂದರೆ ಅವನು ಅವಳಷ್ಟು ವಯಸ್ಸಿನವನಾಗಿರುವಾಗ ಆಗತಾನೆ ಹೈಸ್ಕೂಲಿಗೆ ಸೇರಿದ್ದ. ಈಗ ಅವಳು ಹೇಳಿದುದನ್ನು ನಂಬಲಾಗಲಿಲ್ಲ. ಅದಕ್ಕೆ ವಿಸ್ಮಯದಿಂದ ಕೇಳಿದ,

"ನಿಜವಾಗಿಯೂ—"

"ಹೌದ್ರೀ, ಸತ್ಯವಾಗಿಯೂ...."

"ಹಾಗಾದರೆ; ನಾನು ಹೀಗೆ ಕೇಳಿದೆನೆಂದು ಕೋಪಿಸಿ ಕೊಳ್ಳದೆ ಹೇಳಿ ನೋಡೋಣ... 'ಹೆಚ್—ಟು–ಓ' ಎಂದರೆ ಏನು?"

"ನೀರು !....ವಾಟರ್ !"

"ಎನ್-ಎ-ಹೆಚ್, ಸಿ-ಓ-ತ್ರೀ—ಎಂದರೆ?"

"ಸೋಡಿಯಂ-ಬೈ-ಕಾರ್ಬೋನೇಟ್!"

"ಸರಿ, ಹಾಗಾದರೆ ನೀವು ತುಂಬಾ ಜಾಣೆ! ... ಇಷ್ಟು ಬೇಗ ಹೇಗೆ ಕಾಲೇಜಿಗೆ ಹೋದಿರಿ. ?"

"ನಾನು ಎಸ್ಸೆಸ್ಸೆಲ್ಸೀ ಎಲ್ ಎಸ್ ಪರೀಕ್ಷೆಗೆ ಕುಳಿತು ಫಸ್ಟ್ ಕ್ಲಾಸಿನಲ್ಲಿ ಪಾಸ್ ಮಾಡಬಿಟ್ಟೆ. . . ಅಲ್ಲಿಯವರೆಗೂ ನಮ್ಮ ತಂದೆ, ಅಕ್ಕ ಇವರೇ ಪಾಠ ಹೇಳಿಕೊಟ್ರು."

"ನಿಮ್ಮ ಅಕ್ಕ!.... ಅವರೇನು ಓದಿದಾರೆ?"

"ಅವರಿನ್ನೂ ಓದ್ತಿದಾರೆ.... ಈ ಸಲ ಸೀನಿಯರ್ ಬಿ.ಎ."

"ಓ - ಹಾಗೋ ... ಅವರು ತುಂಬಾ ಚೆನ್ನಾಗಿ ಪಾಠ ಹೇಳಿ ಕೊಡಬಹುದು.... ಅಲ್ವೆ?"

ಎಂದು ಕೇಳಿದ ನಗೆಗಣ್ಣುಗಳನ್ನರಳಿಸುತ್ತಾ. ಅದಕ್ಕವಳು, ಉತ್ತರ ಕೊಡದೆ, ನಸುನಗುತ್ತಾ ತಲೆ ಬಾಗಿಸಿದಳು. ರಾಜಣ್ಣ ಅವಳನ್ನೇ ಕುತೂಹಲ, ಸ್ನೇಹಪರತೆಯಿಂದ ನೋಡಿ ನಗುಬೀರು ತ್ತಿದ್ದ.

ಒಂದು ನಿಮಿಷದ ನಂತರ ಅವಳು ತಲೆಯೆತ್ತಿ ನೋಡಿದಳು. ಅವಳ-ರಾಜಣ್ಣನ ನೋಟ ಬೆರೆತುವು. ತನ್ನ ಕೈತುಂಬ ಉಳಿದಿದ್ದ ಹೂವುಗಳನ್ನು ಅವಳಡೆಗೆ ನೀಡಿದ. ಅವಳು ತನ್ನ ತುಂಬಿದ ಕೈಬುಟ್ಟಿ ಯೊಡ್ಡಿ . "ಸಾಕು. ಬುಟ್ಟಿ ತುಂಬಿಹೋಯ್ತು.. . ." ಎಂದಳು. ಅವನು ಕಟಕಟೆಗೆ ಬೆನ್ನುಮಾಡಿ ನಿಂತು, ಅವಳ ಕೊಕ್ಕೆಯನ್ನು ಹಿಂತಿರುಗಿಸಿಕೊಟ್ಟು, ಕೈಯೊರೆಸಿಕೊಳ್ಳುತ್ತಾ

"ಈ ಹೂವುಗಳೇಕೆ ?"

ಎಂದು ಕೇಳಿದ. ಅವಳು ಮತ್ತೆ ತಲೆಬಾಗಿಸಿ ನಕ್ಕಳು. ಅವಳ ಮುಖ ಕೆಂಪೇರಿತು. ಇನ್ನೊಂದು ಕ್ಷಣವೂ ಅಲ್ಲಿ ನಿಲ್ಲದೆ,

"ನಾನು.. .ಹೋಗ್ತೇನೆ.. "

ಎಂದುಸುರಿ, ಮೆಟ್ಟಲಿಳಿದು ಕೆಳಗೆ ಓಡಿದಳು.

"ಒಳ್ಳೇ ಹುಡುಗಿಯಪ್ಪಾ... !"—ಎಂದು ರಾಜಣ್ಣ ಅವಳನ್ನೇ ಬೆರಗಿನಿಂದ ನೋಡಿದ. ಅವಳ ಮನೆಯ ಬಾಗಿಲಿನವರೆಗೂ ಅವನ ದೃಷ್ಟಿ ಹರಿಯಿತು. ಆಗಲೇ, ಸೆರಗನ್ನು ಸೊಂಟಕ್ಕೆ ಕಟ್ಟಿ, ಹೆಗಲ

ಮೇಲೆ, ಕೈ ಮೇಲೆ, ಒಗೆದ ಬಟ್ಟೆಗಳನ್ನು ಹೊತ್ತು, ಪಕ್ಕದ ಬಚ್ಚಲು ಕೋಣೆಯಿಂದ ಹಾಲಿನ ಬಾಗಿಲ ಕಡೆಗೆ ಹೋಗುತ್ತಿದ್ದ ಶಾಂತ, ರಾಜಣ್ಣನ ಕಣ್ಣಿಗೆ ಕಂಡಳು. ಮೆಟ್ಟಲನ್ನೇರಿ ಬರುತ್ತಿದ್ದ ಶ್ಯಾಮಲ ಳನ್ನು ಕಂಡು ಅವಳು ಬಾಗಿಲ ಬಳಿಯೇ ಒಂದು ಕ್ಷಣ ಏನನ್ನೋ ಕೇಳಿದಳು. ಅದಕ್ಕೆ ಶ್ಯಾಮಲ ಮತ್ತೇನನ್ನೋ ಕಿವಿಯಲ್ಲುಸುರಿದಳು. ಕೂಡಲೇ ಶಾಂತ ಹಿಂತಿರುಗಿ ರಾಜಣ್ಣ ನಿಂತೆಡೆಗೆ ಬೆರಗಿನಿಂದ ನೋಟ ಹೊರಳಿಸಿದಳು. ಅವನು ತನ್ನನ್ನೇ ನೋಡುತ್ತಾ ನಿಂತಿರುವುದನ್ನು ಕಂಡು, ಲಜ್ಜೆಯಿಂದ ತುಟಿ ಕಚ್ಚಿ ನಕ್ಕು, ಬೆದರಿದ ಹರಿಣಿಯಂತೆ ಮನೆಯೊಳಕ್ಕೆ ನೆಗೆದು ಕಣ್ಮರೆಯಾದಳು.

ಅದನ್ನು ಕಂಡು ರಾಜಣ್ಣ ತುಟಿ ಅದುಮಿ ನಕ್ಕ. ನಂತರ ಕೈಬೊಗಸೆಯಲ್ಲುಳಿದಿದ್ದ ಒಂಟಿ ಸಂಪಿಗೆಯ ಸೌರಭವನ್ನು ಆಳವಾಗಿ ಹೀರುತ್ತಾ ಮನೆಯೊಳಕ್ಕೆ ನಡೆದ.

ಮುಖ ತೊಳೆದು, ಕಾಫಿ ಕುಡಿದು, ಕ್ಷೌರ ಮಾಡಿಕೊಳ್ಳು ತ್ತಿರುವಾಗ ಅವನನ್ನು ಮನೆಯ ಅಕ್ಕಪಕ್ಕದವರ ಪರಿಚಯದ ನೆನಪು ಗಳೇ ಮುತ್ತುತ್ತಿದ್ದುವು. ನಿನ್ನೆ ರಾತ್ರಿಯೇ ಅವನಿಗೆ ಕೇಶವಯ್ಯಂಗಾರರ ಮತ್ತು ಕೆಳಗಿರುವ ಮನೆಯ ರಂಗಪ್ಪನವರ ಪರಿಚಯವಾಗಿದ್ದಿತು.

ಬೊಜ್ಜು ಹೊಟ್ಟೆ, ಬೊಕ್ಕತಲೆ ಮತ್ತು ಸದಾ ಮುಗುಳ್ನಗೆಯ ವದನದ ರಂಗಪ್ಪ ಸ್ವಜಾತಿಯವರಾಗಿದ್ದರೂ, ಒಬ್ಬ ದೊಡ್ಡ ಸರ್ಕಾರಿ ಅಧಿಕಾರಿಗಳಾಗಿದ್ದರೂ, ರಾಜಣ್ಣ ಅವರನ್ನು ಮೆಚ್ಚಿರಲಿಲ್ಲ. ಅವನಿ ಗೇಕೋ ಅವರ ಅತಿವಿನಯ, ಮುಗುಳ್ನಗೆ, ಸವಿ ಮಾತುಗಳು ಕಪಟ ವೆಂದು ಕಂಡಿದ್ದುವು. ಆದರೆ, ಕೆಲವುವೇಳೆ ನಿಷ್ಠುರವಾಗಿ ತೋರು ತ್ತಿದ್ದ ಕೇಶವಯ್ಯಂಗಾರರು, ಅಪಾರ ಮಾನವೀಯತೆ, ಶಿಶುಸಹಜ ಪ್ರಾಮಾಣಿಕತೆ, ಗಹನವಾದ ಸಂಸ್ಕೃತಿಯ ವ್ಯಕ್ತಿಯೆಂಬ ಭಾವನೆಯನ್ನು ಅವನೆದೆಯಲ್ಲಿ ಮೂಡಿಸಿದ್ದರು.

ಅವರೊಡನೆ ಮಾತಾಡಿದ ಕೂಡಲೇ, ಅವರ ಸ್ವಭಾವದ ಸ್ಥೂಲ ಪರಿಚಯವಾದ ಕೂಡಲೇ, ಅವನಿಗೆ ತನ್ನ ಹಳ್ಳಿಯ ಹಿರಿ-ಗೆಳೆಯ, ರಾಜಶೇಖರನ ನೆನಪಾಗಿದ್ದಿತು. ಆದರೆ ರಾಜಶೇಖರನ ಒರಟುತನ

ಇವರಲ್ಲಿ ಕಾಣಲಾಗುತ್ತಿರಲಿಲ್ಲ.

ಅವನು ನಾಲ್ಕು ವರ್ಷ ವಿದ್ಯಾರ್ಜನೆ ನಿಲ್ಲಿಸಿದ್ದುದಕ್ಕೆ ರಂಗಪ್ಪ ತುಂಬಾ ವ್ಯಥೆ ಪಟ್ಟಿದ್ದರೇ ಹೊರತು, ಅವರಿಗೆ ಅವನ ಆ ಅವಧಿಯ ಕಾರ್ಯ ಕಲಾಪಗಳನ್ನರಿಯುವ ಆಸಕ್ತಿ ಹುಟ್ಟಿರಲಿಲ್ಲ. ಆದರೆ ಕೇಶವಯ್ಯಂಗಾರರು, ಎಲ್ಲರೊಡನೆ ಸ್ನಾತ ಮುಗಿಸಿದ ನಂತರ ಅವ ನೊಬ್ಬನನ್ನೇ ಸಂಧಿಸಿ, ಅವನ ವಿಚಾರಗಳೆಲ್ಲವನ್ನೂ ಅಪಾರ ಆಸಕ್ತಿ, ಅತ್ಯಂತ ಕುತೂಹಲಗಳಿಂದ ಕೇಳಿದ್ದರು. ಅದನ್ನೆಲ್ಲಾ ಸಹಾನು ಭೂತಿಯಿಂದ ಆಲಿಸಿ, ಅರ್ಥ ಮಾಡಿಕೊಳ್ಳುವವರೊಬ್ಬರಿಗೆ ತಿಳಿಸಲು ಅವನೂ ತುಂಬ ಉತ್ಸಾಹಿಯಾಗಿದ್ದ

ಏಕೆಂದರೆ, ಹಳ್ಳಿಯಲ್ಲಿ ಚರಂಡಿ ತೋಡಿ, ರಸ್ತೆ ಮಾಡುವುದಕ್ಕೆ ಮಾತ್ರ ತನ್ನ ವಿದ್ಯಾರ್ಜನೆಯನ್ನು ರಾಜಣ್ಣ ನಿಲ್ಲಿಸಿರಲಿಲ್ಲ. ವಿದ್ಯಾರ್ಥಿ ಗಳ ಆ ಕಾರ್ಯಕ್ರಮ, ಅವರು ಕಾಲೇಜಿನಲ್ಲಿ ಕಲಿಯುವ ಅಪ್ರಾಯೋಗಿಕ-ಬರಡು ಓದಿಗಿಂತಲೂ ಹೆಚ್ಚಿನ ಒಳಿತನ್ನು ನಾಡಿನ ರೈತಕೋಟಿಗೆ ಸಾಧಿಸಿಕೊಡಬಲ್ಲುದಾಗಿದ್ದರೂ ಅವನು ಅಷ್ಟು ಸುದೀರ್ಘ ಕಾಲ ಕಾಲೇಜು ಪಾಠಗಳಿಗೆ ವಿದಾಯ ಹೇಳಿದ್ದುದಕ್ಕೆ ಮತ್ತೊಂದು ಪ್ರಮುಖ ಕಾರಣವಿತ್ತು.

ತನ್ನ ಆದರ್ಶ ಸಂಗಾತಿ ರಾಜಶೇಖರನೊಡನೆ ಗ್ರಾಮ ಶುಚೀ ಕರಣ, ವಯಸ್ಕರ ಶಿಕ್ಷಣದ ಕಾರ್ಯಕ್ರಮವನ್ನು ಕೈಗೊಂಡು ಮುಗಿ ಸುವ ವೇಳೆಗೆ, ಅವನ ಮನೋರಾಜ್ಯದಲ್ಲಿ ಮಹತ್ತರ ಪರಿವರ್ತನೆ ಯೊಂದು ಸಂಭವಿಸಿದ್ದಿತು. ಹಳ್ಳಿಗರ ಆ ನಿಕಟ ಸಂಪರ್ಕಾವಧಿಯಲ್ಲಿ ಅವನಿಗೆ ಅವರ ದಾರಿದ್ರ್ಯ, ಅಸಹಾಯಕತೆ, ರೋಗ-ರುಜಿನಗಳ ಪರಿಚಯ ಸಂಪೂರ್ಣವಾಗಿ ಉಂಟಾಗಿದ್ದಿತು. ಇವೆಲ್ಲವೂ ನಾವೀನ್ಯ ವೆಂದು ತೋರದಿದ್ದರೂ, ಸ್ವಲ್ಪ ಉಚ್ಚ ಶಿಕ್ಷಣ ಪಡೆದು ಹಿಂದಿರುಗಿದ್ದ ಅವನಿಗೆ ಆ ಪಿಡುಗುಗಳ ಸಾಮಾಜಿಕ-ಆರ್ಥಿಕ ಕಾರಣಗಳು ಆಗ ಬಹು ಸ್ಪಷ್ಟವಾಗಿ ಕಾಣಿಸಿದ್ದುವು. ಆ ಮೂಲಭೂತ ಪಿಡುಗಿನ ಸಂಹಾರ ಮಾಡದೆ, ಇಂಥ ಮುಖ ಒರೆಸುವ ಸಮಾನ ಕಾರ್ಯಕ್ರಮಗಳಿಂದಲೂ ಶೋಷಿತವರ್ಗದ ಶಾಶ್ವತ ಅಭಿವೃದ್ಧಿ ಆಗದೆಂಬ ಅಂಶ ಬಹು ಶೀಘ್ರವಾಗಿ

ಮನದಟ್ಟಾಗಿದ್ದಿತು.

ಅವನ ಹಳ್ಳಿಯಲ್ಲಿ ಅನೇಕರಿಗೆ ಜಮೀನುಗಳಿರಲಿಲ್ಲ. ಅವರೆಲ್ಲ ಹೊಲದೊಡೆಯರ ಆಳುಗಳಾಗಿದ್ದರು ಅವನ ತಂದೆಯ ಆಸ್ತಿಯ ಮೇಲೂ ಅಂಥ ನಾಲ್ಕಾರು ಭೂಮಿಹೀನ ಕೃಷಿ ಕುಟುಂಬಗಳು ಜೀವನ ಸಾಗಿಸುತ್ತಿದ್ದವು ಅವರಂತೆಯೇ ಹಳ್ಳಿಯ ನೇಯ್ಗೆಯವರು, ಹಗ್ಗ ಮಾಡುವವರು. ಮೇದರು. ಪಾತ್ರೆಗಾರರು. ಇವರೆಲ್ಲ ತಮ್ಮ ಕುಂಠಿತ ವೃತ್ತಿಗಳಲ್ಲಿ ಹೊಟ್ಟೆ ಹೊರೆಯಲಾರದೆ, ದಾರಿದ್ರ್ಯದ ದವಡೆಯಲ್ಲಿ ದಿನ ದಿನವೂ ಆಳವಾಗಿ ಇಳಿಯುತ್ತಿದ್ದರು.

ಅವರೆಲ್ಲರಿಗೂ ಬಹಿರಂಗ ಶುಚಿತ್ವ – ಅಂತರಂಗ ಶುಚಿತ್ವದ ವಿಚಾರಗಳನ್ನು ಬೋಧಿಸುವ ಅವಶ್ಯಕತೆಗಿಂತಲೂ ಅವರ ಹೊಟ್ಟೆಗೆ ಅನ್ನ, ಮೈಗೆ ಬಟ್ಟೆ, ಜೋಪಡಿಗೆ ಹೆಂಚು, ಮಕ್ಕಳಿಗೆ ಹಾಲು, ಪ್ರಾಯೋಗಿಕ–ಔದ್ಯೋಗಿಕ ಶಿಕ್ಷಣ, ಉದ್ಯೋಗ ಮತ್ತು ವೈದ್ಯಕೀಯ ಅನುಕೂಲತೆಗಳನ್ನೊದಗಿಸುವ ಅಗತ್ಯವೇ ಅಧಿಕವಾಗಿತ್ತು.

ಈ ವಿಚಾರಗಳಲ್ಲಿ ಆ ದೀನರ ಮೌನ ಹಂಬಲ ತೀವ್ರ ಅಗತ್ಯ. ಅವನಿಗೂ, ರಾಜಶೇಖರನಿಗೂ ಚೆನ್ನಾಗಿ ಮನದಟ್ಟಾಗಿದ್ದಿತು........ ರಾಷ್ಟ್ರದ ಪರಕೀಯ ಶೋಷಣೆ ನಿಂತಿದ್ದರೂ, ಅವರೆಲ್ಲರ ಸ್ವಕೀಯ ಶೋಷಣೆ ನಿಂತಿಲ್ಲ. ಅವರ ಬಾಗಿದ ಬಡ–ಬೆನ್ನೆಲುಬು ನೆಟ್ಟಗಾಗಿಲ್ಲ. ಜೀವನ ಸಂಗ್ರಾಮದ ಉಗ್ರತೆಯಿಂದ, ಇಳಿಯದ ಹೊರೆಯ ಭಾರದಿಂದ ಮತ್ತೂ ಬಾಗಿ ಬಾಗಿ ಮಣ್ಣಿನೆಡೆಗೆ ಸಾಗುತ್ತಿದೆ ಎಂದು ಅವನಿಗೆ ತೋರಿದ್ದಿತು.

ಅವರ ಆ ಕ್ರೂರ ಯಾತನಾಮಯ ಯಾತ್ರೆಯನ್ನು ನೋಡುತ್ತಾ ಕೈಕಟ್ಟಿ ನಿಲ್ಲುವುದು ಅವನಿಗೆ ಸಹನೆಯಾಗಿರಲಿಲ್ಲ. ದೇಶಮಾತೆಯನ್ನು ತಮ್ಮ ಬಾಹುಗಳಿಂದಪ್ಪಿ ಬದುಕಲು ಒರುತ್ತಿದ್ದ ಭಾರತೀಯರನ್ನು, ಪರಕೀಯ ಬಯೋನೆಟ್‌ಗಳು ಇಷ್ಟುದಿನವೂ ಹಿಂದೆ ತಳ್ಳುತ್ತಿದ್ದಂತೆಯೇ . ..'ಈ ಭೂಮಿ ನಮ್ಮದೇ !.. ....ಅವಳನ್ನಪ್ಪಿ ಬದುಕಲು ಬಿಡಿ' – ಎನ್ನುವ ಈ ನೆಲದ ಮಕ್ಕಳನ್ನೂ ಸ್ವಕೀಯ ಶಾಸನದ ಕ್ರೂರ ಸಸೀನು ಗಳು ಹಿಮ್ಮೆಟ್ಟಿಸುತ್ತಿದ್ದುವು. ಸ್ವಾತಂತ್ರ್ಯ ಸಾಧಿಸಿದಂತೆಯೇ ನಾಡಿನ

ಒಳಿತನ್ನೂ ಸಾಧಿಸಬೇಕಾಗಿದ್ದರೆ, ಪರಕೀಯರ ಆ ಬಯೋನೆಟ್ ಗಳನ್ನು ಭೀಮಬಲದ ರಕ್ತಸಿಕ್ತ ಹಸ್ತಗಳಿಂದ ಕಿತ್ತೆಸೆದಂತೆಯೇ ಈ ಸ್ವಾರ್ಥ ಶಾಸನದ ಸೀಜ ಸಸೀನುಗಳನ್ನೂ ಹಿಂದೆ ಮುಂದೆ ನೋಡದೆ ಕಿತ್ತೆಸೆಯಬೇಕು, ಎಂದು ಅವನಿಗೆ ತೋರಿದ್ದಿತು.

ಏಕೆಂದರೆ, ಅವನಿಗೆ ರೈತ-ಭೂಮಿ, ಇವರಿಬ್ಬರೂ ಪ್ರತ್ಯೇಕ ವ್ಯಕ್ತಿ-ವಸ್ತುಗಳೆಂದು ತೋರಿರಲಿಲ್ಲ. ಒಟ್ಟಿಗೇ ಧೂಳಿನಲ್ಲಿ ಮುಚ್ಚಿ, ಬಿಸಿಲಿನಲ್ಲಿ ಬೆಂದು, ಮಳೆಯಲ್ಲಿ ನೆನೆದು, ಚಳಿಯಲ್ಲಿ ನಡುಗಿ, ಸುಗ್ಗಿಯಲ್ಲಿ ಹಿಗ್ಗಿ, ಬರದಲ್ಲಿ ಕುಗ್ಗಿ ಕಂಗೆಡುವ ಭೂಮಿಯೂ – ರೈತನೂ ಪರಸ್ಪರ ಪೂರಕವಾದ ಏಕೈಕ ಜೀವಜಂತುವಿನಂತೆ ತೋರಿದ್ದರು.

ತನ್ನ ಪ್ರಾಕೃತಿಕ ಸನ್ನಿವೇಶದಿಂದ ಬುಡಕಿತ್ತ ಜೀವಿ, ಸಹಜವಾಗಿ ಬಡವಾಗುವಂತೆ, ಆ ಭೂಮಿಹೀನ ರೈತರೂ ಶತಮಾನಗಳಿಂದ ಶೋಷಿತರಾಗಿ ಸೊರಗಿದ್ದರು, ಕೊರಗಿ ಕಂಗಾಲಾಗಿದ್ದರು.

ಆ ಕಾರ್ಪಣ್ಯ ಬದುಕಿನಿಂದ ಅವರನ್ನು ವಿಮುಕ್ತಗೊಳಿಸುವ ಹಂಬಲ ರಾಜಣ್ಣನೆದೆಯಲ್ಲಿ ದಿನೇದಿನೇ ಕಾಳ್ಗಿಚ್ಚಿನಂತೆ ಹಬ್ಬಿದ್ದಿತು. ಆ ದಿಕ್ಕಿನಲ್ಲಿ ಕಾರ್ಯಾಚರಣೆಗಿಳಿಯುವುದೇ, ಕಾಲೇಜಿನ ಶುಷ್ಕ ಓದಿಗಿಂತಲೂ ಉತ್ತಮವೆಂದು ತೋರಿದ್ದಿತು.

ಆದರೆ ತನ್ನ ಹಂಬಲವನ್ನು ಸಾಧಿಸುವ ಕಾರ್ಯ ಅಷ್ಟು ಸುಲಭವಾಗಿರಲಿಲ್ಲ. ಮನೆಯವರ ವಿರೋಧ, ಅಸಮಾಧಾನಗಳನ್ನು ಲೆಕ್ಕಿಸದೆ ಕಾಲೇಜಿಗೆ ಶರಣುಹೊಡೆದಿದ್ದ. ಆಗಲೇ ಸಂಗಾತಿ ರಾಜಶೇಖರನೂ ಒಂದು ಯೋಜನೆಯನ್ನು ಸಿದ್ಧಗೊಳಿಸಿದ್ದ.

ಅವರಿಬ್ಬರೂ ಒಂದು ಪ್ರಾತಃಕಾಲ, ರೊಟ್ಟಿ ಬುತ್ತಿಗಳನ್ನು ಕಟ್ಟಿಕೊಂಡು, ನಾಡುಕೋವಿಗಳನ್ನು ಹೆಗಲಿಗೇರಿಸಿ, ಅವರ ಹಳ್ಳಿಗೆ ಉತ್ತರದಲ್ಲಿದ್ದ ಕಾರಳೇಪುರದ ಕಾನನವನ್ನು ಪ್ರವೇಶಿಸಿದ್ದರು. ಆ ಕಾಡಿನಲ್ಲಿ ಹದಿನಾರನೆಯ ಶತಮಾನದ ಒಂದು ಹಾಳೂರು ಇದ್ದಿತು. ಅದನ್ನು ವಿಜಯನಗರದ ಸಾಮ್ರಾಜ್ಯ ಅಳಿದನಂತರ, ದಕ್ಷಿಣದ ಕಡೆಗೆ ಬಂದಿದ್ದ ಒಬ್ಬ ಮುಹಮದೀಯ ದಳಪತಿ 1575 ರಲ್ಲಿ ಸ್ಥಾಪಿಸಿ, ಅದರ ಬಳಿಯೇ ಒಂದು ದೊಡ್ಡಕೆರೆಯನ್ನೂ ಕಟ್ಟಿಸಿದ್ದ. ಒಂದು ಒಂದೂವರೆ

ಶತಮಾನ ಕಾಲ ಆ ಪ್ರದೇಶ ಬೇಸಾಯ ಪಶುಪಾಲನೆಗಳ ನೆರವಿನಿಂದ ಸಂಪದ್ಯುಕ್ತವಾಗಿ ಬಾಳಿದ್ದಿತು. ಈಗ 90 ವರ್ಷಗಳ ಹಿಂದೆ, ಅಲ್ಲಿನ ಅಣೆಕಟ್ಟು ಒಡೆದು, ಸಾಂಕ್ರಾಮಿಕ ರೋಗಗಳು ಹರಡಿ, ಕಳ್ಳಕಾಕರು, ದರೋಡೆಕೋರರು, ಅಂತಃಕಲಹಗಳು ಹೆಚ್ಚಿ, ಆ ಊರು ಸಂಪೂರ್ಣ ವಾಗಿ ಹಾಳಾಗಿದ್ದಿತು.

ಕಳೆದ ತಲೆಮಾರಿನವರಾಗಲೀ, ಇಂದಿನ ತಲೆಮಾರಿನವರಾಗಲೀ ಅಲ್ಲಿ ತಲೆಯಿರಿಸಿರಲಿಲ್ಲ. ಭೂತ-ಪ್ರೇತಗಳ ವಿಪರೀತ ಭಯ, ಪ್ರತೀತಿ ಹರಡಿ, ದನಕಾಯುವ ಹುಡುಗರೂ, ಕಾಡುಕಡಿಯುವ ಕಳ್ಳರೂ, ಕಡೆಗೆ ಅವರನ್ನು ಹಿಡಿಯಲು ನೇಮಕವಾಗಿದ್ದ ಅರಣ್ಯ ಶಾಖೆಯ ಪೇದೆಗಳೂ ಅಲ್ಲಿಗೆ ಕಾಲಿರಿಸುತ್ತಿರಲಿಲ್ಲ.

ಅಂದು ಬೇಸಾಯವಾಗುತ್ತಿದ್ದ ಸುಮಾರು ಸಾವಿರ ಎಕರೆ ಭೂಮಿಯೆಲ್ಲವೂ ಇಂದು ಗಿಡ-ಮರಗಳಿಂದ, ಕಾಡುಪೊದೆಗಳಿಂದ ದಟ್ಟವಾಗಿ ಹಬ್ಬಿದ ಕಾನನವಾಗಿತ್ತು. ಹಾವು, ಹಂದಿ, ಕರಡಿಗಳ ಆವಾಸಸ್ಥಾನವಾಗಿತ್ತು.

ಅದರ ವಿಚಾರವನ್ನು ಹಳ್ಳಿಯ ಕೆಲವು ವೃದ್ಧರಿಂದ ತಿಳಿದಿದ್ದ ರಾಜಶೇಖರ, ಆ ಪ್ರದೇಶವನ್ನು ಪುನಃ ತಮ್ಮ ಹಳ್ಳಿಯ ಭೂಮಿ ಹೀನ ರೈತರಿಗೆ ದೊರಕಿಸಿಕೊಟ್ಟು, ಅಲ್ಲಿ ಜನ-ಜೀವನದ ಮಾದರಿ ಹಳ್ಳಿಯೊಂದನ್ನು ಕಟ್ಟುವ ಹವಣಿಕೆ ರಚಿಸಿ, ಅದನ್ನು ರಾಜಣ್ಣನಿಗೆ ತಿಳಿಸಿದ್ದ.

ರಾಷ್ಟ್ರದ ಯುವಕರ ನಿಸ್ತೇಜ ಮನೋಸ್ಥಿತಿಯ ಆ ಸಂದಿಗ್ಧ ಅವಧಿಯಲ್ಲಿ, ಏಕಾಂಗಿಯಾಗಿ, ಅತೃಪ್ತಬಯಕೆ, ಅಸಹಾಯಕ ತೊಳಲಾಟ, ಸ್ಥಂಬಿತ ಉತ್ಸಾಹದಿಂದ ಸ್ಪಂದಿಸುತ್ತಿದ್ದ ರಾಜಣ್ಣನಿಗೆ ಆ ಯೋಜನೆ ಬಹು ಆಕರ್ಷಕವಾಗಿ, ಅತ್ಯಂತ ಸ್ಫೂರ್ತಿದಾಯಕ ವಾಗಿದ್ದಿತು.

ಅಂದು ಸೂರ್ಯ ನೆತ್ತಿಯ ಮೇಲೆ ಬರುವ ಮುಂಚೆಯೇ, ಅವರಿಬ್ಬರೂ ಬೆದರಿ ಹಾರುವ ಕಾಡುಕೋತಿಗಳ ಗುಂಪಿನ ನಡುವೆ, ಮೆಲ್ಲನೆ ಸರಿದು ದಾರಿ ಬಿಡುವ ಘಟಸರ್ಪಗಳ ಪಟ್ಟೆಗಳನ್ನು ದಾಟಿ,

ಕಾಡುಬೆಕ್ಕುಗಳ ಉಗ್ರನೋಟವನ್ನೆದುರಿಸಿ ಆ ಅರಣ್ಯಗರ್ಭದ ಪಾಳೂರಿನ ಅವಶೇಷದ ಬಳಿಗೆ ಬಂದಿದ್ದರು. ಅಲ್ಲಿದ್ದ ಶಿಲಾಶಾಸನಗಳನ್ನೋದಿ, ಅಲ್ಲಲ್ಲಿ ಸಿಗುವ ಬಾಂದು ಕಲ್ಲುಗಳನ್ನು ಗುರುತಿಸಿ. ಅಣೆಕಟ್ಟಿನ ಬಳಿಯ ಗುಡ್ಡವನ್ನೇರಿ. ತಮ್ಮ ಭವಿಷ್ಯ ಕಾರ್ಯಕ್ಷೇತ್ರದ ಸಿಂಹಾವಲೋಕನ ಮಾಡಿದ್ದರು. ಜೊತೆಗೆ ತಂದಿದ್ದ ಆ ಗ್ರಾಮದ ನಕ್ಷೆಯ ನೆರವಿನಿಂದ ಆಕಾರ ಕಂಡ ಪ್ರತಿ ಸರ್ವೆ ನಂಬರನ್ನೂ ಗುರುತಿಸಿದ್ದರು.

ಅಲ್ಲಿಂದಲೇ ಹಿಂತಿರುಗಿ ನೋಡಿದಾಗ. ವಿಶಾಲವಾಗಿ ಅಗಲಿಸಿದ ಎರಡು ಬೃಹದ್ ತೊಡೆಗಳಂತಿದ್ದ ಹಸುರು ಗುಡ್ಡದ ಸಾಲುಗಳ ನಡುವೆ ಹರಿಯುವ ಪುಟ್ಟ ತೊರೆ, ಅವುಗಳ ಕಿರಿದಾದ ಸಂಗಮ ಸ್ಥಳದಲ್ಲಿ ನಿರ್ಮಿಸಿದ್ದ ಅಣೆಕಟ್ಟಿನ ಭಗ್ನಾವಶೇಷ, ಇಷ್ಟು ಕಂಡಿದ್ದುವು.

ತಮ್ಮ ಕನಸಿನ ಕ್ಷೇತ್ರದ ಜೀವಧಾರೆಯಾಗುವ ಆ ತೊರೆಯನ್ನು ಕಂಡು ಅವರ ಎದೆ ಆನಂದದಿಂದ ಉಬ್ಬಿ. ದೇಹಾದ್ಯಂತ ಉತ್ಸಾಹದ ಹುಚ್ಚು ಹೊಳೆ ಹರಿದಿತ್ತು.

ತಮ್ಮ ಬುತ್ತಿ-ರೊಟ್ಟಿಗಳ ನೆನಪು ಅವರಿಗಾಗಲೇ ಇಲ್ಲ. ಕತ್ತಲಾಗುವವರೆಗೂ, ನಮ್ಮ ಪ್ರದೇಶದ ಚಕ್ಕುಬಂದಿಯೇನು ? ಯಾವ ಭೂಮಿಯನ್ನು ಮೊದಲು ನಾಗಿಗೆ ಸಿದ್ಧಗೊಳಿಸಬೇಕು ? ಎಲ್ಲಿ ಮನೆಗಳನ್ನು ಕಟ್ಟಬೇಕು ? ಶಾಲೆಯನ್ನು ಸ್ಥಾಪಿಸಬೇಕು ? ಪಂಚಾಯಿತಿ ಭವನ ನಿರ್ಮಿಸಬೇಕು? ಬಾವಿ ತೆಗೆಯಬೇಕು ? ಬೀದಿ ಮಾಡಬೇಕು ? ಪಶು ವಠಾರ ಕಟ್ಟಬೇಕು ? ಎಂಬುದನ್ನು ನಿರ್ಧರಿಸಿ, ಪುನಃ ಪರಿಶೀಲಿಸಿ, ತಿದ್ದುಪಡಿಮಾಡಿ. ಒಬ್ಬರಮೇಲೊಬ್ಬರು ರೇಗಿಬಿದ್ದು, ಸೋಲನ್ನೊಪ್ಪಿ, ಒಮ್ಮತದ ಕಡೆಗೆ ಸಾಗಿದ್ದರು.

ಕೊನೆಗೆ ಅದರ ಒಡೆತನದ ಪ್ರಶ್ನೆ ಮೇಲೆದ್ದಿತು. ಆ ಪ್ರದೇಶದ ಪ್ರತಿ ಹತ್ತು ಎಕರೆಯೂ ಒಬ್ಬೊಬ್ಬ ರೈತನಿಗೆ ಸೇರಿರಬೇಕು. ಆದರೆ ಅವರೆಲ್ಲರೂ ಮುಂದೆ ಇಡೀ ಪ್ರದೇಶದ ಹಿತದೃಷ್ಟಿಯಿಂದ ಸಾಮೂಹಿಕ ಸ್ವಾಧೀನವನ್ನೊಪ್ಪಿ. ಅವರೆಲ್ಲರಿಂದ ಕೂಡಿದ ಪಂಚಾಯಿತಿಯೊಂದರ ತೀರ್ಮಾನಗಳಂತೆ ನಡೆದುಕೊಳ್ಳಬೇಕು. ಎಂಬ ನಿಬಂಧನೆಯನ್ನೂ ರಚಿಸಿ. ಕಗ್ಗತ್ತಲು ಕ್ಷಣ-ಕ್ಷಣಕ್ಕೂ ಕವಿಯುತ್ತಿರುವಾಗ ಅಲ್ಲಿಂದ

ಒಲ್ಲದ ಮನಸ್ಸಿನಿಂದ ಕಾಲುಕಿತ್ತಿದ್ದವು.

ಅದಾದ ಒಂದು ವರ್ಷದ ನಂತರ, ಆ ಪ್ರದೇಶದ ನೂರಎಂಭತ್ತು ಎಕರೆಗಳು ಮಾತ್ರ ಅವರ ರೈತರ ಸ್ವಾಧೀನಕ್ಕೆ ಬಂದಿತ್ತು. ಇನ್ನು ನಾಲ್ಕುನೂರು ಎಕರೆಗಳನ್ನು ಸರ್ಕಾರ ಹಿಂದುಳಿದ ವಂಗಡಗಳಿಗೆ ಕೊಟ್ಟಿದ್ದಿತು. ಅದರಿಂದ ರಾಜಣ್ಣ-ರಾಜಶೇಖರರಿಗೆ ಸಂತೋಷವೇ ಆಗಿತ್ತು. ಏಕೆಂದರೆ ಆ ಹಿಂದುಳಿದ ವಂಗಡದವರಿಗೆ ಎಲ್ಲರಿಗಿಂತಲೂ ಭೂಮಿ, ಮನೆ, ಮಠಗಳ ಅಗತ್ಯವಿತ್ತು.. ಆದರೆ, ಅದರ ಜೊತೆಗೇ ಹೆಚ್ಚಾಗಿ ಸರ್ಕಾರ ಅಲ್ಲಿನ ಅಧಿಕಪಾಲು ಭೂಮಿಯೆಲ್ಲವನ್ನೂ ನಾಲ್ಕಾರು ಪ್ರಭಾವಶಾಲಿ ಶ್ರೀಮಂತ ವ್ಯಕ್ತಿಗಳಿಗೆ ವಹಿಸಿಕೊಟ್ಟಿದ್ದಿತು. ಆ ದುರಾಸೆಯ ವ್ಯಕ್ತಿಗಳು ಪ್ರಾಯೋಗಿಕ ಕ್ಷೇತ್ರವನ್ನೂ ಕಬಳಿಸುವ ಸಾಹಸಕ್ಕೆ ಕೈಹಾಕಿದ್ದರು. ಆದರೆ ರಾಜಶೇಖರನ ಸತತ ಶ್ರಮ, ಆಡಳಿತಯಂತ್ರದ ಪರಮ ಪರಿಚಯ, ಬೆಂಬಲಿಗ ರೈತರಿಗೆ ಅವನಲ್ಲಿದ್ದ ಅಚಲ ಶ್ರದ್ಧೆ, ಆ ಪ್ರದೇಶವನ್ನು ಅವರಿಗೇ ಉಳಿಸಿಕೊಟ್ಟಿದ್ದಿತು.

ಅದು ಸ್ವಾಧೀನಕ್ಕೆ ಬಂದ ಎರಡು ವರ್ಷಗಳಲ್ಲೇ ಕಾಡನ್ನು ಕಡಿದು, ನೆಲವನ್ನು ಒಡೆದು, ನೇಗಿಲನ್ನೆಳಿಸಿ, ಆಗಲೇ ಎರಡು ಬೆಳೆಗಳನ್ನು ತೆಗೆದಿದ್ದರು. ಬಾವಿಗಳನ್ನು ತೋಡಿ, ಗುಡಿಸಲುಗಳನ್ನು ಕಟ್ಟಿದ್ದರು. ಹಳ್ಳದ ದಂಡೆಯಲ್ಲೆಲ್ಲಾ ತೋಟಗಳನ್ನು ಬೆಳೆಸುವ ಕಾರ್ಯವೂ ಈಗ ಸಾಗುತ್ತಿತ್ತು. ಹೆಂಚನ್ನು ಹೊದಿಸಿದ ಪಂಚಾಯತಿ ಭವನ, ಶಾಲೆ, ವೈದ್ಯಗೃಹಗಳ ನಿರ್ಮಾಣವೂ ಆಗಿತ್ತು.

ಈ ಉದ್ಯಮಕ್ಕೆ ರಾಜಶೇಖರ ತನ್ನ ಸರ್ವಸ್ವವನ್ನೂ ತ್ಯಾಗ ಮಾಡಿದ್ದ. ರಾಜಣ್ಣ ತನ್ನ ಕೈಮೀರಿದ ಧನಸಹಾಯ, ತನ್ನ ಇಡೀ ದೇಹದ, ಮನಸ್ಸಿನ ಶ್ರಮವೆಲ್ಲವನ್ನೂ ಧಾರೆಯೆರೆದಿದ್ದ.

ಇವರಿಬ್ಬರ ಪೋಷಣೆಯಲ್ಲಿ ಆ ಕೃಷಿಕ್ಷೇತ್ರ ಪ್ರವರ್ಧಮಾನವಾಗಿ, ಅಲ್ಲಿನ ಇಪ್ಪತ್ತು ಸದಸ್ಯ ಕುಟುಂಬಗಳು ಹಿಂದಿಗಿಂತಲೂ ಉತ್ತಮ ಬಾಳ್ವೆ ನಡೆಸಲು ಸಾಧ್ಯವಾಗಿತ್ತು. ಆದರೆ ರಾಜಣ್ಣನ ಮನ ದಿನೇದಿನೇ ಮತ್ತೊಮ್ಮೆ ಅತೃಪ್ತಿಯ ಕಮರಿಗೆ ನಿಧಾನವಾಗಿ ಜಾರಿದ್ದಿತು.

ಏಕೆಂದರೆ ಆ ಕ್ಷೇತ್ರ ಅವನ ಹಳ್ಳಿಯ ಭೂಮಿಹೀನರ, ನಿರ್ಗತಿಕರ ಸಮಸ್ಯೆಯನ್ನು ಸಂಪೂರ್ಣವಾಗಿ ಬಗೆ ಹರಿಸಿರಲಿಲ್ಲ. ಸುತ್ತುಮುತ್ತಲ ಹತ್ತಾರು ಹಳ್ಳಿಗಳ, ಇಡೀ ದೇಶವ ಲಕ್ಷಾಂತರ ಹಳ್ಳಿಗರ ಅಂಥದೇ ದುಸ್ಥಿತಿಯ ಪರಿಹಾರವೆಂದು? ಎಲ್ಲೆಡೆಗಳಲ್ಲೂ ನಮಗೆ ದೊರಕಿದಂಥ ಪಾಳು ಪ್ರದೇಶಗಳೇ ದೊರೆತಾವೆ? ಒಂದು ವೇಳೆ ಹಾಗಿದ್ದರೂ ಅವು ನಿರ್ಗತಿಕರಿಗೆ ದೊರೆತಾವೆ?.... ಇಲ್ಲಿ ನಾವೆಲ್ಲರಿದ್ದೂ, ದುರಾಸೆಯ ಮಾರಿಗಳು ಬಡವರಿಗೆ ಸಲ್ಲುವ ಭೂಮಿ ದೋಚಿದುದನ್ನು ನಿಲ್ಲಿಸಲಾಗ ಲಿಲ್ಲ. ಹೀಗಿರುವಾಗ ಭೂಮಿಹೀನ ರೈತರ ಅಂತಿಮ ಗತಿಯೇನು?... ಅವರೆಂದೆಂದಿಗೂ ದಾರಿದ್ರ್ಯದ – ದಾಸ್ಯದ ಅಗ್ನಿಕುಂಡದಲ್ಲೇ ಬೆಂದು ಬೂದಿಯಾಗಬೇಕೆ? ಎಂಬ ಪ್ರಶ್ನಾಶೂಲಗಳು ಅವನ ಮನವನ್ನು ಇರಿಯಲಾರಂಭಿಸಿದ್ದುವು.

ಆದರೆ ರಾಜಶೇಖರ ಈ ಪ್ರಶ್ನೆಗಳನ್ನು ಅಷ್ಟಾಗಿ ತಲೆಗೆ ಹಚ್ಚಿ ಕೊಂಡಿರಲಿಲ್ಲ. ಅವನಿಗೆ ಆ ಕ್ಷೇತ್ರದ ಅಭಿವೃದ್ಧಿ–ಸ್ವಸಂತೃಪ್ತಿಗಾಗಿ ದುಡಿಯುವುದೇ ಸಾಕು ಸಾಕಾಗಿತ್ತು.

ಹೀಗಿರುವಾಗ ರಾಜಣ್ಣನಿಗೆ ಕೆಲವು ಗ್ರಂಥಗಳು, ಲೇಖನಗಳು ಕೈಗೆ ದೊರೆತಿದ್ದುವು. ಅವುಗಳಲ್ಲಿ ರಷ್ಯಾದ, ಚೀನಾದ, ರೂಸ್‌ವೆಲ್ಟರ ಕಾಲದ ಅಮೆರಿಕದ, ಆಗತಾನೇ ಜನಿಸಿದ್ದ ಇಸ್ರೇಲ್ ದೇಶದ ಕೆಲವು ಆರ್ಥಿಕ, ಸಾಮಾಜಿಕ ಪ್ರಯೋಗಗಳ ವಿಚಾರಗಳಿದ್ದುವು. ಅವುಗಳನ್ನು ಓದಿದಂತೆಲ್ಲಾ ಅವನಿಗೆ ಆ ದಿಕ್ಕಿನಲ್ಲಿ ಇನ್ನೂ ಹೆಚ್ಚಿಗೆ–ಹೆಚ್ಚಿಗೆ ಅರಿಯ ಬೇಕೆಂಬ ಆಸಕ್ತಿ ಹುಟ್ಟಿದ್ದಿತು. ಅವುಗಳ ಅಭ್ಯಾಸದಿಂದ ನಾಡಿನ ಅನೇಕ ಸಮಸ್ಯೆಗಳ ಅಖಂಡ ಪರಿಹಾರಕ್ಕೆ ಸೂಕ್ತ ಮಾರ್ಗ ತೋರು ವುದೆನಿಸಿತ್ತು. ಅಲ್ಲದೆ ರಾಜಣ್ಣ, ರಾಜಶೇಖರ ಇಬ್ಬರ ಇರುವಿಕೆಯೂ ಅಲ್ಲಿ ಅಷ್ಟು ಅಗತ್ಯವಾಗಿರಲಿಲ್ಲ. ಬಳಿಯ ಹಳ್ಳಿಯ ಮಾಧ್ಯಮಿಕ ಶಾಲೆಯ ನಿವೃತ್ತ ಉಪಾಧ್ಯಾಯರೊಬ್ಬರು, ಕೆಲವು ಉತ್ಸಾಹೀ ವಿದ್ಯಾವಂತರು ಅವರ ಕಾರ್ಯದಲ್ಲಿ ನೆರವಾಗಿದ್ದರು.

ಕೆಲವು ದಿನಗಳ ಹಿಂದೆ ಚಂದ್ರಪ್ಪ ಹಳ್ಳಿಗೆ ಬಂದಿದ್ದಾಗ ಆ ಕ್ಷೇತ್ರಕ್ಕೂ ಭೇಟಿಯಿತ್ತು; ಅಲ್ಲಿನ ನವಜೀವನ, ಉತ್ಸಾಹದ

ಕಾರ್ಯಕ್ರಮಗಳನ್ನು ತುಂಬಾ ಮೆಚ್ಚಿದ್ದರು. ಹಾಗೆಯೇ ಆ ಕ್ಷೇತ್ರದ ಅಭಿವೃದ್ಧಿಗಾಗಿ ಕೋಳಿಫಾರಂ, ಡೈರಿಫಾರಂ, ರೇಷ್ಮೆ ಕೈಗಾರಿಕೆ, ಇವುಗಳನ್ನು ಸೇರಿಸುವ ಸಲಹೆ ಮಾಡಿದ್ದರು.

ಆದರೆ ಅವರ ಭೇಟಿಯ ಮುಖ್ಯ ಉದ್ದೇಶ ಅಷ್ಟು ಮಾತ್ರವಾಗಿರಲಿಲ್ಲ. ಅಲ್ಲಿದ್ದ ರಾಜಣ್ಣನನ್ನು ಕಂಡು, ವಿದ್ಯಾಭ್ಯಾಸವನ್ನು ಪೂರ್ಣಗೊಳಿಸುವಂತೆ ಪ್ರಚೋದಿಸಲು ಬಂದಿದ್ದರು. ಅವನ ಸತತ ಅತೃಪ್ತಿ, ವಿಶಾಲ ಆಶೋತ್ತರ, ಹಿರಿಯ ಬಯಕೆಗಳೊಡನೆ ಅವನಂತೆಯೇ ಸಾಗಿ ಕಟ್ಟಕಡೆಗೆ ಅವನಿಗೆ, 'ಇದೊಂದು ಸಣ್ಣ ಕ್ಷೇತ್ರ. ಇದಕ್ಕೂ ಮೀರಿದ ಕಾರ್ಯವೆಸಗಲು ನೀನು ಬೆಳೆಯಬೇಕು. ಅದಕ್ಕೆ ಹೆಚ್ಚಿನ ವಿದ್ಯೆ ತುಂಬಾ ಅಗತ್ಯ' ಎಂದು ಮನದಟ್ಟಾಗುವಂತೆ ಮಾಡಿದ್ದರು.

ವಿರೋಧ ತುಂಬಿದ ಮನೋಸ್ಥಿತಿಯಲ್ಲೇ ಅವನು ಈ ಯೋಚನೆಗೆ ಅರೆ ಸಮ್ಮತಿಯನ್ನಿತ್ತು, ಇಲ್ಲಿನ ವಿದ್ಯಾರ್ಜನೆಗೆ ಮತ್ತೆ ಅಡಿಯಿರಿಸಿದ್ದ.

—ಇದೆಲ್ಲವನ್ನೂ ಅರಿತು ಕೇಶವಯ್ಯಂಗಾರರು ತುಂಬಾ ಸಂತೋಷಪಟ್ಟಿದ್ದರು. ಅವರಿಗೆ ನಾಡಿನ ಪ್ರಚಲಿತ ಸಮಸ್ಯೆಗಳಲ್ಲಿ ಹೆಚ್ಚಿನ ಆಸಕ್ತಿಯಿತ್ತು. ಅವುಗಳ ಪರಿಹಾರದ ಬಗೆಗೆ ಅನೇಕ ವಿಚಾರ ಪ್ರಚೋದಕ ಅಭಿಪ್ರಾಯಗಳಿದ್ದುವು.

ರಾತ್ರಿ ಬಹು ಹೊತ್ತು ಅವರಿಬ್ಬರೂ ಅನೇಕ ವಿಚಾರಗಳನ್ನು ಚರ್ಚಿಸಿದ್ದರು. ನಂತರ ಅವರು, ರಾಜಣ್ಣನಿಗೆ ತಮ್ಮ ಬಳಿ ಇದ್ದ 'ಕೌನ್ಸಿಲ್ ಆಫ್ ಏಷ್ಯನ್ ರಿಸರ್ಚ್' ಸಂಘದ ಕೆಲವು ವರದಿಗಳನ್ನು ಕೊಡುವುದಾಗಿ ತಿಳಿಸಿದ್ದರು.

ಅದೆಲ್ಲವನ್ನೂ ಕಂಡು ರಾಜಣ್ಣ, 'ನಾನು ಬೆಂಗಳೂರಿಗೆ ಮರಳಿ ಬಂದ ತೀರ್ಮಾನ ಒಳ್ಳೆಯದೇ ಆಯಿತು. ಇಲ್ಲಿಗೆ ಬಂದ ಮೊದಲ ದಿನವೇ ಮೇಧಾವಿ ಹಿರಿಯರೊಬ್ಬರ ಸ್ನೇಹ ಲಭಿಸಿತಲ್ಲ' ಎಂದು ಸಂತೋಷಪಟ್ಟಿದ್ದ.

* * *

ಸ್ನಾನ, ತಿಂಡಿಗಳನ್ನು ಮುಗಿಸಿ, ಉಡುಪು ಧರಿಸಿ ನಿಂತ

ರಾಜಣ್ಣನಿಗೆ ಇಂದು ಭಾನುವಾರ ಎಂಬ ನೆನಪಾಯಿತು. ಅವನು ಕಾಲೇಜಿಗೆ ಸೇರಲು ನಾಳೆಯವರೆಗೂ ಕಾಯಬೇಕಾಗಿತ್ತು. ಆ ಅವಧಿಯಲ್ಲಿ ತನ್ನ ಹಳೆಯ ಮಿತ್ರರನ್ನಾದರೂ ಏಕೆ ಭೇಟಿ ಮಾಡಬಾರದು? ಎಂಬ ಯೋಚನೆ ಹೊಳೆಯಿತು.

ಕೂಡಲೇ ಅವನು ಹೊರಗೆ ಹೊರಟ. ಪ್ರಾತಃಕಾಲದಲ್ಲಿ ಎಲ್ಲರೂ ಸಾಮಾನ್ಯವಾಗಿ ತಮ್ಮ ಮನೆ, ರೂಮುಗಳಲ್ಲೇ ಇರುತ್ತಾರೆ, ಎಲ್ಲರೂ ದೊರೆಯಬಹುದು ಎಂಬ ಆಸೆ ಅವನಲ್ಲಿ ಮನೆಮಾಡಿತ್ತು.

ಆದರೆ ಆ ಕಾರ್ಯದಲ್ಲಿ ಉದ್ಯುಕ್ತನಾದ ಒಂದೆರಡು ಗಂಟೆಗಳಲ್ಲೇ ಅವನಿಗೆ ಆ ಪ್ರಯತ್ನದ ನಿರರ್ಥಕತೆ ಎದ್ದು ಕಾಣಿಸಲಾರಂಭಿಸಿತು. ಅವನ ನೆಚ್ಚಿನ ಗೆಳೆಯರೊಬ್ಬರೂ ಅವನಿಗೆ ದೊರೆಯಲಿಲ್ಲ. ಅವರೆಲ್ಲರೂ ಆಗಲೇ ಕಾಲೇಜಿನ ಮಹಾದ್ವಾರದಿಂದ ಹೊರಬಿದ್ದು, ನಾಡಿನ ಮೂಲೆ ಮೂಲೆಗೂ ಚದುರಿ ಹೋಗಿದ್ದರು

ಈ ಅನುಭವದಿಂದ ಅವನಿಗೆ ತನ್ನ ಬಾಳಿನ ಒಂದು ಅಂಗ ಹಠಾತ್ತನೆ ಬರಿದಾದಂತೆ ಕಂಡಿತು. ಈ ಮಹಾನಗರವೆಲ್ಲ ಒಂದು ಅಗಾಧ ಶೂನ್ಯದಂತೆ ತೋರಿತು. ಅವನು, 'ಈ ನೋವು-ನಿರಾಸೆಗಳಿಗೆಲ್ಲಾ ನಾನೇ ಕಾರಣ' ಎಂದು ತನ್ನನ್ನು ತಾನೇ ದೂಷಿಸಿಕೊಂಡ. ಏಕೆಂದರೆ ಅವನು ನಾಲ್ಕು ವರ್ಷ ಹಳ್ಳಿಯಲ್ಲಿದ್ದಷ್ಟು ಕಾಲವೂ ತನ್ನ ಓದುವ ಗೆಳೆಯರೊಡನೆ ಪತ್ರ ಸಂಪರ್ಕವಿಟ್ಟಿರಲಿಲ್ಲ. ಅದಕ್ಕೆ ಕಾರಣ, ಅವನ ಮತ್ತು ಅವನ ಮಿತ್ರರ ಅಭಿರುಚಿಗಳಲ್ಲಿದ್ದ ಅಂತರ. ಆ ಅಂತರ ಸಾಮಾನ್ಯವಾಗಿರಲಿಲ್ಲ. ತುಂಬಾ ಎದ್ದು ಕಾಣುತ್ತಿತ್ತು.

ಒಬ್ಬನಿಗೆ ಸಿನಿಮಾ ನಟನಾಗುವ ಹುಚ್ಚಾದರೆ, ಮತ್ತೊಬ್ಬನಿಗೆ ಮಹಾಸಾಹಿತಿಯಾಗುವ ಹುಚ್ಚು. ಒಬ್ಬನಿಗೆ ರಾಜಕಾರಣಿಯಾಗುವ ಹುಚ್ಚಾದರೆ, ಇನ್ನೊಬ್ಬನಿಗೆ ಫೈಟರ್ ಪೈಲಟ್ ಆಗಿ ಮುಂದೆ ನಮ್ಮ ನಾಡಿನಮೇಲೆ ಆಟಂ ಬಾಂಬ್ ಹಾಕಲು ಬರುವ ಎಲ್ಲ ವಿಮಾನಗಳನ್ನೂ ಅಂತರಿಕ್ಷದಲ್ಲೇ ಸುಟ್ಟು ಭಸ್ಮ ಮಾಡುವ ಹುಚ್ಚು. ಐದನೆ ಯುವನಿಗೆ ಎಲ್ಲ ಸಿನಿಮಾ ನಟಿಯರಿಗೂ ಪ್ರೇಮಪತ್ರ ಬರೆಯುವ ಹುಚ್ಚು; ಆದರೆ ತನಗೆ ಮಾತ್ರ ಹಳ್ಳಿಗಾಡಿನಲ್ಲಿ ನೆಲಸಿ, ಅಲ್ಲಿನ

ಒಣಗಿದ ಬದುಕಿನ ಚಿಗುರುವಿಕೆಗೆ ಜೀವನ ಮುಡುಪಿಡುವ ಹುಚ್ಚು.

ಈ ಸಕಲ ಹುಚ್ಚುಗಳ ಗೆಳೆಯರೂ ಒಟ್ಟಿಗೇ ಕ್ಲಾಸಿನಲ್ಲಿ ಕುಳಿತು ಕಾಫಿ ಕುಡಿದು. ಸಿನಿಮಾಗಳನ್ನು ನೋಡಿ, ಸಂಜೆ ಪಾರ್ಕುಗಳಲ್ಲಿ ಅಡ್ಡಾಡುತ್ತಾ, ವೋರೆಲ್ಲನ ಸೆಂಚುರಿ, ಉಮ್ರಿಗರನ ಸಿಕ್ಸರ್, ರೀಟಾ ಹೇವರ್ತಳ ವಿವಾಹ-ವಿಚ್ಛೇದನ, ಲಾನಾ ಟರ್ನರಳ ನಿತಂಬ, ಗ್ರೆಗರಿ ಪೆಕ್ಕನ ಚುಂಬನ, ಅ.ನ.ಕೃ ಭಾಷಣ, ಫಿಲ್ಮಿಂಡಿಯದ ಪ್ರಶ್ನೋತ್ತರ, ಪರೀಕ್ಷೆಯಲ್ಲಿ ಫೇಲಾದರೆ ಕಾಲೇಜಿಗೆ ಡೈನಾಮೈಟ್ ಹಾಕಿ. ಕಮ್ಯೂನಿಸ್ಟರಾಗುವ ಯೋಜನೆ, ಇವುಗಳನ್ನೆಲ್ಲಾ ಹರಟುತ್ತಿರುವಾಗ ಜೀವನ ಒಂದು ಬಣ್ಣ ಬಣ್ಣದ ಸುಂದರ ಯಾತ್ರೆಯಂತೆ ತೋರಿದ್ದಿತು. ಆದರೆ ಅವರೆಲ್ಲರನ್ನೂ ಈ ಭೂಮಿಯ ಬಾಳಿನ ಭಾರ ತಮ್ಮ-ತಮ್ಮ ಜೀವನದ ಒಂಟಿ ಪಥಕ್ಕೆ ಸೆಳೆದೊಯ್ದಿದ್ದಾಗ ಆ ಬಣ್ಣದ ಬೆಸುಗೆ ಬಹು ಬೇಗನೆ ಕಳಚಿ ಹೋಗಿದ್ದಿತು.

ಕಡೆಗೆ ರಾಜಣ್ಣ ತಮ್ಮೆಲ್ಲರನ್ನೂ ಮಕ್ಕಳಂತೆ ಕಂಡು ಪಾಠ ಹೇಳಿ, ಇಂಟರ್ ಪರೀಕ್ಷೆ ಪಾಸುಮಾಡಲು ನೆರವಾಗಿದ್ದ ವೃದ್ಧ ಉಪಾಧ್ಯಾಯರ ಮನೆಗೆ ಹೋದ ಅಲ್ಲಿ ಅವನಿಗೆ ತನ್ನ ಗೆಳೆಯರ ಪಾಡೆಲ್ಲವೂ ಅರಿವಾಯಿತು.

ಸಿನಿಮಾ ನಟನಾಗುವವನು ಫೈಲ್ ಆಗಿ ಈಗ ಫಿಲ್ಮ್ ರೆಪ್ರಸೆಂಟೇಟಿವ್ ಆಗಿದ್ದ. ಮಹಾಸಾಹಿತಿಯಾಗುವವನು ಎಲ್ಲೋ ಕಣ್ಮರೆಯಾಗಿದ್ದ ರಾಜಕಾರಣಿಯಾಗುವವನು ಈಗೆಲ್ಲೋ ಒಂದೂರಿನಲ್ಲಿ IInd ಗ್ರೇಡ್ ಗುಮಾಸ್ತೆಯಾಗಿದ್ದ. ಪೈಲಟ್ ಆಗಬೇಕೆಂದಿದ್ದವನು ಹೈಸ್ಕೂಲು ಉಪಾಧ್ಯಾಯನಾಗಿದ್ದ. ಸಿನಿಮ ನಟಿಯರ ಪತ್ರ-ಪ್ರಿಯತಮ ಯಾರೋ ಕಾಮಿನಿಯೊಬ್ಬಳ ಬಲೆಗೆ ಸಿಲುಕಿ. ಆತ್ಮಹತ್ಯೆ ಮಾಡಿಕೊಂಡಿದ್ದ.

ಇದೆಲ್ಲವನ್ನೂ ಕೇಳಿ ಮನೆಗೆ ಹಿಂತಿರುಗುತ್ತಿದ್ದ ರಾಜಣ್ಣನ ಮನ ಗಂಭೀರವಾಗಿತ್ತು. ಭಯಭ್ರಾಂತವಾಗಿತ್ತು. ಅವನು ತನಗೆ ತಾನೇ. 'ಬಯಸಿದ ಬದುಕನ್ನು ಸಾಧಿಸಿಕೊಳ್ಳಲು ಭಾವುಕತೆಯ ಕನಸೊಂದೇ ಸಾಲದು. ವಜ್ರಸಂಕಲ್ಪದ ಬೆನ್ನುಮೂಳೆಯೂ ಬೇಕು' ಎಂದುಕೊಂಡ.

ಮಾರನೆಯ ದಿನ ಸುಮಾರು ಹತ್ತೂವರೆ ಗಂಟೆಯ ಸಮಯದಲ್ಲಿ ರಾಜಣ್ಣ ಕಾಲೇಜಿಗೆ ಹೊರಡಲು ಸಿದ್ಧನಾಗಿ, ಮನೆಯ ಮುಂಭಾಗಕ್ಕೆ ಬಂದು ನಿಂತ. ಆಗ ಪಕ್ಕದ ಮನೆಯ ಬಳಿ ನಾಲ್ಕಾರು ವಿದ್ಯಾರ್ಥಿನಿಯರು ನಿಂತಿರುವುದು ಕಾಣಿಸಿತು. ಅವರೆಲ್ಲರೂ ಶಾಂತಳ ಜೊತೆಗಾತಿಯರಿರಬೇಕು ಎಂದುಕೊಂಡ.

ಅವನ ಊಹೆ ಸರಿಯಾಗಿತ್ತು. ಏಕೆಂದರೆ ಒಂದೆರಡು ನಿಮಿಷಗಳಲ್ಲೇ ಶಾಂತ ಮತ್ತು ಶ್ಯಾಮಲ ಮನೆಯಿಂದ ಹೊರಬಿದ್ದು, ಆ ಗೆಳತಿಯರ ಗುಂಪಿನಡೆಗೆ ನಡೆದರು. ಶ್ಯಾಮಲ ರಾಜಣ್ಣ ನಿಂತಿರುವುದನ್ನು ಕಂಡು ನಕ್ಕು, ತನ್ನ ಅಕ್ಕನ ಸೀರೆ ಎಳೆದಳು. ಶಾಂತಳಿಗೆ ಆ ಸೂಚನೆ ಅರ್ಥವಾದರೂ, ರಾಜಣ್ಣನ ಕಡೆಗೆ ತಲೆಯೆತ್ತಿ ನೋಡಲಿಲ್ಲ. ತನ್ನ ಗೆಳತಿಯರನ್ನೇ ನೋಡಿ ನಗುತ್ತಾ, ಅವರೊಡನೆ ಕೂಡಿ, ಬೀದಿಗೆ ಅಡಿಯಿರಿಸಿದಳು.

ರಾಜಣ್ಣ ಅವಳನ್ನೇ ನೋಡಿದ. ಅವಳ ಗೆಳತಿಯರು ರಾಜಣ್ಣನನ್ನು ಹಿಂತಿರುಗಿ ನೋಡಿ – ನೋಡಿ, ಶಾಂತಳಿಗೆ ಏನೇನೋ ಪ್ರಶ್ನೆ ಕೇಳುತ್ತಲೇ ಇದ್ದರು. ಅವರೆಲ್ಲ ಸಮೀಪದಲ್ಲಿದ್ದ ಮೆಯಿನ್‌ರೋಡಿಗೆ ಹೋಗಿ, ತಿರುವಿನ ಬಳಿ ಕಾಯುತ್ತಾ ನಿಂತುಕೊಂಡರು. ಅಲ್ಲಿಂದಲೂ ಕೆಲವರ ನೋಟಗಳು ರಾಜಣ್ಣನೆಡೆಗೆ ಹಾರಿಬರುತ್ತಿದ್ದವು. ಸ್ವಲ್ಪ ಹೊತ್ತಿನಲ್ಲಿಯೇ ಕಾಲೇಜ್ ಬಸ್ ಅಲ್ಲಿಗೆ ಬಂದಿತು. ಎಲ್ಲರೂ ಅದರಲ್ಲಿ ಕುಳಿತುಕೊಂಡರು. ಆ ಗಲಭೆಯಲ್ಲಿ ಶಾಂತ ರಾಜಣ್ಣನನ್ನೊಮ್ಮೆ ಹಿಂತಿರುಗಿ ನೋಡಲು ಮರೆಯಲಿಲ್ಲ!

ಅದನ್ನೇ ಇಷ್ಟು ಹೊತ್ತೂ ಆಸೆಯಿಂದ ನಿರೀಕ್ಷಿಸುತ್ತಾ ನಿಂತ ರಾಜಣ್ಣ ಸಮಾಧಾನದ ನಿಟ್ಟುಸಿರೊಂದನ್ನು ಬಿಡುತ್ತಾ ರಸ್ತೆಗಿಳಿದು ಬಂದ. ಆ ತಿರುವಿನ ಬಳಿಯೇ ಐದಾರು ನಿಮಿಷಗಳಲ್ಲಿ ಒಂದು ಸಿಟಿ ಬಸ್ಸು ಸಿಕ್ಕಿತು. ಅದನ್ನು ಹತ್ತಿ ಕಾಲೇಜಿಗೆ ಹೊರಟ.

ಮಧ್ಯಾಹ್ನ ಒಂದು ಗಂಟೆಯೊಳಗೇ ಅವನು ಮತ್ತೊಮ್ಮೆ ಸೆಂಟ್ರಲ್ ಕಾಲೇಜಿನ ವಿದ್ಯಾರ್ಥಿಯಾಗಿದ್ದ.

ಅವನಿಗೆ ಹಿಂದೆ ಚಿರಪರಿಚಿತವಾಗಿದ್ದ ಆ ಭವ್ಯ ಭವನದ ಕೆಂಪು ಗೋಪುರ, ಅದರ ಮುಂದಿನ ಸಾಲುಸಾಲು ಹಸಿರು ಮರಗಳು, ಅವುಗಳ ಕೆಳಗಿನ ಮರಳು ರಸ್ತೆ, ಅಲ್ಲೇ ಬೆಳಗಿನಿಂದ ಸಂಜೆಯವರೆಗೂ ಒಮ್ಮೆ ದಟ್ಟವಾಗಿ, ಕೋಲಾಹಲವೆಬ್ಬಿಸಿ, ಮತ್ತೊಮ್ಮೆ ವಿರಳ-ವಿರಳವಾಗಿ ಮೌನ ತಳೆದು, ಅತ್ತಿತ್ತ ಚಲಿಸುವ ಸಾವಿರಾರು ವಿದ್ಯಾರ್ಥಿಗಳ ಗುಂಪು, ಈಗ ಅಪರಿಚಿತವಾಗಿ ತೋರಿತು. ಅವನು ಎಲ್ಲೆಲ್ಲಿ ನೋಡಿದರೂ ಹೊಸ ಮುಖಗಳೇ ಕಾಣುತ್ತಿದ್ದುವು.

ಕ್ಲಾಸಿನಲ್ಲಿ ಒಂಟಿಯಾಗಿ ಕುಳಿತ ಅವನಿಗೆ ಒಂದು ಕ್ಷಣ 'ನಾನೇಕಾದರೂ ಇಲ್ಲಿಗೆ ಮತ್ತೊಮ್ಮೆ ಬಂದೆ' ಎನಿಸಿತು. ಆಗ ತಾನು ಹಳ್ಳಿಯಲ್ಲಿ ಅರಿತುಕೊಂಡಿದ್ದ ತನ್ನ ಬೌದ್ಧಿಕ ಕೊರತೆ-ಅವಶ್ಯಕತೆಗಳೆಲ್ಲವನ್ನೂ ಸ್ಮರಿಸಿಕೊಂಡ. 'ಹಳೆಯ ಗೆಳೆಯರಿಲ್ಲದಿದ್ದರೇನು? ಇಷ್ಟು ಮಂದಿಯಲ್ಲಿ ಇಬ್ಬರು ಹೊಸ ಗೆಳೆಯರೂ ದೊರಕದಿರುವರೇ?' ಎಂದು ಸಮಾಧಾನ ಹೊಂದಿ ಕುಳಿತ.

ಅವನೆಣಿಸಿದ್ದಂತೆಯೇ ಆದಿನ ಕಾಲೇಜು ಮುಗಿಯುವುದರಲ್ಲಿ ನಾಲ್ಕಾರು ಮಂದಿ ಪರಿಚಯವಾಗಿದ್ದರು. ಅವರೊಡನೆ ಸಂಜೆ ಏಳು ಗಂಟೆಯವರೆಗೆ ಮಾತಾಡಿ ಸಂತೃಪ್ತಿಯ ಭಾವದಲ್ಲಿ ಮನೆಗೆ ಹಿಂತಿರುಗಿದ.

ಬಾಗಿಲ ಬಳಿಗೆ ಬಂದೊಡನೆಯೇ ನಾಗಮ್ಮನೊಡನೆ ಕುಳಿತು, ಹಿಂದಿ ಹೇಳಿ ಕೊಡುತ್ತಿದ್ದ ಶಾಂತಳ ಧ್ವನಿ ಕೇಳಿ ಅವನ ಹೃದಯ ಹಿಗ್ಗಿ, ವದನ ಸಂತಸದಿಂದ ಅರಳಿತು.

ನೋಟು ಪುಸ್ತಕಗಳನ್ನು ಮೇಜಿನ ಮೇಲೆಸೆದು, ಉಡುಪು ಬದಲಾಯಿಸಿ, ಮಹಡಿಯ ಮುಂದಿನ ಆರಾಮ ಕುರ್ಚಿಯಲ್ಲಿ ಕುಳಿತುಕೊಂಡ. ಸುಧಾ ಅಡಿಗೆ ಮನೆಯಿಂದ ಟೀ ತಂದುಕೊಟ್ಟಳು. ನಾಗಮ್ಮನ ಹಿಂದಿ ಪಾಠ ಒಂದು ನಿಮಿಷ ಮೌನ ಆಚರಿಸಿತು. ಅವರು ಕುಳಿತೆಡೆಯಿಂದಲೇ ಅವನನ್ನು

" ಕಾಲೇಜಿಗೆ ಸೇರಿದೆಯೇನು.. ?"

ಎಂದು ಕೇಳಿದರು. ಅವನು ಟೀ ಕುಡಿಯುತ್ತಾ

" ಹು : ಸೇರಿದೆ.. ಆದರೆ ಇನ್ನೊಂದಕ್ಕೆ ಸೇರುವುದು ಬಾಕಿಯಿದೆ."

ಎಂದ. ನಾಗಮ್ಮ ಕಾತುರದಿಂದ

" ಯಾವುದು ಅದು ?. "

ಎಂದು ಕೇಳಿದರು. ಅವನು ತನ್ನಲ್ಲಿ ತಾನೇ ಮುಗುಳು ನಗುತ್ತಾ,

" ಈ ಮನೆಯ ಹಿಂದಿ ಕಾಲೇಜ್.....!"

ಎಂದ. ನಾಗಮ್ಮ ಶಾಂತ ಇಬ್ಬರೂ ವಿನೋದಗೊಂಡು ನಕ್ಕರು. ಒಂದು ಕ್ಷಣವಾದ ನಂತರ ಶಾಂತ,

" ಅದಕ್ಕೇನು, ಸೇರಲಿ ಹೇಳಿ...."

ಎಂದು ನಾಗಮ್ಮನಿಗೆ ಉಸುರಿದುದು ಕೇಳಿ ಬಂತು. ನಾಗಮ್ಮ " ಇಷ್ಟವಿದ್ದರೆ ನೀನೂ ಕಲಿತುಕೋ ಬಾ.... ಇನ್ನು ಮುಂದೆ ಹಿಂದಿ ಕಲಿತಿರದಿದ್ದರೆ ಸರ್ಕಾರಿ ಕೆಲಸಗಳೇ ಸಿಗೋಲ್ಲವಂತೆ."

ಎಂದರು. ರಾಜಣ್ಣ ನಿರಾಸಕ್ತಿಯಿಂದ,

" ನನಗೆ ಆ ಸರ್ಕಾರಿ ಕೆಲಸವೂ ಬೇಡ, ನಿಮ್ಮ ಹಿಂದಿ ಪಾಠವೂ ಬೇಡ....ಸಧ್ಯ, ನೀನೇ ಅದನ್ನು ಕಲಿತುಕೋ.. .... ಆಗ ನಿನಗೆಂಥ ಸರ್ಕಾರಿ ಕೆಲಸ ಸಿಗುತ್ತೋ ನೋಡೋಣ !"

ಎಂದ. ನಾಗಮ್ಮನವರೂ,

" ಈಗ ಸಿಕ್ಕೇ ಇದೆಯಲ್ಲ ಅಸಿಸ್ಟೆಂಟ್ ಇಂಜನಿಯರ್ ಹೆಂಡತಿ ಕೆಲಸ !"

ಎಂದು ಹೇಳಿದರು ನಂತರ ಸ್ವಲ್ಪ ಮನಚುಚ್ಚುವ ಧ್ವನಿಯಲ್ಲಿ

" ನಿಮ್ಮಂಥ ಗಂಡಸರಿಗೇ ಅಪ್ಪ, ಈಗ ದೊಡ್ಡದೊಡ್ಡ ಕೆಲಸ ಗಳು ಬೇಡವಾಗಿರೋದು. ನಾನೇನಾದರೂ ಒಂದುವೇಳೆ ನಿನ್ನ ಹಾಗೆ ಗಂಡಸಾಗಿ ಹುಟ್ಟಿರಬೇಕಾಗಿತ್ತು!. ಆಗ ಚೀಫ್ ಇಂಜನಿಯರ್ ಕೆಲಸಕ್ಕೇ ಏಟು ಹಾಕ್ತಿದ್ದೆ.. ನಿನ್ನ ಹಾಗೆ ಕೆಲಸ, ಅಧಿಕಾರ, ಗೌರವ

ಬೇಡ ಎಂದು ನೇಗಿಲು ಹಿಡಿಯಲು ಹೋಗ್ತಿರಲಿಲ್ಲ."

ಎಂದರು. ರಾಜಣ್ಣ ಮರುಕ್ಷಣವೇ,

"ಅಷ್ಟು ದುರಾಸೆ ಇದ್ದದ್ದರಿಂದಲೇ ನಿಮ್ಮನ್ನು ದೇವರು ಹೆಂಗ ಸಾಗಿ ಹುಟ್ಟಿಸಿದ್ದು! ಅವನಿಗೇನು ತಿಳಿಯೋಲ್ವೇ?"

ಎಂದ. ಅದನ್ನು ಕೇಳಿ ಶಾಂತ ಗಟ್ಟಿಯಾಗಿ ನಕ್ಕಳು. ನಾಗಮ್ಮ ನವರೂ ಅವಳ ನಗುವಿನೊಡನೆ ಬೆರೆಯುತ್ತಾ,

"ಏಕೋ ಹಾಗೇ ಕಾಣುತ್ತೆ...."

ಎಂದು ಪುನಃ ಪಾಠ ಒಪ್ಪಿಸತೊಡಗಿದರು.

— ಈ ಬಗೆಯ ಹರಟೆ ವಿನೋದಗಳಲ್ಲೇ ಮುಂದಿನ ನಾಲ್ಕಾರು ಸಂಜೆಗಳು ಸವೆದುವು. ಪ್ರತಿದಿನವೂ ಶಾಂತ ರಾಜಣ್ಣನ ದೃಷ್ಟಿ ಮಿಲನ ಗಳು, ನಗೆಗಣ್ಣುಗಳು. ಆಸಕ್ತಿಯಿಂದ ಸ್ಪಂದಿಸುವ ತುಟಿಗಳು ಹೆಚ್ಚು ಹೆಚ್ಚು ಆಪ್ತತೆ, ಹಿಗ್ಗಾಸಗಳನ್ನು ಹೊರಸೂಸುತ್ತಿದ್ದುವು. ಒಂದು ದಿನ ಅವನು, ನಾಗಮ್ಮ, ಶಾಂತ, ಶ್ಯಾಮಲ, ಸುಧಾ ಇವರೆಲ್ಲರ ಫೋಟೋ ತೆಗೆದಾಗಲಂತೂ ಶಾಂತಳೊಬ್ಬಳನ್ನೇ 'ಎಲ್ಲಿ. ಹೀಗೆ ಸ್ವಲ್ಪ! ... ಈಗ ಇತ್ತಕಡೆ. ಊ....ಹು! ಸ್ಮೈಲ್! .... 'ಸ್ಮೈಲ್ ಪ್ಲೀಸ್' ...ನೀವು... ನೀವು...ನೀವೊಬ್ಬರೇ ನಗುತ್ತಿಲ್ಲ!"

ಎಂದು ಅವಳ ಕೆನ್ನೆ ಟೊಮಾಟೋವಿನಂತೆ ಕೆಂಪಾಗುವಂತೆ ಮಾಡಿದ್ದ.

ಒಂದು ವಾರದ ನಂತರ ಮತ್ತೊಂದು ಸಂಜೆ. ರಾಜಣ್ಣ ಕಾಲೇಜಿ ನಿಂದ ಹಿಂತಿರುಗಿ, ಹೊರಗಿನ ವಿರಾಮ ಕುರ್ಚಿಯಲ್ಲೇ ಟೀ ಕುಡಿ ಯುತ್ತಾ ಕುಳಿತಿದ್ದ. ಮನೆಯೊಳಗಿದ್ದ ಶಾಂತ – ನಾಗಮ್ಮ ಹಿಂದಿ ಪಾಠಕ್ಕೆ ರಜಾ ಕೊಟ್ಟು, ಹರಟೆ ಕೊಚ್ಚುತ್ತಿದ್ದರು. ಅದನ್ನು ಸದುಪಯೋಗಪಡಿಸಿಕೊಳ್ಳಲು ಸುಧಾ ಆಗಲೇ ಏಳೂವರೆ ಗಂಟೆ ಯಾಗಿದ್ದರೂ, ಪುಸ್ತಕ ಮುಟ್ಟದೆ ತನ್ನ ಸಂಗಾತಿಯೊಬ್ಬಳೊಡನೆ ಸ್ಕಿಪ್ಪಿಂಗ್ ಆಡುತ್ತಿದ್ದಳು.

ರಾಜಣ್ಣ ಅವಳನ್ನು ಕರೆದು, ಪುಸ್ತಕಗಳನ್ನು ತಂದು ಎದುರಿಗೆ ಕೈಕಟ್ಟಿ ನಿಲ್ಲುವಂತೆ ಹೇಳಿದ. ಅವಳು ಪಾಪ, ನಿರ್ವಾಹವಿಲ್ಲದೆ ಅವನ

ಮುಂದೆ ಹೇಳಿದಂತೆ ಬಂದು ಕೈಕಟ್ಟಿ ನಿಂತಳು. ರಾಜಣ್ಣ—

"ಎಲ್ಲಿ, ಐದನೆಯ ಮಗ್ಗಿ ಹೇಳು!"

ಎಂದು ಆಜ್ಞಾಪಿಸಿದ. ಅವಳು ಕೂಡಲೇ ಆಲೋಚನೆಯಿಂದ ಕಣ್ಣು ಮುಚ್ಚಿ ತೆರೆಯುತ್ತಾ,

ಐದೊಂದಲ-ಐದು. ಐದೆರಡಲ-ಹತ್ತು, ಐದು–ಮೂರಲಿಪ್ಪತ್ತೈದು, ಐದಾರಲರವತ್ತೈದು! ..ಐದ ಹತ್ತಲ–ಐವತ್ತು!"

ಎಂದು ಸರಾಗವಾಗಿ ಹೇಳಿಬಿಟ್ಟಳು!

ಅದನ್ನು ಕೇಳಿ ರಾಜಣ್ಣನಿಗೆ ಕೋಪ - ನಗು ಇವೆರಡೂ ಏಕಕಾಲದಲ್ಲಿ ಉಕ್ಕಿಬಂದುವು. ನಿನ್ನೆಯ ದಿನ ಅವನು ಆ ಮಗ್ಗಿಯನ್ನು ಅವಳಿಗೆ ಹತ್ತಾರುಬಾರಿ ಬೋಧಿಸಿದ್ದ. ಅದನ್ನು ಕಂಡಿದ್ದ ಶಾಂತ, ನಾಗಮ್ಮ ಇವರೂ ಈಗ ಮನೆಯೊಳಗಿನಿಂದಲೇ ನಕ್ಕರು. ನಾಗಮ್ಮ

"ದಿನವೆಲ್ಲಾ ಕುಂಟೇಬಿಲ್ಲೆ ಆಡ್ತಿರ್ಲಿ.. ಚೆನ್ನಾಗಿ ಮಗ್ಗಿ ಬರುತ್ತೆ! ....ಅವಳಿಗೆರಡು ಬಿಸಿಬಿಸಿಯಾಗಿ ಕೊಡು. ಹಿಂದೆ ಮುಂದೆ ನೋಡಬೇಡ."

ಎಂದರು. ಅದನ್ನು ಕೇಳಿ ಸುಧಾ ರಾಜಣ್ಣನನ್ನೇ ಕಣ್ಣರಳಿಸಿ ನೋಡಿದಳು. ಅವಳ ತುಟಿಗಳು ಭಯದಿಂದ ಬಿಗಿದುಕೊಂಡವು. ರಾಜಣ್ಣ ಅವಳನ್ನೇ ಕೃತಕ ಕೋಪದಿಂದ ನೋಡುತ್ತಾ.. ... "ಇನ್ನು ಮೇಲೆ ಪಾಠ ಗಟ್ಟಿಮಾಡದೆ ಕುಂಟೆಬಿಲ್ಲೆ ಆಡ್ತೀಯಾ... ?"

ಎಂದು ಬೆದರಿಸಿದ. ಅವಳು ಸೋತ ಧ್ವನಿಯಲ್ಲಿ–

"ಇಲ್ಲ. ..ಆಡೋಲ್ಲಾ...."

ಎಂದಳು. ರಾಜಣ್ಣ ಸಮಾಧಾನ ಪಟ್ಟವನಂತೆ,

"ಸರಿ. . ನಾಲ್ಕನೆಯ ಮಗ್ಗಿ ಹೇಳು."

ಎಂದ. ಅವಳು ಈಗಲೂ ಹೊಸ ಅಂಕಗಣಿತವನ್ನೇ ಸೃಷ್ಟಿಸಿದಳು.

ಅವಳ ತಪ್ಪುಗಳನ್ನೆಲ್ಲಾ ತಿದ್ದಿ, ಸರಿಯಾಗಿ ಬಾಯಿಪಾಠ ಮಾಡಿಸುತ್ತಿರುವಾಗ ನಾಗಮ್ಮ,

"ರಾಜು...!"

ಎಂದು ಕೂಗಿದುದು ಕೇಳಿತು. ಅವನು ಕುಳಿತೆಡೆಯಿಂದಲೇ

"ಏನು....?"—ಎಂದ.

"ಇವರಿಗೆ ಒಂದು ಪುಸ್ತಕ ಬೇಕಂತೆ.... ನೋಡು"

ಎಂದರು ನಾಗಮ್ಮ. ರಾಜಣ್ಣ ಶಾಂತಳನ್ನು ಕೇಳಿದ

"ಯಾವ ಪುಸ್ತಕ ಬೇಕು?"

"ನಿಮ್ಮ ಕನ್ನಡ ನಾಟಕ ಮತ್ತು ನಾನ್-ಡಿಟೈಲ್."

ಅವನು ಆ ಪುಸ್ತಕಗಳನ್ನು ಅವಳಿಗೆ ತಂದುಕೊಟ್ಟ. ಮತ್ತೆ ಮನೆಯ ಮುಂಭಾಗಕ್ಕೆ ಬಂದು ಕುಳಿತ.

ಶಾಂತ ಮನೆಗೆ ಹಿಂತಿರುಗುವಾಗ ಮೆಟ್ಟಿಲುಗಳ ಬಳಿ ನಿಂತು ಅವನನ್ನು ಕೇಳಿದಳು.

"ಇದನ್ನು ಮುಂದಿನ ವಾರ ಹಿಂತಿರುಗಿಸಬಹುದು ತಾನೆ?"

"ಓ.... ಬೇಕಾದಾಗ ಹಿಂತಿರುಗಿಸಿ."

"ನೋಟ್ಸು ಮಾಡಿಕೊಳ್ಳಬೇಕು, ಅದಕ್ಕೇ ಸ್ವಲ್ಪ ಹೊತ್ತು ಆಗುತ್ತೆ."

"ಪರವಾಗಿಲ್ಲ.... ನಾನದನ್ನು ಆಗಲೇ ಒಮ್ಮೆ ಓದಿಬಿಟ್ಟೆ. ಪುನಃ ಪರೀಕ್ಷೆಯ ಸಮಯದಲ್ಲೇ ಓದುವುದು.... ನಿಮಗೆ ಅನುಕೂಲವಾದಾಗ ಹಿಂತಿರುಗಿಸಿ.'

ಎಂದ. ಶಾಂತ ಒಂದು ಕ್ಷಣ ತಲೆತಗ್ಗಿಸಿ ನಿಂತಳು. ನಂತರ ತಲೆ ಎತ್ತಿ, ಮೌನಧನ್ಯವಾದಗಳನ್ನರ್ಪಿಸುವ, ನಾನಿನ್ನು ಹೋಗಲೇ ಎಂದು ಅಪ್ಪಣೆ ಬೇಡುವ ಭಾವಪೂರ್ಣ ನೋಟವನ್ನು ಅವನೆಡೆಗೆ ಬೀರಿದಳು. ರಾಜಣ್ಣ ಅವಳನ್ನೇ ಆಳವಾಗಿ, ಗಂಭೀರವಾಗಿ ನೋಡಿ ಮುಗುಳ್ನಗೆ ಬೀರಿದ. ಅವಳೂ ನಸುನಕ್ಕು, ಕೆಂಪೇರಿದ ವದನದಿಂದ ಸರಸರನೆ ಕಳಗಿಳಿದು ಹೋದಳು.

ಮಾರನೆಯ ದಿನ ಬೆಳಗ್ಗೆ ಸುಧಾ ರಾಜಣ್ಣನ ರೂಮಿಗೆ ಓಡಿ ಬಂದು, ಚಿಕ್ಕ ಚೀಟಿಯೊಂದನ್ನು ಅವನ ಕೈಗಿತ್ತಳು. ಅದನ್ನು ಕುತೂಹಲದಿಂದ ಬಿಚ್ಚಿ ನೋಡಿದಾಗ,

ಮುಂದೆ ಹೇಳಿದಂತೆ ಬಂದು ಕೈಕಟ್ಟಿ ನಿಂತಳು. ರಾಜಣ್ಣ—

"ಎಲ್ಲಿ, ಐದನೆಯ ಮಗ್ಗಿ ಹೇಳು!"

ಎಂದು ಆಜ್ಞಾಪಿಸಿದ. ಅವಳು ಕೂಡಲೇ ಆಲೋಚನೆಯಿಂದ ಕಣ್ಣು ಮುಚ್ಚಿ ತೆರೆಯುತ್ತಾ,

ಐದೊಂದಲ-ಐದು. ಐದೆರಡಲ-ಹತ್ತು, ಐದು–ಮೂರಲಿಪ್ಪತ್ತೈದು, ಐದಾರಲರವತ್ತೈದು! ಐದ ಹತ್ತಲ–ಐವತ್ತು!"

ಎಂದು ಸರಾಗವಾಗಿ ಹೇಳಿಬಿಟ್ಟಳು!

ಅದನ್ನು ಕೇಳಿ ರಾಜಣ್ಣನಿಗೆ ಕೋಪ - ನಗು ಇವೆರಡೂ ಏಕ ಕಾಲದಲ್ಲಿ ಉಕ್ಕಿಬಂದುವು. ನಿನ್ನೆಯ ದಿನ ಅವನು ಆ ಮಗ್ಗಿಯನ್ನು ಅವಳಿಗೆ ಹತ್ತಾರುಬಾರಿ ಬೋಧಿಸಿದ್ದ. ಅದನ್ನು ಕಂಡಿದ್ದ ಶಾಂತ. ನಾಗಮ್ಮ ಇವರೂ ಈಗ ಮನೆಯೊಳಗಿನಿಂದಲೇ ನಕ್ಕರು. ನಾಗಮ್ಮ

"ದಿನವೆಲ್ಲಾ ಕುಂಟೇಬಿಲ್ಲೆ ಆಡ್ತಿರ್ಲಿ.. ಚೆನ್ನಾಗಿ ಮಗ್ಗಿ ಬರುತ್ತೆ! ....ಅವಳಿಗೆರಡು ಬಿಸಿಬಿಸಿಯಾಗಿ ಕೊಡು. ಹಿಂದೆ ಮುಂದೆ ನೋಡ ಬೇಡ."

ಎಂದರು. ಅದನ್ನು ಕೇಳಿ ಸುಧಾ ರಾಜಣ್ಣನನ್ನೇ ಕಣ್ಣರಳಿಸಿ ನೋಡಿದಳು. ಅವಳ ತುಟಿಗಳು ಭಯದಿಂದ ಬಿಗಿದುಕೊಂಡವು. ರಾಜಣ್ಣ ಅವಳನ್ನೇ ಕೃತಕ ಕೋಪದಿಂದ ನೋಡುತ್ತಾ.. ... "ಇನ್ನು ಮೇಲೆ ಪಾಠ ಗಟ್ಟಿಮಾಡದೆ ಕುಂಟೆಬಿಲ್ಲೆ ಆಡ್ತೀಯಾ... ?"

ಎಂದು ಬೆದರಿಸಿದ. ಅವಳು ಸೋತ ಧ್ವನಿಯಲ್ಲಿ–

"ಇಲ್ಲ ..ಆಡೋಲ್ಲಾ...."

ಎಂದಳು. ರಾಜಣ್ಣ ಸಮಾಧಾನ ಪಟ್ಟವನಂತೆ,

"ಸರಿ.. ನಾಲ್ಕನೆಯ ಮಗ್ಗಿ ಹೇಳು."

ಎಂದ. ಅವಳು ಈಗಲೂ ಹೊಸ ಅಂಕಗಣಿತವನ್ನೇ ಸೃಷ್ಟಿಸಿದಳು.

ಅವಳ ತಪ್ಪುಗಳನ್ನೆಲ್ಲಾ ತಿದ್ದಿ, ಸರಿಯಾಗಿ ಬಾಯಿಪಾಠ ಮಾಡಿಸುತ್ತಿರುವಾಗ ನಾಗಮ್ಮ,

"ರಾಜು....!"

ಎಂದು ಕೂಗಿದುದು ಕೇಳಿತು. ಅವನು ಕುಳಿತೆಡೆಯಿಂದಲೇ,

"ಏನು....?"—ಎಂದ.

"ಇವರಿಗೆ ಒಂದು ಪುಸ್ತಕ ಬೇಕಂತೆ....ನೋಡು."

ಎಂದರು ನಾಗಮ್ಮ. ರಾಜಣ್ಣ ಶಾಂತಳನ್ನು ಕೇಳಿದ

"ಯಾವ ಪುಸ್ತಕ ಬೇಕು?"

"ನಿಮ್ಮ ಕನ್ನಡ ನಾಟಕ ಮತ್ತು ನಾನ್-ಡಿಟೈಲ್."

ಅವನು ಆ ಪುಸ್ತಕಗಳನ್ನು ಅವಳಿಗೆ ತಂದುಕೊಟ್ಟು, ಮತ್ತೆ ಮನೆಯ ಮುಂಭಾಗಕ್ಕೆ ಬಂದು ಕುಳಿತ.

ಶಾಂತ ಮನೆಗೆ ಹಿಂತಿರುಗುವಾಗ ಮೆಟ್ಟಿಲುಗಳ ಬಳಿ ನಿಂತು, ಅವನನ್ನು ಕೇಳಿದಳು.

"ಇದನ್ನು ಮುಂದಿನ ವಾರ ಹಿಂತಿರುಗಿಸಬಹುದು ತಾನೆ?"

"ಓ....ಬೇಕಾದಾಗ ಹಿಂತಿರುಗಿಸಿ."

"ನೋಟ್ಸ್ ಮಾಡಿಕೊಳ್ಳಬೇಕು, ಅದಕ್ಕೇ ಸ್ವಲ್ಪ ಹೊತ್ತು ಆಗುತ್ತೆ."

"ಪರವಾಗಿಲ್ಲ....ನಾನದನ್ನು ಆಗಲೇ ಒಮ್ಮೆ ಓದಿಬಿಟ್ಟೆ. ಪುನಃ ಪರೀಕ್ಷೆಯ ಸಮಯದಲ್ಲೇ ಓದುವುದು....ನಿಮಗೆ ಅನುಕೂಲವಾದಾಗ ಹಿಂತಿರುಗಿಸಿ."

ಎಂದ. ಶಾಂತ ಒಂದು ಕ್ಷಣ ತಲೆತಗ್ಗಿಸಿ ನಿಂತಳು. ನಂತರ ತಲೆ ಎತ್ತಿ, ಮೌನಧನ್ಯವಾದಗಳನ್ನರ್ಪಿಸುವ, ನಾನಿನ್ನು ಹೋಗಲೇ ಎಂದು ಅಪ್ಪಣೆ ಬೇಡುವ ಭಾವಪೂರ್ಣ ನೋಟವನ್ನು ಅವನೆಡೆಗೆ ಬೀರಿದಳು. ರಾಜಣ್ಣ ಅವಳನ್ನೇ ಆಳವಾಗಿ, ಗಂಭೀರವಾಗಿ ನೋಡಿ ಮುಗುಳ್ನಗೆ ಬೀರಿದ. ಅವಳೂ ನಸುನಕ್ಕು, ಕೆಂಪೇರಿದ ವದನದಿಂದ ಸರಸರನೆ ಕೆಳಗಿಳಿದು ಹೋದಳು.

ಮಾರನೆಯ ದಿನ ಬೆಳಗ್ಗೆ ಸುಧಾ ರಾಜಣ್ಣನ ರೂಮಿಗೆ ಓಡಿ ಬಂದು, ಚಿಕ್ಕ ಚೀಟಿಯೊಂದನ್ನು ಅವನ ಕೈಗಿತ್ತಳು. ಅದನ್ನು ಕುತೂಹಲದಿಂದ ಬಿಚ್ಚಿ ನೋಡಿದಾಗ,

ಮಿ. ರಾಜಣ್ಣ.......

ಪುಸ್ತಕಗಳನ್ನು ಕೊಟ್ಟಿದ್ದಕ್ಕೆ ತುಂಬಾ ವಂದನೆಗಳು ನೋಟ್ಸ್ ಬರೆದ ಮೇಲೆ ಬೇಕಾದರೆ ನಿಮಗೂ ಕೊಡುತ್ತೇನೆ.

ಮಿಸ್. ಶಾಂತ.

ಎಂದಿತ್ತು.

ಕಾಲೇಜಿಗೆ ಹೊರಟು ನಿಂತಾಗ, ಈ ದಿನವೂ ಅವಳ ದರ್ಶನ ವಾಯಿತು. ಆದರೆ ಇಷ್ಟುದಿನವೂ ಇದ್ದ ಆ ಮೋಹಕ ಕುಡಿನೋಟ ದಲ್ಲಿ ಇಂದು ತನಗೊಬ್ಬನಿಗೇ ಮೀಸಲಾದ ಒಂದು ಮುಗುಳುನಗೆಯ ಮಲ್ಲಿಗೆಯೂ ಅವಳ ಕಣ್ಣು, ತುಟಿಯಂಚುಗಳಲ್ಲಿ ಮೂಡಿದ್ದಿತು.

ಸಂಜೆ ಹಿಂತಿರುಗಿದಾಗ ಇಂದು ಶಾಂತ, ಶ್ಯಾಮಲ ಇಬ್ಬರೂ ಮನೆಗೆ ಬಂದಿದ್ದರು. ಕೇಶವಯ್ಯಂಗಾರರು ಕಳಿಸಿದ್ದ 'ಏಷ್ಯನ್ ರಿಸರ್ಚ್ ಕೌನ್ಸಿಲ್'ನ ಕೆಲವು ವರದಿಯ ಫೈಲುಗಳು ಶ್ಯಾಮಲಳ ಕೈಯಲ್ಲಿದ್ದುವು. ರಾಜಣ್ಣ ಅವುಗಳನ್ನು ಪಡೆದು, ರೇಡಿಯೋ ತಿರುಗಿಸಿ 'ಬಾಕ್'ನ ಸಂಗೀತ ಸುಧೆಯನ್ನು ಸವಿಯುತ್ತಾ ಹೊರಗೆ ಕುಳಿತ. ಅವನಿಗೆ ಆ ಫೈಲುಗಳಲ್ಲಿದ್ದ ಆಸಕ್ತಿ, ಬಳಿಯಲ್ಲೇ ಆರಿಹೋಗುತ್ತಿದ್ದ ಟೀಯ ಮೇಲಿರಲಿಲ್ಲ.

ಕೆಲವು ನಿಮಿಷಗಳಾದ ಬಳಿಕ ಅವರಿಬ್ಬರೂ ಮನೆಗೆ ಹೊರಟರು. ಶಾಂತ ಮೆಟ್ಟಿಲ ಬಳಿ ಬಂದಾಗ ರಾಜಣ್ಣ ನೆಡೆಗೆ ನೋಡುತ್ತಾ ನಿಂತಳು ಅವನೂ ತಲೆಎತ್ತಿ ಅವಳೆಡೆಗೆ 'ಏನು?' ಎಂದು ಕೇಳುವ ಪ್ರಶ್ನಾರ್ಥಕ ನೋಟಬೀರಿ ಮುಗುಳುನಕ್ಕ. ಶಾಂತ ಅವನನ್ನು ನೋಡುತ್ತಾ,

"ನೀವು ಇಂಗ್ಲೀಷ್ ನೋಟ್ಸ್ ಏನಾದರೂ ಬರೆದಿರುವಿರಾ?"

ಎಂದು ಕೇಳಿದಳು. ಅವನು,

"ಇಲ್ಲ, ಯಾವುದನ್ನು ಬರೆದಿಲ್ಲ."

ಎಂದ. ಲಜ್ಜೆ ಸಾಧನಗಳ ಹೊಯ್ದಾಟದಿಂದ ಅವಳ ನೋಟ ನೆಲಕ್ಕೆ ಬಿತ್ತು. ರಾಜಣ್ಣ ಅದನ್ನು ಕಂಡು ಕೇಳಿದ.

"ನೀವು ಬರೆದಿರುವಿರೇನು....?"

"ಹು. 'ಡ್ರಾಮಾ'ಕ್ಕೆ ಬರೆದಿದ್ದೇನೆ. ಇನ್ನಾವುದಕ್ಕೂ ಬರೆದಿಲ್ಲ. ನಿಮಗೆ ಬೇಕಾದರೆ ಕೊಡುತ್ತೇನೆ"

ಎಂದಳು. ಅವನಿಗೆ ಈಗಲೇ ಕಾಲೇಜು ಪಾಠಗಳ ಯಾವ ನೋಟ್ಸ್ ಓದಲೂ ಇಷ್ಟವಿರಲಿಲ್ಲ. ಆದರೆ ಆ ಮಧುರ, ಸ್ನೇಹಪರ ಯುವತಿ ತಾನಾಗಿಯೇ 'ಬೇಕೆ?' ಎಂದು ಉತ್ಸಾಹದಿಂದ ಕೊಡಲು ಬರುತ್ತಿರುವುದನ್ನು 'ಬೇಡ' ಎನ್ನಲು ಸಾಧ್ಯವೇ ? ಅವಳನ್ನೇ ನೋಡುತ್ತಾ,

"ಹು....ಕೊಡಿ."

ಎಂದ. ಅವಳು ಸಂತೃಪ್ತಿಯ ಭಾವದಿಂದ ಮನೆಗೆ ಹೋದಳು.

ಸ್ವಲ್ಪಹೊತ್ತಿನ ನಂತರ ಶ್ಯಾಮಲ ನೋಟ್ಸನ್ನು ಅವನ ಕೈಗೆ ತಂದುಕೊಟ್ಟಳು. ಅದನ್ನು ತೆರೆದು ನೋಡಿದ. ದುಂಡುಮಲ್ಲಿಗೆಯಂತೆ ಸುಂದರವಾದ ಸಾಲು ಸಾಲು ಅಕ್ಷರಗಳು ಕಂಡವು. ನಾಲ್ಕೈದು ಸಾಲುಗಳನ್ನೋದಿ ಅದನ್ನು ಮೇಜಿನಮೇಲೆ ಇರಿಸಿ, ಶ್ಯಾಮಲಳನ್ನು,

"ಎಲ್ರೀ.. .ಈಗ ನಿಮ್ಮ ತಂದೆಯವರು ಕಾಣೋದೆ ಇಲ್ಲ.. ..... ಎಲ್ಲಿಗೆ ಹೋಗಿದಾರೆ ?"

ಎಂದು ಕೇಳಿದ. ಶ್ಯಾಮಲ...

"ಎಲ್ಲಿಗೂ ಹೋಗಿಲ್ಲ. ಮನೆಯಲ್ಲೇ ಇದಾರೆ"

ಎಂದು ಹೇಳುತ್ತಾ ಅಲ್ಲಿಂದ ಓಡಿದಳು.

ರಾಜಣ್ಣನ ಮನ, ಕೇಶವಯ್ಯಂಗಾರರ ಗಂಭೀರಮೂರ್ತಿಯನ್ನೇ, ಅವರ ಹದವಾದ ಸ್ನೇಹಪರ ವ್ಯಕ್ತಿತ್ವವನ್ನೇ ಕುರಿತು ಆಲೋಚಿಸುತ್ತಿತ್ತು. ಅವರೊಡನೆ ಈಗ ಮೂರು ನಾಲ್ಕು ದಿನಗಳಿಂದಲೂ ಅವನು ಮಾತಾಡಿರಲಿಲ್ಲ. ಹಾಗೆ ಮಾತಾಡಬೇಕಾದ ಎಷ್ಟೋ ವಿಚಾರಗಳು ಅವನ ಮನಸ್ಸಿನಲ್ಲಿದ್ದುವು.

ಈಗ ಸುಮಾರು ಎರಡು ವಾರಗಳಿಂದಲೂ ತಾನು ಕಂಡಿದ್ದ ವಿದ್ಯಾರ್ಥಿ ಜೀವನದಲ್ಲಿ ಅವನು ಹಲವಾರು ಅಂಶಗಳನ್ನು ಗ್ರಹಿಸಿದ್ದ; ಕಾಲೇಜಿನ ಓದು ವಿದ್ಯಾರ್ಥಿಗಳಲ್ಲಿ ಕೆಲವರಿಗೆ ಸ್ವಚ್ಛಂದ ಕ್ರೀಡೆಗಳ ರಂಗಭೂಮಿಯಾಗಿತ್ತು ಮತ್ತೆ ಅನೇಕರಿಗೆ ಉದ್ಯೋಗ ದೊರಕಿಸಿ

ಕೊಡುವ ಒಂದು ಕಾಗದದ ಚೂರಿಗಾಗಿ ಹೊಟ್ಟೆ-ಬಟ್ಟೆಗಿಲ್ಲದೆ, ಹಗಲು ರಾತ್ರಿಯೆನ್ನದೆ, ಅಲ್ಲಿ ಹೇಳಿಕೊಟ್ಟದ್ದನ್ನು ಇಲ್ಲಿ ಕಲಿಯಲು, ಸದ್ದಿಲ್ಲದ ತಿಣಿಕಬೇಕಾಗಿದ್ದ ಒಂದು ನಿರ್ದಯ ಗರಡಿ ಮನೆಯಾಗಿತ್ತು. ಅವರಿಗೆ ಜೀವನ ಮತ್ತು ವಿದ್ಯೆ, ತಮ್ಮ ವೈಯಕ್ತಿಕ ಒಳಿತನ್ನೇ ಅಲ್ಲದೆ, ತಮ್ಮ ಜನರ ಒಳಿತನ್ನೂ ಸಾಧಿಸಲು ದೊರೆತಿರುವ ಅಪೂರ್ವ ಸಮಯ ಮತ್ತು ಸಾಧನೆಗಳಂತೆ ತೋರಿರಲಿಲ್ಲ. ಎಲ್ಲರೂ ಮೆಡಿಕಲ್ ಕಾಲೇಜ್, ಇಂಜನಿಯರಿಂಗ್ ಕಾಲೇಜ್ ಎಂದು ಸಮ್ಮನೆ ಹಂಬಲಿಸುತ್ತಿದ್ದರು. ಅಲ್ಲಿಗೆ ಹೋದಾಗಲೂ ಸಹ, ತನ್ನ ಸಹಮಾನವರ ನೋವು-ನರಳು ವಿಕೆಯನ್ನು ನಿವಾರಿಸುವ ಒಬ್ಬ ವೋದಿ, ಒಬ್ಬ ಕೋಟ್ನೀಸ್ ಅಥವ ನಾಡಿನ ಒಣಗಿದ ಜೀವನ ಚಿಗುರಿಸಿದ ಒಬ್ಬ ಸರ್.ಎಂ.ವಿ ಇವರಂತಾಗುವ ಹೆಬ್ಬಯಕೆ, ಉನ್ನತಾದರ್ಶಗಳು ಅವರ ಹೃದಯ ವೀಣೆಯನ್ನು ಮೀಟುತ್ತಿರಲಿಲ್ಲ. ಅದಕ್ಕೆ ಬದಲು 'ಎಷ್ಟು ಜನರಿಗೆ ಸೂಜಿ ಚುಚ್ಚಿ, ನೀರೌಷದಿ ಹೊಯ್ದು, ಹಣ ಸುಲಿಗೆಮಾಡೋಣ, ಯಾರ ಕೈಂಕರ್ಯ ಮಾಡಿ ಪ್ರೊಬೇಷನರಿ ಇ. ಇಂಜನಿಯರ್ ಗಿರಿ ದಕ್ಕಿಸೋಣ, ಯಾರ ಕುವರಿಯ ಕೈಹಿಡಿದು ಅಮೇರಿಕದ ಭೋಗರಾಜ್ಯಕ್ಕೆ ಹಾರಲು ಗಂಟು ಹೊಡೆಯೋಣ' ಎಂಬ ಕ್ಷುಲ್ಲಕ ಲಾಲಸೆಗಳೇ ಮುಕ್ಕಾಲು ಪಾಲು ವಿದ್ಯಾರ್ಥಿಗಳ ಎದೆಯಲ್ಲಿ ಮನೆಯುತ್ತಿದ್ದವು... ಅವರೆಲ್ಲರಿಗೂ ತಮ್ಮ ಸುಖ ಮಾತ್ರ ಬೇಕಾಗಿತ್ತು. ತಮ್ಮ ಭಾಗ್ಯಲತೆ ಮಾತ್ರ ಚಿಗುರ ಬೇಕಾಗಿತ್ತು.

ಅವನು ಈ ವಿಪನ್ನಾವಸ್ಥೆ, ಈ ದೋಷ ಪೂರ್ಣ ಮನೋಸ್ಥಿತಿ, ನಿಷ್ಕಪಟಿ ವಿದ್ಯಾರ್ಥಿಗಳ ತಿಳಿಮನವನ್ನು ಹೇಗೆ ಹೊಕ್ಕಿತು ಎಂದು ಚಿಂತಿಸಿದ.

ಈ ಪರಿವರ್ತನೆಯಿಂದ ಅವನಿಗೆ ವಿಶೇಷ ಸೋಜಿಗವಲ್ಲದೆ ಅತ್ಯಂತ ಖೇದವೂ ಉಂಟಾಗಿತ್ತು. ಈಗ ಕೆಲವೇ ವರ್ಷಗಳ ಹಿಂದೆ ವಿದ್ಯಾರ್ಥಿಗಳು ಈ ರೀತಿ ಯೋಚಿಸುತ್ತಿರಲಿಲ್ಲ. ಆಗ ಎಲ್ಲರೂ ದೇಶ ಸೇವೆ, ಸಮಾಜಸೇವೆಗಾಗಿ ಹಾತೊರೆಯುತ್ತಿದ್ದರು. ಪ್ರೇಮ, ತ್ಯಾಗ, ದೀಕ್ಷಾ ಮನೋಭಾವಗಳನ್ನು ಮೆಚ್ಚುತ್ತಿದ್ದರು. ಅವುಗಳ

ಗಾಗಿ ಜೀವನ ಮುಡಿಪಿಡಲು ಸಿದ್ಧರಿರುತ್ತಿದ್ದರು.

ಅಂದಿನ ಮತ್ತು ಇಂದಿನ ಉನ್ನತ-ವಿಕೃತ ಆದರ್ಶಗಳ ನಡುವಣ ಕಮರಿಯ ಕಗ್ಗತ್ತಲಲ್ಲಿ ರಾಜಣ್ಣನ ಮನ ಆಲೋಚನೆಯ ಪಂಜು ಹಿಡಿದು ಆಳ ಆಳವಾಗಿ ಕೆಳಗಿಳಿಯುತ್ತಿತ್ತು. ಆಗ,

"ಏನು ರಾಜು, ಏನನ್ನೋ ತುಂಬಾ ಆಲೋಚಿಸುವಂತೆ ಕಾಣುತ್ತಿದೆಯಲ್ಲ!"

ಎಂದು ಚಿರಪರಿಚಿತವಾಣಿಯೊಂದು ಹೇ ', ತಕ್ಷಣ ಗಟ್ಟಿಯಾಗಿ ಸೀಸಿದ ಶಬ್ದ ಕೇಳಿಸಿತು ರಾಜಣ್ಣ ಗಾಬರಿಯಾಗಿ ಎಚ್ಚೆತ್ತು ನೋಡಿದ.

ಎದುರಿಗೆ ಕೇಶವಯ್ಯಂಗಾರರು ಬಂದಿರುವುದು ಕಾಣಿಸಿತು. ಕೂಡಲೇ ಅಚ್ಚರಿ-ಸಂತಸಗಳಿಂದ ಮುಗುಳುನಗೆ ಬೀರುತ್ತಾ, 'ಬನ್ನಿ' ಎಂದು ತಾನು ಕುಳಿತಿದ್ದ ವಿರಾಮ ಕುರ್ಚಿಯನ್ನು ಅವರಿಗೆ ತೆರವು ಮಾಡಿಕೊಟ್ಟ. ಅವರು 'ಇನ್‌ಹೇಲರ್' ಅನ್ನು ಆಳವಾಗಿ ಆಘ್ರಾಣಿಸುತ್ತಾ, ಅದರಲ್ಲಿ ಕುಳಿತುಕೊಂಡು, ರಾಜಣ್ಣನನ್ನು ಕುಳಿತುಕೊಳ್ಳುವಂತೆ ಹೇಳಿದರು. ಅವನು ಎದುರಿನ ಬೆತ್ತದ ಕುರ್ಚಿಯಲ್ಲಿ ಕುಳಿತು,

"ಏಕೆ, ಮೈಯಲ್ಲಿ ಸ್ವಸ್ಥವಿಲ್ಲವೇನು?"

ಎಂದು ವಿಚಾರಿಸಿದ. ಅವರು,

"ಅಂಥಾದ್ದೇನಿಲ್ಲ. ಬೆಳಗಿನಿಂದ ಏಕೋ ಸ್ವಲ್ಪ ನೆಗಡಿಯಾಗಿದೆ, ಅಷ್ಟೆ. ಅಲ್ಲಾ, ನಾನು ಬಂದಿದ್ದನ್ನು ಎರಡು ನಿಮಿಷದವರೆಗೂ ಗಮನಿಸದಿರುವಂಥ ಆಲೋಚನೆ ಏನು?.. ಕಾಲೇಜು ಪಾಠಗಳು ರುಚಿಸುತ್ತಿಲ್ಲವೇ?"

ಎಂದು ವಿಚಾರಿಸಿದರು. ಅವನು ತಲಬಾಗಿಸಿ, ಒಂದು ಕ್ಷಣ ಯೋಚಿಸಿ, ಗಂಭೀರವಾಗಿ,

"ಕಾಲೇಜು ಪಾಠಗಳ ವಿಷಯ ಅಲ್ಲ. ನನ್ನ ಕಾಲೇಜಿನ ಸಹಪಾಠಿಗಳನ್ನು ಕುರಿತು ಯೋಚಿಸುತ್ತಿದ್ದೆ"

ಎಂದು ತನ್ನ ಮನಸ್ಸಿನಲ್ಲಿದ್ದುದೆಲ್ಲವನ್ನೂ ಅವರಿಗೆ ಹೇಳಿದ ಅವರು ಅದೆಲ್ಲವನ್ನೂ ಆಸಕ್ತಿ-ಸಹಾನುಭೂತಿಯಿಂದ ಕೇಳಿ ಕೆಲವು

ಕ್ಷಣ ಮೌನವಾದರು. ಅನಂತರ ಹೇಳಿದರು.

" ನೋಡು ರಾಜು, ಈ ಪರಿವರ್ತನೆಗೆ ವಿದ್ಯಾರ್ಥಿಗಳಲ್ಲ ಕಾರಣ. ಅವರು ಜೀವಿಸಿ, ಉಸಿರಾಡುತ್ತಿರೋ ವಾತಾವರಣ ಕಾರಣ ಅವರು ಒಂದು ದೇಶದ ಪ್ರಸ್ತುತ ಮನೋಭಾವ, ಕನಸು-ಆಶೋತ್ತರಗಳ ಸೂಕ್ಷ್ಮ ಭಾರಮಾಪಿ. ಅವರೆಲ್ಲಾ ತಾವಿರುವ ವಾತಾವರಣದ ಸ್ವಭಾವಕ್ಕನುಗುಣವಾಗಿ ಹೊಯ್ದಾಡುತ್ತಾರೆ ಈಗ ಕೆಲವಾರು ವರ್ಷಗಳ ಹಿಂದೆ ಧ್ಯೇಯಶೀಲತೆ, ತ್ಯಾಗ, ಕೆಚ್ಚು, ಸೇವೆಯ ವಾತಾವರಣ ನಮ್ಮ ದೇಶವನ್ನಾವರಿಸಿತ್ತು ಆಗ ವಿದ್ಯಾರ್ಥಿಗಳೂ ಉನ್ನತ ಮನೋಭಾವದವರಾಗಿದ್ದರು ಆದರೆ ಈಗ?.... ನೀನೇ ನೋಡಿರುವೆಯಲ್ಲ, ಸಾರ್ವಜನಿಕ ಜೀವನ ಎಷ್ಟು ಹೊಲಸೆದ್ದಿದೆ. ಸ್ವಾರ್ಥ, ಮೋಸ, ಅಪ್ರಾಮಾಣಿಕತೆ, ಹುಂಬತನ ಇವು ದಳ್ಳುರಿಯಂತೆ ಮೇಲೆದ್ದಿವೆ. ಹಸಿವು–ನಿರುದ್ಯೋಗ–ಸಿರಾಸೆ–ಭ್ರಮೆ–ನಿರಸನಗಳ ಪೆಡಂಭೂತ, ದೇಶದ ಉದ್ದಗಲಕ್ಕೂ ಕಾಲ್ಚಾಚಿ ನಿಂತು ಎಲ್ಲರನ್ನೂ ಉರಿಗಣ್ಣಿನಿಂದ ಬೆದರಿಸುತ್ತಿದೆ. ಈ ಕೆಟ್ಟ ವಾತಾವರಣದಲ್ಲಿ ವಿದ್ಯಾರ್ಥಿಗಳೂ ಕೆಟ್ಟುಹೋಗಿದ್ದಾರೆ. ಹಿಂದಿನ ತಮ್ಮ ಉಚ್ಚ ಸಂಪ್ರದಾಯವನ್ನೇ ಮರೆತುಬಿಟ್ಟಿದ್ದಾರೆ. ಇದು ತುಂಬಾ ವಿಷಾದಕರ ಸಂಗತಿ ರಾಜು. ಅನೇಕ ದುರ್ಘಟನೆಗಳಿಗಿಂತ ಇದು ಒಂದು ದೊಡ್ಡ ರಾಷ್ಟ್ರೀಯ ದುರ್ಘಟನೆ"

ಎಂದರು. ಆದರಿಂದ ರಾಜಣ್ಣನ ಮನದ ಕಗ್ಗತ್ತಲು ಅರ್ಧಕ್ಕರ್ಧ ಹರಿಯಿತು. ಅವನು ಒಂದು ದಿನ ಭಾನುವಾರ ಸುಖಾನ್ವೇಷಿಗಳಾಗಿ ಅಲೆಯುತ್ತಿದ್ದ ಈ ಮಹಾ ನಗರದ ಜನರನ್ನು ನೋಡಿದ್ದ ನೆನಪು ಮನಕ್ಕೆ ನುಗ್ಗಿತು. ಅವರೆಲ್ಲರೂ ಈಗವನಿಗೆ 'ಇರುವಷ್ಟು ದಿನ ಎಷ್ಟಾದರೂ, ಹೇಗಾದರೂ ಮಜಾ ಮಾಡಿ ಹೋಗು. ನಾಳೆ ಏನೆಂದು ಯೋಚಿಸಬೇಡ, ಪಕ್ಕದವನು ಏನಾದನೆಂದು ಚಿಂತಿಸಬೇಡ' ಎನ್ನುವ ಮನೋಭಾವದವರಂತೆ ಕಂಡರು. ಅಂಥ ಅನಾರೋಗ್ಯ ಮನಸ್ಸುಳ್ಳ ಜನರು ಸ್ವಾತಂತ್ರ್ಯಕ್ಕೆ ಅರ್ಹರೆ? ಅವರಿಂದ ದೇಶ ಕಟ್ಟುವ ಕಠಿಣ ದುಡಿಮೆ ಸಾಧ್ಯವೆ? ಎಂಬ

ಅನುಮಾನ ಬಂದಿತು. ಅದೇ ರೀತಿ ತನ್ನ-ಸಹ ವಿದ್ಯಾರ್ಥಿಗಳ ಸ್ಥಿತಿ-ಗತಿಗಳ ನೆನಪೂ ಅವನ ಮನಸ್ಸನ್ನು ಮುತ್ತಿದುವು.

ಅವನು ಕ್ಲಾಸಿನಲ್ಲಿ ಕುಳಿತಾಗಲೆಲ್ಲಾ ತನ್ನ ಸುತ್ತಮುತ್ತಲಿನವರನ್ನು ಸೂಕ್ಷ್ಮವಾಗಿ ಅವಲೋಕಿಸುತ್ತಿದ್ದ. ಆಗ ಅವನಿಗೆ ಅರೆಹೊಟ್ಟೆಯಲ್ಲಿ, ಸೊರಗಿದ ಮೈ, ಕಾಫಿ-ತಿಂಡಿಗಳಿಲ್ಲದೆ ಸಪ್ಪೆಯಾದ ಮುಖ, ಅತಿ ಓದಿನಿಂದ ಮುಂಕಾದ ಕಣ್ಣು, ಸ್ನಾನವಿಲ್ಲದೆ ವಾಸನೆ ಹೊಡೆಯುವ ದೇಹ, ಹರುಕು ಉಡುಪು, ಮಳೆಯಲ್ಲಿ ನೆನೆದ ತಲೆ, ಇವುಗಳಲ್ಲಿ ಬರುವ ಎಷ್ಟೋ ಮಂದಿ ವಿದ್ಯಾರ್ಥಿಗಳು ಕಂಡುಬಂದಿದ್ದರು.

ಅವರೆಲ್ಲರೂ ತಮ್ಮ ಸ್ಥಿತಿ-ಗತಿಗಳನ್ನು ಉತ್ತಮಪಡಿಸಿಕೊಳ್ಳಲು ಮಾತ್ರ ಹಾತೊರೆದರೆ, ಅವರ ತಪ್ಪಾದರೂ ಏನು? ಎಂದು ಈಗ ತೋರಿತು. ಆದರೆ ಮರುಕ್ಷಣವೇ,

'ಅವರಿಗೆ ತಮ್ಮ ಸುಖವನ್ನೇ ಅಲ್ಲದೆ, ದೇಶದ ಸುಖವನ್ನೂ ಸಾಧಿಸುವ ಆಸೆ-ಸಾಮರ್ಥ್ಯಗಳು ಇಲ್ಲವೇ?... ಆ ಭಾಗವೇಕೆ ಅವರೆದೆಯ ಪಾತಾಳವನ್ನಪ್ಪಿದೆ?....ಅದೇಕೆ ಸಚೇತನವಾಗಿ ಮೇಲೆ ಬರಲೊಲ್ಲದು? ಕ್ರಿಯಾತ್ಮಕವಾಗಿ ಹೊಸ ನಾಡನ್ನೇ ಕಟ್ಟಲೊಲ್ಲದು?' ಎಂದು ಮರುಗಿದ. ಅದನ್ನೇ ಎದುರಿಗೆ ಕುಳಿತಿದ್ದ ಕೇಶವಯ್ಯಂಗಾರರಿಗೆ ಹೇಳಿಕೊಂಡ ಆಗ ಅವರು ವಿಷಾದದಿಂದ ಹೇಳಿದರು :

'ಇಲ್ಲ ರಾಜು, ದೇಶದ ಸುಖದ ಹಂಬಲ ಮುಂತಾದುವೆಲ್ಲ ವಿದ್ಯಾರ್ಥಿಗಳ ಎದೆಯಲ್ಲೇ ಏಕೆ, ಸುಸಂಸ್ಕೃತ ನಾಗರೀಕರ ಎದೆಯಲ್ಲೂ ಈಗಲೇ ಮೇಲಕ್ಕೇಳಲಾರದು. ಈಗ ವಿಚಾರಪರರು ಸಹ ಒಂದು ದೊಡ್ಡ ಮಾನಸಿಕ ಇಕ್ಕಟ್ಟಿಗೆ ಸಿಕ್ಕಿಬಿದ್ದಿದ್ದಾರೆ. ಈಗಿನ ಅನಿಶ್ಚಿತ ಪರಿಸ್ಥಿತಿಯಲ್ಲಿ ತಾವೆಲ್ಲಿ ಕಷ್ಟದ ಕುಲುಮೆಗೆ ಜಾರುತ್ತೇವೋ ಎಂದು ಹೆದರಿ, ಅವರು ಕುಳಿತಲ್ಲೇ ನಡ್ಡಿಲ್ಲದೆ ಕುಳಿತಿದ್ದಾರೆ. ತಮ್ಮ ವೈಯಕ್ತಿಕ ಸುಖದ ಆಸೆ, ಮತ್ತು ತಮ್ಮೆದೆಯ ವಿಶಾಲ ಮಾನವೀಯ ಭಾವನೆಯ ಹಂಬಲ - ಇವೆರಡನ್ನೂ ಸಮಾಜ ಜೀವನದಲ್ಲಿ ಕ್ರಿಯಾತ್ಮಕವಾಗಿ ಸಮತೂಗಿಸಿಕೊಂಡು ಹೋಗುವ ಶಕ್ತಿ, ಉತ್ಸಾಹ ಅವರಿಗೆ ಇಲ್ಲವಾಗಿದೆ. ಅದಕ್ಕೆ ಅವರ ಅಂಜಿಕೆಯೆಷ್ಟು ಕಾರಣವೋ,

ದೇಶದ ಆಡಳಿತ ಸೂತ್ರ ಹಿಡಿದಿರುವ ಜನರ ಪಿಸುಣತ್ವ, ಹುಂಬತನವೂ ಅಷ್ಟೇ ಕಾರಣ. ಅವರ ಸಂಶಯ ಭೀತಿಗಳನ್ನು ನಿವಾರಿಸಿ, ಅವರನ್ನು ರಾಷ್ಟ್ರ ನಿರ್ಮಾಣ ಕಾರ್ಯದಲ್ಲಿ ಕೇಂದ್ರೀಕರಿಸಿ, ಅಂತಹ ಉತ್ಸಾಹೀ ಜನತೆಯ ಮಹಾಪ್ರವಾಹವನ್ನುಕ್ಕೇರಿಸುವ ಉತ್ತೇಜಕ ಸನ್ನಿವೇಶವಾಗಲೀ, ಅದರ ಕವಲು ಕವಲುಗಳ ಪೂರ್ಣಪ್ರಯೋಗ ಮಾಡಿಕೊಳ್ಳುವ ಸಮರ್ಥ ಕುಶಲ ನಿರ್ದೇಶಕ ಶಕ್ತಿಯಾಗಲೀ ಇಂದು ದೇಶದಲ್ಲಿಲ್ಲ. ಅಂಥ ಶಕ್ತಿಸಿಂಧು ದೇಶದಲ್ಲಿ ಮತ್ತೊಮ್ಮೆ ಉಕ್ಕಿ ಹರಿದಾಡುವವರೆಗೂ ನಮ್ಮ ಜನ ಈ ಮರುಭೂಮಿಯ ಮೂಲಕವೇ ತಮ್ಮ ತಮ್ಮ ಒಂಟಿದಾರಿಗಳಲ್ಲಿ ನಡೆದುಹೋಗಬೇಕು" ಎಂದರು.

ಇದೆಲ್ಲವನ್ನೂ ಕೇಳಿ ರಾಜಣ್ಣ ಗಂಭೀರ ಮನಸ್ಕನಾದ. ಕೇಶವಯ್ಯಂಗಾರರೂ ಮುಂದಿನ ದಾರಿ ತಿಳಿಯದವರಂತೆ ಮೌನವಾದರು.

ಇಬ್ಬರೂ ಆಳವಾದ ಆಲೋಚನೆಯಲ್ಲಿ ಮುಳುಗಿರುವಾಗ, ಅವರ ಆಲೋಚನಾಧಾರೆಯನ್ನು ನಿರ್ನಾಮಮಾಡುವ ವ್ಯಕ್ತಿಯೊಂದು ಅವರ ಮುಂದೆ ಗಟ್ಟಿಯಾಗಿ ಉಂಡು ತೇಗುತ್ತಾ ಬಂದಿತು. ಅವರೇ ಕೆಳಗಿನ ಮನೆಯ ರಂಗಪ್ಪ. ಅವರಿಗೆ ತಮ್ಮ ಜಾತಿಯ ಮಿನಿಸ್ಟರೊಬ್ಬರ ಸುದ್ದಿ ಮಾತ್ರ ಬೇಕು. ಅವರ ದೃಷ್ಟಿಯಲ್ಲಿ ಇನ್ನೆಲ್ಲ ಜಾತಿಯ ಮಂತ್ರಿಗಳೂ ಶುದ್ಧ ಅಸಮರ್ಥರು. ಈಗಲೂ ಅವರು ತಮ್ಮ ಆ ಹೀರೋ ಸಾರುವ ಸುದ್ದಿಯನ್ನೇ ಒದಿಯುವ ಗಂಟಲಲ್ಲಿ ಹೊರತಗೆದರು. ಅಷ್ಟು ಹೊತ್ತಿಗೆ ಅವರನ್ನು ಹತೋಟಿಯಲ್ಲಿಡಬಲ್ಲ ಚಂದ್ರಪ್ಪನೂ ಬಂದರು.

ಸ್ವಲ್ಪಹೊತ್ತು ಮಾತುಕಥೆಗಳಾದ ನಂತರ, ಕೇಶವಯ್ಯಂಗಾರರು ಕೆಮ್ಮುತ್ತಾ ಊಟಕ್ಕೆ ಹೋದರು. ಚಂದ್ರಪ್ಪ ರೇಡಿಯೋ ತಿರುಗಿಸಿ, ರಂಗಪ್ಪನವರನ್ನು ಅದರ ಮುಂದೆ ಕೂರಿಸಿ, ರಾಜಣ್ಣನೊಡನೆ ತಾವೂ ಊಟದ ಮನೆಗೆ ನಡೆದರು. 'ಪ್ರಿಚಿ' ನಿಲಯದಿಂದ ಬರುತ್ತಿದ್ದ ಯಾವನೋ 'ಕುಂಭಕೋಣಂ ಭಾಗವತರ್'ನ ಕಿರುಚುವಿಕಗೆ ರಂಗಪ್ಪ ತಲೆದೂಗುತ್ತಾ, ತಾಳ ಹಾಕಿಕೊಂಡು ಕುಳಿತರು.

ರಾತ್ರಿ ಮಲಗಿದಾಗ ರಾಜಣ್ಣನ ಮನಸ್ಸನ್ನು ಆಲೋಚನೆಗಳೊಂದು ಸೇನೆಯೋ ಆಕ್ರಮಿಸಿತ್ತು. ತಾನು ಇದುವರೆಗೂ ಕಂಡಿದ್ದ

ಜೀವನದ ವೈವಿಧ್ಯ ಪೂರ್ಣಮುಖಗಳು ಅನೇಕ ರೀತಿಯಲ್ಲಿ ಅವನನ್ನು ಕಾಡುತ್ತಿದ್ದುವು. ರೈತರ ಕಷ್ಟ, ಸಿರ್ಗತಿಕರ ಗೋಳು, ವಿದ್ಯಾರ್ಥಿಗಳ ತೊಂದರೆ, ಜನರ ದುಸ್ಥಿತಿ, ಕೆಲವರ ಸ್ವಚ್ಛಂದ ಭೋಗಲಾಲಸೆ ಮುಂತಾದ ವಿಚಾರಗಳು ಅವನನ್ನು ಸುಮ್ಮನಿರಿಸುತ್ತಿರಲಿಲ್ಲ. ಜೀವನದಲ್ಲಿ ಎಲ್ಲೆಲ್ಲೂ ತೃಪ್ತಿಪಡಿಸಬಹುದಾದ ಅತೃಪ್ತಿ. ಶುದ್ಧಿಗೊಳಿಸಬಹುದಾದ ಅಶುದ್ಧತೆ, ಸುಧಾರಿಸಬಹುದಾದ ದೋಷಗಳು, ಸಿರ್ನಾಮ ಮಾಡಬೇಕಾಗಿದ್ದ ಅಸಹ್ಯವಿಚಾರಗಳು ತುಂಬಿದ್ದುವು. ಸುದೃಢವಾದ ಸುಸಂಸ್ಕೃತ ಮಾನವೀಯ ಬಾಳಿಗಿಂತಲೂ ಕೂಳಿನ ಬೇಟೆಯೇ ಮನುಷ್ಯನ ಮುಕ್ಕಾಲು ಶಕ್ತಿಯನ್ನು ಪೋಲುಗೊಳಿಸುತ್ತಿತ್ತು: ಉತ್ಸಾಹ ಚೈತನ್ಯಗಳನ್ನು ಸಿರ್ನಾಮ ಮಾಡುತ್ತಿತ್ತು. ಒಂದು ಸುಂದರ ಬಾಳ್ವೆ ನಡೆಸಲು ಸರ್ವರೀತಿಯಿಂದಲೂ ಉತ್ತಮವಾದ ಮತ್ತು ಸರ್ವರಿಗೂ ಅನ್ವಯಿಸುವಂಥ ಜೀವನಮಾರ್ಗ ಯಾವುದು? ಸಾಮಾಜಿಕ ಆರ್ಥಿಕ ವ್ಯವಸ್ಥೆ ಯಾವುದು? . ಇವೇ ಮೊದಲಾದ ವಿಚಾರಗಳ ಚಕ್ರ ರಾಜಣ್ಣನ ಮನಸ್ಸಿನಲ್ಲಿ ತಿರುಗುತ್ತಿತ್ತು. ಆ ಸಮಸ್ಯೆಗಳ ಪರಿಹಾರಕ್ಕೆ ತನ್ನದೇ ಆದ ಒಂದು ಸ್ವತಂತ್ರ ಮಾರ್ಗವನ್ನು ಈ ಗಲಭೆ ಗೊಂದಲದ ಜಗತ್ತಿನಲ್ಲಿ ಕೆತ್ತಿಕೊಂಡು ಮುಂದೆ ಸಾಗುವ ಮಹತ್ಪ್ರಯತ್ನದ ಸಿರ್ಧಾರ ಅವನ ಕೆರಳಿದ ಚಿತ್ತದಲ್ಲಿ ಕುದಿಕುದಿದು ರೂಪುಗೊಳ್ಳುತ್ತಿತ್ತು.

ಅನೇಕ ರಾತ್ರಿ ಹೀಗೆ ಯೋಚನೆಯ ಬೃಹತ್ ಪ್ರವಾಹ ಮನಸ್ಸಿನ ಸುರುಳಿಯಲ್ಲಿ ಉದ್ರೇಕದಿಂದ ಸುತ್ತಿಸುತ್ತಿ ರಮಸವಾಗ ಏದ್ದರೆ, ಎದೆ ಕುದಿಕುದಿದು, ಶಾಂತಿ ಅಮೃತದಂತೆ ಕಂಡು, ಇವೆಲ್ಲ ಚಿಂತೆಗಳಿಂದ ಕಟ್ಟಕಡೆಗಾದರೂ ವಿಸ್ಮೃತಿ ಹೊಂದುವ ಮಾರ್ಗ ಕಾಣದೆ, ಅವನು ಹಾಸಿಗೆಯಲ್ಲೇ ನಿದ್ರಾಹೀನನಾಗಿ ಬೆಳಗಿನವರೆಗೂ ಹೊರಳಾಡುತ್ತಿದ್ದ. ಇಂದೂ ಸಹ ಅವನಿಗೆ ಹಾಗೇ ಆಗಿತ್ತು.

ಸುಮಾರು ಎರಡೂವರೆ ಗಂಟೆಯ ಸಮಯದಲ್ಲಿ ಹಾಸಿಗೆಯಿಂದ ಮೇಲೆದ್ದು ದೀಪ ಹಾಕಿದ. ಕುರ್ಚಿಯಲ್ಲಿ ಕುಳಿತು ಮೇಜಿನ ಮೇಲೊರಗಿ, ಕೈಗೆ ಸಿಕ್ಕಿದ ಪುಸ್ತಕಗಳನ್ನೆಲ್ಲಾ ಓದತೊಡಗಿದ.

ಕಾಲೇಜಿನ ಗೆಳೆಯನೊಬ್ಬ ಕೊಟ್ಟಿದ್ದ ಹಾವ್, ಲಾರೆನ್ಸ್, ಕ್ರೋನಿನ್, ಇವರ ಯಾವ ಕಾದಂಬರಿಯೂ ರುಚಿಸಲಿಲ್ಲ.

ಕೊನೆಗೆ ಇಂಗ್ಲಿಷ್ ಟಿಪ್ಪಣಿಯನ್ನೆಳೆದುಕೊಂಡ. ಅಲಂಕಾರ, ಹೂವು ಬಳ್ಳಿಗಳು, ಮುಂತಾದ ಸುಂದರ ಚಿತ್ರ ಕೆಲಸ ಅದರ ಮುಖ ಪತ್ರದ ಅಂಚನ್ನು ಆಕರ್ಷಕ ಗೊಳಿಸಿದ್ದುವು. ಅದನ್ನೇ ಸ್ವಲ್ಪ ಹೊತ್ತು ನೋಡಿ, ಪುಸ್ತಕ ತೆರೆದು ಒಂದೆರಡು ಪುಟ ಓದಿದ ನಂತರ ಕಬ್ಬಿಣದಷ್ಟು ಭಾರವಾದ ತಲೆಯನ್ನು ಕೈಯಲ್ಲಿ ಹೊತ್ತು ಪುಸ್ತಕ ಮುಚ್ಚಿದ. ಅದೂ ಅವನ ಬೇಸರ ಕಳೆಯಲು ಸಮರ್ಥ ವಾಗಿರಲಿಲ್ಲ. ಕೊನೆಗೆ ಮತ್ತೊಮ್ಮೆ ಆ ಪುಸ್ತಕದ ಮುಖಪತ್ರವನ್ನೇ ಎವೆಯಿಕ್ಕದೆ ..ನೋಡಿದ. ಅದರ ಮಧ್ಯದಲ್ಲಿ,

ಶಾಂತ

ಎಂದು ಅಂದವಾಗಿ ಬರೆದಿತ್ತು. ಅದನ್ನೇ ಬಹು ಹೊತ್ತು ನೋಡಿದ. ಅವನ ಕಣ್ಣಮುಂದೆ ನವಿನಗೆಯ ಆ ಸುಂದರ ಯುವತಿಯೇ ಕನಸಿನ ಕುಸುಮದಂತೆ ಬಂದು ನಿಂತಳು. ರಾಜಣ್ಣ ತನ್ನ ಬೆಂದ ತಲೆಯನ್ನು ಅದರ ಮೇಲಿರಿಸಿ, ಮೈಮರೆತ. ಆ ಭ್ರಾಂತಿಯಲ್ಲಿಯೇ.

'ಶಾಂತ, ನೀನು ಶಾಂತ ಪ್ರಕೃತಿಯವಳು!... ಶಾಂತಿಯನ್ನೆರೆ ಯುವವಳು! ಶಾಂತಿಯ ಶೀತಲ ಸರಸ್ಸು!.. ಅಲ್ಲವೆ?'

ಎಂದು ಬರೆದುಬಿಟ್ಟ!!

ಕೂಡಲೇ ಆ ಮೈಮರೆವಿನಿಂದ ಮೇಲೆದ್ದು ಓದಿದ. ತಾನೇನು ಬರೆದಿರುವೆನೆಂಬುದನ್ನು ಓದಿ ಅವನಿಗೆ ತುಂಬಾ ನಾಚಿಕೆಯಾಯಿತು ಅತ್ಯಂತ ಸೋಜಿಗವಾಯಿತು.

'ಥೂ,....ಇದೇನು ಮಾಡಿಬಿಟ್ಟೆ!....ಹೊಡೆದು ಹಾಕಿಬಿಡೋಣ' ಎಂದುಕೊಂಡ. ಆದರೆ ಅದನ್ನು ಹೊಡೆದು ಹಾಕಿ ಸುಂದರ ಮುಖ ಪತ್ರವನ್ನೆಲ್ಲಾ ಚಿತ್ತು ಮಾಡಿ ವಿಕಾರ ಗೊಳಿಸಬೇಕಲ್ಲಾ ಎಂದು ವಿಷಾದ ಪಟ್ಟ. 'ಎಂಥಾ ತಪ್ಪು ಮಾಡಿದೆ!' ಎಂದು ತನ್ನ ಕೆನ್ನೆಗೆ ತಾನೇ ಹೊಡೆದುಕೊಂಡ. ಅದನ್ನು ಓದಿ ಅವಳ ಮುಖ ಹೇಗಾಗು

ವುದೋ ಎಂದು ಕಲ್ಪಿಸಿಕೊಂಡು ಅಂಜಿದ. ಕೊನೆಗೆ ಅವನ ಎಲ್ಲ ಆಲೋಚನೆಗಳೂ ಓಡಿಹೋಗಿ ಈ ಅಚಾತುರ್ಯದ ಪರಿಹಾರಮಾರ್ಗದ ಯೋಚನೆಯೊಂದೇ ಅವನ ಮನಸ್ಸಿನಲ್ಲುಳಿಯಿತು. ಈ ಹೊಸ ಚಿಂತೆ ಯಾತನಾಮಯವಾಗಿರಲಿಲ್ಲ; ಮಧುರತರವಾಗಿತ್ತು, ಕೌತುಕಮಯವಾಗಿತ್ತು, ಸ್ವಲ್ಪ ಸ್ವಲ್ಪ ಅನುಮಾನಕರವಾಗಿಯೂ ಇತ್ತು. ಅದನ್ನು ಆಳ ಆಳವಾಗಿ ಯೋಚಿಸಿದಂತೆಲ್ಲ ಶಾಂತಳ ಮೋಹಕವದನವೇ ಅವಳ ಹೊಳಪು ನಯನಗಳೇ, ಅವಳ ಕಿರುನಗೆಯ ಕೆಂಪು ತುಟಿಗಳೇ, ಗಾಳಿಗೆ ಹಾರಾಡುವ ಮುಂಗುರುಳುಗಳೇ ಅವನ ಕಣ್ಣಿಗೆ ಕಟ್ಟಿದಂತೆ ನಿಲ್ಲುತ್ತಿತ್ತು. ಅವನ ಬೆಂದ ಕಣ್ಣಿವೆಗಳ ಮೇಲೆ ಬೀಳುತ್ತಿತ್ತು.... ಅಲ್ಲಿ ಅವು ತಂಗಾಳಿಗೆ ಅತ್ತಿತ್ತ ಹೊರಳುವ ಲಾಸ್ಯದೊಡನೆಯೇ ಅವನ ಕಣ್ಣಿವೆಗಳು ನಿದ್ರೆಯಿಂದ ನಿಧಾನವಾಗಿ ಮುಚ್ಚಿಕೊಂಡವು.

೬

ನಾಲ್ಕಾರು ದಿನಗಳಾದ ಮೇಲೆ ಶಾಂತ ಕನ್ನಡ ಪುಸ್ತಕಗಳನ್ನು ಹಿಂತಿರುಗಿಸಿದಳು. ಆಗ ರಾಜಣ್ಣನೂ ಅವಳ ಇಂಗ್ಲಿಷ್ ಟಿಪ್ಪಣಿಯನ್ನು ಹಿಂತಿರುಗಿಸಬೇಕಾಯ್ತು. ಅದನ್ನು ಅಳುಕುವ ಎದೆಯಿಂದಲೇ ಅವಳ ಕೈಗಿತ್ತ. ಅವಳು ಎರಡು ಹೆಜ್ಜೆ ಮುಂದಿಟ್ಟು, ಅವನು ಬರೆದಿರುವುದನ್ನು ಓದಿ, ಅಲ್ಲೇ ನಿಂತಳು. ನಂತರ ಆಶ್ಚರ್ಯದಿಂದ 'ಊಹೂ !.... ನಿನಗೆ ಶಾಂತಿ ಬೇಕೋ !!' ಎನ್ನುವವಳಂತೆ ತಲೆ ಹಾಕಿ, ತನ್ನಲ್ಲಿ ತಾನೇ ಮೌನವಾಗಿ ನಕ್ಕು, ರಾಜಣ್ಣನ ಕಡೆಗೊಮ್ಮೆ ವಿನೋದ ವೀಕ್ಷಣವನ್ನೆಸೆದು ಮಿಂಚಿನಂತೆ ಕೆಳಗಿಳಿದು ಹೋದಳು.

ರಾಜಣ್ಣ ಬೆಪ್ಪನಂತೆ ನಿಂತುಬಿಟ್ಟ. 'ನಾನೇ ಆ ಮೂರ್ಖ ವಾಕ್ಯಗಳನ್ನು ಕೈತಪ್ಪಿ ಬರೆದುಬಿಟ್ಟೆ. ದಯವಿಟ್ಟು ಕ್ಷಮಿಸಿ' ಎನ್ನಲು ಅವನು ಸಮಯ ಕಾಯ್ದಿದ್ದ ಆದರೆ....ಶಾಂತ ಅಲ್ಲೊಂದು ಕ್ಷಣವೂ

ನಿಂತು, ಅವನಿಗೆ ಆ ಅವಕಾಶ ಕೊಡದಂತೆ ಓಡಿ ಹೋಗಿದ್ದಳು ಕಾಲ ಮಿಂಚಿ ಹೋಗಿತ್ತು. ಅವಳು ಆಗಲೇ ಬಹು ದೂರ ಹೊರಟು ಹೋಗಿದ್ದಳು. ಅವನು ತನ್ನ ದಡ್ಡತನಕ್ಕಾಗಿ ನಾಲಿಗೆ ಕಚ್ಚಿ, 'ಅವಳೇನು ತಿಳಿದುಕೊಂಡಳೋ!' ಎಂದು ತಳುಕಿ. ಕೈ ಕೈ ಹಿಸುಕಿ ಕೊಳ್ಳುತ್ತಾ ನಿಂತಲ್ಲೇ ನಿಂತ

ಅವನೆಡೆಗೆ ಅವಳಿಂದು ಬೀರಿಹೋದ ಸಸುನೋಟ, 'ನಿನ್ನ ಈ ತುಂಟತನದ ತಪ್ಪು ಸಿಕ್ಕಿ ಬಿದ್ದಿದೆ.. ನಿನಗೆ ಸರಿಯಾಗಿ ಶಿಕ್ಷೆ ಮಾಡುತ್ತೇನೆ!' ಎಂಬ ಸಂದೇಶ ಬೀರುವಂತಿತ್ತು. ಅವಳ ಆ ಭಂಗಿಯನ್ನೂ, ಭಾವಪೂರ್ಣ ನೋಟವನ್ನೂ, ಅದರಲ್ಲಿ ಮಿನುಗಿದ ಹುಡುಗಾಟಿಕೆಯ ಕುಡಿಮಿಂಚಿನ ಹೊಳಪನ್ನೂ, ಅವನೆಡೆಗೆ ಹೊರಳಿಸಿದ ಕೊರಳಿನ ಸಂಪೂರ್ಣ ವೈಭವವನ್ನೂ, ವಿಜಯೋನ್ಮಾದದಿಂದ ಏರಿಳಿದ ವಕ್ಷಸ್ಥಳವನ್ನೂ, ಅವನಿಂದ ಸಂಪೂರ್ಣವಾಗಿ ಮರೆಯಲಾಗಲಿಲ್ಲ. ರಾತ್ರಿ ಮಲಗಿದಾಗಲೂ ಶಾಂತಳ ಸುಮಧುರ ಮೂರ್ತಿಯೇ ಅವನ ಮನದ ಉದ್ಯಾನದಲ್ಲಿ ಅಪ್ಸರೆಯಂತೆ, ರಾಜಹಂಸೆಯಂತೆ ನಲಿದಾಡುತ್ತಿದ್ದಿತು

ಗುಲಾಬಿವರ್ಣದ ನೀಳ-ಸುಂದರ ವದನ, ನೇರ ಬೈತಲೆಯ ಇಬ್ಭಾಗದಲ್ಲೂ ವಂಕಿಯಂತೆ ತುಸು ಬಾಗಿ, ಭೋಗದಲ್ಲಿ ಬೆಳೆದು, ನಿತಂಬದವರೆಗೂ ಸಾಗಿದ ಒತ್ತಾದ ಕರಿಯ ಕೇಶರಾಶಿ, ಹಂಸಗಾಂಭೀರ್ಯದ ತುಂಬು-ನೀಳ ಕೊರಳು, ಒಮ್ಮೆ ಕೆಚ್ಚು-ಆತ್ಮವಿಶ್ವಾಸದ ಜ್ಯೋತಿಗಳಂತೆ ಪ್ರಜ್ವಲಿಸಿ, ಒಮ್ಮೆ ವಿನೋದ-ಸರಸ-ಚಂಚಲತೆಯ ತಾರೆಗಳಂತೆ ಮಿನು-ಮಿನುಗಿ, ಮತ್ತೊಮ್ಮೆ ಆಳವಾದ, ಪ್ರಶಾಂತವಾದ, ಸಂಪತ್ಭರಿತ ಶಾಂತಿ-ಸರಸ್ಸಿನಂತೆ ಕಂಗೊಳಿಸಿ, ಸದಾಕಾಲವೂ ಜೀವನ ಸೌಂದರ್ಯ-ಮಾಧುರ್ಯಗಳ ಕಾಂತಿ ಬೀರುವ ಬಾದಾಮಿಯಾಕೃತಿಯ ಜೀವಂತ ನಯನಗಳು, ಅವುಗಳ ಹೆಮ್ಮೆಯ ಕಿರೀಟಗಳಂತೆ, ತಲೆಕೆಳಗಾದ ಜೋಡಿ ಕಿಶೋರ-ಚಂದ್ರರಂತೆ, ತೀಡಿ ತಿದ್ದಿದ ಕರಿಯ ಹುಬ್ಬುಗಳು, ನೀಳ ನಾಸಿಕ, ನುಣುಪು ಹಣೆ, ತನ್ನನ್ನು ಕಂಡೊಡನೆಯೇ ಲಜ್ಜೆಯ ಸುಳಿಯಂತೆ ಗುಳಿಬೀಳುವ ತುಂಬು ಮೋಹಕ ಕಪೋಲ, ಮುದ್ದು ಕಿವಿಯ ಮುಂದಿಳಿದಿರುವ ಗುಂಗುರು

ಮುಂಗುರುಳು, ಉನ್ಮಾದಕರ ಕಿರು-ನಗೆಯು ಅಮೃತಪೀಠದಂತಿರುವ ಮಧುಭರಿತ ಕೆಂಪು ತುಟಿಗಳು. ಅವುಗಳನ್ನು ಮೊದಲು ಸ್ಪರ್ಶಿಸಿ, ಅನಂತರ ಇತರರ ಕಿವಿಗೆ ಬೀಳುವ ಮಂಜುಳ ವಾಣಿ, ಆ ವಾಣಿಗೆ ಉಸುರೊತ್ತುವ ಬಡ ಒಡಲು, ತುಂಬಿದೆದೆ, ಅಲ್ಲಿ ಸೊಕ್ಕಿದ ಜೋಡಿ -ಪಾರಿವಾಳಗಳಂತೆ ಹುದುಗಿರುವ ಮುಗ್ಧ-ಸ್ತನಗಳು, ಅಲ್ಲಿಂದ ಕಿರಿ-ಕಿರಿದಾಗುತ್ತಾ ಕೆಳಗಿಳಿದು, ಸಚೇತನ, ಸಂಮೋಹಕ ಕೃಶ-ನಡುವಾಗಿ ಬಳುಕಿ, ಮತ್ತೊಮ್ಮೆ ಮುದಿಸಿದ ಹೂವಿನಂತೆ ಅರಳಿ, ನರ್ತಿಸುವ ನವಿಲಿನಂತೆ ಗರಿ ಕೆದರಿ, ವೀಣೆಯ ಬುರುಡೆಯಂತೆ ಉಬ್ಬಿ, ಅತ್ತಿತ್ತ ಮೃದುವಾಗಿ ತೊನೆದು, ಗಂಭೀರವಾಗಿ, ನಿಧಾನವಾಗಿ, ಜಾಜಿಯ ಹೂವಿನಂತೆ ಕೆಳಗಿಳಿಯುವ ನೀಳ ದೇಹ, ಕೆಂಪು ಪಾದ, ಮುದ್ದು ಕಾಲು ಬೆರಳು, ಹೊಳೆಯುವ ಉಗುರುಗಳು, ತುಂಬು ತೋಳು, ನುಣುಪು ಮುಂಗೈ, ಕೋಮಲ ಕೈಬೆರಳು... ನೋಟ್ಸು ಪಡೆಯು ಬೇಕಾದರೆ ತನ್ನ ಕೈಬೆರಳುಗಳನ್ನು ಸ್ಪರ್ಶಿಸಿದ್ದ ಆ ಜೀವಂತ ಕೈಬೆರಳು-ಗಳು!.. ಅವಳು ಮಿಂಚಿನಂತೆ ಕೆಳಗಿಳಿದಾಗ ಮೇಲೆ ಹಾರಿ, ನೀಲ-ಗಗನದಲ್ಲಿ ಧೂಮದ ಬಿಳಿಯ ರೇಖೆಯಂತೆ, ಅಪ್ಸರೆಯ ನಾಟ್ಯದಂತೆ ಲಾಸ್ಯವಾಡುತ್ತಾ ಕಣ್ಮರೆಯಾದ ಅವಳ ಸೀರೆಯ ಸೆರಗು! . ಅದನ್ನೇ ಕಾತುರದಿಂದ ಹಿಂಬಾಲಿಸುತ್ತಿತ್ತು ರಾಜಣ್ಣನ ಮನ. ಅವಳ ನುಡಿ, ನಗೆ, ನಡೆ, ಕುಡಿ-ನೋಟಗಳ ನೆನಪಿನ-ಕಿರು ಅಲೆಗಳೇ ಅವನ ಮನದ ಪ್ರಶಾಂತ ಸರಸ್ಸನ್ನು ಮೃದುವಾಗಿ ಮಧುರವಾಗಿ ತುಳುಕಿಸಿ-ತುಳುಕಿಸಿ, ಕಲ್ಲೋಲ-ಕಲ್ಲೋಲ ಮಾಡುತ್ತಿದ್ದವು. ಮಾದಕ ಪರಿಮಳವನ್ನೆರೆದು ಅವನನ್ನು ಮೀಯಿಸುತ್ತಿದ್ದುವು.

೬

ಮಾರನೆಯ ಪ್ರಾತಃಕಾಲ ಅವನು ಕಾಫಿ ಕುಡಿಯುತ್ತಾ ಮಹಡಿಯ ಮೇಲೆ ಬಂದು, ಅವಳ ಮನೆಯ ಕಡೆಗೆ ನೋಡಿದ. ಅವಳೂ ಅವನನ್ನೇ ನಿರೀಕ್ಷಿಸುತ್ತಿರುವವಳಂತೆ ತನ್ನ ಮನೆಯ ಮೆಟ್ಟಿಲ ಮೇಲೆ ಕುಳಿತು ಸುಧಾಳಿಗೆ ತಲೆ ಬಾಚುತ್ತಿದ್ದಳು. ಸುಧಾ ಪ್ರತಿ ದಿನವೂ ಶಾಂತಳ ಕೈಯಲ್ಲೇ ತಲೆ ಬಾಚಿಸಿಕೊಳ್ಳುವುದು ರೂಢಿ. ಈಗ ಇಬ್ಬರ ದೃಷ್ಟಿಯೂ ದೀರ್ಘಕಾಲ ಒಂದನ್ನೊಂದು ಮನಃಪೂರ್ತಿಯಾಗಿ ಮುದ್ದಿಸಿದುವು. ರಾಜಣ್ಣನ ನೋಟ ಅವಳೆಡೆಗೆ ಸೌಂದರ್ಯ-ಪೂಜೆಯ ಪುಷ್ಪಗಳನ್ನೆಸೆಯುತ್ತಿತ್ತು. ಶಾಂತಳ ನೋಟ, ಅವಳೆದೆಯ ಗೂಢ-ದಿವ್ಯ ಸರಸ್ಸಿನ ಬಳಿಗೆ, ಅವನೊಬ್ಬನಿಗೆ ಮಾತ್ರ ದಾರಿ ತೋರುವ ಒಲುಮೆಯ ಕಿರಣದಂತೆ....ಆಹ್ವಾನಿಸುತ್ತಿತ್ತು, ಚೈತನ್ಯಧಾರೆ ಬೀರುತ್ತಿತ್ತು. ಅವರಿಬ್ಬರ ಹೃದಯಗಳೂ ಏಕರಾಗದ ಜೋಡಿ ವೀಣೆಗಳಂತೆ, ಮಿಡಿಯತೊಡಗಿದ್ದುವು.

ಐದಾರು ನಿಮಿಷಗಳಲ್ಲಿಯೇ ಸುಧಾ ಓಡುತ್ತಾ ರಾಜಣ್ಣನ ಬಳಿಗೆ ಬಂದಳು. ಅವಳ ಫ್ರಾಕ್‌ನ ಒಳಗಡೆ ಒಂದು ಪತ್ರವಿತ್ತು. ಅದನ್ನು ಕಾತುರದಿಂದ ತೆಗೆದು ರೂಮಿನೊಳಕ್ಕೆ ಹೋಗಿ ಓದ ತೊಡಗಿದ. ಅಷ್ಟರಲ್ಲೇ ನಾಗಮ್ಮ, "ಇನ್ನೊಂದು ಕಪ್ ಕಾಫಿ ಬೇಕೇ ರಾಜು ?" ಎಂದು ಕೇಳುತ್ತಾ ರೂಮಿಗೆ ಬಂದರು. ದಿನವೂ 'ಬೇಕು' ಎನ್ನುತ್ತಿದ್ದವನು ಇಂದು 'ಬೇಡ' ಎಂದು, ಕಾಗದವನ್ನು ಒಂದು ಪುಸ್ತಕದಲ್ಲಿರಿಸಿ ಓದಿದ.

ಮಿ. ರಾಜಣ್ಣ,

ನೀವು ನನ್ನ ನೋಟ್ಸಿನ ಮೇಲೆ ಬರೆದಿರುವುದನ್ನು ನೋಡಿದೆ. ನನ್ನ ಹೆಸರನ್ನು ವಿಶ್ಲೇಷಣಮಾಡಿರುವಿರೋ, ನನ್ನನ್ನು ಹೊಗಳಿರುವಿರೋ ಅಥವಾ ಪ್ರಾರ್ಥಿಸಿರುವಿರೋ ಒಂದೂ

ತಿಳಿಯದು !.... ನೀವು ಏಕೆ ಹಾಗೆ ಬರೆದಿರಿ, ದಯವಿಟ್ಟು ತಿಳಿಸುವಿರಾ ?

ನೋಟ್ಸನ್ನು ನೀವು ಓದಿರಬಹುದು. ಹೇಗಿದೆ, ತಿಳಿಸಿ. ಕನ್ನಡ ನೋಟ್ಸ್ ಬೇಕಾದರೆ ಕಳಿಸುತ್ತೇನೆ

ನಿಮ್ಮ ಗೆಳತಿ
ಶಾಂತ.

ಎಂದಿತ್ತು. ಅದನ್ನು ಓದಿ ರಾಜಣ್ಣ ಸಮಾಧಾನದ ನಿಟ್ಟುಸಿರು ಬಿಟ್ಟ. 'ಸಧ್ಯ, ಒಳ್ಳೆಯ ಹುಡುಗಿಯಪ್ಪಾ !... ರೇಗಿಕೊಳ್ಳಲಿಲ್ಲ.. .ವಿವರಣೆ ಕೊಡುವುದಕ್ಕೇನು, ಒಂದು ನಿಮಿಷದಲ್ಲಿ ಬರೆದು ಕಳಿಸುತ್ತೇನೆ' ಎಂದು ಅವಳಿಗೆ ಉತ್ತರ ಬರೆಯಲು ಕುಳಿತ. ಆದರೆ ಬರೆದ ಉತ್ತರಗಳೊಂದೂ ಸರಿ ಬರಲಿಲ್ಲ ಎಲ್ಲವನ್ನೂ ಹರಿದು ಉಂಡೆ ಕಟ್ಟಿ ಬಿಸಾಡಿದ. ಅಷ್ಟು ಹೊತ್ತಿಗೆ ಕಾಲೇಜಿನ ಸಮಯವಾಗಿತ್ತು. ನಿನ್ನೆಯ ದಿನವೇ ಹಳ್ಳಿಯಿಂದ ಬಂದಿದ್ದ ತನ್ನ ಸೈಕಲ್ ಹತ್ತಿ ಕಾಲೇಜಿಗೆ ಹೊರಟ.

ದಾರಿಯಲ್ಲಿ ಹೋಗುತ್ತಿರುವಾಗ ಶಾಂತ ಮತ್ತು ಅವಳ ಗೆಳತಿಯರ ಕಾಲೇಜು ಬಸ್, ಸೆಂಟ್ರಲ್ ಟಾಕೀಸಿನ ಬಳಿ ಕೆಟ್ಟು ನಿಂತಿತ್ತು. ಅವರೆಲ್ಲರೂ ಇಳಿದು ಮತ್ತೊಂದು ರಿಲೀಫ್ ಬಸ್ಸಿಗಾಗಿ ಕಾಯುತ್ತಿದ್ದರು. ರಾಜಣ್ಣ ಅಲ್ಲಿಗೆ ಬಂದಾಗ ಶಾಂತ ಅವನಿಗೆ ಮೊದಲು ಕಾಣಿಸಿದಳು. ಅವಳು ತನ್ನ ಹತ್ತಾರು ಗೆಳತಿಯರೊಂದಿಗೆ ಬಹು ಸ್ಫೂರ್ತಿಯಿಂದ ಮಾತಾಡುತ್ತಿದ್ದಳು. ಬಹುಶಃ ಬಿ. ಟಿ. ಸಿ ಕಂಪನಿಯನ್ನು ಖಂಡಿಸುವ ಭಾಷಣ ಮಾಡುತ್ತಿರುವಳೇನೋ !.... ಎಂದು ಅವನಿಗೆ ತೋರಿತು. ಯಾರೋ ಗೆಳತಿ ಅವಳಿಗೆ ರಾಜಣ್ಣ ಬರುತ್ತಿರುವ ಸೂಚನೆ ಕೊಟ್ಟಳೇನೋ ! ಅವಳು ತನ್ನ ಮಾತನ್ನು ನಿಲ್ಲಿಸದೆ, ಬೆಣ್ಣೆಯಲ್ಲಿ ಕೂದಲು ತೆಗೆದಂತೆ ಅವನೆಡೆಗೆ ನೋಟ ಹೊರಳಿಸಿದಳು. ರಾಜಣ್ಣ ಅವಳನ್ನು ಕ್ಷಣಕಾಲ ನೋಡಿದ. ಅವರ ಗುಪ್ತ ದೃಷ್ಟಿಮಿಲನವನ್ನು ಹತ್ತಾರು ಗೂಢಚಾರ ನೇತ್ರಗಳು ಕಂಡು,

ತಮ್ಮ-ತಮ್ಮಲ್ಲೇ ಏನೇನೋ ಪಿಸುಗುಟ್ಟಿಕೊಂಡುವು. ಆಗ ರಾಜಣ್ಣ ಗಂಭೀರವಾಗಿ ಮುಂದೆ ನೋಡುತ್ತಾ, ಮನಸ್ಸಿಲ್ಲದ-ಮನಸ್ಸಿನಿಂದ ಸೈಕಲ್ ತುಳಿದು ವೇಗವಾಗಿ ಹೊರಟ.

ಕ್ಲಾಸಿನಲ್ಲಿ ಕುಳಿತಾಗ ಅವಳಿಗೆ ಏನು ಉತ್ತರ ಬರೆಯಬೇಕೆಂಬ ಸಮಸ್ಯೆಯೇ ಅವನನ್ನು ಕಾಡುತ್ತಿತ್ತು. ಮೊದಲನೆಯ ಪೀರಿಯಡ್ ಅನ್ನು ಯಾರೋ ಸ್ತ್ರೀ-ಶಿಕ್ಷಕಿಯೊಬ್ಬರು ತೆಗೆದುಕೊಂಡಿದ್ದರು. ಹಾಜರಿ ಒಪ್ಪಿಸುವಾಗ 'ಯೆಸ್ ಸರ್ !. ', 'ಪ್ರೆಸೆಂಟ್ ಸರ್ !' ಎಂದೇ ಚಿಕ್ಕಂದಿನಿಂದಲೂ ಹೇಳಿ ಅಭ್ಯಾಸವಾಗಿಹೋಗಿದ್ದ ವಿದ್ಯಾರ್ಥಿಗಳಲ್ಲಿ ಅನೇಕರಿಗೆ ಈ ಸೀರೆಯುಟ್ಟ ಪ್ರೊಫೆಸರರಿಗೆ ಏನೆಂದು ಸಂಬೋಧಿಸಬೇಕೆಂದು ತಿಳಿದಿರಲಿಲ್ಲ. ಅವರು ತಮ್ಮ ಹೆಸರನ್ನು ಕೂಗಿದ ಕೂಡಲೇ, ಕೆಲವರು ಮಾಮೂಲಿನಂತೆ 'ಯೆಸ್-ಸರ್ !' ಎಂದುಬಿಟ್ಟರು. ಇನ್ನು ಕೆಲವರು 'ಯೆಸ್ ಮೇಡಮ್ !' ಎಂದರು. ಇನ್ನೊಬ್ಬ 'ಯೆಸ್ ಮಿಸ್ !' ಎಂದುಬಿಟ್ಟ ! ಆ ಶಿಕ್ಷಕಿ ಆ ಮುಗ್ಧ ವಿದ್ಯಾರ್ಥಿಯನ್ನೊಮ್ಮೆ ತಲೆಯೆತ್ತಿ ನೋಡಿ ನಿರ್ಲಿಪ್ತಭಾವದಿಂದ ತಮ್ಮ ಕೆಲಸದಲ್ಲಿ ಮುಂದುವರೆದರು.

ಈಗ ನಾಲ್ಕಾರು ವರ್ಷಗಳ ಹಿಂದೆ ಆ ಕಾಲೇಜಿನಲ್ಲಿ ಇಂಥ ಫಜೀತಿ ಪ್ರಸಂಗಗಳು ತಲೆಯೆತ್ತುತ್ತಿರಲಿಲ್ಲ. ಎಲ್ಲ ಶಿಕ್ಷಕರೂ ಪುರುಷರೇ ಆಗಿರುತ್ತಿದ್ದರು 'ಇರಲಿ, ಈಗ ಆಗಿರುವುದಾದರೂ ಒಳ್ಳೆಯದೇ ಆಯಿತು' ಎಂದುಕೊಂಡು ರಾಜಣ್ಣ, ತನ್ನ ಹೆಸರು ಕೂಗಿದಾಗ 'ಯೆಸ್ ಮೇಡಮ್ !' ಎಂದೇ ಹೇಳಬೇಕು, 'ಯೆಸ್ ಸರ್ !' ಎಂದು ಬಾಯಿತಪ್ಪಿಯೂ ಹೇಳಬಾರದು ಎಂದು, ಒಂದೆರಡು ನಿಮಿಷ 'ಯೆಸ್ ಮೇಡಮ್ !', 'ಯೆಸ್ ಮೇಡಮ್ !' ಎಂದು ಮನಸ್ಸಿನಲ್ಲೇ ಬಾಯಿಪಾಠ ಮಾಡಿಕೊಂಡ. ಅವರು ತನ್ನ ಹೆಸರು ಕೂಗಿದಾಗ ಹಾಗೆಯೇ ಉತ್ತರ ಕೊಟ್ಟ.

ಈ ಮಹತ್ಕಾರ್ಯ ಮುಗಿದ ನಂತರ, ಅವರ ಪಾಠ ಕೇಳಲು ಕುಳಿತ ಆದರೆ ಆ ಶಿಕ್ಷಕಿಯ ಮೆಲುದನಿ ವಿದ್ಯಾರ್ಥಿಗಳ ಪಿಚ್ಚರಿಯ ಗುಜುಗುಜು ನಾದಸಾಗರದಲ್ಲಿ ಕಲೆತು ಕಿವಿಗೇ ಮುಟ್ಟುತ್ತಿರಲಿಲ್ಲ.

ಆಗವನು ಶಾಂತಳ ಪತ್ರಕ್ಕೆ ಉತ್ತರವನ್ನಾದರೂ ಯೋಚಿಸೋಣ ಎಂದು ಕೈಯ ಮೇಲೆ ಕಪೋಲವಿರಿಸಿ ಯೋಚಿಸುತ್ತಾ ಕುಳಿತ.

ಅವನ ಮನಸ್ಸಿಗೆ ಏನೇನೋ ಉಪಾಯಗಳು ಹೊಳೆಯುತ್ತಿದ್ದುವು: ತಾನು ಆ ಅಕ್ಷರಗಳನ್ನು ಬರೆಯುವಾಗ ಯಾವ ಮನೋಸ್ಥಿತಿಯಲ್ಲಿದ್ದೆ? ಆಗ ತನ್ನ ಬಿಸಿ ತಲೆಯನ್ನು ಹೇಗೆ ಅವಳ ಮೃದು ಎದೆಯ ಮೇಲಿರಿಸಬೇಕೆನಿಸುತ್ತಿತ್ತು!....ಅವಳ ತಂಪು ಕೈ ಬೊಗಸೆಯಲ್ಲಿ ಹೇಗೆ ಮುಖ ಹುದುಗಿಸಿ ಕಣ್ಣು ಮುಚ್ಚಿ, ಅಂಗೈಗೆ ಕಿರು ಚುಂಬನಗಳನ್ನೀಯಬೇಕೆನಿಸುತ್ತಿತ್ತು? ಅವಳ ಮೆಲುನುಡಿಯ ಅಮೃತ ಸವಿಯುತ್ತಾ ಹೇಗೆ ನಿದ್ರಿಸಬೇಕೆನಿಸುತ್ತಿತ್ತು?....ಎಂಬುದನ್ನೆಲ್ಲಾ ಬರೆದು ಬಿಡಲೆ? ಎಂದು ಯೋಚಿಸಿದ.

ಆದರೆ ಅದೆಲ್ಲವನ್ನೂ ಅವಳಿಗೆ ಪತ್ರದಲ್ಲಿ ತಿಳಿಸಲು ತುಂಬಾ ನಾಚಿಕೆಯಾಯಿತು; ಅವಳೇನು ತಿಳಿದುಕೊಳ್ಳುವಳೋ ಎಂದು ಹೆದರಿಕೆಯಾಯಿತು.

ಅವನು ರಾತ್ರಿಯ ಅರೆಕ್ಷಣದ ಮನೋದೌರ್ಬಲ್ಯ, ಲೇಖನ ಚಾಪಲ್ಯ, ಮೈಮರೆವುಗಳನ್ನು ನೆನೆದು ತನ್ನನ್ನು ತಾನೇ ಹೀನಾಮಾನವಾಗಿ ದೂಷಿಸಿಕೊಂಡ... 'ಫೂಲ್! ಫೂಲ್!! ನಿನ್ನ ತಲೆ ಕಟ್ಟಿದೆ!' ಎಂದುಕೊಂಡ. ಪಾಪ! ಅವಳ ಮನಸ್ಸು ಎಷ್ಟು ನೊಂದುಕೊಂಡಿದೆಯೋ! ಎಂದು ಮರುಕಗೊಂಡ, ವಿಷಾದಗೊಂಡ, ಸಂಶಯಗೊಂಡ.

ಅದನ್ನು ಪರಿಹಾರ ಮಾಡಿಕೊಳ್ಳುವವರೆಗೂ ಅವನಿಗೆ ಸಮಾಧಾನವಿರಲಿಲ್ಲ. 'ಏನೋ; ದೊಡ್ಡ ಮನುಷ್ಯ ಎಂದು ಸೋಟ್ಸು ಕೊಟ್ಟರೆ, ನಾನು ಅವಳಿಗೆ ಶಾಂತಿ ಕೊಡು ಎಂದು ಕೇಳುವುದೇ?.... ನನ್ನ ಬುದ್ಧಿ ಎಲ್ಲಿಗೆ ಹೋಗಿತ್ತು ಆಗ!' ಎಂದು ಪರಿತಾಪ ಪಡುತ್ತಿದ್ದ. ಆದರೆ ಏನು ಮಾಡಿದರೂ ಈ ವಿವರಣಾ ಪತ್ರ, ಕ್ಷಮಾಯಾಚನಾಪತ್ರ ಅವಳಿಗೆ ಬರೆಯಲೇ ಬೇಕಾಗಿತ್ತು. ಆದನ್ನು ಕುರಿತು, ಹಲವಾರು ಮಾರ್ಗಗಳನ್ನು ಚಿಂತಿಸುತ್ತಲೇ ಅವನು ಇಡೀ ಒಂದು ಗಂಟೆಯನ್ನೂ ಕಳೆದುಬಿಟ್ಟ.

ತನ್ನ ಆಲೋಚನೆಗಳಲ್ಲೇ ಮುಳುಗಿ ಹೋಗಿದ್ದ ಅವನಿಗೆ ಆ ಸೀರೆಯುಟ್ಟ ಅ.ಪ್ರೊಫೆಸರ್ ಎದ್ದು ಹೋಗಿ, ಪ್ಯಾಂಟ್‌ಧಾರಿ ಲೆಕ್ಚರರ್ ಒಬ್ಬರು ಕ್ಲಾಸಿಗೆ ಆಗಮಿಸಿದುದು ಗೊತ್ತಾಗಲೇ ಇಲ್ಲ.

ಈಗ ಲೆಕ್ಚರರ್ ಹಾಜರಿ ತೆಗೆದುಕೊಳ್ಳುತ್ತಿದ್ದರು. ಆದರೂ ಅವನಿಗೆ ಅವನ ಚಿಂತೆಯೆ ? 'ಶಾಂತ!....ನೀನು ತುಂಬಾ ಒಳ್ಳೆಯ ಹುಡುಗಿಯಲ್ಲವೆ ?....ನನ್ನನ್ನು ಕ್ಷಮಿಸಿಬಿಡು. ಇನ್ನು ಮೇಲೆ ಹಾಗೆ ನಿನ್ನ ನೋಟ್ಸಿನ ಮೇಲೆ ಬರೆಯೋಲ್ಲ....ಬೇಕಾದರೆ ಕೆನ್ನೆ ಒಡ್ಡುತ್ತೇನೆ ಮನಸ್ಸು ತೃಪ್ತಿಯಾಗುವವರೆಗೂ ಹೊಡೆದುಬಿಡು' ಎಂದು ಬರೆಯಲೇ ? ಎಂದು ಯೋಚಿಸುತ್ತಿದ್ದ. ಕೂಡಲೇ ಅವನನ್ನು ಪಕ್ಕದ ಗೆಳೆಯ ತಿವಿದ. ರಾಜಣ್ಣ ಎಚ್ಚೆತ್ತು ನೋಡಿದ. ಅವನಿಗೆ ಇಡೀ ತರಗತಿಯೆಲ್ಲವೂ ಮಸಕು ಮಸಕಾಗಿ ಕಾಣಿಸಿತು. ಲೆಕ್ಚರರ್ ತನ್ನ ಹೆಸರು ಕೂಗಿದ್ದು ಕೇಳಿಸಿತು. ರಾಜಣ್ಣ ಗಾಬರಿಯಿಂದ ಮೇಲೆದ್ದು ಗಟ್ಟಿಯಾಗಿ,

"ಯೆಸ್....ಮೇಡಮ್ !" ಎಂದು ಬಿಟ್ಟ.

ಇಡೀ ಕ್ಲಾಸೆಲ್ಲವೂ ಘೊಳ್ಳೆಂದು ನಗುವಿನಿಂದ ಆಸ್ಫೋಟನೆಯಾಯಿತು. ರಾಜಣ್ಣನ ಮನವನ್ನಾವರಿಸಿದ್ದ ಆಲೋಚನೆಯ ಮಂಕು ಹರಿಯಿತು. ತಾನು ಲೆಕ್ಚರರಿಗೆ ಮಾಡಿದ್ದ ಘೋರ ಅಪಮಾನ ಸ್ಪಷ್ಟವಾಗಿ ಅರಿವಾಯಿತು. ಅವನು ಭಯಭ್ರಾಂತನಾಗಿ ಎದ್ದು ನಿಂತ. ಅವರ ಕ್ಷಮೆ ಬೇಡಲು ಸಿದ್ಧನಾದ. ಆದರೆ ಆಗಲೇ ಲೆಕ್ಚರರ್ ಅಟೆಂಡೆನ್ಸ್ ರಿಜಿಸ್ಟರನ್ನು ಮುಚ್ಚಿ, ಅವನನ್ನೇ ತಮ್ಮ ಅವಮಾನಿತ ಪುರುಷತ್ವದ ಕ್ರೋಧನೇತ್ರಗಳಿಂದ ದುರುಗುಟ್ಟಿ ನೋಡುತ್ತಾ.... ... "ಯು !.... ಯು, ಗೆಟ್ ಔಟ್ !!" ಎಂದು ಘೂತ್ಕರಿಸುತ್ತಿದ್ದರು.

ರಾಜಣ್ಣನ ಬಾಯಿ ಕಟ್ಟಿತು. ಆದರೂ ಮಹತ್ಪ್ರಯತ್ನದಿಂದ ತನ್ನ ನಿರಪರಾಧಿತನವನ್ನು, ತನ್ನ ನಿರ್ದಿಷ್ಟ ಮನೋಭಾವವನ್ನು ಸಮರ್ಥಿಸಿಕೊಳ್ಳಲು, ತನ್ನ ಬಾಯಿ ತಪ್ಪಿಗಾಗಿ ಕ್ಷಮೆ ಯಾಚಿಸಲು, ಹೊರಟ. ಆದರೆ ಆ ಲೆಕ್ಚರರ್, ತನ್ನ ಸರಿ ಸಮಾನ ವಯಸ್ಸಿನ

ವಿದ್ಯಾರ್ಥಿಗಳಿದ್ದ ತುಂಬು ತರಗತಿಯಲ್ಲಿ ತಮಗಾಗಿದ್ದ ಅವಮಾನದಿಂದ ತಲೆ ಕೆಡಿಸಿಕೊಂಡಿದ್ದರು, ರೋಷ ಭೀಷಣರಾಗಿದ್ದರು. ಅವರು ರಾಜಣ್ಣನ ಮನವಿ, ಪ್ರಾರ್ಥನೆ, ವಿವರಣೆಗಳನ್ನು ಮನ್ನಿಸಲಿಲ್ಲ.

ರಾಜಣ್ಣ ಅನಾಥನಂತೆ ತೆಪ್ಪಗೆ ಹೊರಕ್ಕೆದ್ದು ಬಂದು, ಮರದ ಕೆಳಗಿನ ರೆಸ್ಟೋರಾಂಟಿನ ಕುರ್ಚಿಯೊಂದರಲ್ಲಿ ಕುಸಿತು ಕುಳಿತು, ಕಾಫಿ ಹಾಕಿ, ಒಂದು ಸಿಗರೇಟು ಎಳೆಯುತ್ತಾ ಆ ತಲ್ಲಣಿಸುವ ಆಘಾತ ದಿಂದ ಚೇತರಿಸಿಕೊಳ್ಳಲಾರಂಭಿಸಿದ. ಅವನಿಗೆ ತಾನೆಲ್ಲೋ ಇಂದು-ನಿನ್ನೆ ಎರಡು ದಿನವೂ ಎಡಮಗ್ಗುಲಲ್ಲಿ ಎದ್ದಿರಬೇಕು ಎಂದು ಕಾಣಿಸಿತು.

ಆ ಕ್ಲಾಸ್ ಮುಗಿದ ಕೂಡಲೆ, ಬೋಧಕರ ಬಳಿ ಹೋಗಿ, ಅವರ ಕ್ಷಮೆ ಯಾಚಿಸಲು ಹೊರಟ. ಎದುರಿಗೆ ಸಿಕ್ಕಿದ ಗೆಳೆಯರು... ನಿನಗೆ ಒಂದು ತಿಂಗಳ ಆಬ್ಸೆಂಟ್ ಎಳೆದರು ' ಎಂದು ಹೇಳಿದರು. ರಾಜಣ್ಣ, ಬೇಗಬೇಗನೆ ಸ್ಟಾಫ್ ರೂಮಿನ ಕಡೆಗೆ ಹೋಗುತ್ತಿದ್ದ ಶಿಕ್ಷಕರನ್ನು ಹಿಂಬಾಲಿಸಿ, ಅವರ ಪಕ್ಕದಲ್ಲೇ ನಡೆಯುತ್ತಾ, ಅವರ ದಾರಿಗೆ ಅಡ್ಡ ಬರುತ್ತಾ, ತನ್ನ ಅಪರಾಧಕ್ಕೆ ಆ ಸ್ತ್ರೀ ಶಿಕ್ಷಕಿಯೇ ಕಾರಣ ಎಂದು ವಿವರಿಸಿ, ಅವರ ಕ್ಷಮೆ ಬೇಡಿದ. ಅಷ್ಟುಹೊತ್ತಿಗೆ ಕೆಲವು ಸಂಗಾತಿಗಳೂ ಅಲ್ಲಿಗೆ ಬಂದು ಅವನ ಪರ ವಾದಿಸಿದರು.

ಅವರ ಮನ ನೋಯಿಸಿದ್ದಕ್ಕಾಗಿ ಅವನು ಕೊಡುತ್ತಿದ್ದ ವಿವರಣೆ, ಪಡುತ್ತಿದ್ದ ವ್ಯಥೆಯನ್ನು ಕಂಡು, ಕಡೆಕಡೆಗೆ ಬೋಧಕರಿಗೇ ಮರುಕ ಬಂತು ಅವನನ್ನು ಕ್ಷಮಿಸಿ, ' ಯು ಮಸ್ಟ್ ನಾಟ್ ಬಿ ಮೂನಿಂಗ್ ಇನ್ ದಿ ಕ್ಲಾಸ್, ಯು ಮಸ್ಟ್ ಬಿ ಅಟೆಂಟಿವ್! ' ಎಂದು ಕಟು ವಾಗಿ ಉಪದೇಶಕೊಟ್ಟು, ಅಟೆಂಡೆನ್ಸ್ ತಿದ್ದಿ, ' ಯೆಸ್, ಯು ಕೆನ್ ಗೋ ' ಎಂದರು.

ರಾಜಣ್ಣ ಹಗುರವಾದ ಎದೆಯಿಂದ ನಿಟ್ಟುಸಿರು ಬಿಡುತ್ತಾ, ಅವರಿಗೆ ಹೃತ್ಪೂರ್ವಕ ವಂದನೆಗಳನ್ನು ಸಲ್ಲಿಸಿ ಗೆಳೆಯರೊಡನೆ ಹಿಂತಿ ರುಗಿದ. ತನ್ನ ಪರ ವಾದಿಸಿದ ದೋಸ್ತಿಗಳೆಲ್ಲರಿಗೂ ದೋಸೆ - ಕಾಫಿ ಹಾಕಿಸಿದ.

ಸಂಜೆ, ಹಿಂತಿರುಗುವಾಗ ' ಆ ಮಹಾರಾಣಿಯ ಕಾಲೇಜು ' ಮುಂದೆಯೇ ಸೈಕಲ್ ತಿರುಗಿಸಿದ. ಆದರೆ ಎಲ್ಲೂ ಶಾಂತಳ ದರ್ಶನ ವಾಗಲಿಲ್ಲ. 'ಇರಲಿ', ಎಂದು ನೇರವಾಗಿ ಮನೆಗೆ ಬಂದು, ತನ್ನ ಅಕ್ಕ ತಯಾರಿಸಿದ್ದ ಒಂದು ಕಪ್ ಬಿಸಿಬಿಸಿ ಟೀ ಕುಡಿದು, ಸ್ಫೂರ್ತಿ ಗೊಂಡವನಂತೆ ಒಂದು ಪತ್ರ ಗೀಚಿದ, ' ಒಳ್ಳೆಯವಳಾದರೆ ಕ್ಷಮಿಸು ತ್ತಾಳೆ. ..ಕೆಟ್ಟವಳಾದರೆ ಕ್ಷಮಿಸುವುದಿಲ್ಲ . ಕ್ಷಮಿಸದಿದ್ದರೆ ಪ್ರಪಂಚ ವೇನೂ ಮುಳುಗಿಹೋಗೋಲ್ಲ !' ಎನ್ನುವ ಮನೋಭಾವದಿಂದ.

ಮಿಸ್. ಶಾಂತಾ,

ನಿಮ್ಮ ಪತ್ರಕ್ಕೆ ಹೇಗೆ ಉತ್ತರ ಕೊಡಬೇಕೋ ತಿಳಿಯದು. ನಾನು ಏಕೆ ಹಾಗೆ ಬರೆದೆನೋ ನನಗೇ ಸರಿಯಾಗಿ ಗೊತ್ತಿಲ್ಲ ! ....ಇನ್ನು ಅದನ್ನು ನಿಮಗೆ ಹೇಗೆ ತಿಳಿಸಲಿ ? ಒಂದು ವೇಳೆ ನಿಮ್ಮ ಮನಸ್ಸೇನಾದರೂ ನೊಂದಿದ್ದರೆ, ನನಗೆ ಬಹಳ ದುಃಖ ವಾಗುತ್ತದೆ. ನೀವು ದಯವಿಟ್ಟು ನನ್ನನ್ನು ಕ್ಷಮಿಸಿ. ನಾನು ಹಾಗೆ ಉದ್ದೇಶಪೂರ್ವಕವಾಗಿ ಬರೆಯಲು ಸಾಧ್ಯವೇ ಇಲ್ಲ. ನನ್ನ ಹಾಳು ಪೆನ್ನಿಗೆ ಏನೋ ಪಿತ್ತ ಕೆರಳಿ, ಹಾಗೆ ಅಕಸ್ಮಾತ್ ಬರೆದುಬಿಟ್ಟಿದೆ. ಇನ್ನುಮೇಲೆ ನಾನು ಆ ಪೆನ್ನನ್ನು ನಂಬುವುದೇ ಇಲ್ಲ. ಈ ತಪ್ಪಿಗೆ ಪೆನಾಲ್ಟಿಯಂತೆ ಅದನ್ನು ಸುಧಾಳಿಗೆ ಕೊಟ್ಟು ಬಿಡುತ್ತೇನೆ. ಅದಕ್ಕೆ ಚಿತ್ರಹಿಂಸೆಯನ್ನು ಅವಳೇ ಕೊಡಲಿ. ನಿಮಗಾಗಲಿ, ನನಗಾಗಲಿ ... ಆ ಸಾಮರ್ಥ್ಯವಿಲ್ಲ ಎಂದೇ ನನ್ನ ನಂಬಿಕೆ. ನಿಮ್ಮ ಮನಸ್ಸನ್ನು ಎಷ್ಟು ನೋಯಿಸಿದೆ ನೋಡಿ, ಈ ಕೆಟ್ಟ ಪೆನ್ ! ಸ್ವಲ್ಪ ತಡೆಯಿರಿ, ಈ ಪತ್ರ ಮುಗಿದ ಕೂಡಲೇ ಅದನ್ನು ಬಿಸಾಡುತ್ತೇನೆ .... ಈಗ ನಿಮಗೆ ತುಂಬಾ ಮನಸ್ಸು ನೋಯಿಸಿದ್ದೇನೆ ಎಂದು ಅಳುಕುತ್ತಿದ್ದೇನೆ. 'ಮನ ನೊಂದಿಲ್ಲ'.... ಇಲ್ಲವೆ ? ' ಮನ ನೊಂದಿದ್ದರೂ.ನಿನ್ನನ್ನು ಕ್ಷಮಿಸಿದ್ದೇನೆ ' ಎಂದು ನಿಮ್ಮಿಂದಲೇ ತಿಳಿಯುವವರೆಗೂ ನನಗೆ ಊಟ ನಿದ್ರೆ ಸೇರುವುದಿಲ್ಲ. ನನ್ನ ಮನಸ್ಸು ಅಷ್ಟು ಅಲ್ಲೋಲ

ಕಲ್ಲೋಲವಾಗಿದೆ ! ಈ ಮನೋಸ್ಥಿತಿಯಲ್ಲೇ ನಾನು ಈ ದಿನ ಒಂದು ಅಪಘಾತಕ್ಕೂ ಒಳಗಾಗಿದ್ದೆ..... ಆದರೆ ಅದೃಷ್ಟ ನೆಟ್ಟಗಿತ್ತು. ನಿಮ್ಮ ಹರಸುವಿಕೆಯೂ ಇದ್ದಿತೇನೋ! — ಅಂತೂ ಆ ಕುತ್ತಿನಿಂದ ಪಾರಾದೆ.

ನಿಮ್ಮ ಟಿಪ್ಪಣಿಯ ವಿಷಯವಾಗಿ : ನಿಮ್ಮ ಶೈಲಿ ತುಂಬಾ ಸೊಗಸಾಗಿದೆ. ನೀವೇ ಏಕೆ ಇನ್ನೊಂದು 'ಹಾಮ್‌ಲೆಟ್' ಬರೆಯಬಾರದು ಎಂದು ನನಗನಿಸುತ್ತದೆ. ನೀವು ಅದನ್ನು ಇನ್ನೊಮ್ಮೆ ಕೊಟ್ಟರೆ ಇನ್ನೊಮ್ಮೆ ಓದುತ್ತೇನೆ. ಆದರೆ ನೋಡಿ!...ಹಿಂದಿನ ಬಾರಿಯಂತೆ ಏನೇನೋ ಅರ್ಥವಿಲ್ಲದ ಮಾತುಗಳನ್ನು ಅದರ ಮೇಲೆ ಬರೆಯೋಲ್ಲ....ನಿಮಗೆ ತುಂಬಾ.... ತುಂಬಾ....ಅಂದರೆ, ಎರಡು ಬಾಹುಗಳಲ್ಲೂ ಅಪ್ಪುವಷ್ಟು.... ಅಪ್ಪಿದರೂ ಹಿಡಿಯಲಾರದಷ್ಟು ವಂದನೆಗಳು.

ರಾಜು.

'ಇಗೋ, ಬಿಸಾಕಿದೆ ಈ ಹಾಳು ಪೆನ್ನನ್ನು !' ಎಂದು ಬರೆದ. ಅದನ್ನು ಅಂದೇ ತಲುಪಿಸಲು ಮನಸ್ಸಾಯಿತು. ಕೂಡಲೇ ಮಹಡಿಯ ಮುಂದೆ ಬಂದು, ಶಾಂತಳ ಮನೆಯ ಕಡೆ ನೋಡಿದ.

ಅವಳೂ ತನ್ನ ಗೆಳತಿಯರೊಂದಿಗೆ ಮಾತಾಡುತ್ತಾ ಕಾಂಪೌಂಡಿನ ಬಳಿ ನಿಂತಿದ್ದಳು. ಅವಳೂ ಅವನನ್ನೇ ಎದುರು ನೋಡುತ್ತಿರುವಂತೆ ಕಂಡಿತು. ಅವನು ಕಾಗದ ಬರೆದು ತನಗೆ ಕೊಡಲು ಸಮಯ ಕಾಯುತ್ತಿದ್ದಾನೆ, ಎಂದು ಅವಳು ತಕ್ಷಣ ತಿಳಿದುಕೊಂಡಳು. ಸ್ವಲ್ಪ ಹೊತ್ತಿನಲ್ಲಿಯೇ ಗೆಳತಿಯರನ್ನು ಕಳುಹಿಸಲು ಯತ್ನಿಸಿದಳು. ಆದರೆ ಅವರು ಜಗ್ಗಲಿಲ್ಲ. ಕೊನೆಗೆ ಅನುಮಾನಕ್ಕೆ ಆಸ್ಪದ ಕೊಡಬಾರದೆಂದು ತಾಳ್ಮೆಯಿಂದ ಕಾದುಕೊಂಡಿದ್ದಳು.

ರಾಜಣ್ಣ ಹೊರಗೆ ಹೋಗಿ ತಿರುಗಾಡಿಕೊಂಡು ಬಂದ. ದಾರಿಯಲ್ಲಿ ಶಾಂತಳ ಅಣ್ಣ ಸಿಕ್ಕಿದ. ಅವನೊಬ್ಬ ನಿರುದ್ಯೋಗಿ ಪದವೀಧರ. ಸಂಜೆ R.S.S. ಆಟ ಮುಗಿಸಿಕ್ಕೊಂಡು ಹಿಂತಿರುಗು

ತ್ತಿದ್ದ. ರಾಜಣ್ಣನನ್ನು ಮಾತಾಡಿಸಿ, "ಇನ್ನು ಮೇಲೆ ನೀವು ದಿನವೂ ಸಂಘಕ್ಕೆ ಬರಬೇಕ್ರೀ...." ಎಂದು ಆಹ್ವಾನಿಸಿ, ಸಂಘಕ್ಕೆ ಬಾರದೆ ಯುವಕರೆಲ್ಲ ಹೇಗೆ ನಿರ್ವೀರ್ಯರಾಗುತ್ತಿದ್ದಾರೆ, ಹೇಗೆ ಹಿಂದೂ ಧರ್ಮ ನಶಿಸಿಹೋಗುತ್ತಿದೆ ಎಂದು ಒಂದು ಭಾರಿ ಉಪನ್ಯಾಸವನ್ನೇ ಕೊಟ್ಟ. ರಾಜಣ್ಣ ಎಲ್ಲದಕ್ಕೂ ಬೇಸರದಿಂದ ಹೂಗುಟ್ಟುತ್ತಾ ಮನೆಯವರೆಗೂ ಬಂದ. ಕೊನೆಗೂ ಆ ಪತ್ರವನ್ನು ಅಂದೇ ಅವಳಿಗೆ ತಲುಪಿಸಲಾಗಲಿಲ್ಲ.

* * *

ಮಾರನೆಯ ಬೆಳಗ್ಗೆ ಕ್ರಾಪ್-ಬಾಚಿಕೊಳ್ಳುತ್ತಾ ಮುಹಡಿಯ ಅಂಚಿಗೆ ಬಂದು ನೋಡಿದಾಗ ಶ್ಯಾಮಲ ಹೊರಗೆ ನಿಂತಿದ್ದಳು. ರಾಜಣ್ಣನನ್ನು ಕಂಡಕೂಡಲೇ ಅವಳು ಒಳಗೆ ಹೋದಳು. ಒಂದೆರಡು ನಿಮಿಷಗಳಲ್ಲೇ ಶಾಂತ ಹೊರಕ್ಕೆ ತಲೆಯಿರಿಸಿದಳು. ಸುತ್ತಮುತ್ತಲೂ ಯಾರೂ ಇರಲಿಲ್ಲ. ಶಾಂತ ಮುಗುಳು ನಕ್ಕಳು. ರಾಜಣ್ಣನೂ ಮುಗುಳು ನಗೆ ಬೀರಿದ. ಸನ್ನೆಯ ಮೂಲಕ, ಕೇಳಿದ.

"ಕಾಫಿ ಆಯಿತೇ.... ?"

"ಓ....ಆಗಲೇ ಎಷ್ಟೋ ಹೊತ್ತಾಯ್ತು."

"ಕಾಲೇಜು ಇದೆಯೋ ?"

"ಇದೆ...."

ಎಂದು ಅವಳೂ ಸನ್ನೆ ಮಾಡಿದಳು. ಅಷ್ಟು ಹೊತ್ತಿಗೆ ಸುಧಾ ಸ್ನಾನಮಾಡಿ ಎಣ್ಣೆಯಶೀಶೆ, ಬಾಚಣಿಗೆ ತೆಗೆದುಕೊಂಡು ಕೆಳಗಿಳಿದು ಹೊರಟಳು ಅವಳನ್ನು ಕರೆದು, ಫ್ರಾಕ್‌ನಲ್ಲಿ ಚೀಟಿಯಿಟ್ಟು ಕಳಿಸಿ, ಅದನ್ನು ಶಾಂತಳಿಗೆ ತನ್ನ ಟೆಲಿಗ್ರಾಫ್ ಮೂಲಕ ತಿಳಿಸಿ, ಅಲ್ಲೇ ನಿಂತ.

ಸುಧಾ ಹಿಂತಿರುಗಿದಾಗ ಶಾಂತಳಿಂದ ಉತ್ತರ ಬಂದಿತ್ತು. ಅದರಲ್ಲಿ,

ಮಿ. ರಾಜು,

ನಿಮ್ಮ ಪತ್ರ ಓದಿದೆ. ನೀವು ತುಂಬಾ ತಮಾಷೆ ವ್ಯಕ್ತಿ. ಏನೇನೋ ಕಲ್ಪಿಸಿಕೊಳ್ಳುತ್ತೀರ. ಅಲ್ಲ, ನನ್ನ ನೋಟ್ಸಿನ ಮೇಲೆ

ಆ ರೀತಿ ಒಂದು ವೇಳೆ ಕೈ ತಪ್ಪಿ ಬರೆದರೆ ಏನು ಪ್ರಮಾದ ವಾಯ್ತು ? ಇಲ್ಲವೆ, ಉದ್ದೇಶ ಪೂರ್ವಕವಾಗಿ ಬರೆದಿದ್ದರೂ ಸಹ, ಅದು ನನ್ನನ್ನು ಹೊಗಳಿದಂತೆಯೇ ಹೊರತು ಮತ್ತೇನೂ ಅಲ್ಲ. ನಿಮ್ಮ ಹೊಗಳಿಕೆಯಿಂದ ನನಗೆ ಎಂದಾದರೂ ನೋವಾಗು ವುದೇ.. .? ಸ್ವಲ್ಪ ಸಂಕೋಚವೇನೋ ಆಗಿದೆ, ಆದರೆ ನೋವು ಮಾತ್ರ ಒಂದು ಚೂರೂ ಆಗಿಲ್ಲ.... ಒಂದು ಹೂವಿನಿಂದ ಹೊಡೆದಷ್ಟೂ ನೋವಾಗಿಲ್ಲ !.... ಈಗಲಾದರೂ ಸಮಾಧಾನ ವಾಗುವುದೇ ? ಸಧ್ಯ, ಈ ಯೋಚನೆಯಿಂದ ಊಟ-ನಿದ್ರೆ ಎಲ್ಲಾ ದ್ರೂ ಬಿಟ್ಟು ಬಿಟ್ಟೀರಿ!...ಆ ಪೆನ್ನನ್ನೂ ಏಕೆ ಬಿಸಾಡಿದಿರಿ? ಪಾಪ ಅದು, ಜೀವಂತ ಹಸ್ತದ ಆಜ್ಞಾನುವರ್ತಿಯಾದ ಒಂದು ನಿರ್ಜೀವ ವಸ್ತುವಲ್ಲವೇ ? ಅದರ ಮೇಲೇಕೆ ನಿಮ್ಮ ಕೋಪ.... ನೀವು ಕೇಳಿದಾಗ ಪುನಃ ನೋಟ್ಸ್ ಕೊಡುವೆ...ಅದರ ಜೊತೆಗೇ ....ನನ್ನ ಯಾವ ಪುಸ್ತಕಗಳ ಮೇಲಾದರೂ, ನೀವು ಮನಸ್ಸಿಗೆ ತೋಚಿದುದನ್ನು ಬರೆಯುವ ಸ್ವಾತಂತ್ರ್ಯವನ್ನೂ ಕೊಡುವೆ.

ಆದರೆ ನೋಡಿ, ನಿನ್ನೆ 'ಈ ಯೋಚನೆಯಲ್ಲೇ ಒಂದು ಅಪ ಘಾತಕ್ಕೂ ಸಿಕ್ಕಿಬಿದ್ದಿದ್ದೆ' ಎಂದು ಬರೆದಿರುವಿರಲ್ಲ. ಅದನ್ನು ಓದಿ ದಾಗಿನಿಂದಲೂ ನೀವೆಂಥ ಅಪಾಯಕ್ಕೆ ಒಳಗಾಗಿದ್ದಿರೋ ಎಂದು ಎದೆ ಬಡಿದುಕೊಳ್ಳುತ್ತಿದೆ ... ಅದೇನೆಂದು ವಿವರವಾಗಿ ತಿಳಿಸುವಿರಾ....?

ತುಂಬಾ ಕಾತುರಳಾಗಿದ್ದೇನೆ....

ನಿಮ್ಮ....ಶಾಂತ.

ಎಂದಿತ್ತು. ಅದನ್ನೋದಿ ರಾಜಣ್ಣ ತುಂಬಾ ಸಮಾಧಾನ ಗೊಂಡ. ಶಾಂತ ನಿಜವಾಗಿಯೂ ಮುತ್ತಿನಂಥ ಹುಡುಗಿ, ಪೆಪ್ಪರ ಮೆಂಟಿನಷ್ಟು ಸಿಹಿಯಾದ ಹುಡುಗಿ ಎಂದುಕೊಂಡ.

ರಾತ್ರಿ ಮಲಗಿದಾಗ ಯೋಚಿಸಿದ : 'ನನಗೆ ಅಪಘಾತವಾಯಿ ತೆಂದು ಅವಳ ಎದೆ ಗಾಬರಿಯಿಂದ ಬಡಿದುಕೊಳ್ಳುತ್ತಿದೆಯಂತೆ. ಅದು

ಇನ್ನೂ ಬಡಿದುಕೊಳ್ಳುತ್ತಲೇ ಇದೆಯೋನೋ ... !' ಎಂದು ತನ್ನ ಎದೆಬಡಿತಕ್ಕೆ ಸರಿಸಮನಾಗಿ ರೆಪ್ಪೆಹೊಡೆಯುತ್ತಾ, ಕೊಠಡಿಯ ಕಗ್ಗತ್ತಲನ್ನೇ ನಗೆಗಣ್ಣುಗಳಿಂದ ದಿಟ್ಟಿಸುತ್ತಾ ಮಲಗಿದ. ಈ ತುಂಟ ಆಟವನ್ನು ಯಾವ ಘಳಿಗೆಯಲ್ಲಿ ನಿದ್ರೆ ಕಸಿದುಕೊಂಡಿತೋ ಅವನಿಗೇ ಅರಿವಾಗಲಿಲ್ಲ.

* * *

ಮಾರನೆಯ ಬೆಳಿಗ್ಗೆ ಕಾಲೇಜಿಗೆ ಹೋಗುವಾಗ, ಶೇಷಾದ್ರಿಪುರಂ ಲೆವಲ್ ಕ್ರಾಸಿಂಗ್ ಬಳಿ, ಹಾಕಿದ್ದ ಗೇಟು ತೆರೆಯುವವರೆಗೂ ಕಾಯಬೇಕಾಯ್ತು. ಆಚೆ ಈಚೆಯ ಪಾರ್ಶ್ವಗಳಲ್ಲೂ ವಾಹನಗಳ ಕಾರವಾನ್, ಜನರ ಸಂತೆ, ರೈಲು ಹಾಯ್ದು ಹೋಗುವುದನ್ನೇ ಕಾಯುತ್ತಾ ನಿಂತಿದ್ದುವು. ತನ್ನ ಕಡೆಯಿದ್ದ ಕಾರವಾನಿನಲ್ಲೇ ಶಾಂತಳ ಕಾಲೇಜು ಬಸ್ಸೂ ನಿಂತಿತ್ತು. ಅವನು ಆ ಕಡೆಗೆ ನೋಡುವುದರಲ್ಲೇ ಶಾಂತ ಬಸ್ಸಿನಿಂದ ಕೆಳಗಿಳಿದು, ಅವನಿಗೆ ಅಲ್ಲೇ ನಿಂತಿರುವಂತೆ ಸನ್ನೆ ಮಾಡಿ, ಶೇಷಾದ್ರಿಪುರದ ಎಕ್ಸಟೆನ್ಷನ್ ಕಡೆಗೆ ನಡೆಯತೊಡಗಿದಳು.

ರಾಜಣ್ಣ ಆನಂದದಿಂದ ಬೆರಗಾಗಿ ನಿಂತಲ್ಲೇ ನಿಂತ. ಸ್ವಲ್ಪ ಹೊತ್ತಿನಲ್ಲೇ ಗೇಟು ತೆರೆಯಿತು. ವಾಹನಗಳೆಲ್ಲಾ ಖಾಲಿಯಾದುವು. ರಾಜಣ್ಣ, ಶಾಂತ ಹೋದ ದಿಕ್ಕಿನಲ್ಲಿ ಹೊರಟ. ನಾಲ್ಕಾರು ಹೆಜ್ಜೆ ಹೋಗುವುದರಲ್ಲಿ ಅವಳೇ ಎದುರಿಗೆ ಬರುತ್ತಿದ್ದಳು. ಇಬ್ಬರೂ ಒಬ್ಬರನ್ನೊಬ್ಬರು ಮನದಣಿಯುವಂತೆ ನೋಡಿದರು. ಮುಗುಳುನಗೆಯ ಬುಗ್ಗೆ ಅವರ ವದನಗಳ ಮೇಲೆ ಚಿಮ್ಮತೊಡಗಿದುವು.

ರಾಜಣ್ಣ ಕೇಳಿದ,

" ಶಾಂತ.... ನೀವೇಕೆ ಬಸ್ಸಿನಿಂದ ಇಳಿದುಬಿಟ್ಟರಿ.'

" ಸುಮ್ಮನೆ, ಒಂದು ಕೆಲಸವಿತ್ತು... "

ಎಂದಳು ಶಾಂತ – ತುಟಿ ಅದುಮಿ ನಕ್ಕು, ಅವನೆಡೆಗೆ ತಲೆ ಎತ್ತುತ್ತಾ. ಅವಳ ನಯನಗಳಲ್ಲಿ ಯಾವುದೋ ಸಂತೃಪ್ತ ಆಶೆಯ ಬೆಳಕು ಮೆರೆಯುತ್ತಿತ್ತು. ರಾಜಣ್ಣ ಅವಳ ಉದ್ದೇಶವನ್ನು ಅರ್ಥ ಮಾಡಿಕೊಂಡು, ಅದನ್ನು ಮೆಚ್ಚಿ, ಅದಕ್ಕಾಗಿ ಅನಂತ ಧನ್ಯವಾದ

ಗಳನ್ನು ಅರ್ಪಿಸುವ ನೋಟವನ್ನು ಅವಳೆಡೆಗೆ ಬೀರುತ್ತಾ ಕೇಳಿದ—
"ಏಕೆ,... ಕಾಲೇಜ್ ಬಸ್ಸಿನಲ್ಲಿ ಹೋಗುವುದು ಬಹು ಬೇಸರ ವೇನು ?"

"ಹೌದು. ದಿನವೂ ಅದೇ ಬಸ್ಸು, ಅದೇ ಮಾರ್ಗ, ಅದೇ ಮಾತು, ಅದೇ ಹೊತ್ತು.. ಯಾರಿಗೆ ತಾನೇ ಬೇಸರವಾಗುವುದಿಲ್ಲ?"

ಎಂದು ಅವನನ್ನೇ ಓರೆನೋಟದ ವೈಯಾರದಿಂದ ನೋಡುತ್ತಾ, ಕೊರಳು ಬಳುಕಿಸಿ ಹೇಳಿದಳು. ರಾಜಣ್ಣ ಅವಳನ್ನೇ ನೋಡುತ್ತಾ,

"ಈಗ ನೀವೆಷ್ಟು ದೂರ ನಡೆಯಬೇಕಾಯ್ತು ನೋಡಿ.... ಹೋಗಲಿ ನನ್ನ ಸೈಕಲ್ ಕ್ಯಾರಿಯರ್ ಮೇಲಾದರೂ ಕುಳಿತುಕೊಳ್ಳಿ. ನಿಮ್ಮ ಕಾಲೇಜಿನವರೆಗೆ ಬಿಟ್ಟು ಹೋಗುತ್ತೇನೆ"

ಎಂದ. ಅವಳ ಕೆನ್ನೆ ಕೆಂಪೇರಿತು. ಅವನನ್ನೇ ಒಂದು ನಿಮಿಷ ವಿನೋದ ಲಜ್ಜೆಯ ಆಪ್ತ-ಅಸಮ್ಮತಿಯ ನೋಟದಿಂದ ನೋಡಿ, ಮುಗುಳುನಗುತ್ತಾ ತಲೆಬಾಗಿದಳು. ರಾಜಣ್ಣನೇ ಮತ್ತೆ ಕೇಳಿದ.

"ಹೋಗಲಿ ... ಈಗ ಒಂದು ಪ್ರಶ್ನೆ ಕೇಳುತ್ತೇನೆ .... ಇದು ನನ್ನನ್ನು ಬಹಳ ದಿನಗಳಿಂದಲೂ ಕಾಡುತ್ತಿದೆ- ಅದಕ್ಕೆ ನೀವು ಉತ್ತರ ಕೊಡುತ್ತೀರಾ ?"

ಎಂದ. ಅವಳು ಅವನ ನೋಟದೊಡನೆ ಆಸಕ್ತಿಯ ನೋಟ ಬೆರೆಸಿ,

"ಹೂ.... ಕೊಡುತ್ತೇನೆ !"

ಎನ್ನುವಂತೆ ತಲೆಹಾಕಿ ನಕ್ಕಳು. ರಾಜಣ್ಣ ಅವಳ ಕೈಲಿದ್ದ ಪುಸ್ತಕಗಳೆಡೆಗೆ ಬೆರಳು ತೋರುತ್ತಾ,

"ನೀವು ಮತ್ತು ನಿಮ್ಮ ಕಾಲೇಜಿನ ಹುಡುಗಿಯರು, ದಿನವೂ ಇಷ್ಟೊಂದು ಪುಸ್ತಕಗಳನ್ನು ಮನೆಗೂ ಕಾಲೇಜಿಗೂ ಹೊತ್ತು ತಿರುಗುತ್ತೀರಲ್ಲಾ.... ನಿಮ್ಮ ಕೈ ಸೋತುಹೋಗೊಲ್ಲವೆ ?"

ಎಂದು ಕೇಳಿದ.

ಶಾಂತ ಅವನೆಡೆಗೆ ದೃಷ್ಟಿಯೇರಿಸಿ ಹೇಳಿದಳು—

"ಇಲ್ಲ, ಇಷ್ಟು ಪುಸ್ತಕಗಳೂ ನಮಗೆ ಬೇಕಾಗುತ್ತೆ. ಇಲ್ಲಿ

ನೋಡಿ, ಇದು ಇಂಗ್ಲೀಷ್ ಪದ್ಯ, ಇದು ಎಕನಾಮಿಕ್ಸ್, ಇದು ಸೈಕಾಲಜಿ, ಇದು ಸೋಷಿಯಾಲಜಿ, ಇದು ಲೈಬ್ರರಿ ಪುಸ್ತಕ— ಈ ದಿನ ರಿಟರ್ನ್ ಮಾಡಬೇಕು. ಇವನ್ನೆಲ್ಲಾ ಬಿಟ್ಟು ಕಾಲೇಜಿಗೆ ಹೋಗುವುದಾದರೂ ಹೇಗೆ ?"

ಎಂದಳು. ರಾಜಣ್ಣ ಅವಳ ಮಾತನ್ನು ಒಪ್ಪಲಿಲ್ಲ.

"ನಾವೆಲ್ಲ ಮೂರೋ - ನಾಲ್ಕೋ ನೋಟ್ - ಬುಕ್ಕುಗಳನ್ನು ಹಿಡಿದು ಕಾಲೇಜಿಗೆ ಹೋಗ್ತೇವೆ. ನಿಮ್ಮ ಹಾಗೆ ಟೆಕ್ಸ್ಟ್ ಬುಕ್ಕುಗಳನ್ನೇ ಹೊತ್ತು ಹೋಗುವುದಿಲ್ಲ....ಬಹುಶಃ ನಿಮಗೆ ನಮ್ಮ ಹಾಗೇ ಎರಡು ಕೈ ಬೀಸಿಕೊಂಡು ಹೋಗಲು ನಾಚಿಕೆಯೇನೋ....? ಅಥವಾ ....ಅಥವಾ...."

ಎಂದು ಅವಳನ್ನೇ ತುಂಟತನದಲ್ಲಿ ನೋಡಿ ಅರ್ಧಕ್ಕೇ ಮಾತು ನಿಲ್ಲಿಸಿದ. ಶಾಂತ ಅವನನ್ನೇ ನಿರೀಕ್ಷಣೆಯಿಂದ ನೋಡಿ ಕೇಳಿದಳು.

"ಏನು, ಮುಂದೆ ಹೇಳಿ....?"

"ಹೇಳಿ ಬಿಡಲೇ... ?"

"ಹು........"

"ಅಥವ ಕೈಗೂಸಿನಂತೆ ಅವು ಯಾವಾಗಲೂ ನಿಮ್ಮ ಎದೆಯ ಬಳಿಯೇ ಇರಬೇಕೆಂಬ ಆಸೆಯೋ ?.... ಬಯಕೆಯೋ ?...." ಎಂದು ಅವಳನ್ನೇ ನಗೆಗಣ್ಣುಗಳಿಂದ ನೋಡಿದ. ಅವಳ ವದನ ಗಂಭೀರವಾಯಿತು. ವಿನೋದದ ಕಿರುನಗೆ ಹೊತ್ತ ಅವಳ ತುಟಿಗಳೂ ಉಕ್ಕಿದ ಉದ್ವೇಗದಿಂದ ಬಿಗಿಯಾಗಿ ಅದುಮಿಕೊಂಡವು. ಅವಳ ನುಣುಪು ಕಪೋಲಗಳು ಮತ್ತೂ ಕೆಂಪೇರಿ ಗುಳಿಬಿದ್ದುವು. ಕತ್ತನ್ನು ಬಳುಕಿಸಿ, ನೆಲದೆಡೆಗೆ ದೃಷ್ಟಿ ಹೊರಳಿಸುತ್ತಾ,

"ನಿಮ್ಮ ಆಲೋಚನೆಗಳೆಲ್ಲಾ ತುಂಬಾ ವಿಚಿತ್ರ... ಬನ್ನಿ ಈಗ ಹೋಗೋಣ"

ಎಂದಳು.

ಇಬ್ಬರೂ ರೇಸ್–ಕೋರ್ಸ್--ಕ್ರಾಸ್ ರೋಡಿನ ಮೂಲಕ, ಪ್ಯಾಲೆಸ್ ಸ್ಕ್ವೇರ್ ಕಡೆಗೆ ನಡೆಯ ತೊಡಗಿದರು. ಅವಳ ಪಕ್ಕದಲ್ಲಿ

ನಡೆಯುತ್ತಿರುವಾಗ ರಾಜಣ್ಣನಿಗೆ ತುಂಬಾ ಸೋಜಿಗವಾಯಿತು. ಇಷ್ಟು ದಿನವೂ ಅವಳು ತನ್ನಷ್ಟೇ ಎತ್ತರವಾಗಿರುವಳೆಂದು ಭಾವಿಸಿದ್ದ. ಆದರೆ ಅವಳು ಅಷ್ಟು ನೀಳ-ದೇಹಿಯಾದರೂ ತನ್ನ ಕಿವಿಗಳಷ್ಟು ಎತ್ತರವಾಗಿಯೂ ಇರಲಿಲ್ಲ. ಅವಳ ಧೀಮಂತ ನಡಿಗೆಯೂ ತನ್ನ ಸರಿ-ಸಮಾನಕ್ಕೆ ಬರುತ್ತಿರಲಿಲ್ಲ. ಯಾವ ಕೃತಕ ಠೀವಿ–ಬಳುಕುಗಳಿಲ್ಲದಿದ್ದರೂ ಅವಳ ನಿಲುವು-ನಡೆಗಳು ಹುಟ್ಟು ಬೆಡಗಿನಿಂದಲೇ ಚೆಲುವಾಗಿ ಮನಮೋಹಕವಾಗಿದ್ದುವು. ಸ್ವಲ್ಪ ದೂರ ಬಂದ ನಂತರ ಅವಳೇ,

"ನಾನೇಕೆ ಈಗ ಬಸ್ಸಿನಿಂದ ಇಳಿದೆ ಗೊತ್ತೆ....?"

ಎಂದು ಕೇಳಿದಳು. ರಾಜಣ್ಣ ಕುತೂಹಲದಿಂದ ಕೇಳಿದ,

"ಏಕೆ....?"

"ನಿನ್ನೆ ನಿಮಗೇನೋ ಅಪಘಾತ ಆಯ್ತು ಎಂದು ಬರೆದಿದ್ದಿರಲ್ಲ ಅದನ್ನು ನಿಮ್ಮ ಬಾಯಿಂದಲೇ ತಿಳಿದುಕೊಳ್ಳೋಣ ಅಂತ. ಏನದು ಅಪಘಾತ ?"

ಎಂದು ಕಾತುರದಿಂದ ಕೇಳಿದಳು. ರಾಜಣ್ಣ ತನ್ನಲ್ಲಿ ತಾನು ನಗುತ್ತಾ,

"ಅಂಥ ಸೀರಿಯಸ್ ಏನೂ ಅಲ್ಲ! .... ಅದಕ್ಕೆ 'ಅಪಘಾತ' ಎಂದು ನಾನು ಕರೆದಿದ್ದೂ ತಪ್ಪೆ....ನಾನು ಎಷ್ಟೇ ಆಗಲಿ ಅಲ್ಪ, ಬೀಟಗಾವು, ಸ್ಟೂಡೆಂಟ್ ನೋಡಿ! ಸೂಕ್ತವಾದ ಪದಗಳನ್ನು ಸರಿಯಾದ ಕಡೆಗಳಲ್ಲಿ ಬಳಸಲು ಅಷ್ಟು ಕಟ್ಟುನಿಟ್ಟಾಗಿ ಬರೋಲ್ಲ. ನಿನ್ನೆ ಆದಿದ್ದು ಇಷ್ಟೇ...."

ಎಂದು, ಅವಳ ಪತ್ರ ಬಂದಾಗ ತನಗೆ ಹೇಗೆ ಹೆದರಿಕೆಯಾಯಿತು, ಕ್ಲಾಸಿನಲ್ಲಿ ಕುಳಿತು ಏನೇನು ಅಸಾಧ್ಯ ಉತ್ತರಗಳನ್ನು ಯೋಚಿಸುತ್ತಿದ್ದ....ಅನಂತರ ಅಲ್ಲಿ ನಡೆದಿದ್ದು, ಎಲ್ಲವನ್ನೂ ಚೂರು ಚೂರಾಗಿ, ವಿವರ ವಿವರವಾಗಿ ಜ್ಞಾಪಿಸಿಕೊಂಡು ಅವಳಿಗೆ ಹೇಳಿದ.

ಅವಳು ದಾರಿಯುದ್ದಕ್ಕೂ ಅದರಿಂದ ವಿನೋದಗೊಂಡು, ನಗುತ್ತಾ, ಅವನೊಡನೆ ಸಾಗಿದಳು. ಅವನ ಮಾತೆಲ್ಲವೂ ಮುಗಿಯುವ ಹೊತ್ತಿಗೆ ವಾಟರ್ ವರ್ಕ್ಸ್ ಬಳಿಗೆ ಬಂದಿದ್ದರು. ಅದರ

ಪಕ್ಕದ ಗೇಟಿನ ಮೂಲಕವೇ ಹಾದು, ಕಾರ್ಲ್‌ಟನ್ ಭವನದ ಬಳಿ ಬೇರೆ ಬೇರೆಯಾಗಿ ಬಿಡೋಣವೆಂದು ಶಾಂತ ಸೂಚಿಸಿದಳು. ಅವನು 'ಆಗಲಿ' ಎಂದು ಒಪ್ಪಿಕೊಂಡು, ಅವಳೊಡನೆ ಅಡಿಯಿರಿಸತೊಡಗಿದ. ನಂತರ ಕೇಳಿದ,

"ಶಾಂತ....ನೀವೇಕೆ ಸೈಕಲ್ ಉಪಯೋಗಿಸೋಲ್ಲ ?"

"ಸೈಕಲ್!.. ಬಹಳ ಚೆನ್ನಾಗಿದೆ ನಿಮ್ಮ ಪ್ರಶ್ನೆ!"

ಎಂದಳು ಅವಳು ತಲೆತೂಗುತ್ತಾ- ರಾಜಣ್ಣ ಹುರುಪಿನಿಂದ ಕೇಳಿದ,

"ಏಕೆ....ಸೈಕಲ್ ಉಪಯೋಗಿಸೋದು ಅಷ್ಟು ಕೆಟ್ಟದ್ದೆ ?.... ನಿಮ್ಮ ಅನೇಕ ಗೆಳತಿಯರು ಸೈಕಲ್‌ಮೇಲೆ ಕಾಲೇಜಿಗೆ ಬರ್ತಾರೆ. ಅವರನ್ನು ನೋಡಿದರೆ ನನಗೆಷ್ಟೋ ಸಂತೋಷವಾಗುತ್ತೆ. .. ನೀವೂ ಉಪಯೋಗಿಸಿದರೆ ಏನಾಗುತ್ತೆ ? ... ಈ ಬಸ್, ಆ ಕ್ಯೂ ನಿಂತು ಪ್ರಯಾಣ, ವೇಳೆಗೆ ಸರಿಯಾಗಿ ಹೊರಡುವ ಅವಸರ, ಇವೆಲ್ಲ ಎಷ್ಟು ತೊಂದರೆ ನೋಡಿ. ಸೈಕಲ್ ಇದ್ದರೆ ಹಾಯಾಗಿ ಬೇಕಾದಾಗ ಕಾಲೇಜಿಗೆ ಹೋಗಿಬರಬಹುದು. ದುಡ್ಡೂ ಮಿಗುತ್ತೆ. ಜೊತೆಗೆ ಅಂಗ ಸಾಧನೆಯೂ ಆಗುತ್ತೆ "

ಎಂದು ಹೇಳಿದ. ಶಾಂತ ತಲೆ ಅಲ್ಲಾಡಿಸಿ ನಗುತ್ತಾ ಆಲೋಚನಾಭರಿತ ನಯನಗಳಿಂದ ಮುಂದೆ ನೋಡುತ್ತಾ

"ಅದೆಲ್ಲಾ... ಸಾಧ್ಯವಿಲ್ಲದ ಕನಸು !"

ಎಂದಳು. ಆಗ ರಾಜಣ್ಣ ಉತ್ಸಾಹದಿಂದ ಹೇಳಿದ.

"ಈ ವಿಚಾರದಲ್ಲಿ ನೋಡಿ, ನೀವು ವಿದ್ಯಾವತಿಯರಂತೆ, ಸಮತೆ ಸ್ವಾತಂತ್ರ್ಯದ ಆರಾಧಕರಂತೆ ಯೋಚಿಸುತ್ತಿಲ್ಲ. ನೀವು ಸೈಕಲ್ ಹೊಡೆಯಬಾರದು, ಎಂದು ನಿಮ್ಮ ಮನೆಗಳಲ್ಲಿ ಏಕೆ ಹೇಳ್ತಾರೆ ಗೊತ್ತೆ ?....ಆಗ ನೀವು ಇಷ್ಟ ಬಂದ ಕಡೆಗೆ ಹೋಗಬಹುದು ಎಂದು. ಅದೆಲ್ಲ ಪುರಾತನ ಮನೋಭಾವ ನೋಡಿ. ಹಿಂದೆ, ಚೀನಾ ದಲ್ಲಿ ಹೆಂಗಸು ಮನೆಯಿಂದ ಹೆಚ್ಚು ದೂರ ನಡೆಯಲು ಸಹ ಆಗ ಬಾರದು ಎಂದು, ಹುಟ್ಟಿದಾಗಿನಿಂದ ಪಾದಗಳನ್ನು ಬಿಗಿದು ಅವು

ನಿರುಪಯೋಗಿ ಆಗುವಂತೆ ಮಾಡ್ತಿದ್ದರಂತೆ .... ಅವಳು ಅದನ್ನು ಪ್ರತಿಭಟಿಸದೆ ಒಪ್ಪಿಕೊಳ್ಳಲಿ ಎಂದು, ಅಂಥ ಪುಟ್ಟ ನಿಷ್ಪ್ರಯೋಜಕ ಪಾದಗಳು ತುಂಬಾ ಸುಂದರ ಎಂದು ಗಂಡಸರು ಹೊಗಳಿ ಅವರನ್ನು ಮರುಳು ಮಾಡ್ತಿದ್ದರಂತೆ. ಹಾಗೆಯೇ ಮುಸ್ಲಿಮರ ಜನಾನಾ. ಅದೇ ರೀತಿಯೇ ಈ ವಿಚಾರದಲ್ಲಿ ಹಿರಿಯರು ಎತ್ತುತ್ತಿರುವ ಆಕ್ಷೇಪಣೆ ಸಹ. ನಿಮಗೆ ಹೇಗೆ ತೋರುತ್ತೆ ?" ಎಂದು ಕೇಳಿದ.

ಅದೆಲ್ಲವನ್ನೂ ವಿನೋದದಿಂದ ಆಲಿಸುತ್ತಿದ್ದ ಶಾಂತಳ ವದನ ಗಂಭೀರವಾಯಿತು. ಅನಂತರ ಅವಳು ತನ್ನಲ್ಲಿ ತಾನೇ ಮುಗುಳು ನಕ್ಕು, ಅವನೆಡೆಗೆ ಕುಡಿನೋಟ ಹೊರಳಿಸುತ್ತಾ, " ನಿಮ್ಮ ವಿವರಣೆ ಯೇನೋ ಚೆನ್ನಾಗಿದೆ ..ಆದರೆ ಸ್ವಲ್ಪ ತಡೆಯಿರಿ. ನಮ್ಮ ಹುಡುಗಿ ಯರಿಗೂ ಈ ಯೋಚನೆ ಹೊಳೆದೀತು. ಅಲ್ಲಿಯವರೆಗೂ ಹೀಗೇ ನಡೆದು ಬರ್‍ತಿರೋಣ" ಎಂದಳು. ರಾಜಣ್ಣ ಸಮಾಧಾನದಿಂದ,

" ನೀವೆಲ್ಲ ಹಾಗೆ ಬೇಗ ಮಾಡಬೇಕು. ಇಲ್ಲದಿದ್ದರೆ ವಿದ್ಯೆ ಕಲಿತು ಪ್ರಯೋಜನವಾದರೂ ಏನು ? ಆಗಲೇ ನೋಡಿ ನಿಮ್ಮ ತಂಗಿ ಶ್ಯಾಮಲ ನನ್ನ ಸೈಕಲ್‌ನಲ್ಲೇ ನಿನ್ನೆ ಸಂಜೆ ಹಾಫ್ ಪೆಡಲ್ ಕಲ್ತು ಬಿಟ್ಟಳಂತೆ !. ..ಅವಳು ಜಾಣೆ. ನಾವು ಪಾಶ್ಚಾತ್ಯರ ಲಿಪ್‌ಸ್ಟಿಕ್, ನೈಲ್‌ಪಾಲಿಷ್, ಪೈಹೀಲ್ಡ್ ಷೂಸ್ ಈ ರೀತಿಯ ನಿಷ್ಪ್ರಯೋಜಕ ರೀತಿ ನೀತಿಗಳನ್ನು ಮಂಕುತಿಮ್ಮ ತಿಮ್ಮಿಯರಂತೆ ಕಲೀತಿದ್ದೇವೆಯೋ ಹೊರತು, ಇಂಥ ಪ್ರಯೋಜನಕರ ಕುಶಲತೆಯೊಂದನ್ನೂ ಕಲೀತಿಲ್ಲ. ನ್ಯಾಯವಾಗಿ ನೋಡಿದರೆ, ಉಪಾಧ್ಯಾಯ ವೃತ್ತಿ, ಪೈಲಟ್‌ವೃತ್ತಿ, ಮುಂತಾದುವನ್ನೆಲ್ಲಾ ಸ್ತ್ರೀಯರಿಗೇ ಮೀಸಲಾಗಿರಿಸಬೇಕು ...." ಎಂದು ಅತ್ಯುತ್ಸಾಹದಿಂದ ಹೇಳುತ್ತಿದ್ದ.

ಆದರೆ ಅಷ್ಟರಲ್ಲೇ ಶಾಂತ ಯಾರನ್ನೋ ನೋಡಿ ತುಂಬಾ ಗಾಬರಿಗೊಂಡಿದ್ದಳು. ರಾಜಣ್ಣ ಅದಾರೆಂದು ಮುಂದೆ ನೋಡಿದ. ಅವಳ ಇಬ್ಬರು ಗೆಳತಿಯರು, ಆಗಲೇ ಕಾಲೇಜಿಗೆ ಹೋಗಿ, ಅಲ್ಲಿಂದ ಶಾಂತಳನ್ನು ಹುಡುಕಿಕೊಂಡು ಬರುತ್ತಿದ್ದರು.

ರಾಜಣ್ಣ ಅವರನ್ನೇ ನೋಡಿದ. ಒಬ್ಬಳು ಭಾರಿಭಾರಿ ಸೀರೆ

ಉಟ್ಟು, ಲಿಪ್‌ಸ್ಟಿಕ್, ಹೈ ಹೀಲ್ಡು ಷೂಸ್, ಕೋಯಿಪುರ್‌ನ ಅಲಂಕಾರದ ಮೊಟ್ಟೆ. ತನ್ನ ರಕ್ತ ತುಟಿಗಳ ಮೇಲೆ ಅಹಂಭಾವ, ಅಶ್ಲೀಲ ಕುತೂಹಲದ ನಗು ಹೊತ್ತು ತಮ್ಮೆಡೆಗೇ ಬರುತ್ತಿದ್ದಳು ಅವಳ ಜೊತೆಗೆ ಮತ್ತಾರೋ ಒಬ್ಬ ಪುಟ್ಟ ಹುಡುಗಿ ಬರುತ್ತಿದ್ದಳು. ರಾಜಣ್ಣ

" ಅವರು ನಿಮ್ಮ ಗೆಳತಿಯರೆ ?'

ಎಂದು ಶಾಂತಳನ್ನು ಕೇಳಿದ. ಅವಳು ತನ್ನ ಗಾಬರಿಯಿಂದ ಚೇತರಿಸಿಕೊಂಡು,

' ಹು, ನೋಡಿ, ಅಷ್ಟೊಂದು ಷೋಕಿ ಮಾಡಿಕೊಂಡು ಬರುತ್ತಿದಾಳಲ್ಲ. ಅವಳ ಹೆಸರು ಶಕ್ಕು ಎಂದು. ನನಗೂ ಅವಳಿಗೂ ಅಷ್ಟು ಹೆಚ್ಚಿಗೆ ಪರಿಚಯವೇ ಇರಲಿಲ್ಲ. ನೀವು ಪಕ್ಕದ ಮನೆಗೆ ಬಂದಾಗಿನಿಂದ, ನನ್ನ ಸ್ನೇಹ ಜಾಸ್ತಿ ಮಾಡಿದಾಳೆ. ನಮ್ಮ ಮನೆಗೆ ದಿನವೂ ಬರ್‍ತಾಳೆ. ಇನ್ನೊಬ್ಬಳು ಪದ್ಮಾ. ಅವಳು ಒಳ್ಳೆಯವಳೇ ... ಆದರೆ ಮೊದ್ದು ಹುಡುಗಿ. ನಾನು 'ತಲೆ ನೋಯುತ್ತಿದೆ, ಮನೆಗೆ ಹೋಗ್ತೇನೆ' ಎಂದು ಬಸ್ಸಿನಿಂದ ಇಳಿದು ಬಂದೆ. ಆದರೆ ಆ ಶಕ್ಕು ನಿಮ್ಮನ್ನು ನೋಡಿ ಬಿಟ್ಟಿರಬೇಕು. ಅದಕ್ಕೇ ಅನುಮಾನದಿಂದ ಫಾಲೋ ಮಾಡಿ ಬಂದಿದಾಳೆ" ಎಂದು " ಅವಳನ್ನು ಸರಿಯಾಗಿ 'ಕಟ್' ಮಾಡುತ್ತೇನೆ." ಎಂದುಕೊಂಡಳು. ರಾಜಣ್ಣ ಕೇಳಿದ.

" ಈಗೇನು ಮಾಡುವುದು, ನೀವು ಇನ್‌ಟ್ರೋಡ್ಯೂಸ್ ಮಾಡಿಸಿಕೊಡ್ಬೇಕೆ ?" ಎಂದ. ಅವಳು ಕಾತುರದಿಂದ ಕೇಳಿದಳು.

"ನಿಮಗೆ ಇಷ್ಟವೇ ? "

" ಇಲ್ಲ....ನನಗೆ ನಿಮ್ಮ ಸ್ನೇಹ ಮಾತ್ರ ಸಾಕು. ಆ ಬಣ್ಣದ ಚಿಟ್ಟೆ....ದೂರ ಇದ್ದಷ್ಟೂ ಒಳ್ಳೆಯದು...."

ಎಂದ. ಶಾಂತಳೂ ತನ್ನಲ್ಲಿ ತಾನೇ,

" ಎಷ್ಟು ದೂರ ಇದ್ದರೆ ಅಷ್ಟೂ ಒಳ್ಳೆಯದು."

ಎಂದು ಧ್ವನಿಗೂಡಿಸಿಕೊಂಡಳು.

ಅವರಿಬ್ಬರೂ ಹತ್ತಿರ-ಹತ್ತಿರ ಬಂದರು. ಚಿಕ್ಕ ಹುಡುಗಿ

ಕುರಿಯಂತೆ ತಲೆ ಬಗ್ಗಿಸಿ ನಡೆಯಲು ಪ್ರಾರಂಭಿಸಿದಳು. ಶಕ್ಕು, ಸೋತು ಸಿಕ್ಕಿದ ಶತ್ರುವನ್ನು ಕೈಸೆರೆ ಹಿಡಿಯುವಳಂತೆ ಶಾಂತಳನ್ನೊಮ್ಮೆ -ರಾಜಣ್ಣನನ್ನೊಮ್ಮೆ ನೋಡಲಾರಂಭಿಸಿದಳು. ಶಾಂತ ಅವಳ ನೋಟದೊಡನೆ ನೋಟ ಬೆರೆಸದೆ ಗಂಭೀರವಾಗಿ ಮುಂದೆ ನಡೆಯ ತೊಡಗಿದಳು. ರಾಜಣ್ಣ ಶಕ್ಕುವನ್ನೇ ಕಟು ತೀಕ್ಷ್ಣ ನೋಟದಿಂದ ಬೇಸತ್ತವನಂತೆ ನೋಡಿದ. ಅವಳು ಅವನನ್ನೇ ಮೋಡಿಹಾಕುವಳಂತೆ ನೋಡಿ, ಒಮ್ಮೆ ಕಂಡೂ ಕಾಣದಂತೆ ನಕ್ಕು ಮುಂದೆ ಸಾಗಿದಳು.

ಆಗ ಶಾಂತ ರಾಜಣ್ಣನನ್ನು ನೋಡಿ, ಆಳವಾಗಿ ನಿಟ್ಟುಸಿರು ಬಿಡುತ್ತಾ,

"ನೋಡಿದಿರಾ....ಹೇಗಿದಾಳೆ!"

ಎಂದಳು. ನಂತರ ಕೋಪ-ಉದ್ವೇಗಭರಿತ ವಾಣಿಯಲ್ಲಿ,

"ನಮ್ಮ ಹುಡುಗಿಯರಿಗೆ ಇರೋ ಹೊಟ್ಟೆ ಉರಿ ಯಾರಿಗೂ ಇಲ್ಲ ನೋಡಿ!... ನೀವೇ ನನ್ನ ಮೊಟ್ಟಮೊದಲಿನ 'ಬಾಯ್-ಫ್ರೆಂಡ್.' ಅದನ್ನು ನೋಡಿ ಸಹಿಸೋಕೂ ಆಗೋಲ್ಲ ಆ ಶಕ್ಕೂಗೆ!.. ಅವಳಿಗಾದರೊ...."

ಎಂದು ಏನನ್ನೋ ಹೇಳಲು ಹೋಗಿ.... ಅಲ್ಲಿಗೆ ಮಾತು ತಡೆದಳು. ಅದೇನೆಂದು ಕೇಳಲು ರಾಜಣ್ಣ ಇಷ್ಟ ಪಡಲಿಲ್ಲ. ಅವನಿಗೆ ಹಿಂದೆಯೇ ಪರಿಚಯವಾಗಿದ್ದ ಆ ಶಕ್ಕು ಸ್ವಭಾವ ಈಗ ಚೆನ್ನಾಗಿಯೇ ಅರಿವಾಗಿತ್ತು.

ಒಂದು ಭಾನುವಾರ ಮಧ್ಯಾಹ್ನ ಅವನು '4-H' ಫಾರಂಗಳ ಕೆಲವು ಪುಸ್ತಕ ಪಡೆದು ಬರಲು ಗೆಳೆಯನೊಬ್ಬನ ಮನೆಗೆ ಹೊರಟಿದ್ದ. ಶಕ್ಕೂ ಸಹ ಮೆಜೆಸ್ಟಿಕ್ಕಿನವರೆಗೂ ಅವನು ಕುಳಿತ ಬಸ್ಸಿನಲ್ಲೇ ಕುಳಿತು ಬಂದಿದ್ದಳು. ಆಗಾಗ ಅವಳ ಕೃಪಾಕಟಾಕ್ಷ ಅವನಮೇಲೆ ಎರಗಿತ್ತು. ಬಸ್ಸಿನಿಂದ ಇಳಿದಾಗ ಅವನೆಡೆಗೊಂದು ಆಹ್ವಾನವೀಯುವ ನೋಟ ಬೀರಿ, ಅವಳು ಚಿಕ್ಕಲಾಲ್‌ಬಾಗಿನ ಕಡೆಗೆ ಹೊರಟಿದ್ದಳು. ಅವನು ಕೆಂಪೇಗೌಡ ರೋಡಿಗೆ ಅಡಿಯಿರಿಸಿದ್ದ. ಆದರೆ ಐದಾರು ನಿಮಿಷ ಗಳಲ್ಲೇ ಅದೇಕೋ ಅವಳು ತನ್ನ ದಿಕ್ಕು ಬದಲಾಯಿಸಿ, ಅವ

ಹಿಂದೆಯೇ ಬಂದಿದ್ದಳು. ಮೊದಲು ಸಾಗರ್ ಟಾಕೀಸ್ ಟಿಕೆಟ್ ಬೂತಿನ ಬಳಿ, ಅವನು ಅದನ್ನು ಪ್ರವೇಶಿಸದೆ ದಾಟಿದ ನಂತರ, ಸ್ಟೇಟ್ಸ್ ಟಾಕೀಸ್ ಟಿಕೆಟ್ ಬೂತಿನ ಬಳಿಗೆ ಧಾವಿಸಿ, ಅಲ್ಲಿ ಕಾಯುತ್ತಾ ನಿಂತಿದ್ದಳು. ಆದರೆ ಅವನು ಅದನ್ನು ಪ್ರವೇಶಿಸದೆ, ಮುಂದೆ ಹೋಗುತ್ತಿರುವಾಗ ಅವಳು ಮತ್ತೆ ಅವನಿದ್ದ ಫುಟ್‌ಪಾತಿನ ಕಡೆಗೆ ಬರತೊಡಗಿದ್ದಳು. ಆಗ ರಾಜಣ್ಣ ಹಠಾತ್ತನೆ ಒಂದು ಆಟೋ ರಿಕ್ಷಾದಲ್ಲಿ ಕುಳಿತು ಕ್ಯಾಂಟ್ ಕಡೆಗೆ ಹೊರಟಿದ್ದ. ಹಿಂತಿರುಗಿ ನೋಡಿದಾಗ ಅವಳು ತನ್ನನ್ನೇ ನಿರಾಶೆಯಿಂದ ಅರ್ಥಗರ್ಭಿತವಾಗಿ ಈಕ್ಷಿಸಿ, ಮುಗುಳ್ನಕ್ಕು, ಒಮ್ಮೆ ತಲೆ ಸವರಿಕೊಂಡಿದ್ದಳು.

ಆ ಸೂಚನೆಯ ಸಂಪೂರ್ಣ ಅರ್ಥವನ್ನು ಈಗಾಗಲೇ ಚೆನ್ನಾಗಿ ಅರಿತು, ಅನುಭವಿಸಿದ್ದ ರಾಜಣ್ಣ ವಿಷಾದದ ನಿಟ್ಟುಸಿರುಬಿಡುತ್ತಾ, ಹಿಂದೆ ಒರಗಿ ಮುಂದಿನ ರಸ್ತೆಯನ್ನೇ ನೆನಪಿನ ತೊಟ್ಟಿಲು ತೂಗುವ ನೋಟದಿಂದ ನೋಡಲಾರಂಭಿಸಿದ್ದ.

—ಈಗ ಆ ಸಂಗತಿಯೆಲ್ಲವೂ ಅವನಿಗೆ ಸ್ಪಷ್ಟವಾಗಿ ಜ್ಞಾಪಕವಾಯಿತು. ಅದೆಲ್ಲವನ್ನೂ ಶಾಂತಳಿಗೆ ಹೇಳಬೇಕೋ - ಹೇಳಬಾರದೋ ಎಂದು ಆಲೋಚಿಸುತ್ತಿದ್ದ.

ಆದರೆ ಅಷ್ಟರಲ್ಲೇ ಕಾಲೇಜಿನ ಮಹಾದ್ವಾರ ಬಂದಿತು. ಇಬ್ಬರೂ ನಸುನಕ್ಕು ಬೇರ್ಪಟ್ಟರು. ಶಾಂತ ಅವನೆಡೆಗೇ ಎಚ್ಚರಿಕೆಯ ಬೆರಳು ತೋರಿಸುತ್ತಾ,

"ಇವತ್ತೂ 'ಯೆಸ್ ಮೇಡಮ್' ಎಂದುಬಿಟ್ಟೀರ !"

ಎಂದು ಕೂಗಿದಳು. ಅವನು 'ಇಲ್ಲ' ಎಂದು ತಲೆ ಅಲ್ಲಾಡಿಸುತ್ತಾ, ಮುಗುಳುನಕ್ಕು, ತನ್ನನ್ನೇ ತಿರುಗಿ ತಿರುಗಿ ನೋಡಿ ನಗುತ್ತಿದ್ದ, ಅವಳನ್ನು ತಾನೂ ತಿರುಗಿ ತಿರುಗಿ ನೋಡಿ ನಗುತ್ತಾ ಮುಂದೆ ಮುಂದೆ ಹೋದ.

೮

ಮುಂದಿನ ಕೆಲವು ವಾರಗಳು ಕಂಡೂ ಕಾಣದಂತೆ ಉರುಳಿ ಹೋದುವು. ರಾಜಣ್ಣನಿಗೆ ಮೊದಲಿನಿಂದಲೂ ಮಾನವ ಸಮಾಜದ ಜೀವನದ ಸಮಗ್ರ ಪರಿಚಯ ಅಭ್ಯಾಸ ಮಾಡಿಕೊಳ್ಳುವ ಕುತೂಹಲ ವಿತ್ತು. ಅಲ್ಲದೆ ಆ ಜೀವನದಲ್ಲಿ ಹಣದ ಸ್ಥಾನ ಮತ್ತು ಪಾತ್ರಗಳ ಮಹತ್ವವನ್ನೂ ಸ್ವರೂಪವನ್ನೂ ವೈಜ್ಞಾನಿಕವಾಗಿ ಅರಿಯುವ ಹಂಬಲ ವಿತ್ತು. ಅವನ ಕಾಲೇಜು ಪಾಠಗಳಲ್ಲಿ ಆ ವಿಚಾರಗಳನ್ನೆಲ್ಲಾ ಅರಿತು ಕೊಳ್ಳಲು ಸಾಧ್ಯವಾಗುತ್ತಿರಲಿಲ್ಲ. ಆದುದರಿಂದ ಅವನು ಆ ವಿಷಯ ಗಳ ಮೇಲೆ ಪುಟ್ಟಪುಟ್ಟ ಪ್ರಬಂಧಗಳನ್ನು ಬರೆದು ಕಳಿಸುವಂತೆ, ಸುಲಭ ವಾಗಿ ಅರ್ಥವಾಗುವಂಥ ಪರಿಚಯ ಗ್ರಂಥಗಳನ್ನು ಕಳಿಸುವಂತೆ, ಶಾಂತಳನ್ನು ಪ್ರಾರ್ಥಿಸಿಕೊಂಡಿದ್ದ. ಅವಳೂ ಉತ್ಸಾಹದಿಂದ ಅವನ ಬಯಕೆಯನ್ನು ಈಡೇರಿಸಿದ್ದಳು. ಇದರಿಂದ ಅವರಿಬ್ಬರ ಆಸಕ್ತಿ-ಚಟುವಟಿಕೆಗಳು ಸಮನ್ವಯವಾಗಿ ಉಭಯರಿಗೂ ಪ್ರತಿಫಲವಾಗಿತ್ತು. ಶಾಂತಳಿಗೆ ತನ್ನ ಪಾಠಗಳೇ ಕ್ರೋಢೀಕರಣವಾದಂತಾಗಿ, ಹೆಚ್ಚಿನ ಪ್ರಯೋಜನವಾಗಿತ್ತು. ಈಗ ಅವಳಿಗೆ ತನ್ನ ಪಾಠಗಳ ಕಾಠಿಣ್ಯತೆ ಮಾಯವಾಗಿ, ಮಧುರತರವಾಗಿದ್ದುವು. ಅವನ ಕಾಲೇಜು ಪಾಠಗಳನ್ನೂ ಪರಿಚಯ ಮಾಡಿಕೊಡುವಂತೆ ಅವಳು ಅವನನ್ನು ಕೇಳಿದ್ದಳು. ರಾಜಣ್ಣನೂ ಉತ್ಸಾಹದಿಂದ ಅಟಾಮಿಕ್ ಕೆಮಿಸ್ಟ್ರಿ, ಭೌತಶಾಸ್ತ್ರದ ಆಕರ್ಷಣೀಯ ಪ್ರಯೋಗಗಳು, ಖಗೋಳ ಶಾಸ್ತ್ರದ ಅದ್ಭುತಗಳು, ಆಂಟಿ-ಬಯೋಟಿಕ್ಸಿನ ಹುಟ್ಟು, ಆರ್‌ಗ್ಯಾನಿಕ್-ಕೆಮಿಸ್ಟ್ರಿ ಮಾನವ ಜೀವನಕ್ಕೆ ಸಲ್ಲಿಸಿರುವ ಅಪಾರ ಸೇವೆ, ಅದರ ಸ್ಥೂಲ ಸ್ವರೂಪ – ಮುಂತಾದುವನ್ನೆಲ್ಲಾ ಅವಳಿಗೆ ಪುಟ್ಟಪುಟ್ಟ ಲೇಖನಗಳ ಮೂಲಕ ತಿಳಿಸಿದ್ದ. ಅವರಿಬ್ಬರೂ ಹೆಚ್ಚಿಗೆ ಭೇಟಿಯಾಗಲು ಸಾಧ್ಯವಾಗಿರಲಿಲ್ಲ. ಒಂದು ದಿನ ನಾಗಮ್ಮ, ಚಂದ್ರಪ್ಪ, ಕೇಶವಯ್ಯಂಗಾರರು, ಸುಧಾ, ಶ್ಯಾಮಲಳ ಜೊತೆಗೆ ಅವರಿಬ್ಬರೂ ಹೆಸರಘಟ್ಟಕ್ಕೆ ಹೋಗಿ ಬಂದಿದ್ದರು.

ಆದರೆ ಆ ವಿಹಾರಕೂಟದಲ್ಲಿ ದೃಷ್ಟಿ ಮಿಲನ, ಅಲ್ಪಸ್ವಲ್ಪ ಮಾತುಕತೆಗಳಲ್ಲೇ ಅವರು ತೃಪ್ತರಾಗಿರಬೇಕಾಗಿತ್ತು........ರಾಜಣ್ಣ ಕೆರೆಯಲ್ಲಿ ತೇಲುಬೋಕಿ ಬಿಟ್ಟು 'ಡೈನಾಮಿಕ್ಸ್ ಆಫ್ ಸ್ಕಿಪ್ಪಿಂಗ್ ಸ್ಟೋನ್ಸ್' ಮೇಲೆ ಅವಳಿಗೂ ಕೇಶವಯ್ಯಂಗಾರರಿಗೂ ಒಂದು ಉಪನ್ಯಾಸ ಕೊಟ್ಟು ಅವರ ತಲೆ ಕೆಡಿಸಿದ್ದ. ನೀರಿನಲ್ಲಿ ಒಂದು ಪುಟ್ಟಕಲ್ಲು ಮುಳುಗಿದರೂ ದೊಡ್ಡ ಮರದ ತುಂಡೇಕೆ ಮುಳುಗುವುದಿಲ್ಲ ಎಂಬ ಸೃಷ್ಟಿ ವೈಚಿತ್ರಕ್ಕೆ ಸಾಂದ್ರತೆಯೇ ಕಾರಣ ಎಂಬುದನ್ನು ಶ್ಯಾಮಲ, ಅಚ್ಚರಿಯಿಂದ ಕಣ್ಣರಳಿಸುತ್ತಿದ್ದ ಸುಧಾಳಿಗೆ ತಿಳಿಸಿದ್ದಳು. ರಾಜಣ್ಣ ಕೆರೆಯಲ್ಲಿ ಈಜು ಹೊಡೆದಿದ್ದ. ಕೆಂಪು ತಾವರೆಯ ಹೂವುಗಳನ್ನು ಕಿತ್ತುತಂದಿದ್ದ. ಹಿಂತಿರುಗುವಾಗ ತಾನು ಆಗತಾನೇ ಉತ್ಸಾಹದಿಂದ ಕಲಿತು, ಪ್ರಾವೀಣ್ಯತೆ ಪಡೆದಿದ್ದ ಕಾರ್ ಡ್ರೈವಿಂಗ್ ವಿದ್ಯೆ ಪ್ರದರ್ಶಿಸಲು.... ಅವನೇ ಮನೆಯವರೆಗೂ ಡ್ರೈವ್ ಮಾಡಿಕೊಂಡು ಬಂದಿದ್ದ.

ಈ ವಿಹಾರ ಕೂಟವಾದ ಪತ್ತಾರು ದಿನಗಳ ನಂತರ ಶಾಂತಳ ಮನೆಯಲ್ಲಿ ಯಾವುದೋ ಹಬ್ಬ ನಡೆಯಿತು. ಅಂದು ಇನ್ನೊಂದು ಪತ್ರ ಅವಳಿಂದ ಬಂತು.

ಮಿ. ರಾಜು,

ನಮ್ಮ ಮನೆಯಲ್ಲಿ ಇಂದು ಹೆಚ್ಚಿಗೆ ಸಿಹಿ ತಿಂಡಿಗಳನ್ನು ಮಾಡಿದ್ದೇವೆ. ನಮ್ಮ ತಂದೆಯವರು ನಿಮ್ಮನ್ನು ಮತ್ತು ಚಂದ್ರಪ್ಪನವರನ್ನು ಆಹ್ವಾನಿಸುತ್ತಾರೆ. ನಾಗಮ್ಮನವರನ್ನು ಕರೆಯಲು ನಾನೇ ಬರುತ್ತೇನೆ. ನೀವು ಈದಿನ ನಮ್ಮ ಮನೆಗೆ ಬರಲೇಬೇಕು. ತಿಂಡಿಗಳೆಲ್ಲವನ್ನೂ ನಾನೇ ಮಾಡಿದ್ದೇನೆ. ಖಂಡಿತ ತಪ್ಪಕೂಡದು, ಆ! ಆಮೇಲೆ ನೋಡಿ, ನಾನು ನಿಮ್ಮ ಸಂಗಡ 'ಠೂ' ಬಿಟ್ಟು ಬಿಡುತ್ತೇನೆ.

ನಿಮ್ಮ ಗೆಳತಿ,

ಶಾಂತ.

ಎಂದಿತ್ತು. ಅಂದು ರಾಜಣ್ಣ ಮತ್ತು ಎಲ್ಲರೂ ಶಾಂತಳ ಮನೆಗೆ ಊಟಕ್ಕೆ ಹೋದರು. ಬಹು ಆದರದ ಉಪಚಾರವಾಯಿತು. ಊಟ ತುಂಬಾ ರುಚಿಕರವಾಗಿತ್ತು. ಹಾಲುಖೀರು, ಸಕ್ಕರೆ ಪೊಂಗಲ್, ಪುಳಿಯೋಗರೆ, ರವೆಉಂಡೆ, ಪೂರಿ, ಬಟಾಣಿಸಾಗು, ಎಲ್ಲವನ್ನೂ ಶಾಂತ ರಾಜಣ್ಣನಿಗೆ ಕುಚೇಷ್ಟೆಗೋಸ್ಕರ ಹೆಚ್ಚು ಹೆಚ್ಚಿಗೆ ಬಡಿಸಿ ಬಿಟ್ಟಳು. ರಾಜಣ್ಣ ಅದನ್ನೆಲ್ಲಾ ತಿನ್ನಲಾರ, ತಿನ್ನದೆ ಬಿಡಲಾರ! ಅವಳ ತಂದೆ "ಹೂ ... ಊಟ ಮಾಡಿ ರಾಜಣ್ಣ, ಒಂದು ಗಂಟೆ ನೀರಿನಿಂದ ಹೊರಕ್ಕೆ ಬರದಂತೆ ಈಜು ಹೊಡೀಬಲ್ಲಿರಿ. ಆದರೂ ಇಷ್ಟೇಯೆ ನೀವು ಊಟ ಮಾಡುವುದು .... ಹು ಮಾಡಿ! ಮಾಡಿ!" ಎಂದು ಪ್ರಚೋದಿಸುತ್ತಿದ್ದರು.

"ಸರಿ, ನಾನಂತೂ ಈದಿನ ಜೀವಂತವಾಗಿ ಮನೆ ಸೇರುವುದಿಲ್ಲ. ಹೀಗೇ ಎಂದು ಮೊದಲೇ ತಿಳಿಸಬಾರದಾಗಿತ್ತೆ ಕೇಶವಯ್ಯಂಗಾರರೇ? ಆಗ ಬೆಳಿಗ್ಗೆಯಿಂದ ಉಪವಾಸವಾದರೂ ಮಾಡಿ ಬರ್ತಿದ್ವಿ!" ಎಂದು ಚಂದ್ರಪ್ಪ ಹೇಳುತ್ತಿದ್ದರೆ, ರಾಜಣ್ಣ ಸಂಕಟದ ನೋಟದಿಂದ ಅಡಿಗೆ ಮನೆಯ ಬಾಗಿಲಿನಲ್ಲಿ ಅಡಗಿ ನಿಂತಿದ್ದ ಶಾಂತಳನ್ನೇ ನೋಡಿದ. ಅವಳು ತನ್ನ ಕುಯುಕ್ತಿಯನ್ನು ತಾನೇ ಮೆಚ್ಚುತ್ತಾ, ಅವನ ಸಂಕಟ, ಒದ್ದಾಟವನ್ನು ನೋಡಿ ನಗುತ್ತಾ, ತುಟಿ ಕಚ್ಚಿ 'ಪರವಾಗಿಲ್ಲ ಸುಮ್ಮನೆ ಊಟ ಮಾಡಿ' ಎಂದು ಸನ್ನೆ ಮಾಡಿದಳು. ಅವನು ಕಹಿ ಮೂತಿ ಮಾಡುತ್ತಾ, 'ಸಾಧ್ಯವಿಲ್ಲ' ಎಂದು ಮುಷ್ಟಿಯ ಹೆಬ್ಬೆರಳು ಅಲ್ಲಾಡಿಸಿ ತಿಳಿಸಿದ. 'ನೀನೂ ಬಾ ಇಬ್ಬರೂ ಜೊತೆಗೇ ಪೂರೈಸಿ ಬಿಡೋಣ' ಎಂದು ಸನ್ನೆ ಮಾಡಿದ. ಅವಳು ನಾಚಿ, ನಗುತ್ತಾ ಹಿಂದೆ ಸರಿದಳು.

ಊಟ ಮಾಡಿದ ಮೇಲೆ ಎಲಡಿಕೆ ಹಾಕುತ್ತಾ ಅಲ್ಲೇ ಕೆಲವು ನಿಮಿಷ ಹರಟುತ್ತಾ ಕುಳಿತಿದ್ದರು. ಮನೆಯಲ್ಲಿದ್ದ ಕೆಲವೇ ಕೆಲವು ವಸ್ತುಗಳಿಂದಲೇ, ಹಿಂದೆ ಹೆಚ್ಚು ವೈಭವದಿಂದ ಜೀವಿಸಿರುವ ಸಂಸಾರ ಅದು ಎಂದು ಭಾಸವಾಗುತ್ತಿತ್ತು.

ಹಿಂತಿರುಗಿ, ರಾತ್ರೆ ಮಲಗುವಾಗ ರಾಜಣ್ಣ ಶಾಂತಳಿಗೆ

ಮಿಸ್. ಶಾಂತ,

ನೀವು ಖಂಡಿತ ಬಹಳ ನಿರ್ದಯ ಸ್ವಭಾವದವರು. ನಾನು ನಿಮ್ಮ ಮನೆಯಿಂದ ಹೇಗೆ ಬದುಕಿ ಬಂದೆನೋ ಗೊತ್ತಿಲ್ಲ! ಮನೆ ತಲಪುವವರೆಗೂ ಹೊಟ್ಟೆಯನ್ನು ಬಹು ದೃಢ ಚಿತ್ತದಿಂದ ಒಡೆದು ಹೋಗದಂತೆ ನೋಡಿಕೊಂಡೆ. ನೀವು ಇನ್ನು ಮೇಲೆ ಹೀಗೆಯೇ ಊಟಕ್ಕೆ ಬಡಿಸುವುದಾದರೆ ನಿಮ್ಮ ಮನೆಗೆ ಊಟಕ್ಕೆ ಬರುವುದಿಲ್ಲ. ನನ್ನನ್ನು ನೀವು ಏನೆಂದು ತಿಳಿದಿರುವಿರಿ?.... ನೀವು ಇಡುವ ರವೆಉಂಡೆಗಳನ್ನೆಲ್ಲಾ ನುಂಗಲು ನಾನೇನು ಕಿಂಗ್‌ಕಾಂಗೆ?

ಊಟವೇನೋ ತುಂಬಾ ರುಚಿ ರುಚಿಯಾಗಿತ್ತು. ನೀವೇ ಮಾಡಿದ್ದು ಎಂದು ಕೇಳಿ ಬಹಳ ಸೋಜಿಗವೂ ಆಯ್ತು, ಸಂತೋಷವೂ ಆಯ್ತು. ನೀವು ಖಂಡಿತ ನಳ ಮಹಾರಾಜನ ವಂಶದವರಾಗಿರಬೇಕು! ... ಕಾಲೇಜು ಹುಡುಗಿಯರು ಇಷ್ಟು ಚೆನ್ನಾಗಿ ಅಡಿಗೆ ಮಾಡಬಲ್ಲರು ಎಂದು ನನಗೆ ಗೊತ್ತೇ ಇರಲಿಲ್ಲ....!

ಇರಲಿ, ನಿಮ್ಮನ್ನು ಇಂದು ಬಿಳಿ ಸೀರೆಯಲ್ಲಿ ಕಂಡು ನಾನು ನಿಜವಾಗಿಯೂ ಚಕಿತಗೊಂಡೆ....ಬಿಳಿಯ ಉಡುಪಿನಲ್ಲಿ ನೀವು ಒಳ್ಳೇ ಬೆಳದಿಂಗಳಿನಲ್ಲಿ ಭೂಮಿಗಿಳಿದ ಅಪ್ಸರೆಯಂತೆ ಕಾಣುತ್ತೀರಿ! ನೀವೇಕೆ ದಿನವೂ ಬಿಳಿಯ ಸೀರೆಯನ್ನೇ ಉಡುವುದಿಲ್ಲ?

ನೀವು ಊಟ ಬಡಿಸಲು ನನ್ನ ಮುಂದೆ ಬಾಗಿದಾಗ ಒಂದು ಬಗೆಯ ಉನ್ಮಾದಕ ಪರಿಮಳ ಬರುತ್ತಿತ್ತು. ಅದೇನು ಹೇರ್ ಆಯಿಲ್‌ದೋ, ಸೆಂಟ್ ಸುವಾಸನೆಯೋ ಅಥವ ನಿಮ್ಮ ದೇಹವೇ ಪರಿಮಳ ಬೀರುತ್ತಿತ್ತೋ ನನಗೆ ಅನುಮಾನವಾಗಿದೆ! ದಯವಿಟ್ಟು, ಮನಸ್ಸಿಗೆ ಏನೂ ತಿಳಿದುಕೊಳ್ಳದೆ ಈ ಅನುಮಾನವನ್ನು ಬೇಗ ಪರಿಹರಿಸುವಿರಾ?

ನಿಮ್ಮ....ರಾಜು.

ಎಂದು ಪತ್ರ ಬರೆದು, ಅದನ್ನು ಮಾರನೆಯ ಬೆಳಿಗ್ಗೆ ಒಂದು ಪುಸ್ತಕದೊಳಗೆ ಇರಿಸಿ, ಅವಳಿಗೆ ತಲುಪಿಸಿದ. ಸಂಜೆಯೇ ಅವಳಿಂದ ಉತ್ತರ ಬಂದಿತು.

ಮಿ. ರಾಜು,

ನಿಮ್ಮ ಊಹೆಗಳು, ಅನುಮಾನಗಳು, ಎಲ್ಲವೂ ಕಲ್ಪನೆಯ ಕೂಸುಗಳು. ಮೊಟ್ಟ ಮೊದಲನೆಯದಾಗಿ ನಾನು ನಳ ಚಕ್ರವರ್ತಿಯ ವಂಶಕ್ಕೆ ಸೇರಿಲ್ಲ. ಈಗ ಎರಡು ವರ್ಷದಿಂದಲೂ ಒಂದು ದಿನವೂ ಹೆರ್ ಆಯಿಲ್, ಸ್ನೋ, ಸೆಂಟ್, ಒಂದನ್ನೂ ಉಪಯೋಗಿಸಿಲ್ಲ. ಮೈಸೂರು ಸ್ಯಾಂಡಲ್ ಸೋಪ್ ಹಾಕಿ ಮುಖ ತೊಳೆದುಕೊಂಡು, ಕೊಬ್ಬರಿ ಎಣ್ಣೆ ಉಪಯೋಗಿಸಿ ತಲೆ ಬಾಚುತ್ತೇನೆ. ಅಂಥ ಆಡಂಬರಗಳನ್ನು ಮುಂದೆ ಮಾಡುವ ಇಚ್ಛೆಯೂ ನನಗಿಲ್ಲ. ಇದಕ್ಕೆ ನಮ್ಮ ತಂದೆ ಶ್ರೀಮಂತರಲ್ಲದೆ ಇರುವುದು ಒಂದು ಮುಖ್ಯ ಕಾರಣವಲ್ಲ. ನಾನು ಹಲವಾರು ದಿನಗಳ ಆಲೋಚನೆ ಅನುಭವದ ನಂತರ ಒಂದು ತೀರ್ಮಾನಕ್ಕೆ ಬಂದಿದ್ದೇನೆ. ನಾನು ಸಹಜವಾಗಿ ಹೇಗಿದ್ದೇನೋ ಅಷ್ಟೇ ಸೌಂದರ್ಯ ನನಗೆ ಸಾಕು. ನಾನು ಸರಳ ಉಡುಪು ಧರಿಸಿದಷ್ಟೂ ಸುಂದರಿಯಾಗಿ ಕಾಣುತ್ತೇನೆಂದು ನನ್ನ ಗೆಳತಿಯರು ಹೇಳುತ್ತಿದ್ದರು. ಇಂದು ನೀವೂ ಹೇಳುತ್ತಿದೀರಿ.

ಈಗ ಇನ್ನೊಂದು ಮಾತು !

ನೀವು, ನನ್ನ ಮೈ ಸುಗಂಧ ಬೀರುತ್ತಿದ್ದಿತೇನೋ ಎಂದು ಪ್ರಶ್ನಿಸಿದ್ದೀರಿ. ಇದು ನಿಜವಾಗಿಯೂ ಒಂದು ತುಂಟ ಪ್ರಶ್ನೆ ! ಹಾಗಲ್ಲದೆ ನೀವು ಸಹಜವಾಗಿಯೂ ಆ ರೀತಿ ನಂಬಿದ್ದರೆ ಅದು ಕೇವಲ ಭ್ರಾಂತಿ. ನಾನು ಯಾವಾಗಲೂ ಶುಚಿಯಾಗಿರುತ್ತೇನೆ. ಆಗತಾನೆ ಸೋಪು ಹಾಕಿ ಮುಖ ತೊಳೆದು ಬಂದಿದ್ದೆ. ಅಲ್ಲದೆ ಹಾಲುಖೀರಿನ ವಾಸನೆಯೂ ಸೇರರಿಬೇಕು !

ಒಟ್ಟಿನಲ್ಲಿ ನೀವು ಬಹಳ ತಮಾಷೆ ವ್ಯಕ್ತಿಗಳು. ಎಲ್ಲಾ

ದರೂ ಮನುಷ್ಯರು ಹೂವಿನಂತೆ ಸುಗಂಧ ಬೀರುತ್ತಾರೆಯೆ ?

ನಾನು ಬಿಳಿಯ ಸೀರೆ ಏಕೆ ಉಡುವುದಿಲ್ಲ ಎಂದು ಕೇಳಿದ್ದೀರಿ. ನನ್ನ ಬಳಿ ಬಿಳಿ ಸೀರೆ ಇಲ್ಲ. ನಿನ್ನೆ ಉಟ್ಟ ಸೀರೆ ಶ್ಯಾಮಲಾದು. ಬಿಳಿಯ ಸೀರೆಯನ್ನೇ ಉಡಬೇಕು ಎಂದು ನಿಮ್ಮ ಅಪೇಕ್ಷೆಯಾದರೆ, ನನ್ನ ಗುಲಾಬಿ ಸೀರೆ ಅವಳಿಗೆ ಕೊಟ್ಟು ನಾನು ಇದನ್ನೇ ಉಡುತ್ತೇನೆ....ಅವಳು ಒಪ್ಪಿಕೊಂಡರೆ !.... ಅಲ್ಲದೆ ನಾನು ಬಹಳ ಮೆಚ್ಚುವುದೂ ಬಿಳಿ ಮತ್ತು ನಸು ನೀಲಿ ಬಣ್ಣ, ಇವುಗಳನ್ನೇ.

ನೀವೇಕೆ ಈಗ ಬುಷ್ ಷರಟು ಹಾಕುತ್ತಿಲ್ಲ. ಬಿಳಿಯ ಪ್ಯಾಂಟ್ ಹಾಕಿ, ಆ ಡಬ್ಬಲ್ ಪಾಕೆಟ್, ಸಿಂಗಲ್ ಕಪ್ಪಿನ ಬಿಳಿಯ ಲಿನನ್ ಷರಟು ಹಾಕಿ, ಬ್ರೌನ್ ಷೂಸ್‌ನಲ್ಲಿ ನಿಂತು ಕೊಂಡರೆ, ನಿಮ್ಮ ಕೆಂಪು ಮುಖ, ಕಪ್ಪಾಗಿ ಹೊಳೆಯುವ ತಲೆ ಕೂದಲು, ನಿಮ್ಮ ಎತ್ತರವಾದ ನಿಲುವು ಮನಮೋಹಕವಾಗಿರುತ್ತೆ. ಒಳ್ಳೇ ಏರ್ ಫೋರ್ಸ್ ಕ್ಯಾಡೆಟ್‌ನಂತೆ ಕಾಣುತ್ತೀರಿ! ನೀವು ಆ ನೀಲಿ ಗ್ಯಾಬರ್ಡಿನ್ ಪ್ಯಾಂಟ್, ಬಿಳಿಯ ಸಿಲ್ಕು ಷರ್ಟು ಹಾಕಿ, ತೋಳು ಮಡಿಸಿ, ವಾಚ್ ಕಟ್ಟಿದಾಗಲೂ ಅಷ್ಟೆ, ಖಾದಿ ಜುಬ್ಬ, ಷರಾಯಿ ಹಾಕಿದಾಗಲೂ ಅಷ್ಟೆ. ನೀವು ಯಾವ ಉಡುಪಿನಲ್ಲಾದರೂ ಚೆನ್ನಾಗಿ ಕಾಣುತ್ತೀರಿ.

ಅಲ್ಲದೆ, ನೀವು ಒಂದೊಂದು ದಿನ ಸ್ನೋ ಹಾಕುತ್ತೀರಿ. ದಿನವೂ ಹೇರ್ ಆಯಿಲ್ ಉಪಯೋಗಿಸುತ್ತೀರಿ. ಎರಡೆರಡು ದಿನಕ್ಕೇ ಮುಖ ಕ್ಷೌರ ಮಾಡಿಕೊಳ್ಳುತ್ತೀರಿ. ಹಾಗೆ ಮಾಡಬೇಡಿ. ಮುಖ ಒರಟಾಗುತ್ತದಂತೆ. ಅದು ನನಗೆ ಗೊತ್ತಿಲ್ಲ. ನಮ್ಮ ತಾಯಿ, ನಾನು ಚಿಕ್ಕಂದಿನಲ್ಲಿದ್ದಾಗ ನಮ್ಮ ತಂದೆಗೆ ಹೇಳಿದ್ದ ಮಾತು !

ಅಂದು ನಿಮ್ಮ ಗೆಳೆಯನೊಂದಿಗೆ ಸಿಗರೇಟು ಸೇದುತ್ತಿದ್ದಿರಿ. ನೀವು ಆ ಕೆಟ್ಟ ಚಾಳಿಯನ್ನು ಬಿಟ್ಟು ಬಿಡಬೇಕು. ದಯವಿಟ್ಟು ನನಗೋಸ್ಕರವಾದರೂ ಬಿಡಬೇಕು. ಇನ್ನೊಂದು

ಬಾರಿ ನೀವು ಸಿಗರೇಟು ಸೇದುವುದು ನನಗೆ ಕಂಡು ಬಂದರೆ, ನಾನು ಮಾತು ನಿಲ್ಲಿಸಿಬಿಡುತ್ತೇನೆ.... ನೋಡಿ! ಹಾಗೆ ದಯವಿಟ್ಟು ಮಾಡಿಕೋ ಬೇಡಿ.... ಈಗ ಅಡಿಗೆ ಮಾಡುತ್ತಿದೇನೆ. ಅನ್ನ ಕುದಿಯುತ್ತಿದೆ.... ಅಡಿಗೆ ಮನೆಗೆ ಹೋಗುತ್ತೇನೆ.

ನಿಮ್ಮ..... ಶಾಂತ.

'P. S: ನೀವು ಈ ಪತ್ರಗಳನ್ನೆಲ್ಲಾ ಸುಟ್ಟುಬಿಡಿ. ನಿಮ್ಮ ಪತ್ರಗಳನ್ನೆಲ್ಲಾ ನಾನು ಮನಸ್ಸಿಲ್ಲದೆ ಸುಡುತ್ತಿದೇನೆ.'

ದಿನದಿನವೂ ರಾಜಣ್ಣ ಶಾಂತಳ ಗೆಳೆತನ ಹೆಚ್ಚು ಹೆಚ್ಚು ಆಪ್ತವಾಗತೊಡಗಿತು. ಅವಳ ತಂದೆಯೂ ಈಗ ರಾಜಣ್ಣನ ಸಂಗಡ ವಿಶೇಷವಾದ ಚರ್ಚೆ - ವಿಚಾರ ವಿನಿಮಯ ಮಾಡುತ್ತಿದ್ದರು. ಅವರಿಬ್ಬರೂ ಪ್ರತಿ ಶನಿವಾರವೂ, ಮಧ್ಯಾಹ್ನ ನಾಲ್ಕು ಗಂಟೆಗೇ ಮನೆಬಿಟ್ಟು ಹೊರಟು, ಕಬ್ಬನ್ ಪಾರ್ಕ್, ಆಂಗ್ಲ ಕುಟೀರಗಳಿದ್ದ ಅಂದವಾದ, ಪ್ರಶಾಂತವಾದ ಅಂಕುಡೊಂಕು ರಸ್ತೆಗಳ ಮೂಲಕ ಸಂಜೆಯೆಲ್ಲಾ ನಡೆಯುತ್ತಾ, ಅನೇಕ ವಿಚಾರಗಳನ್ನು ಮಾತಾಡುತ್ತಿದ್ದರು. ಕೇಶವ ಅಯ್ಯಂಗಾರರಿಗೆ ವಿಶ್ವದ ಜ್ಞಾನ ಸಂಸ್ಕೃತಿಗಳಲ್ಲೇ ಅಪಾರ ಆಸಕ್ತಿ ಅಭಿಮಾನಗಳಿದ್ದುವು. ಅವರು ರಾಜಣ್ಣನಿಗೆ ಹೇಳದಿದ್ದ ವಿಷಯಗಳಿಲ್ಲ. ಭಾರತೀಯ ಸಂಸ್ಕೃತಿ, ನಾಗರೀಕತೆ, ಪಾಶ್ಚಾತ್ಯ ಸಂಸ್ಕೃತಿ ವಿಕಸಿಸಿದ ಬಗೆ, ರಿನೇಸಾನ್ಸ್, ಔದ್ಯೋಗಿಕ ಕ್ರಾಂತಿ, ಅದರ ಆರ್ಥಿಕ ಸಾಮಾಜಿಕ ಪರಿಣಾಮಗಳು, ಮಾರ್ಕ್ಸಿಸಂ, ವಿಜ್ಞಾನದ ಪ್ರಗತಿ, ಹ್ಯೂಗೋ, ಸ್ಟೆಂಡಲ್, ಜೋಲಾ, ರೋಲಾ, ಟಾಲ್ ಸ್ಟಾಯರ ಕೃತಿಗಳು, ಡ್ರೈಫಸ್ ಪ್ರಕರಣ, ವಾಂಗೋ, ಡೆಲಕ್ರೊಯಿಕ್ಸ್, ಮಾನೆಟ್, ಇವರ ಕಲಾಕೃತಿಗಳು, ಭೀಟೋವನ್, ಬಾಕ್, ಲಿಟ್ಸ್ನ್, ಚೋಪಿನ್, ಇವರ ಸಂಗೀತ ರಾಗ ಸೃಷ್ಟಿಗಳು, ಫ್ರೆಂಚ್ ಸಾಹಿತ್ಯ, ಜರ್ಮನ್ ಸಾಹಿತ್ಯ, ತತ್ವ ಜ್ಞಾನ, ಇಟಾಲಿಯನ್ ಸಾಹಿತ್ಯ, ರಷ್ಯನ್ ಸಾಹಿತ್ಯ, ಸುಬ್ಬುಲಕ್ಷ್ಮಿಯ ಸಂಗೀತ, ಶಾಂತಾರಾಮ್ ದಿಗ್ದರ್ಶಿಸಿದ ಉತ್ತಮ ಚಿತ್ರಗಳು, ಕನ್ನಡದ 'ಶ್ರೀ'.... ಇವರೆಲ್ಲರ ಮೇಲೂ ಅವರು

ಅತ್ಯಂತ ಸ್ವಾರಸ್ಯವಾಗಿ ಮಾತಾಡುತ್ತಿದ್ದರು. ಹೇಗೆ ಹೇಗೋ ಪ್ರಾರಂಭವಾದ ಮಾತು, ಆರೇಳು ಮೈಲಿ ನಡೆದರೂ ಪೂರ್ತಿಯಾಗದೆ ಒಮ್ಮೆ ನಿಂತು, ಮತ್ತೊಮ್ಮೆ ಆವೇಗದಿಂದ ಚಲಿಸಿ, ಮತ್ತೆ ಮನೆಯ ಗೇಟಿನ ಬಳಿಗೆ ಬರುವ ವರೆಗೂ ನಿಲ್ಲುತ್ತಿರಲಿಲ್ಲ........ಆ ರೀತಿ ಪ್ರತಿ ವಾರವೂ ಶನಿವಾರ ಎಂದು ಬರುವುದೋ ಎಂದು ರಾಜಣ್ಣ ತವಕದಿಂದ ನಿರೀಕ್ಷಿಸುತ್ತಿದ್ದ. ಏಕೆಂದರೆ ಅವನು ಈ ವಿಷಯಗಳ ಆಸಕ್ತಿಯಲ್ಲಿ ಕಾಲೇಜಿನ ಓದು ನಿರ್ಲಕ್ಷಿಸಬಾರದೆಂದು ಅವರು ಆಗಾಗ ಒತ್ತಿ ಒತ್ತಿ ಹೇಳುತ್ತಿದ್ದರು. ರಾಜಣ್ಣನೂ ಅವರ ದೂರಾಲೋಚನೆಯನ್ನು ಮೆಚ್ಚಿ, ತಾನು ಮುಗಿಸಲು ಬಂದ ಕಾರ್ಯವನ್ನು ಯಶಸ್ವಿಯಾಗಿ ಪೂರ್ಣಗೊಳಿಸುವ ಆತುರದಿಂದ ಅತ್ತ ಕಾಲೇಜಿನ ಓದನ್ನೂ.... ನಿರ್ಲಕ್ಷಿಸುತ್ತಿರಲಿಲ್ಲ. ಅವನಿಗೆ ಅವರ ಜ್ಞಾನಭಂಡಾರ, ಅವರು ಎಂಥ ವಿಷಯವನ್ನಾದರೂ ಕಥೆಯಷ್ಟು ಸ್ವಾರಸ್ಯವಾಗಿ, ಸೂಕ್ಷ್ಮ ವಿವರಗಳಿಂದ ನಿರೂಪಿಸುವ ಚತುರ ಕ್ರಮ ಅವನನ್ನು ಮುಗ್ಧಗೊಳಿಸಿ ದುವು.. ಅಷ್ಟು ಬಾರಿ ಅವರೊಡನೆ ಒಡನಾಡಿದ್ದರೂ ಅವನಿಗೆ ಅವರು ಯಾವ ಕೆಲಸದಲ್ಲಿದ್ದಾರೆ ಎಂದು ತಿಳಿದಿರಲಿಲ್ಲ. ಅವರ ಜೀವನ ಅಷ್ಟೇನೂ ಸುಖಕರವಾಗಿರುವಂತೆ ಕಾಣಲಿಲ್ಲ. ಆದರೂ ಅವರ ಆತ್ಮ ಹೃದಯಗಳ ಆಂತರಿಕ ಭಂಡಾರ, ಈ ಭುವಿಯ ಎಲ್ಲ ಕೀಳು ಕೊರತೆ ಗಳನ್ನೂ ಸಮತೂಗಿಸಿಕೊಂಡು ಹೋಗುತ್ತಿರುವಂತೆ ಕಂಡಿತು...... .. ಅವರೂ ಸಹ ರಾಜಣ್ಣನೊಡನೆ ಮಾತಾಡಲು ಅಷ್ಟು ಪ್ರೀತಿಯಿಂದಿರು ತ್ತಿದ್ದರು. ಪ್ರತಿದಿನ ಬೇರ್ಪಡುವಾಗಲೂ " ನಿನ್ನ ಜೊತೆ ಯಾವ ವಿಚಾರ ಮಾತಾಡಲೂ ತುಂಬಾ ಸಂತೋಷವಾಗುತ್ತೆ ರಾಜು...." ಎಂದೇ ತಮ್ಮ ಹಾದಿ ತಾವು ಹಿಡಿಯುತ್ತಿದ್ದುದು. ಅವರ ವ್ಯಕ್ತಿತ್ವ ರಾಜಣ್ಣನಲ್ಲಿ ಅಪಾರ ಗೌರವ, ವಿಶ್ವಾಸಗಳನ್ನು ಪ್ರಚೋದಿಸಿದ್ದಿತು.

ಹಾಗೆಯೇ ಶಾಂತಳ ಪತ್ರಗಳಲ್ಲೂ, ವದನ, ನೋಟಗಳಲ್ಲಿಯೂ ಒಂದು ಬಗೆಯ ಗಾಂಭೀರ್ಯ, ಧರ್ಮ ಬುದ್ಧಿ, ಸಾತ್ವಿಕ ಶಕ್ತಿ ತುಂಬಿರುತ್ತಿತ್ತು. ಅವಳ ನೋಟ, ಮಾತು, ಕಥೆಗಳು ಮನೆಗೆ ಆಗಾಗ ಬರುತ್ತಿದ್ದ ಇತರ ಹುಡುಗಿಯರಂತೆ ಉನ್ಮಾದಕ, ಉದ್ದೀಪಕ,

ಚಾಂಚಲ್ಯಪ್ರೇರಕವಾಗಿರಲಿಲ್ಲ. ಅದಕ್ಕೆ ಬದಲು ಸತತ ಒಲುಮೆಯ ಒಂದು ಪ್ರಶಾಂತ ದಿವ್ಯ ಧ್ರುವತಾರೆಯಂತೆ ಸದಾಕಾಲವೂ ಕಂಗೊಳಿಸುತ್ತಿತ್ತು. ಅವನ ಮೈ ಮನಗಳಲ್ಲಿ ಸೌಮ್ಯ ಆವೇಗದ, ಮಧುರ ಪುಳಕದ ತರಂಗಗಳನ್ನೇಳಿಸುತ್ತಿತ್ತು.

ಅವನು ಅನೇಕ ಸಂಜೆ, ಬಳಿಯ ಕೆರೆಯ ಕಟ್ಟೆಯಮೇಲೆ ಸುಧಾಳೊಂದಿಗೆ ಕುಳಿತು, ನೀರಿನಲ್ಲಿ ತೇಲುಬೋಕಿಗಳನ್ನು ಬಿಡುತ್ತಾ, ಶಾಂತಳ ಅಮೃತಮೂರ್ತಿಯನ್ನೇ ಸವಿನೆನಪಿನ ಕನಸಿನ ಕಣ್ಣುಗಳಲ್ಲಿ ಹೊತ್ತು ಯೋಚಿಸುತ್ತಿದ್ದ. ಆಗ ಅವನಿಗೆ ನಾಲ್ಕು ವರ್ಷಗಳ ಹಿಂದಿನ ತನ್ನ ಸ್ವಚ್ಛಂದ ಅರಾಜಕ ವಿದ್ಯಾರ್ಥಿ ಜೀವನವನ್ನು ನೆನೆದು ವಿಷಾದವಾಗುತ್ತಿತ್ತು. ನಂತರ ಹಳ್ಳಿಯಲ್ಲಿ ನೆಲೆಸಿ, ರಾಜಶೇಖರನೊಡನೆ ಕಳೆದ ದಿನಗಳ ನೆನಪು ಮೇಲುಕ್ಕಿ ಬರುತ್ತಿದ್ದುವು. ಅಲ್ಲಿ ಅವನ ಜೀವನ ಬೆಳಗಿನಿಂದ ಸಂಜೆಯವರೆಗೂ ತುಂಬಿ ಹರಿಯುವ ಒಂದು ತಿಳಿನೀರಿನ ತೊರೆಯಂತೆ ಕಾಣಿಸುತ್ತಿತ್ತು. ಹೊಲದ ಕೆಲಸ, ರೈತರಿಗೆ ನೆರವು, ಬೋಧನೆ, ಯೋಜನೆಗಳ ರಚನೆ, ಅವುಗಳ ಕಾರ್ಯಕ್ರಮ, ಚಟುವಟಿಕೆಗಳಲ್ಲೇ ದಿನಗಳು ಕಳೆದುಹೋಗಿದ್ದುವು. ಸಂಯಮ, ಸಾಧನೆ, ಸದಧ್ಯಯನ, ಸದ್ವಿಹಾರ, ಸತ್ಕಾರ್ಯಗಳೇ ಅಲ್ಲಿನ ಬದುಕಿನ ಪವಿತ್ರವಾದ ಪಂಜಸೂತ್ರಗಳಾಗಿದ್ದುವು. ಪ್ರತಿನಿತ್ಯ ಮಲಗುವಾಗಲೂ ತಾನೊಂದು ದಿನವನ್ನು ಸದ್ವಿನಿಯೋಗಿಸಿಕೊಂಡಿರುವೆನೆಂಬ ಆತ್ಮತೃಪ್ತಿಯಿರುತ್ತಿತ್ತು; ಆತ್ಮಾನಂದವಿರುತ್ತಿತ್ತು. ನಾಲ್ಕು ಕಡೆಗಳಲ್ಲೂ ವಿವೇಕಾನಂದ, ಟಾಗೋರ್, ಲೆನಿನ್, ಗಾಂಧಿಜಿಯವರ ಭಾವಚಿತ್ರಗಳಿಂದ ಕೂಡಿ, ಮೂಲೆಯ ಬೀರುಗಳಲ್ಲಿ ನೂರಾರು ಸದ್ಗ್ರಂಥಗಳಿದ್ದ ರಾಜಶೇಖರನ ಗುಡ್ಡದ ಮನೆ, ತನ್ನ ಪರಿವೃತ್ತ ಪರಿಧಿಯಲ್ಲೇ ಜ್ಞಾನ, ಆದರ್ಶ, ಅನ್ವೇಷಕ, ಮನೋವೃತ್ತಿಗಳ ಸಾಧನ ಮಂದಿರದಂತಿತ್ತು. ರಾಜಶೇಖರ ಅದರ ದೀಕ್ಷಾಗುರುವಿನಂತೆ ನೆಲೆಸಿದ್ದ.

ಅವನೊಡನೆ ಒಡನಾಡಿದ ಪರಿಣಾಮವಾಗಿ ರಾಜಣ್ಣನ ಜೀವನದಲ್ಲಿ ಒಂದು ಬಗೆಯ ಬಿಗಿ, ಹದ ಮತ್ತು ಸಾತ್ವಿಕ ಮಾಧುರ್ಯಗಳು ತಲೆದೋರಿದ್ದುವು.

ಅವುಗಳೆಲ್ಲಾ ಬೆಂಗಳೂರಿಗೆ ಕಾಲಿರಿಸಿದೊಡನೆಯೇ ನಿಧಾನ ವಾಗಿ ಮಾಯವಾಗಬೇಕಿತ್ತು. ಆದರೆ ಅವನ ಎಡ ಬಲಕ್ಕೆ ಶಾಂತ, ಕೇಶವಯ್ಯಂಗಾರರು ರಕ್ಷಾ ದೇವತೆಗಳಂತೆ ಬಂದು ನಿಂತಿದ್ದರು. ಕೇಶವಯ್ಯಂಗಾರರು ಜೀವನಕ್ಕೆ ಪಾವನಜ್ಞಾನದ ಬೆಳಕನ್ನು ನೀಡು ತ್ತಿದ್ದರೆ, ಶಾಂತ ಪ್ರೇಮದ ಸವಿಯನ್ನೆರೆಯುತ್ತಿದ್ದಳು; ಒಲುಮೆಯ ಹೂಮಳೆಗರೆಯುತ್ತಿದ್ದಳು; ಬಾಳನ್ನೇ ಕಂಪುಗೊಳಿಸುತ್ತಿದ್ದಳು.

ಅವಳ ಹೃದಯಸಾಮ್ರಾಜ್ಯದ ಆಮೂಲಾಗ್ರ ಪರಿಚಯ ಮಾಡಿಕೊಳ್ಳುವ ಆತುರ ಅವನಿಗೆ ಅಧಿಕವಾಯಿತು. ಅದಕ್ಕೇ ಅವಳಿ ಗೊಂದು ಪತ್ರ ಬರೆದು, ಅದರಲ್ಲಿ ಅವಳು ಸ್ನೋ - ಪೌಡರ್ ಉಪಯೋಗಿಸದಿರುವುದನ್ನು ಪ್ರಸ್ತಾಪಿಸಿ, ತನ್ನ ಚರ್ಮ ಮೃದುವಾಗಿ ರುವುದರಿಂದ, ಮುಖಕ್ಷೌರದ ಉರಿ ತಪ್ಪಿಸಿಕೊಳ್ಳಲು ಮಾತ್ರ ತಾನು ಸ್ನೋ ಹಾಕುವೆನೆಂದು ತಿಳಿಸಿ, ಮುಖ್ಯವಾದ ವಿಷಯವನ್ನು ಪ್ರಶ್ನಿಸಿದ್ದ. ಅದರಲ್ಲಿ—

ಶಾಂತ,

ನೀವು ಬಹಳ ಕಂದಾಚಾರದ ಪದ್ಧತಿಯವರಂತೆ ತೋರು ತ್ತೀರಿ. ಆದರೆ ನಾನು ಬಾಹ್ಯ ದೃಷ್ಟಿಯಿಂದಲೇ ನೀವು ಆ ಪದ್ಧತಿಯವರೆಂದು ನಿರ್ಧರಿಸುವುದಿಲ್ಲ. ನೀವು ಜೀವನದಲ್ಲಿ ಆಳವಾಗಿ ನಂಬಿರುವುದೇನು ?.... ಏನನ್ನು ಪವಿತ್ರ ಎಂದು ಪರಿ ಗಣಿಸುತ್ತೀರಿ....? ನಿಮ್ಮ ಬಾಳಿನ ಧ್ಯೇಯ ಏನು ?

ಎಂದು ಕೇಳಿದ್ದ. ಆ ಪತ್ರಕ್ಕೆ ಒಂದೆರಡು ದಿನಗಳಾದ ಮೇಲೆ ಉತ್ತರ ಬಂದಿತು.

ಮಿ. ರಾಜು,

ನೀವು ಬಹಳ ಕಠಿಣವಾದ ಪ್ರಶ್ನೆಗಳನ್ನು ಕೇಳಿದ್ದೀರಿ. ನಾನು ಉತ್ತರ ಕೊಡುವುದಕ್ಕೆ ಮೊದಲು, ನಿಮ್ಮ ಅಭಿಪ್ರಾಯ ಗಳೇನು ? ಧ್ಯೇಯಗಳೇನು ? ಎಂದು ಕೇಳಬೇಕೆಂದಿದ್ದೆ. ಪರ

ವಾಗಿಲ್ಲ. ನಾನೇ ಮೊದಲು ಹೇಳುತ್ತೇನೆ.

ನನಗೆ ಒಳ್ಳೆಯ ಸ್ವಭಾವ, ಗುಣಗಳುಳ್ಳ ಜನರನ್ನು ಕಂಡರೆ ಸಂತೋಷವಾಗುತ್ತೆ. ಕಳಂಕರಹಿತ ಜೀವನ ನಡೆಸ ಬೇಕು. ಜ್ಞಾನಕ್ಕಾಗಿ, ಪ್ರೇಮಕ್ಕಾಗಿ, ಸ್ನೇಹಕ್ಕಾಗಿ, ಸಾಧನೆ ಗಾಗಿ ಜೀವಿಸಬೇಕು. ಸರಳತೆಯಿಂದ, ಸರ್ವತೋಮುಖ ವಿಕಾಸವನ್ನು ಹೊಂದುತ್ತಾ, ಜೀವನದ ಸವಿಯೆಲ್ಲವನ್ನೂ ಹೀರುತ್ತಾ, ಸುಂದರವಾಗಿ ಜೀವಿಸಬೇಕು, ಎಂದು ನನ್ನ ಇಷ್ಟ. ನನಗೆ ಅಸೂಯೆ, ಚಾಡಿ, ದ್ವೇಷ, ಕ್ರೌರ್ಯ ಇವುಗಳನ್ನು ಕಂಡರೆ ಆಗುವುದಿಲ್ಲ. ನಾನು ಸೌಂದರ್ಯವನ್ನು ಮೆಚ್ಚುತ್ತೇನೆ. ಅದೇ ರೀತಿ ದುಡಿಮೆಯನ್ನು ಮೆಚ್ಚುತ್ತೇನೆ. ಸ್ವತಂತ್ರ ಜೀವ ನವೇ ನನ್ನ ಬಾಳ ದಾರಿ. ಸಮಾಜದ ದೋಷ, ಅನ್ಯಾಯ, ಅಜ್ಞಾನಗಳನ್ನು ಹೋಗಲಾಡಿಸಲು ಉತ್ಸಾಹಿಯಾಗಿದ್ದೇನೆ. ಆದರೆ ಹೇಗೆ ಆ ಕಾರ್ಯರಂಗವನ್ನು ಪ್ರವೇಶಿಸಬೇಕೋ ಗೊತ್ತಿಲ್ಲ. ಅದಕ್ಕೂ ಮೊದಲು ನನ್ನ ಸ್ವತಂತ್ರ ಜೀವನದ ಬುನಾದಿ ಭದ್ರಪಡಿಸಿಕೊಳ್ಳಬೇಕೆಂದಿದೇನೆ.

ನಮ್ಮ ತಂದೆ ನನಗೆ ಚಿಕ್ಕಂದಿನಿಂದಲೂ ಬೋಧಿಸಿರು ವುದು ಒಂದೇ ಪಾಠ....' ಉನ್ನತ ಧ್ಯೇಯ. ..ಸರಳಜೀವನ.' ಅವರು ಈಗಲೂ ಎಲ್ಲರಿಗೆ ಹೇಳುವುದೂ, ತಾವು ಹಿಂದೆ-ಈಗ ನಡೆಸುತ್ತಿರುವುದೂ ಅಷ್ಟೆ. ನನ್ನ ಅಣ್ಣಂದಿರು ಅವರ ಮಾತನ್ನು ಲೆಕ್ಕಿಸಲಿಲ್ಲ. ಅವರ ನಂಬಿಕೆ ಆಸೆಗಳಿಗೆ ದ್ರೋಹ ಮಾಡಿದರು. ಅವರ ಮನಸ್ಸನ್ನು ತುಂಬಾ ನೋಯಿಸಿದರು. ನಾನು ಹೆಂಗ ಸಾದರೂ ಪರವಾಗಿಲ್ಲ, ನನ್ನ ಕೈಲಾದ ಮಟ್ಟಿಗೂ ಅವರ ಬೋಧನೆಗಳನ್ನು ಅನುಸರಿಸಬೇಕೆಂದಿದ್ದೇನೆ.

ನಾನು ಅಚಲವಾಗಿ ನಂಬಿರುವುದು ಮಾನವನ ಸುಸ್ವಭಾವ ವನ್ನು. ಜಗತ್ತಿನಲ್ಲಿ ಸಂಪೂರ್ಣವಾಗಿ ಒಳ್ಳೆಯವರು, ಉತ್ತಮ ರಾಗಲಿ, ಸಂಪೂರ್ಣವಾಗಿ ಕೆಟ್ಟವರು, ಅಧಮರಾಗಲೀ ಇಲ್ಲ ಎಂದೇ ನನ್ನ ಭಾವನೆ. ಅವರು ಉಚ್ಚ, ನೀಚರಾಗಲು ಅವರ

ಪರಿಸ್ಥಿತಿಗಳು, ಶಿಕ್ಷಣ ಸಂಸ್ಕಾರಗಳಿಲ್ಲದ ಮನಸ್ಸು ಹೃದಯಗಳೇ ಕಾರಣ ಎಂದು ತಿಳಿದಿದ್ದೇನೆ. ಆದಷ್ಟು ಮಂದಿ ಸುಜನರು ಜಗತ್ತಿನಲ್ಲಿ ಹೆಚ್ಚಲು ಶ್ರಮಿಸಬೇಕೆಂದಿದೇನೆ. ಆದರೆ ಆ ಯತ್ನ ದಲ್ಲೂ ಎಲ್ಲಿಂದ ಪ್ರಾರಂಭಿಸಬೇಕೋ ಸರಿಯಾಗಿ ಗೊತ್ತಿಲ್ಲ. ಈಗ ನನ್ನ ಮೇಲೆ ತುಂಬಾ ಪ್ರಭಾವ ಬೀರುತ್ತಿರುವ ಪುಸ್ತಕ ಗಳು, ಟಾಲ್‌ಸ್ಟಾಯ್, ಟಾಗೋರ್, ಪರ್ಲ್‌ಬಕ್, ಇನಾಂದಾರ್, ಕುವೆಂಪು, ಕಾರಂತ, ಬರ್ಟ್ರೆಂಡ್ ರಸಲ್, ಚೆಕಾಫ್ ಇವರವು.

ಆದರೆ, ನಾನು ಹೆಂಗಸು. ಏನನ್ನೂ ಹೊರಗಿನ ಪ್ರಪಂಚಕ್ಕೆ ಬಂದು ಮಾಡಲು ಸುಲಭ ಸಾಧ್ಯವಲ್ಲ. ಅಂತೂ ಒಂದು ಉದ್ಯೋಗವನ್ನು ಮೊಟ್ಟ ಮೊದಲು ಹಿಡಿಯುತ್ತೇನೆ. ನಂತರ ಕೈಲಾದಷ್ಟು ಪ್ರಯೋಜನಕರ, ಸರಳ, ಸುಂದರ ಜೀವನ ನಡೆಸುವುದು ನನ್ನ ಬಾಳಿನ ಧ್ಯೇಯ. ಸುಂದರ ಜೀವನ ಎಂದರೆ, ಅದರಲ್ಲಿ ಪ್ರೇಮವಿರಬೇಕು, ಪತಿ ಇರಬೇಕು, ಮಕ್ಕಳು ಬೇಕು, ಹತ್ತಾರು ಆಪ್ತ ಸ್ನೇಹಿತರಿರಬೇಕು, ದಯೆ, ಸಹೃದ ಯತೆ, ಸಹಾಯ, ಸಾಧ್ಯವಾದರೆ ಸ್ವಲ್ಪ ತ್ಯಾಗ ಎಲ್ಲವೂ ಇರಬೇಕು.

ಇನ್ನು ನಿಮ್ಮ ಧ್ಯೇಯಗಳು ಏನು? ನನಗೆ ತಿಳಿಸಿ. ತುಂಬಾ ಆತುರಳಾಗಿದ್ದೇನೆ.

ನಿಮ್ಮ ನೆಚ್ಚಿನ ಗೆಳತಿ,
ಶಾಂತ.

ಎಂದಿತ್ತು. ರಾಜಣ್ಣ ಅದನ್ನೋದಿ ತುಂಬಾ ಸಂತೋಷಪಟ್ಟ. ಅವನಿಗೆ ಹೆಂಗಸರು ಆ ರೀತಿ ಇರುವರೇ ಎಂದು ಆಶ್ಚರ್ಯವೂ ಆಯಿತು. ಅವಳ ಧ್ಯೇಯವನ್ನು ಅವನು ತುಂಬಾ ಮೆಚ್ಚಿದ.

* * *

ಕೆಲವು ದಿನಗಳಲ್ಲಿಯೇ ಶಾಂತಳ ಅಣ್ಣ ರಾಜಣ್ಣನ ಸ್ನೇಹ

ಬೆಳೆಸಿ, 'ಸಂಘಕ್ಕೆ ಬನ್ನಿ' ಎಂದು ತಿಗಣೆಯಂತೆ ಪೀಡಿಸತೊಡಗಿದ. ಎಲ್ಲಿ ಸಿಕ್ಕಲಿ ಅದೇ ಮಾತು, ಅದೇ ಒತ್ತಾಯ, ಅದೇ ಒಲ್ಲದ ಆಹ್ವಾನ. ಒಮ್ಮೆ ರಾಜಣ್ಣನಿಗೆ ತುಂಬಾ ಬೇಸರವಾಯಿತು. ಅದಕ್ಕೆ ಕೇಳಿದ,

"ರೀ ವರದ, ನಿಮ್ಮ ಸಂಘಕ್ಕೆ ಬಂದು ಏನು ಮಾಡಬೇಕ್ರೀ ?"

"ಆಟ ಆಡಬೇಕು. ಆರೋಗ್ಯವಾಗಿರಬೇಕು. ಶಕ್ತಿ ಹೆಚ್ಚಿಸಿ ಕೊಳ್ಳಬೇಕು."

"ನನಗೆ ಆಟ ಆಡಲು ಮನಸ್ಸಿಲ್ಲ. ಆರೋಗ್ಯವಾಗೇ ಇದ್ದೇನೆ. ಶಕ್ತಿ ಹೆಚ್ಚಲು ದಿನವೂ ಅರ್ಧಗಂಟೆಯಾದರೂ ವ್ಯಾಯಾಮ ಮಾಡು ತ್ತೇನೆ."

ವರದನ ಮುಗುಳುನಗೆ ಅಳಿಸಿಹೋಯಿತು. ಆದರೂ ಮರು ಕ್ಷಣವೇ ತಾಳ್ಮೆಯ ವ್ಯವಸ್ಥಾಪಕನೊಬ್ಬನ ವಿಶಾಲ ಕೃತಕನಗೆ ಬೀರುತ್ತಾ ಹೇಳಿದ;

"ನೀವು ಒಂಟಿಯಾಗಿ ವ್ಯಾಯಾಮ ಮಾಡುವುದಕ್ಕೂ, ಸಂಘದಲ್ಲಿ ಆಡುವುದಕ್ಕೂ ಬಹಳ ವ್ಯತ್ಯಾಸವಿದೆ ಮಿ. ರಾಜು. ಸಂಘ....ಎಷ್ಟೇ ಆಗಲಿ ಸ್ನೇಹಿತರ ಗುಂಪು. ಅಲ್ಲಿ ನೀವು ಹಿಂದೂ ಯುವಕ ಸೋದರರೊಂದಿಗೆ ಸೇರಿ ಸ್ವಾರಸ್ಯವಾದ ಆಟಗಳನ್ನಾಡುತ್ತೀರಿ; ಆದರಿಂದ ಮನಸ್ಸು ಉಲ್ಲಾಸಗೊಳ್ಳುತ್ತೆ. ರೂಮಿನಲ್ಲಿ ವ್ಯಾಯಾಮ ಬೇಸರ ಗೊಳಿಸುತ್ತೆ....ನಾನು ಹೇಳುವುದು ನಿಜ ಅಲ್ಲವೆ ?"

"ನಿಜವೇ.........ಆದರೆ ನನಗೆ ಸಮಯವಿಲ್ಲ. ಬೇರೆ ಗೆಳೆಯರಿ ದ್ದಾರೆ. ಅವರ ಸಂಗಡ ತಿರುಗಾಡಲು ಹೋಗಬೇಕು."

"ಮನಸ್ಸು ಮಾಡಿ. ಆಮೇಲೆ ಸಮಯ ತಾನೇ ತಾನಾಗಿ ಸಿಗುತ್ತೆ. ಮನಸ್ಸು ಮಾಡಿದರೆ .... 'ನಥಿಂಗ್ ಈಸ್ ಇಂಪಾಸಿಬಲ್' ಎಂದು ನೆಪೋಲಿಯನ್ ಹೇಳಿಲ್ಲವೆ ? .... ಹಿಂದೂ ಮಾತೆಯ ಸೇವೆಗೆ ಅಷ್ಟು ವಿರಾಮವನ್ನೂ ಮಾಡಿಕೊಳ್ಳದಿದ್ದರೆ ಹೇಗೆ ?........ ನಾಳೆ ಯಿಂದಲೇ ಬನ್ನಿ .... ಹಾಗೇ ನಿಮ್ಮ ಗೆಳೆಯರನ್ನೂ ಕರೆತನ್ನಿ.... ನಿಮ್ಮ ಮನೆಗೇ ಬಂದು ನಾನು ನಿಮ್ಮನ್ನು ಕರೆದುಕೊಂಡು ಹೋಗುತ್ತೇನೆ....

ಸರಿಯಾ ?"

ಎಂದು ಅವನು ರಾಜಣ್ಣನನ್ನು ಓರೆಗಣ್ಣಿನಿಂದ ನೋಡುತ್ತಾ ಮುಗುಳು ನಗುತ್ತಿದ್ದ. ಅವನ ಮುಖ ವಿಜಯೋನ್ಮಾದ....ತುಸು ಸಂಶಯದಿಂದ ಕೂಡಿತ್ತು. ರಾಜಣ್ಣ ಒಂದೆರಡು ನಿಮಿಷ ತುಟಿ ಕಚ್ಚಿ ಆಳವಾಗಿ ಯೋಚಿಸಿ ಕೇಳಿದ.

" ಮಿ. ವರದ,....ನಿಮ್ಮ ಸಂಘದ ಧ್ಯೇಯವೇನು ?"

" ನಮ್ಮ ಧ್ಯೇಯ, ಹಿಂದೂ ಸಂಸ್ಕೃತಿಯನ್ನು ಉದ್ಧಾರ ಮಾಡುವುದು. ಹಿಂದೂಗಳಲ್ಲಿ ಒಗ್ಗಟ್ಟನ್ನುಂಟು ಮಾಡುವುದು. ಹಿಂದೂಗಳಲ್ಲಿಯೇ ಇರುವ ಜಾತಿ-ವೈಷಮ್ಯಗಳನ್ನು ನಾಶಮಾಡುವುದು. ನಮ್ಮ ಹಿಂದೂಭಗಿನಿಯರನ್ನು, ಮಾತೆಯರನ್ನು ರಕ್ಷಣೆಮಾಡುವುದು."

ಎಂದು ಹೇಳಿಕೊಂಡು ಹೋಗುತ್ತಿದ್ದ. ಆದರೆ ರಾಜಣ್ಣ ಅವನನ್ನು ತಡೆದು

" ಮೈದಾನದಲ್ಲಿ ಕುಣಿದರೆ ಹಿಂದೂ ಸಂಸ್ಕೃತಿ ಹೇಗೆ ಉದ್ಧಾರ-ವಾಗುತ್ತದೆ....ಮಿ. ವರದ ?"

ಎಂದು ಕೇಳಿದ. ಅವನ ಮುಖ ಆಳವಾಗಿ ಗಂಟಿಕ್ಕಿತು, ಉದ್ವೇಗ ಭರಿತ ಕಂಠದಲ್ಲಿ ಅವನು ಹೇಳ ತೊಡಗಿದ,

" ನಾವು ಸುಮ್ಮನೆ ಮೈದಾನದಲ್ಲಿ ಕುಣಿಯುವುದಿಲ್ಲ. ಅಲ್ಲಿ ವಾರಕ್ಕೆ ಒಂದೆರಡು ಬಾರಿ ನಮ್ಮ ಧರ್ಮಶಾಸ್ತ್ರ, ವೇದಾಂತ, ಭಕ್ತಿ ಸಾಹಿತ್ಯ ಇವುಗಳ ಮೇಲೆ ವ್ಯಾಸಂಗ ಗೋಷ್ಠಿಗಳನ್ನೂ, ಅನೇಕ ಉದ್ದಾಮ ಪಂಡಿತ, ವಿದ್ವಾಂಸರಿಂದ ಉಪನ್ಯಾಸಗಳನ್ನೂ ಏರ್ಪಡಿಸುತ್ತೇವೆ. ನಾವು ಸುಮ್ಮನೆ ಕುಣಿಯುತ್ತೇವೆ ಎಂದು ನಿಮಗೆ ಯಾರು ಹೇಳಿದವರು ?" ಎಂದ.

ರಾಜಣ್ಣ ಅವನ ವಾದದಿಂದ ಮನಸ್ಸುಬದಲಾಯಿಸಿಕೊಳ್ಳದೆ,

" ರೀ....ನನಗೆ ವ್ಯಾಸಂಗ ಗೋಷ್ಠಿಗಳು, ಶಾಸ್ತ್ರಿಗಳ ಉಪನ್ಯಾಸಗಳು ಇವೊಂದೂ ಬೇಕಾಗಿಲ್ಲ. ರಾಧಾಕೃಷ್ಣನ್, ವಿವೇಕಾನಂದ, ಅರಬಿಂದೋ ಇವರ ಗ್ರಂಥಗಳನ್ನು ಸಾಕಷ್ಟು ಅಭ್ಯಾಸ ಮಾಡಿದ್ದೇನೆ. ಅಷ್ಟೇ ನನಗೆ ಸಾಕು. ಅದಕ್ಕಿಂತಲೂ ಹೆಚ್ಚಿಗೆ ಆಧ್ಯಾತ್ಮ ನನ್ನ

ಕೈಯಲ್ಲಿ ಆಗದು....ನಿಮ್ಮನ್ನು ನಿರಾಸೆಗೊಳಿಸಬೇಕಾಗಿದೆ. ದಯ ವಿಟ್ಟು ಮನ್ನಿಸಿ" ಎಂದ.

ಆದರೂ ವರದ ಹಿಮ್ಮೆಟ್ಟಲಿಲ್ಲ. ರಾಜಣ್ಣನ ಸೌಜನ್ಯವನ್ನೇ ಒಂದು ದೌರ್ಬಲ್ಯ ಎಂದು ಭಾವಿಸಿ ಜಗ್ಗಿ ನುಡಿದ,

"ನಮ್ಮ ನಿಯಮಗಳೇನೂ ಅಷ್ಟು ಕಠಿಣವಾಗಿಲ್ರೀ....ಒಮ್ಮೆ ಬಂದು ನಮ್ಮ ಸಂಗಡ ಆಡಿ....ಕಣ್ಣಿನಿಂದ ನೋಡದೇ ನೀವು ಮಾತಾ ಡುತ್ತಿದೀರ....ಅದು ತುಂಬಾ ತಪ್ಪು. ನೀವೊಮ್ಮೆ ಸಂಘಕ್ಕೆ ಬನ್ನಿ, ಆಮೇಲೆ ಎಲ್ಲಾ ನಿಮಗೆ ಅರ್ಥವಾಗುತ್ತೆ."

ಎಂದ. ಸವಿನಗೆ ಬೀರಿದ. ಉಪದೇಶಾಮೃತ ಕೊಟ್ಟ. ಆದರೆ ರಾಜಣ್ಣ ಹೈಸ್ಕೂಲಿನಲ್ಲಿರುವಾಗಲೇ ಒಂಭತ್ತು ತಿಂಗಳು ಆ ಸಂಘದಲ್ಲಿದ್ದು, ಎಲ್ಲವನ್ನೂ ಅರ್ಥ ಮಾಡಿಕೊಂಡಿದ್ದ.... ಅಂದರೆ ಏನನ್ನೂ ಅರ್ಥ ಮಾಡಿಕೊಂಡಿರಲಿಲ್ಲ ಎಂದು!....ಕಡೆಗೆ ಆ ಗೌಪ್ಯ ವಾತಾವರಣದಿಂದ ಬೇಸರಗೊಂಡು ಅದನ್ನು ತ್ಯಜಿಸಿದ್ದ. ಈಗ ವರದ, ತನಗೆ ಹೇಗೆ ಮಾತಾಡಬೇಕು, ಹೇಗೆ ಮಾತಾಡಬಾರದು ಎಂದು ಉಪದೇಶ ಕೊಡುತ್ತಿರುವುದನ್ನು ಕಂಡು ಸ್ವಲ್ಪ ಕೋಪ, ಅಸಮಾ ಧಾನಗಳಾದುವು. ಅದಕ್ಕೇ ಕಟುವಾದ ಅಂತಿಮ ತೀರ್ಮಾನದಿಂದ

"ಅರ್ಥ ಮಾಡಿಕೊಳ್ಳುವ ಅಗತ್ಯವಿಲ್ಲ ಮಿ. ವರದ....ನಿಮ್ಮ ಸಂಘವನ್ನು ಕಂಡರೆ ನನಗೆ ಅನುಮಾನ. ಗಾಂಧಿ ಕೊಲೆ ಪ್ರಕರಣ ವನ್ನು ನಾನು ಇಷ್ಟು ಬೇಗ ಮರೆತಿಲ್ಲ!"

ಎಂದು ನಿಷ್ಠುರ ಕಂಠದಲ್ಲಿ ನುಡಿದ. ಕೂಡಲೇ ವರದನ ಮುಖಕ್ಕೆ ರಕ್ತ ಚಿಮ್ಮಿ, ಬೆವರೊಡೆಯಿತು. ಕೆರಳಿದ ಕಂಠದಲ್ಲಿ ಅವನು ಬೆದರಿಸ ತೊಡಗಿದ.

"ಇಲ್ಲಿ ನೋಡ್ರೀ ಮಿಸ್ಟರ್!.... ನೀವು ತಿಳಿಯದೇ ಮಾತಾ ಡುತ್ತಿದೀರ. ಗಾಂಧಿ ಕೊಲೆಗೂ, ನಮ್ಮ ಸಂಸ್ಥೆಗೂ ಲವಲೇಷ ಸಂಬಂಧವೂ ಇಲ್ಲ ಎಂದು ನಿಮ್ಮ ನೆಹ್ರೂ ಸರ್ಕಾರವೇ ಘೋಷಿಸಿಲ್ಲವೆ? ಅನ್ಯಾಯವಾಗಿ ಕಣ್ಣು ಮುಚ್ಚಿಕೊಂಡು, ಅಧಿಕಾರ ಕೈಯಲ್ಲಿದೆ ಎಂದು ಅಟ್ಟಹಾಸದಿಂದ ಹಾಕಿದ್ದ ಪ್ರತಿಬಂಧನೆ ಹಿಂದಕ್ಕೆ ತಗೊಳ್ಳ

ಲಿಲ್ಲವೆ ?.... ನೀವು ಸ್ವಲ್ಪ ಹುಷಾರಾಗಿರಬೇಕು. ಹಾಗೆಲ್ಲ ಅಪ ವಾದಗಳನ್ನು ಹೊರಿಸಕೂಡದು .... ಇನ್ನೂ ಏನೇನು ಅನುಮಾನ ಉಳಿದಿದೆ ನಿಮಗೆ ?"

"ನೀವು ರಾಜಕೀಯಕ್ಕೆ ಇಳಿಯುವುದಿಲ್ಲವೆ ?"

"ಇಲ್ಲ....ನಮ್ಮದು ಒಂದು ಧಾರ್ಮಿಕ ಸಂಸ್ಥೆ. ಸಾಂಸ್ಕೃತಿಕ ಸಂಸ್ಥೆ. ರಾಜಕೀಯಕ್ಕೂ, ನಮಗೂ ಸಂಬಂಧವೇ ಇಲ್ಲ"

ಇಷ್ಟು ಕೆರಳಿ ಮಾತನಾಡುತ್ತಿರುವವನನ್ನು ಸುಮ್ಮನೆ ಬಿಟ್ಟು ಬಿಡಲು ರಾಜಣ್ಣನಿಗೆ ಮನಸ್ಸಾಗಲಿಲ್ಲ. ಎಲ್ಲವನ್ನೂ ಹೊರಬೀಳಿಸ ಬೇಕು, ಎಂದು ಕೇಳಿದ.

"ಮಿ. ವರದ, ನಿಮಗೆ ಗುರೂಜಿಯವರನ್ನು ಕಂಡರೆ ತುಂಬಾ ಭಕ್ತಿಯಲ್ಲವೆ ?"

"ಹೌದು....ಅಪಾರ ಭಕ್ತಿ."

"ಗಾಂಧಿ–ನೆಹರೂ ಇವರನ್ನು ಕಂಡರೆ"

"ಅವರನ್ನು ಕಂಡರೂ ನಮಗೆ ಗೌರವ."

"ನೀವು ಈಗ ರಾಜಕೀಯಕ್ಕೆ ಇಳಿಯುವುದಿಲ್ಲ ಎನ್ನುತ್ತಿದೀರಿ. ಆದರೆ ಅಕಸ್ಮಾತ್ ಮುಂದೊಂದು ಸಂದರ್ಭದಲ್ಲಿ ನಿಮ್ಮ ನಾಯಕ ಮಣಿ ಗುರೂಜಿಯವರು ಹಠಾತ್ತನೆ ರಾಜಕೀಯಕ್ಕೆ ಇಳಿದರೆ, ನೀವೆಲ್ಲರೂ ಅವರನ್ನು ಈಗಿನಂತೆಯೇ ಪರಮಭಕ್ತಿಯಿಂದ ಹಿಂಬಾ ಲಿಸುವಿರೋ .... ಅಥವ ನಿಮ್ಮ ಸಂಘದ ಮೂಲಧ್ಯೇಯವನ್ನು ಕಾಪಾಡಲು ಗುರೂಜಿಯವರ ಧೋರಣೆಯನ್ನು ಖಂಡಿಸುತ್ತಿರೋ ?"

ವರದ ತಬ್ಬಿಬ್ಬಾಗಲಿಲ್ಲ. ತಕ್ಷಣವೇ ಕಂಠಪಾಠ ಮಾಡಿದವನಂತೆ

"ನಾವು ರಾಜಕೀಯಕ್ಕೆ ಎಂದೂ ಇಳಿಯುವುದಿಲ್ಲ .... ಇದು ಖಂಡಿತ."

ಎಂದು ನುಡಿದ. ರಾಜಣ್ಣ ಅವನ ಅತ್ತಿತ್ತ ಹೊರಳುವ ನೋಟವನ್ನು ತನ್ನ ನೋಟದೆಡೆಗೆ ಸೆಳೆದುಕೊಳ್ಳುತ್ತಾ ಹೇಳಿದ,

"ನೋಡಿ, ನೀವು ನನ್ನ ಪ್ರಶ್ನೆಗೆ ನೇರವಾದ ಉತ್ತರ ಕೊಡು ತ್ತಿಲ್ಲ.... ನೀವು ಪ್ರತ್ಯಕ್ಷವಾಗಿ ರಾಜಕೀಯಕ್ಕೆ ಇಳಿಯದಿದ್ದರೂ,

ಪರೋಕ್ಷವಾಗಿ ಇಳಿದಿದ್ದೀರಿ. ರಾಜಕೀಯಕ್ಕೆ ಈಗಾಗಲೇ ಇಳಿದಿರುವ ಕೋಮುವಾರು, ಬಂಡವಾಳಶಾಹೀ, ವಿದೇಶೀ ಬೆಂಬಲದ ರಾಜ ಮಹಾರಾಜ ಸನಾತನ ಮಠಾಧಿಕಾರೀ ಶಕ್ತಿಗಳ ಬೆನ್ನುಮೂಳೆ ಯಂತಿರುವ ಸೈನ್ಯ-ಸಂಸ್ಥೆ ನಿಮ್ಮದು. ನಾಝಿ, ಕು-ಕ್ಲಕ್ಸ-ಕ್ಲಾನ್, ಇಗರ್ನ್-ಲೈ-ಝಿಯೂವಿಂ ಈ ಸಂಸ್ಥೆಗಳಂತೆ ನಿಮ್ಮದೂ ಒಂದು.... ದೇಶ ಅರಾಜಕೀಯತೆಯ ತುಟ್ಟ ತುದಿಗೆ ಹೋದಾಗ ನೀವು ಮಿಂಚಿ ನಂತೆ ಪ್ರತ್ಯಕ್ಷವಾಗಿ ರಾಜಕೀಯಕ್ಕಿಳಿಯುತ್ತೀರಿ .... ರಾಜಕೀಯಕ್ಕೆ ಇಳಿಯುವುದೇ ಇಲ್ಲ ಎಂದರೆ ನಾನು ನಂಬುವುದಿಲ್ಲ."

ಎಂದ. ವರದ ಅವನನ್ನೇ ಸೋಲಿನ ಸೆಣಸಿನ ನೋಟದಿಂದ ನೋಡುತ್ತಿದ್ದ. ರಾಜಣ್ಣನೊಡನೆ ನೋಟ ಬೆರೆಸದೆ ಹೇಳಿದ.

"ನೀವು ನಮ್ಮನ್ನು ನಂಬದಿದ್ದರೆ ನಾವೇನು ಮಾಡೋಣ! ನಮ್ಮಿಂದ ಇನ್ನೇನೂ ಹೆಚ್ಚಿಗೆ ಹೇಳಲು ಸಾಧ್ಯವಿಲ್ಲ. ನಾವು ಖಂಡಿತ ನಾಝಿಗಳಲ್ಲ. ಯಾರ ಸೈನ್ಯಾಂಗವೂ ಅಲ್ಲ."

ಎಂದ. 'ಇಲ್ಲಿಗೆ ಸಾಕು' ಎಂದು ಹೊರಡಬೇಕೆಂದಿದ್ದ ರಾಜಣ್ಣ ಹಠಾತ್ತನೆ ಕೇಳಿದ.

"ನೀವು ಮುಸ್ಲಿಮರನ್ನು ನಿಮ್ಮ ಸಂಸ್ಥೆಗೆ ಸೇರಿಸಿಕೊಳ್ಳು ತ್ತೀರಾ?"

"ಹೋ, ಅದಕ್ಕೇನು! ಆದರೆ ಅವರು ನಮ್ಮ ಸಂಸ್ಥೆಗೆ ವಿಧೇಯ ರಾಗಿರಬೇಕು. ನಮ್ಮ ಧ್ವಜಕ್ಕೆ ವಂದಿಸಬೇಕು."

"ಆದರೆ ನೀವು ಹಿಂದೂ ಮತದ ಧ್ವಜವನ್ನೇ ನಿಮ್ಮ ಸಂಸ್ಥೆಯ ಧ್ವಜವನ್ನಾಗಿ ಉಪಯೋಗಿಸಿದ್ದೀರಲ್ಲಾ!.... ಒಬ್ಬ ಮುಸಲ್ಮಾನ್ ನಿಮ್ಮ ಧ್ವಜಕ್ಕೆ ನಮಿಸಿದರೆ, ಅವನು ತನ್ನ ಮತಕ್ಕೆ ತಿಲಾಂಜಲಿ ಯಿತ್ತಂತೆಯೇ ಅಲ್ಲವೇ?"

"ಅದಕ್ಕೆ ನಾವೇನು ಮಾಡೋಣ?"

"ಹಾಗಾದರೆ ಮುಸ್ಲಿಮರಿಗೆ ನಿಮ್ಮ ಸಂಸ್ಥೆಯಲ್ಲಿ ಸ್ಥಳವಿಲ್ಲವೆಂದ ಹಾಗಾಯ್ತು."

"ನಾವು ಹಾಗೆ ಹೇಳುವುದಿಲ್ಲ."

ಅವನ ವಿತಂಡ ವಾದವನ್ನು ಕೇಳಿ ರಾಜಣ್ಣನಿಗೆ ಬೇಸರ ಬಂತು. ಅವನ ಮುಖ ಕಪ್ಪಿಟ್ಟದ್ದನ್ನು ಕಂಡು ಸ್ವಲ್ಪ ವಿನೋದವೂ ಆಯ್ತು. ಪುನಃ ಕೇಳಿದ.

" ನಿಮ್ಮ ಸಂಘದಲ್ಲೇಕೆ ಹರಿಜನರಿಲ್ಲ...."

" ಇಲ್ಲದೇ ಏನು, ಕೆಲವು ಮಂದಿ ಇದ್ದಾರೆ...."

" ಹೋ....ಕೆಲವು ಮಂದಿ ಇದ್ದಾರೋ !....ಹಾಗಾದರೆ ಖಂಡಿತ ವಾಗಿಯೂ ಬಂದು, ಎಷ್ಟು ಜನರಿದ್ದಾರೆ ಎಣಿಸಿಕೊಂಡು ಬರಬೇಕು. ಇರಲಿ, ಹಾಗಾದರೆ ನೀವೇಕೆ ಹರಿಜನರಿಗೆ ದೇವಾಲಯ ಪ್ರವೇಶ ಮುಂತಾದ ಕಾರ್ಯಗಳಲ್ಲಿ ಭಾಗವಹಿಸುತ್ತಿಲ್ಲ....?"

" ಹಾಗೆ ಸಂಸ್ಥೆಯೇ ಭಾಗವಹಿಸುವ ಅಗತ್ಯವಿಲ್ಲ."

" ಏಕೆ, ನಿಮ್ಮ ಸಂಸ್ಥೆ ಹಾಳಾಗುತ್ತಿರುವ ಹಿಂದೂ ಸಂಸ್ಕೃತಿಯ ಉದ್ಧಾರಕ್ಕೆ ಕಂಕಣ ಬದ್ಧವಾಗಿರುವ ಶಕ್ತಿಯಲ್ಲವೆ ?....ಹರಿಜನರ ಹಿಂದೂತನಕ್ಕೆ ಹಿಡಿದಿರುವ ಗ್ರಹಣ ಪರಿಹರಿಸಲು, ಅವರು ಸಂಪೂರ್ಣ ಹಿಂದೂಗಳಾಗಲು ನಿಮ್ಮ ಸಂಸ್ಥೆ ಶ್ರಮಿಸಬೇಡವೆ ?"

" ಹೌದು...."

" ಹಾಗಾದರೆ ಏಕೆ ಮಾಡುತ್ತಿಲ್ಲ. ಉಚ್ಚ ನೀಚ ಎಂದು ಮತವನ್ನು ವಿಂಗಡ ವಿಂಗಡವಾಗಿಯೇ ಇಡುವುದು ನಿಮ್ಮ ಉದ್ದೇಶವೇ....?"

" ಅಲ್ಲ...."

" ಏನು ಅಲ್ಲವೋ...."

ಎಂದು ಅವನ ಸೋತ ಧ್ವನಿಯನ್ನು ತನ್ನೊಳಗೆ ತಾನೇ ಪರಿಹಾಸ್ಯ ಮಾಡಿಕೊಂಡ ರಾಜಣ್ಣ. ಅಲ್ಲಿ ಹೆಚ್ಚಿಗೆ ನಿಲ್ಲುವುದು ಬೇಡವೆಂದು ಮನೆಯ ಕಡೆ ಹೋಗಲು ಸೈಕಲ್ ತಿರುಗಿಸಿದ. ಆದರೆ ವರದ ಅವನನ್ನು ಬಿಟ್ಟುಕೊಡುವಂತೆ ಕಾಣಲಿಲ್ಲ. ಅದಕ್ಕೇ ಏನನ್ನೋ ಜ್ಞಾಪಿಸಿಕೊಂಡು ಕೇಳಿದ.

" ವಿ. ವರದ, ನೀವು ಅಕಸ್ಮಾತ್ ಅಧಿಕಾರಕ್ಕೆ ಬಂದಿರಿ ಎಂದು ಇಟ್ಟುಕೊಳ್ಳಿ — ಸುಮ್ಮನೆ.... ಮಸಲ, ಅಷ್ಟೆ. ಆಗ

ಮುಸ್ಲಿಮರು ಭಾರತದಲ್ಲಿ ಬದುಕಿರಲು, ಹರಿಜನರು - ಹರಿಜನೇತರರು ಒಟ್ಟಿಗೆ ಕಲೆತು ಜೀವಿಸಲು, ನೀವು ಅವಕಾಶ ಕೊಡುತ್ತೀರಿ ತಾನೆ ?"

"ಹೋ....ಖಂಡಿತವಾಗಿ ನಾವೇನು ಕಟುಕರಲ್ಲ."

"ಅಂತೂ ನೀವು ಅಧಿಕಾರಕ್ಕೆ ಎಂದಾದರೂ ಬರಬಹುದು, ಅಲ್ಲವೇ ?"

ಎಂದ ನಗುತ್ತಾ. ಆದರೆ ವರದನ ಮನಕ್ಕೆ ಈಗಾಗಲೇ ಮಂಕು ಕವಿದಿತ್ತು. ಅವನು ತನ್ನ ನಿಜ ಬುದ್ಧಿಯನ್ನು ತೋರಿಸುವವನಂತೆ

"ಅದನ್ನು ಹೇಗೆ ಹೇಳಲು ಬರುತ್ತೆ ರಾಜಣ್ಣಾ....ಅಧಿಕಾರ ಯಾವಾಗಲೂ ಅದನ್ನು ಕಸಿದುಕೊಳ್ಳಲು ಶಕ್ತಿ ಇರುವವರ ಕೈಗೆ ಬರುತ್ತೆ. ಸ್ತ್ರೀ....ಶ್ರೀ....ಗಳಂತೆ! ದೇಶದಲ್ಲಿ ಯಾರ ಕೈಯಲ್ಲೂ ಶಕ್ತಿಯಿಲ್ಲದಿದ್ದರೆ, ಆಗ ನಾವು ಖಂಡಿತ ಅಧಿಕಾರಕ್ಕೆ ಬರಬೇಕಾಗುತ್ತೆ. ಭಾರತಮಾತೆಯನ್ನು ಉಳಿಸಬೇಕಾಗುತ್ತೆ."

ಎಂದ. ಅಷ್ಟು ಸ್ಪಷ್ಟ ಉತ್ತರ ದೊರೆತದ್ದಕ್ಕಾಗಿ ರಾಜಣ್ಣನಿಗೆ ಸಮಾಧಾನವಾಯಿತು. ಹಾಗೇ ಅವನು 'ಸ್ತ್ರೀ' ಒಂದು ಕಸಿದು ಕೊಂಡೊಯ್ಯುವ ವಸ್ತು ಎಂದು ಪರಿಗಣಿಸುತ್ತಿರುವುದನ್ನು ಅರಿತು ಅತ್ಯಂತ ಆಶ್ಚರ್ಯವೂ ಆಯಿತು. ಇಪ್ಪತ್ತನೆಯ ಶತಮಾನದ ಉತ್ತರಾರ್ಧದಲ್ಲಿಯೂ ಇಂಥ ಜನರಿರುವರಲ್ಲಾ ! ಎಂದು ವಿಷಾದವೂ ಆಯಿತು. ಬೇಸರ ಅಸಮಾಧಾನಗಳಿಂದ, ಸೈಕಲ್ ತಿರುಗಿಸುತ್ತಾ

"ಇರಲಿ, ಮಿ. ವರದ,....ನಾನೀಗ ಹೋಗುತ್ತೇನೆ"

ಎಂದ. ಕೂಡಲೇ ಅವನ ಹಿಂದೆ ಬಂದು ವರದ ಮೆಲುದನಿಯಲ್ಲಿ ಕೇಳಿದ,

"ನಾಳೆ ನಿಮ್ಮ ಸೈಕಲ್ ಸ್ವಲ್ಪ ಬೇಕಾಗಿತ್ತು....ಕೊಟ್ಟಿರುತ್ತೀರಾ....?"

"ಆಗಲಿ...."

"ಎಲ್ಲಿ ಈಗಲೇ ಕೊಡಿ"

"ಈಗಲೇ ಬೇಕೆ ?"

"ಈಗಲೇ ಕೊಟ್ಟರೆ ತುಂಬಾ ಅನುಕೂಲ. ನಾಳೆ ಬೆಳಗಿನ

ಬ್ಯೂರೋವರಗೇ ಒಂದು ಅಕಸ್ಮಿಕ ಭೇಟಿ ಕೊಡಬೇಕಾಗಿದೆ. ಈಗಲೇ ಸೈಕಲ್ ಕೊಡಿ"

"ಯಾರಿಗೆ ಅಕಸ್ಮಿಕ ಭೇಟಿ ಕೊಡಬೇಕು ?"

"ಯಾರಿಗೂ ಇಲ್ಲ, ನಮ್ಮ ಸಂಘದಲ್ಲಿ ಸದಸ್ಯರ ದಕ್ಷತೆ ನೋಡಲು ಮುಖ್ಯ ನಾಯಕರು ಇಷ್ಟು ಹೊತ್ತಿಗೆ ಸ್ವಯಂ ಸೇವಕರೆಲ್ಲರೂ ಒಂದೆಡೆ ಸೇರಬೇಕು, ಎಂದು ಹಠಾತ್ತಾನೆ ಆಜ್ಞಾಪಿಸುತ್ತಾರೆ. ಆಗ ಪ್ರತಿ ಸದಸ್ಯನೂ ಇನ್ನೊಬ್ಬನಿಗೆ ಈ ಸುದ್ದಿ ತಿಳಿಸಿ, ಎರಡು ಘಂಟೆಯೊಳಗೇ ನಿಯಮಿತ ಸ್ಥಳದಲ್ಲಿ ಎಲ್ಲರೂ ಸೇರಬೇಕು."

"ಏಕೆ ?"

"ಏಕೆ, ಎಂದರೆ !....ಸದಸ್ಯರ ಚುರುಕು ಪರೀಕ್ಷೆ ಮಾಡುವುದಕ್ಕೆ."

"ಈ ಪರೀಕ್ಷೆಯಿಂದ ಹಿಂದೂ ಸಂಸ್ಕೃತಿ ಚೆನ್ನಾಗಿ ಉದ್ಧಾರವಾಗಬಹುದು. ತೆಗೆದುಕೊಳ್ಳಿ ಸ್ವಾಮಿ."

ಎಂದು ಸೈಕಲನ್ನು ಅವನಿಗೆ ಕೊಟ್ಟ.

ಅವನನ್ನು ರಾಜಣ್ಣ ಸ್ವಲ್ಪವೂ ಒಪ್ಪಲಿಲ್ಲ. ಅವನ ನಡೆ ನುಡಿ ಎಲ್ಲವೂ ಒರಟು, ಇಲ್ಲವೆ ಕೃತ್ರಿಮ. ಅವನಿಗಿಂತಲೂ ಹಿರಿಯ ಅಣ್ಣನೊಬ್ಬ ಶಾಂತಳಿಗೆ ಇದ್ದ. ಆದರೆ ತನ್ನ ಹೆಂಡತಿ ಮಕ್ಕಳೊಂದಿಗೆ ಉತ್ತರ ಇಂಡಿಯದಲ್ಲಿ ಕೆಲಸದ ಮೇಲಿದ್ದ. ಕೇಶವಯ್ಯಂಗಾರರ ಗುಣಗಳಿಗೂ, ಅವನ ಮಗನ ಗುಣಗಳಿಗೂ ಹೋಲಿಕೆಯೇ ಇರಲಿಲ್ಲ. ಶಾಂತ ಮತ್ತು ಶ್ಯಾಮಲ ಇವರಲ್ಲೇ ಆ ಗುಣಗಳು ವಿಶೇಷವಾಗಿದ್ದುವು.

ರಾಜಣ್ಣ ತನ್ನ ಧ್ಯೇಯ ಮತ್ತು ಬಾಳಿನ ನಂಬಿಕೆಗಳನ್ನು ಕುರಿತು ಶಾಂತಳಿಗೆ ಪತ್ರ ಬರೆದ. ಅದರಲ್ಲಿ ತಾನು ಜೀವನದಲ್ಲಿ ಕಂಡಿರುವ ಒಳ್ಳೆಯ ಅಂಶಗಳಾವುವು, ಕೆಟ್ಟ ಅಂಶಗಳಾವುವು, ಕಟ್ಟವನ್ನು ನಿರ್ಮೂಲ ಮಾಡಲು, ಸುಧಾರಿಸಲು ಹೇಗೆ ಮನಸ್ಸಿದೆ, ಒಂದು ಉದ್ದೇಶವಿದೆ, ಆ ಉದ್ದೇಶ ಸಾಧನೆಗೆ ತನ್ನದೇ ಆದ ಸ್ವತಂತ್ರ ವಿಧಾನವನ್ನು ಅವಳಿಗೆ ತಿಳಿಸಿದ. ಅದರಲ್ಲಿ,

"ನಾನು ಜೀವನದ ಅನೇಕ ಮುಖ ವಿಕಾರಗಳನ್ನು ಕಂಡಿ

ದ್ದೇನೆ. ಅವುಗಳನ್ನು ಸುಧಾರಿಸಬೇಕೆಂದು ಇರುವ ಇಚ್ಛೆಗಿಂತಲೂ ಹೆಚ್ಚಾಗಿ, ಒಳ್ಳೆಯ ಜೀವನವನ್ನು ಮೊದಲು ನಡೆಸಬೇಕು, ದುಷ್ಟ ಶಕ್ತಿಗಳಿಗೆ ಕಿಂಚಿತ್ತೂ ಮಣಿಯಬಾರದು ಎಂದು ನಿರ್ಧರಿಸಿದ್ದೇನೆ. ಅದಕ್ಕೋಸ್ಕರವೇ ಮದುವೆಯೂ ಆಗಬಾರದೆಂದು ಮನಸ್ಸು ಮಾಡಿದ್ದೆ. ನಾನು ಇದುವರೆಗೂ ಹೆಂಡತಿ, ಸಂಸಾರ ಎಂದರೆ ಒಂದು ತಲೆಭಾರ, ಒಡವೆ, ಸೀರೆ, ಐಶ್ವರ್ಯ, ಸುಖ ಸಂರಕ್ಷಣೆಗಳನ್ನು ಸತತವೂ ಬೇಡುತ್ತಿರುವ ಒಂದು ಮಾಯಾ ವ್ಯಕ್ತಿ, ಒಂದು ಮೋಹಿನೀ ಶಕ್ತಿ, ಅವಳ ಸಹವಾಸ ಮಾಡಿದವನು, ಯಾವುದನ್ನೂ ವಿವೇಚಿಸಲು ಆಸ್ಪದವಿಲ್ಲದೆ, ಅವಳ ಸವಿಯಾದ ಆಜ್ಞೆಗಳನ್ನು ಪೂರೈಸಲು ಎಂಥ ಹೇಯ ಕೆಲಸಕ್ಕೂ ಹಿಂಜರಿಯುವುದಿಲ್ಲ. ಲಂಚ, ಮೋಸ, ಕುಟಿಲ ತನ, ಬ್ಲಾಕ್ ಎಲ್ಲಕ್ಕೂ ಇಳಿಯುತ್ತಾನೆ. ತನ್ನ ಆತ್ಮವನ್ನೇ ಮಾರಿಕೊಳ್ಳುತ್ತಾನೆ .... ಅಂಥ ವ್ಯಕ್ತಿಯನ್ನು ನನ್ನ ಜೀವನದಿಂದ ದೂರವಾಗಿಯೇ ಇರಿಸಬೇಕೆಂದಿದ್ದೆ.

" ಆದರೆ ನೀವು ಬಹಳ ಅಸಾಧಾರಣ ಸ್ತ್ರೀ. 'ನನಗೆ ಆಡಂಬರ ಭೋಗ ವೈಭವಗಳೇ ಬೇಡ' ಎನ್ನುತ್ತೀರಿ. ಬೇರೆ ಸ್ತ್ರೀಯರು 'ನಾನು ಆ ಸೀರೆ ಉಡಲಿಲ್ಲ. ಅವಳು ಐದೆಳೆ ಚೈನ್ ಮಾಡಿಸಿ ಕೊಂಡಿದ್ದಾಳೆ. ಇವಳು ರತ್ನದ ಓಲೆ ಮಾಡಿಸಿಕೊಂಡು ಬಿಟ್ಳು. ಇನ್ನೊಬ್ಬಳ ಹತ್ರ ಇಪ್ಪತ್ತು ಸೇರು ಬಂಗಾರದ ಒಡವೆ ಇದೆ' ಎಂದು ಒಬ್ಬರಮೇಲೊಬ್ಬರು ಅಸೂಯೆ, ಹೊಟ್ಟೆಯುರಿಯಿಂದ ಉರಿದು ಬೀಳುವುದನ್ನು ಕಂಡಿದ್ದೆ. ನಿಮ್ಮಂತೆ, ಜೀವನದ ಗಹನ ವಿಚಾರ ಗಳನ್ನು ಆಲೋಚಿಸಿ, ಅದರ ಲಘು ಭಾಗವಾದ ಆಡಂಬರ, ಅಲಂಕಾರಗಳನ್ನೇ ಜೀವನದ ಬಹು ಮುಖ್ಯ ಕರ್ತವ್ಯ ಎಂದು ತಿಳಿಯದಿರುವ ಸ್ತ್ರೀಯನ್ನು ಕಂಡು ತುಂಬಾ ಸಂತೋಷವಾಗಿದೆ. ಸ್ತ್ರೀಯರಿಗೆ ಅಲಂಕಾರ, ಸೌಂದರ್ಯ ಸಾಧನೆ ಇರಕೂಡದೆಂದು ನನ್ನ ಅಭಿಪ್ರಾಯವಲ್ಲ. ಅವಶ್ಯಕವಾಗಿ ಬೇಕು. ಸ್ನೋ, ಪೌಡರ್, ವಿವಾಹಿತ ಸ್ತ್ರೀಯರು ಸೆಂಟ್, ಇವೆಲ್ಲವನ್ನೂ ಧಾರಾಳವಾಗಿ ಬಳಸಲಿ. ಆದರೆ ಅವರು ಅದರಲ್ಲೇ ಮುಳುಗಿಹೋಗಿ ಅಲಂಕಾರದ ಮೊಟ್ಟೆ,

ಗಳಾಗಬಾರದು : ಅಷ್ಟೆ.

"ಅಂತೂ, ಜೀವನವನ್ನು ನನ್ನ ದೃಷ್ಟಿಯಲ್ಲೇ ನೋಡುವ ಒಬ್ಬ ಸುಂದರ ಯುವತಿಯಾದರೂ ಇದ್ದಾಳಲ್ಲ, ಅದೂ ನನ್ನ ಸಮೀಪದಲ್ಲೇ !....ಇದಕ್ಕಿಂತಲೂ ಹೆಚ್ಚಿನ ಆನಂದದಾಯಕ, ಚೈತನ್ಯದಾಯಕ ವಿಷಯ ಬೇರೊಂದಿಲ್ಲ ! ಇಂದಿನಿಂದ ವಿದ್ಯಾವಂತ ಸ್ತ್ರೀಯರ ಬಗ್ಗೆ ನನ್ನ ಅಭಿಪ್ರಾಯಗಳನ್ನು ಬದಲಿಸಬೇಕಾಗಿದೆ."

ಎಂದು ಇನ್ನೂ ದೀರ್ಘವಾಗಿ ಪತ್ರ ಬರೆದಿದ್ದ. ಅವಳ ತಂದೆಯ ಕೆಲಸ, ಮನೆಯವರ ಪರಿಚಯವನ್ನು ಮಾಡಿಕೊಡಬೇಕೆಂದು ಕೋರಿದ್ದ.

ಈ ಪತ್ರ ಶಾಂತಳಿಗೆ ತಲುಪಿದ ದಿನ, ಅವಳ ಮನೆಯಲ್ಲಿ ತಂದೆ ತಾಯಿಗೆ ಬಿಸಿ ಬಿಸಿಯಾದ ಮಾತುಕತೆಯಾಗುತ್ತಿತ್ತು. ರಾತ್ರೆ ಊಟ ಮಾಡಿ ಪೇಪರ್ ಓದುತ್ತಾ ಕುಳಿತಿದ್ದ ಕೇಶವಯ್ಯಂಗಾರರನ್ನು ಅವರ ಪತ್ನಿ ಕೇಳುತ್ತಿದ್ದರು.

"ನಾಳೆ ರೇಷನ್ ತರಿಸಬೇಕು. ದುಡ್ಡು ಕೊಡುತ್ತೀರೋ, ಬೆಳಗ್ಗೆ ಕಾಫಿ ಕುಡಿದ ತಕ್ಷಣ ತಿರುಗಾಡಿಕ್ಕೊಂಡು ಹೊರಟು ಬಿಡುತ್ತೀರೋ ?"

"ಆಗಲಿ, ತರೋಣ" ಎಂದರು ಕೇಶವಯ್ಯಂಗಾರರು, ಪೇಪರ್‌ನಿಂದ ತಲೆಯೆತ್ತದೆ. ಅವರ ನಿರಾಸಕ್ತ ವಾಣಿಯಿಂದ ಕೆರಳಿ ಅವರ ಪತ್ನಿ,

"ಈಗ ಆಗಲಿ ಎಂದು, ನಾಳೆಯೆಲ್ಲಾ ಮನೆ ಬಿಟ್ಟು ಹೊರಟು ಬಿಡಿ. ನನ್ನ ಹತ್ತಿರ ದುಡ್ಡು ಕೊಟ್ಟು ಇಟ್ಟಿರುವವರಂತೆ !....ಹೋದ ತಿಂಗಳಂತೆ ಈ ಬಾರಿಯೂ ಮಾಡಿದರೆ ನಾನು ರೇಷನ್ ತರಿಸುವುದೂ ಇಲ್ಲ, ಏನೂ ಇಲ್ಲ. ಎಲ್ಲರೂ ಉಪವಾಸ ಬಿದ್ದಿರಲಿ. ನನಗೇನು ಅಗತ್ಯ ಮನೆ ಗಂಡಸಿಗೆ ಇಲ್ಲದಿದ್ದ ಮೇಲೆ....!" ಎಂದು ದುಡುಕಾಡುತ್ತಿದ್ದರು. ಕೇಶವಯ್ಯಂಗಾರರು ಈಗ ಪೇಪರಿನಿಂದ ತಲೆಯೆತ್ತಿದರು. ಕನ್ನಡಕ ಹಣೆಯ ಮೇಲೇರಿಸುತ್ತಾ, ತಮ್ಮ ಪತ್ನಿಯನ್ನೇ ನೋಡಿ, ಅಸಮಾಧಾನ ಬೆರೆತ ಧ್ವನಿಯಲ್ಲಿ, "ನೀನೇ ದುಡ್ಡು ಕೊಟ್ಟು ತರೋ

ಹಾಗೆ ಮಾತಾಡ್ತೀಯಲ್ಲೇ....?" ಎಂದರು. ಅದರಿಂದ ಅವರ ಪತ್ನಿಗೆ ಇನ್ನೂ ರೇಗಿತು. ಪತಿಯನ್ನೇ ಇರಿಯುವಂತೆ ನೋಡುತ್ತಾ,

"ಇನ್ನೇನು?........ಹೋದ ತಿಂಗಳೆಲ್ಲಾ ನಾನಲ್ಲದೆ ಇನ್ನಾರು ರೇಷನ್ ತರಿಸಿದ್ದು? .... ಆ ದುಡ್ಡನ್ನೂ ಕೊಡಲಿಲ್ಲ........ನಾನು ಆಗ ಸುಮ್ಮನೆ ಕೈಕಟ್ಟಿಕೊಂಡು ಇದ್ದುಬಿಟ್ಟಿದ್ದರೆ, ಈಗ ಎರಡು ಕೈಯಲ್ಲೂ ತಿನ್ನುತ್ತಿದ್ದಿರಿ...."

ಎಂದು ತಟಕ್ಕನೆ ಮುಖವನ್ನು ಮುರಿದು ಅತ್ತ ತಿರುಗಿಕೊಂಡರು. ಕೇಶವಯ್ಯಂಗಾರರು ಸಂಕಟದಿಂದ, ಮುನಿಸಿದ ಪತ್ನಿಯನ್ನೇ ನೋಡುತ್ತಾ, ಆಶ್ವಾಸನೆಯೀಯುವ ಕಂಠದಲ್ಲಿ ಹೇಳಿದರು.

"ಹೋಗಲಿ ಸುಮ್ಮನಿರೇ....ನಿನ್ನ ದುಡ್ಡು ಕೊಡ್ತೀನಿ....ನುಂಗಿ ಬಿಡೋಲ್ಲ"

"ನೀವು ಕೊಟ್ಟರಿ....ನಾನು ತಗೊಂಡೆ....!"

ಎಂದು ಚಟಾಕಿ ಹೊಡೆದಂತೆ ನುಡಿದರು ಅವರ ಪತ್ನಿ. ನುಡಿಯಷ್ಟೇ ಹಠಾತ್ತನೆ ಅವರ ಕಣ್ಣುಗಳಲ್ಲಿ ನೀರುಕ್ಕಿ ಬಂತು. ಸೆರಗಿನಿಂದ ಕಣ್ಣೊರೆಸಿಕೊಳ್ಳುತ್ತಾ, ಗದ್ಗದ ಕಂಠದಲ್ಲಿ—

"ಇಂಥವರು ಯಾತಕ್ಕಾದರೂ ಹೆಂಡತಿ ಮಕ್ಕಳನ್ನು ಕಟ್ಟಿಕೋಬೇಕೋ! ಸಾಯೋಕಾಲಕ್ಕೂ ಇರಲು ಒಂದು ಸ್ವಂತ ಮನೆಯಿಲ್ಲ.... ಹಕ್ಕಿಪಕ್ಷಿಗೂ ಒಂದೊಂದು ಸ್ವಂತ ಗೂಡಿರುತ್ತೆ .... ಸಾಲದು ಎಂದು, ಬೆಳೆದ ಹುಡುಗಿಯರನ್ನು ನಾಚಿಕೆಯಿಲ್ಲದೆ ಓದಿಸಿಕೊಂಡು ಕುಳಿತಿದ್ದೀರ ....ಒಳ್ಳೇ ಗಂಡಸರು....ಇಂಥಾ ಭಾಗ್ಯಕ್ಕೆ ಇವನ್ನೆಲ್ಲಾ ಏಕೆ ಕಟ್ಟಿಕೋಬೇಕೊ....ಕಾಣೆ"

ಎಂದು ತಮಗೆ ತಾವೇ ಹೇಳಿಕೊಳ್ಳುವವರಂತೆ ನುಡಿದು, ಕಣ್ಣೀರಿಡುತ್ತಿದ್ದರು.

ಆಗ ಅವರಿಗೆ ತಮ್ಮ ಜೀವನ ಒಂದು ದುಃಖಸಾಗರದಂತೆ ಕಾಣುತ್ತಿತ್ತು. ಕೆಲಸವಿಲ್ಲದ ಗಂಡ ಆರು ತಿಂಗಳಿಂದಲೂ ಮನೆಯಲ್ಲೇ ಇದ್ದಾರೆ. ಬಾಡಿಗೆ ಮನೆ. ಬೆಳೆದ ಇಬ್ಬರು ಹುಡುಗಿಯರು. ಮದುವೆಯ ಮಾತೇ ಇಲ್ಲ. ಮನೆಯಲ್ಲಿ ಯಾರನ್ನೂ ಲೆಕ್ಕಿಸದ

ಪ್ರಾಯದ ಮಗ. ತಂದೆ ತಾಯಿಗಳ ಕಡೆಗೆ ತಿರುಗಿಯೂ ನೋಡದೆ ತನ್ನ ಹೆಂಡಿರು ಮಕ್ಕಳೊಂದಿಗೆ ಇದ್ದ ದೊಡ್ಡಮಗ. ಎಲ್ಲಕ್ಕೂ ಮಿಗಿಲಾಗಿ ತಾವು ಬುದ್ಧಿವಂತಿಕೆಯಿಂದ ಕೂಡಿರಿಸಿದ್ದ ಹಣದ ಪುಟ್ಟ ಗಂಟು ರೇಷ್ಮ, ತರಕಾರಿ, ಕಾಫಿಪುಡಿ, ಬಳೆ, ಸೀರೆ, ಕಣ ಮುಂತಾದ ಅನಿವಾರ್ಯ ಮನೆ ಪದಾರ್ಥಗಳಿಗಾಗಿ ಕರಗಿಹೋಗುತ್ತಿದೆ. ಈಗ ಎರಡು ವರ್ಷದಿಂದಲೂ ಒಂದು ಸರಿಯಾದ ಸಿಲ್ಕು ಸೀರೆ ತಂದಿಲ್ಲ, ಬೆಳ್ಳಿ ತಟ್ಟೆ ಮಾಡಿಸಿಲ್ಲ. ಅದಕ್ಕೆ ಬದಲು ಈಗ ಆರು ತಿಂಗಳ ಹಿಂದೆ ಚಿನ್ನದ ಸರ, ನಾಲ್ಕು ಚಿನ್ನದ ಬಳೆ ಮಾರಿರುವ ಸಂಕಟ. ಇವೇ ಮೊದಲಾದವು ಅವರನ್ನು ಕಾಡಿ, ಕಣ್ಣೀರಿಡಿಸುತ್ತಿದ್ದುವು.

ಕೇಶವಯ್ಯಂಗಾರರು ಯಾವುದನ್ನೂ ಲೆಕ್ಕಿಸದವರಂತೆ ಪೇಪರ್ ಓದುತ್ತಿದ್ದರೂ, ಅವರ ಮನಸ್ಸು ಯಾವಾಗಲೋ ಬೇರೆ ದಾರಿಗೆ ಜಾರಿ, ವೇಗವಾಗಿ ಓಡಲು ತೊಡಗಿರುತ್ತಿತ್ತು.

'....ನಾನು ಖಂಡಿತ ಬುದ್ಧಿಯಿಲ್ಲದವನು. ಅಲ್ಲಾ, ಅಷ್ಟುವರ್ಷ ಮುನಸೀಫ್ ಕೋರ್ಟಿನಲ್ಲಿ ಗುಮಾಸ್ತನಾಗಿ ಕೆಲಸ ಮಾಡುತ್ತಿದ್ದವನಿಗೆ ಯುದ್ಧ ಪ್ರಾರಂಭವಾದ ಕೂಡಲೇ ಏಕೆ ಮನಸ್ಸು ಬದಲಾಯಿಸಿತು? .... ಆಗ ನಾನು ಕೆಲಸ ಬಿಡಬಾರದಾಗಿತ್ತು. H. A. L.ಗೆ ಸೇರಬಾರದಾಗಿತ್ತು, ಶುದ್ಧ ಅವಿವೇಕದ ಕೆಲಸ ಮಾಡಿದೆ.

'ವರದನಿಗೆ ಕೆಲಸ ಸಿಕ್ಕಿದ್ದಿದ್ದರೆ ಅನುಕೂಲ ಆಗುತ್ತಿತ್ತು. ಆದರೆ ಯಾವ ಕೆಲಸವೂ ಅವನ ದುರಾದೃಷ್ಟಕ್ಕೆ ಸಿಗುತ್ತಲೇ ಇಲ್ಲವಲ್ಲ ....ಬ್ರಾಹ್ಮಣರಿಗೆ ಎಲ್ಲಿ ಸಿಗುತ್ತೆ ಈಗ ಕೆಲಸ! .... ಅಬ್ಬಾ, ಮನುಷ್ಯ ಎಷ್ಟು ಹೀನಸ್ಥಿತಿಗೆ ಇಳಿದಿದ್ದಾನೆ. ಜಾತಿಯ ಸೋಗಿನಲ್ಲಿ ಹೊಟ್ಟೆಗಿಲ್ಲದವನ ಮೇಲೂ ಕನಿಕರ ತೋರುವುದಿಲ್ಲವಲ್ಲ.

'ಇರಲಿ. ಈಗ ಮನೆಯವನು ಬೇರೆ ಕಿರುಕುಳ ಕೊಡಲು ಪ್ರಾರಂಭಿಸಿದ್ದಾನೆ. ಒಟ್ಟು ಐದು ತಿಂಗಳ ಬಾಡಿಗೆ ಕೊಡಬೇಕು.... ನೂರೈವತ್ತು ರೂಪಾಯಿ........ಕೆಲಸ ಬಿಟ್ಟಾಗ ಸಾವಿರ ರೂಪಾಯಿ ಕೈಯಲ್ಲಿತ್ತು. ಎಷ್ಟು ಬೇಗ ಮುನ್ನೂರು ರೂಪಾಯಿ ಆಗಿಬಿಟ್ಟಿದೆ? ಅದರಲ್ಲಿ ನೂರೈವತ್ತು ಬಾಡಿಗೆಗೆ ಕೊಟ್ಟರೆ, ಮುಂದೆ ಏನು ಗತಿ?....

ಅಂತೂ ಈ ಮನೆ ಬಿಡಬೇಕು, ತುಂಬಾ ಜಾಸ್ತಿ ಬಾಡಿಗೆ .... ಹು! ಏನು ಮಾಡುವುದು. ಈ ವಯಸ್ಸಿನಲ್ಲೂ ನಾನು ಕೆಲಸ ಹುಡುಕುತ್ತಾ ಹೊರಡಬೇಕು....ನನ್ನ ಹಣೆಯಬರಹ! .... ಆ ಹುಚ್ಚಿನಲ್ಲಿ ಕ್ಲೋಸ್ ಪೇಟೆಯ ಹತ್ತಿರ ಇದ್ದ ಜಮೀನು, ಮನೆಯನ್ನು ಮಾರದೆ ಇಟ್ಟು ಕೊಂಡಿದ್ದರೆ! .... ಹೊ. ಅದೆಲ್ಲಾ ಯೋಚನೆ ಈಗೇಕೆ ?

'ಈಗ .... ಶಾಂತಾ ಯೋಚನೆ .... ಎಷ್ಟು ಬೇಗ ... ಎಷ್ಟು ದೊಡ್ಡವಳಾಗಿ ಹೋಗಿದಾಳೆ!.... ನನ್ನ ತೊಡೆಯ ಮೇಲೆ ಆಡುತ್ತಿದ್ದ ಮಗು.... ಆದರೆ ಈಗ.... ಈಗ ಕಣ್ಣೆತ್ತಿ ಮುಖನೋಡಲು ಧೈರ್ಯ ವಿಲ್ಲ ನನಗೆ!.... ಎಷ್ಟು ಒಳ್ಳೆಯ ಹುಡುಗಿ.... ಎಷ್ಟು ಬುದ್ಧಿವಂತೆ.... ಅವಳು ಗಂಡು ಮಗು ಆಗಿ ಹುಟ್ಟಿದ್ದರೆ! ಥೂ, ಆ ಹುಚ್ಚು ಆಸೆ ಗಳೆಲ್ಲಾ ಈಗೇಕೆ?....ಶ್ಯಾಮಲಾ....ಅವಳೂ ಮೈನೆರೆದುಬಿಡುವಂತಿ ದಾಳೆ!.... ಏನು ಮಾಡುವುದು?.... ಆ ಬೆಳಗೊಳದವನು.... ಅವನ ಮನೆ ಹಾಳಾಗ!:... ಅಷ್ಟು ಸಾಹುಕಾರ ಆಗಿದಾನೆ. ಆದರೂ ಅಷ್ಟು ದುರಾಸೆ! .... ನಾಲ್ಕು ಸಾವಿರ ರೂಪಾಯಿ!.... ಅಬ್ಬಾ!! .... ಶಾಂತ ಅಂಥ ಹುಡುಗೀಗೆ ನಾಲ್ಕುಸಾವಿರ ರೂಪಾಯಿ ವರದಕ್ಷಿಣೆ!.... ಇನ್ನು ಮದುವೆ ಖರ್ಚು? ಅಯ್ಯೋ!.... ಎಲ್ಲಿಂದ ತರಲಿ ಅದ ನ್ನೆಲ್ಲಾ? .... ಹಾಳು ದೇವರು ಏಕೆ ಹುಟ್ಟಿಸಿದನೋ....! .... ನಾನು ಕಡು ಮೂರ್ಖ. ಕೈ ನಡೆಯುತ್ತಿದ್ದಾಗ ಈ ದುಸ್ಥಿತಿಗೆ ಬರುತ್ತೇನೆಂದು ಕನಸಿನಲ್ಲೂ ಕಂಡಿರಲಿಲ್ಲ. ಮನುಷ್ಯ-ಮನುಷ್ಯನಿಗೆ ಇಷ್ಟು ತುಚ್ಛ ಹಿಂಸೆ ಕೊಡುತ್ತಾನೆಂದು ತಿಳಿದಿರಲೂ ಇಲ್ಲ. ಅಲ್ಲಾ ಆ ಒಂಭೈನೂರು ರೂಪಾಯಿ ಬ್ಯಾಲೆನ್ಸ್ ಎಷ್ಟು ದಿನದಿಂದ ಸತಾಯಿಸುತ್ತಿದಾರೆ? ಇರಲಿ, ನಾನು ಹಿಂದೆ ಉದಾರಿಯಾಗಿದ್ದುದು ಒಂದು ಶುದ್ಧ ತಪ್ಪು. ಏಕೆಂದರೆ, ನಾವು ಕಷ್ಟದಲ್ಲಿರುವಾಗ ಲೋಕ ಉದಾರವಾಗಿರೊಲ್ಲ. ಕ್ರೂರವಾಗಿರುತ್ತೆ.'

ಇದೇ ರೀತಿ ಅವರ ಮನಸ್ಸು ಈಗ ನೂರೊಂದನೆಯ ಬಾರಿ ಅವರ ಮುಂದೆ ಬಿಚ್ಚಿ ನಿಲ್ಲುತ್ತಿತ್ತು. ಆ ಕಠೋರ ಸತ್ಯವನ್ನು ಅವರಿಂದ ಎದುರಿಸಲಾಗುತ್ತಿರಲಿಲ್ಲ. 'ಹ್ಞು' ಎಂದು ಕೆಮ್ಮಿ, ಕನ್ನಡಕ

ಸರಿಪಡಿಸಿಕೊಂಡು, ಪುನಃ ಪೇಪರಿನಲ್ಲಿ ಆಸಕ್ತಿಯನ್ನು ಹೊಡೆದೆಬ್ಬಿಸಿ ಕೊಳ್ಳುತ್ತಿದ್ದರು.

ಶಾಂತ ತನ್ನ ಓದಿನ ಕೊಠಡಿಯಲ್ಲಿ ಕುಳಿತು ರಾಜಣ್ಣನನ್ನೇ ಯೋಚಿಸುತ್ತಿದ್ದಳು. ಅವಳಿಗೆ ತಾಯಿಯ ಮಾತುಗಳೆಲ್ಲವೂ ಕಿವಿಯ ಮೇಲೆ ಬಿದ್ದಿದ್ದುವು. ಅದರಿಂದ ಕಿವಿಯಲ್ಲಿ ಕಾದ ಸೀಸ ಸುರಿದಂತಾಗಿತ್ತು.

'ನಾನು ಅವರಿಗೆ ಹುಟ್ಟಿದ್ದರಿಂದ ಎಷ್ಟು ತೊಂದರೆಪಡುತ್ತಿದಾರೆ. ನಮ್ಮ ತಾಯಿ ನನ್ನನ್ನು ಆದಷ್ಟು ಬೇಗ ಮನೆಬಿಟ್ಟು ಓಡಿಸಬೇಕೆಂದಿದ್ದಾರಲ್ಲಾ....ನಮ್ಮ ತಂದೆ....ಪಾಪ! ಎಷ್ಟು ಒಳ್ಳೆಯ ಜೀವ....ಆದರೆ ಎಷ್ಟು ನಿಸ್ಸಹಾಯಕ ಜೀವ....ಏಕಾದರೂ ನನ್ನ ತಾಯಿಯನ್ನು ಮದುವೆಯಾದರೋ ಅವರು!.... ದುಡ್ಡು, ದುಡ್ಡು ಆಸ್ತಿ ಎಂದರೆ ಅವರಿಗೆ ದುರಾಸೆಯೇ ಇಲ್ಲ. ಎಲ್ಲರಲ್ಲೂ ಆದರ. ಮಗುವಿನ ಮನಸ್ಸಿನ ಆದರ; ಅನೇಕರು ತೋರುವ ಕಪಟ ಆದರವಲ್ಲ....ಸ್ನೇಹದ ನಡತೆ, ಸಹಾಯ ಮಾಡುವ ಮನಸ್ಸು, ಕರುಣೆ ತೋರುವ ಹೃದಯ, ನೀಚನನ್ನೂ ಕನಿಕರಿಸುವಷ್ಟು ಸಹಾನುಭೂತಿ, ಸಹನೆ....ಆದರೆ?

ಈಗ ಯಾರೂ ಅವರ ಸಹಾಯಕ್ಕೆ ಬರುತ್ತಿಲ್ಲ. ಎಲ್ಲರೂ ತಮಗೆ ಪರಿಚಯವೂ ಇಲ್ಲದಂತೆ ನಟಿಸುತ್ತಿದ್ದಾರೆ. ಅವರ ಅನ್ನವನ್ನು ಹಿಂದೆ ಉಂಡವರೂ ಸಹ! ಇದರಿಂದ ಅವರ ಮನಸ್ಸು ಎಷ್ಟು ನೊಂದಿರಬೇಕು? ಎಷ್ಟು ಕಹಿಯುಂಡಿರಬೇಕು? ಸಾಲದ್ದಕ್ಕೆ ನಮ್ಮ ತಾಯಿ ಬೇರೆ ಕಿರುಕುಳ ಕೊಡಲಾರಂಭಿಸಿದ್ದಾಳೆ. ನಮ್ಮ ತಾಯಿ ಎಂದಾದರೂ ನಮ್ಮ ತಂದೆಯನ್ನು ಪ್ರೇಮಿಸಿದ್ದಾಳೆಯೇ? ನಾನು ಈಗ.....ಯಾರನ್ನು?....ಯಾರನ್ನು??.....ಹು, ನಾಚಿಕೆ ಏಕೆ?..... ರಾಜಣ್ಣನನ್ನು....ಹೌದು ನನ್ನ ರಾಜುವನ್ನು ಪ್ರೇಮಿಸಿದಂತೆ ಎಂದಾದರೂ ಪ್ರೇಮಿಸಿದ್ದಾಳೆಯೇ?....ನನಗೆ ಬುದ್ಧಿ ಬಂದಾಗಿನಿಂದಲೂ, ನೀನು ಆಸ್ತಿ ಮಾಡಲಿಲ್ಲ, ಒಡವೆ ಮಾಡಿಸಲಿಲ್ಲ, ಸೀರೆ ತರಲಿಲ್ಲ, ಬೇರೆ ಹೆಂಗಸರ ಕಣ್ಣು ಕುಕ್ಕುವಷ್ಟು ವೈಭವ ನನ್ನ ಮೇಲೆ ಹೇರಲಿಲ್ಲ. ಇದೇ ರಾಗ ಅವಳದು. ಜೀವನ ಎಂದರೆ ಎಷ್ಟು ಪವಿತ್ರವಾದದ್ದು,

ಅಪರೂಪವಾದದ್ದು ; ಜ್ಞಾನ ಎಂದರೆ ಎಷ್ಟು ಅಮೂಲ್ಯವಾದದ್ದು, ಒಳ್ಳೆಯತನ ಎಷ್ಟು ದೈವಿಕವಾದದ್ದು ಎಂದು ನಮ್ಮ ತಂದೆ ಅರ್ಥ ಮಾಡಿಕೊಂಡಿದ್ದಾರೆ. ಅದನ್ನೇ ನಮ್ಮ ತಾಯಿ ಎಂದಾದರೂ ಅರ್ಥ ಮಾಡಿಕೊಂಡಿದ್ದಾಳೆಯೆ ?....ಇಲ್ಲ. ಬರೀ ಒಡವೆ, ಆಸ್ತಿ, ಸೀರೆ, ಇವೇ ಅವಳ ಪ್ರಪಂಚ... .ಮಕ್ಕಳನ್ನು ಹೆತ್ತಿದ್ದು, ಆಡಿಸಿದ್ದು, ಬೆಳೆಸಿದ್ದು....ಈಗ ಮದುವೆ ಮಾಡುವುದು, ಇದೇ ಅವಳ ಯೋಚನೆ. ಎಂಥಾ ಅಜ್ಞಾನ ಜೀವನ !....ಯಾಂತ್ರಿಕ ಜೀವನ !! ' ಎಂದು ಯೋಚಿಸುತ್ತಿದ್ದಳು.

ಆದರೆ ಶ್ಯಾಮಲ ಯಾವುದನ್ನೂ ಲೆಕ್ಕಿಸದೆ, 'ಕಾರ್ಬನ್ ಡೈ ಆಕ್ಸೈಡ್' ಪರೀಕ್ಷೆಗೆ ಬಂದೇ ಬರುತ್ತದೆ ಎಂದು ಓದುತ್ತಿದ್ದಳು.... ಹಾಗೆಯೇ ಯೋಚಿಸುತ್ತಿದ್ದಳು....'ನಮ್ಮ ಕ್ಲಾಸಿನ ಅಹಲ್ಯಾ ಕೆಮಿಸ್ಟ್ರಿ ಟೆಸ್ಟಿನಲ್ಲಿ ನೂರಕ್ಕೆ ಎಂಭತ್ತು ನಂಬರು ತೆಗೆದುಬಿಟ್ಟಳು ! ನನಗೆ ಎಪ್ಪತ್ತೈದು ಬಂತು....ಇರಲಿ, ಮುಂದಿನ ತಿಂಗಳು ಪುನಃ ಟೆಸ್ಟ್ ಇದೆ ಯಂತೆ. ಆಗ ಅಹಲ್ಯಳನ್ನು ಸೋಲಿಸಲೇಬೇಕು....ಆದರೆ ಹುಡುಗಿ ಯರೆಲ್ಲಾ ನನ್ನ ಕೂದಲು ಉದ್ದವಾಗಿರುವುದನ್ನು ಕಂಡು ಅಸೂಯೆ ಪಡುವರಲ್ಲಾ !

' ಅಹಲ್ಯಾ ತಂದೆ ದೊಡ್ಡ ಅಧಿಕಾರಿಗಳಂತೆ ........ ಅವಳು ಎಂತೆಂಥಾ ಸೀರೆಗಳನ್ನು ಉಟ್ಕೊಂಡು ಬರ್ತಾಳೆ ! .... ಥೂ, ನನಗೆ ಒಳ್ಳೇ ಸೀರೆ ತಂದುಕೊಡೋರು ಯಾರೂ ಇಲ್ಲಪ್ಪ....ಅಹಲ್ಯಾ ಅಣ್ಣ ದಿನಾ ನಮ್ಮ ಮನೆ ಮುಂದೆ ಹೋಗ್ತಾನೆ........ಒಳ್ಳೇ ಕಾರಿನಲ್ಲಿ ಹೋಗ್ತಾನೆ....ಎಷ್ಟು ಚೆನ್ನಾಗಿದಾನೆ ಅವನು ! .... ಅವನು ನನ್ನನ್ನು ನೋಡಿ....' ನೀನು ಬಹಳ ಸುಂದರಿ'....ಎಂದರೆ !!....

' ಥೂ. ಎಂಥಾ ಯೋಚನೆ ! .... ಕಾರ್ಬನ್-ಡೈ-ಆಕ್ಸೈಡ್ ಮರೆತೇಹೋಯ್ತಲ್ಲಾ....ಹು, ಕಾರ್ಬನ್ ಒಂದು ಅಣು, ಆಕ್ಸಿಜನ್ ಎರಡು ಅಣು, ಈ ಪ್ರಮಾಣದಲ್ಲಿ .... ಆ ಕಾರು ಎಷ್ಟು ನಯವಾಗಿ ರಸ್ತೆ ಮೇಲೆ ಹರಿದುಹೋಗುತ್ತೆ .... ಅದರ ಮೇಲೆ ಕುಳಿತುಕೊಂಡರೆ ಹೇಗಿರುತ್ತೋ !....ಥೂ ! .... ಕಾರ್ಬನ್........ '

ಎಂದು ಇನ್ನೂ ಅರ್ಧ ಗಂಟೆ ಓದಿದಳು. ಆಮೇಲೆ ನೀರು ಕುಡಿದು ಬರಲು ಅಡಿಗೆ ಮನೆಗೆ ಹೋದಳು.

ಹಿಂತಿರುಗಿ ಬಂದಾಗ ಶಾಂತ ಹಾಸಿಗೆಯ ಮೇಲೆ ಉರುಳಿಕೊಂಡು ಯಾವುದೋ ಪತ್ರ ಬರೆಯುತ್ತಿದ್ದಳು. ಅದನ್ನು ನೋಡಿ, ಕೂಡಲೇ ಅವಳ, ರಾಜಣ್ಣನ ಸ್ನೇಹ ಮನಸ್ಸಿನಲ್ಲಿ ಸುಳಿಯಿತು..... " ನಮ್ಮ ಅಕ್ಕ ರಾಜಣ್ಣನನ್ನು ತುಂಬಾ ಪ್ರೀತಿಸುತ್ತಾಳೆ....ಆದರೆ.... ಅವನು ಬೇರೆ ಜಾತಿಯವನಲ್ಲಾ .... ಅವನು ಎಷ್ಟು ಒಳ್ಳೆಯವನು.... ಎಷ್ಟು ಚೆನ್ನಾಗಿದಾನೆ........ದಿನವೂ ನನಗೆ ಸಂಪಿಗೆ ಹೂವು ಕಿತ್ತು ಕೊಡ್ತಾನೆ....ಕಷ್ಟವಾದ ಲೆಕ್ಕ ಮಾಡಿಕೊಡ್ತಾನೆ .... ಪ್ರತಿ ತಿಂಗಳೂ ಎಲ್ಲಿಂದಲಾದರೂ ನನಗೆ ಫಿಲ್ಮಿಂಡಿಯಾ, ಲೈಫ್, ಫೊಟೋ ಪ್ಲೇ-ಇವನ್ನು ಕಳಿಸೇ ಕಳಿಸುತ್ತಾನೆ....ತುಂಬಾ ಒಳ್ಳೆಯವನಪ್ಪ ಅವನು.... ನಮ್ಮ ಅಕ್ಕನಿಗೆ ಸರಿಯಾದ ಗಂಡ.

" ಆದರೆ ಅವತ್ತು....ಅವತ್ತು ನಾನೊಬ್ಬಳೇ ಸ್ಕಿಪ್ಪಿಂಗ್ ಆಡಿಕೊಂಡು ಆಡಿಕೊಂಡು ಹಿಂದು ಹಿಂದಕ್ಕೆ ಹೋಗ್ತಿದ್ದೆ .... ಅವನು ಯಾವುದೋ ಪತ್ರ ಓದಿಕೊಂಡು ಮೆಟ್ಟಲು ಹತ್ತಿಬಂದ. ಅವನೂ ನನ್ನನ್ನು ನೋಡಲಿಲ್ಲ....ನಾನೂ ಅವನನ್ನು ನೋಡಲಿಲ್ಲ........ ಹಿಂದೆ ಸ್ಕಿಪ್ಪಿಂಗ್ ರೋಪ್ ಎಸೆದೆ. ಅದು ಹೋಗಿ ಅವನ ಕತ್ತಿಗೆ ಬೀಳ್ತು ....ನಾನು ಹಗ್ಗದ ತುದಿ ಜಗ್ಗಿದೆ....ಮರುಕ್ಷಣವೇ ಹಿಂದಕ್ಕೆ ಬಿದ್ದೆ.... ಅವನು ನನ್ನ ಎರಡು ತೋಳುಗಳ ಕೆಳಗೂ ಹಿಡಿದು ನನ್ನನ್ನು ತಡೆದ. 'ಜಪ್' ಎಂತ ನನ್ನನ್ನು ಮೇಜಿನ ಮೇಲೆ ಎತ್ತಿ ನಿಲ್ಲಿಸಿಬಿಟ್ಟ....ನಾನು ನಾಚಿ, ತಲೆ ತಗ್ಗಿಸಿ, ಕೈಯಿಂದ ಮುಖ ಮುಚ್ಚಿಕೊಂಡುಬಿಟ್ಟೆ.... ಆಗ ನನಗೆ ಹೇಗೆ ಹೇಗೋ ಆಗೋಯ್ತು! ಈಗಲೂ ಅದನ್ನು ನೆನೆಸಿಕೊಂಡರೆ, ಕಂಕುಳಿಗೆ ಕಚಕುಳಿ ಇಟ್ಟಂತೆ ಆಗುತ್ತಪ್ಪಾ........ನಮ್ಮ ಅಕ್ಕನಿಗೆ ಇನ್ನೂ ಏನೇನು ಮಾಡ್ತಾನೋ....!"

ಎಂದು ಚಳಿಯಲ್ಲಿ ನಡುಗಿದವಳಂತೆ ದೇಹವನ್ನೆಲ್ಲಾ ಕಂಪಿಸಿ, ಶೀತ್ಕರಿಸುತ್ತಾ ಯೋಚಿಸಿ ಮಲಗಿಕೊಂಡಳು.

ಐದು ನಿಮಿಷವಾದರೂ ನಿದ್ರೆ ಬರಲಿಲ್ಲ...."ದಿಲೀಪ್ ಕುಮಾರ್

'ಅಂದಾಜ್'ನಲ್ಲಿ ಚೆನ್ನಾಗಿಲ್ಲ.. .ಆ ರಾಜಕಪೂರ್ ಪುಂಗಿ ಊದಿದ್ದು!.... ಅಬ್ಬಾ! ಬಹಳ ತಮಾಷೆ ಪ್ರಾಣಿ ಅವನು! .... ಈ ಬಾರಿ ರೂಪ ವಾಣಿಗೆ ಇವರಿಬ್ಬರಲ್ಲಿ ಯಾರು ಉತ್ತಮ ನಟರು ಎಂದು ಪ್ರಶ್ನೆ ಕೇಳ ಬೇಕು....ಹಾಗೇ, ಇವತ್ತು ನನ್ನ ಗೆಳತಿ ರತ್ನಾ ಏನೇನೊ 'ಓವಮ್', 'ವೂಂಬ್',....'ಸ್ಪೆರ್ಮಟೋಜಾ' ........ 'ಆರ್‌ಗಾಸ್ಮ' ಎಂದು ನಮ್ಮ ಗುಂಪಿನಲ್ಲಿ ಪಿಸುಗುಟ್ಟುತ್ತಿದ್ದಳಲ್ಲಾ....ಅದಕ್ಕೆಲ್ಲಾ ಅರ್ಥವೇನು?.... ನಾಳೆ 'ಎನ್‌ಸೈಕ್ಲೊಪೀಡಿಯಾ'ದಲ್ಲಿ ನೋಡಿಕೊಂಡು ಬರಬೇಕು..... ನನ್ನ 'ನಿಪ್ಪಲ್ಸ್'ಏಕೋ ಸ್ವಲ್ಪ ಊದಿಕೊಳ್ತಿವೆ .... ಗಟ್ಟಿಯಾಗ್ತಿವೆ, ಸ್ವಲ್ಪಸ್ವಲ್ಪ ನೋಯುತ್ತಿವೆ .... 'ನಿನಗೂ ಹಾಗಾಗುತ್ತಾ?' ಎಂದು ರತ್ನಾಗೆ ಕೇಳಬೇಕು—ನನಗೇಕೋ ಅದರಿಂದ ಹೆದರಿಕೆಯಾಗ್ತಿದೆ.... ದಾರಿಯಲ್ಲಿ ಹೋಗುವಾಗ ಹುಡುಗರೆಲ್ಲ .... ನನ್ನನ್ನು ಹೇಗೆ ಹೇಗೋ ನೋಡ್ತಾರೆ....ಇನ್ನುಮೇಲೆ ದಿನವೂ ಸೀರೆ ಉಟ್ಟುಕೋಬೇಕು"

ಎಂದು ಯೋಚಿಸುತ್ತಾ ಕಣ್ಣು ಮುಚ್ಚಿದಳು....ಈಗಲೂ ನಿದ್ರೆ ಬರಲಿಲ್ಲ. ಶಾಂತಳನ್ನೇ ನೋಡುತ್ತಾ,

"ಹೂ....ದೀಪ ಆರಿಸೆ. ಸಾಕು ನಿನ್ನ ಓದಾಟ...."

ಎಂದಳು. ಆದರೆ ಅಕ್ಕ ಅವಳ ಕಡೆಗೆ ತಲೆಯೆತ್ತಲಿಲ್ಲ. ಕಾಗದ ಬರೆಯುತ್ತಲೇ ಹೇಳಿದಳು.

"ಇನ್ನೊಂದು ಐದೇ ಐದು ನಿಮಿಷ ಕಣೇ....ಆಗೋಯ್ತು."

"ಇನ್ನು ಹತ್ತು ನಿಮಿಷ ಆದ್ರೂ ಆಗೋಲ್ಲ.... ಐ ಚಾಲೆಂಜ್! ಒಳ್ಳೆ ಒಳ್ಳೆ ಪದಗಳನ್ನೆಲ್ಲಾ ಅಂದವಾಗಿ ಪೋಣಿಸಬೇಕಲ್ಲಾ.... ನಿಮ್ಮ ಆ ರಾಜು"

"ಹುಷ್ ಷ್!... ಏಯ್!"—ಎಂದು ಕಣ್ಣಿನಲ್ಲಿಯೇ ಗದರಿಸಿ, ಪೆನ್ನನ್ನು ತುಟಿಗೊತ್ತಿಕೊಂಡಳು ಶಾಂತ!

ಶ್ಯಾಮಲ ತಪ್ಪುಮಾಡಿದವಳಂತೆ ನಾಲಗೆ ಕಚ್ಚಿ, ಸ್ತಬ್ಧಳಾಗಿ, ಮಳ್ಳಿಯಂತೆ ತಂದೆ ತಾಯಿಯರು ಮಲಗಿದ್ದ ಕೋಣೆಯ ಕಡೆ ನೋಡಿ, ತಲೆಯ ಮೇಲೆ ಮುಸುಕೆಳೆದು ಮಲಗಿದಳು.

ಅವಳು ಹೇಳಿದಂತೆ ಶಾಂತಳ ಪತ್ರ ಹತ್ತು ನಿಮಿಷವಾದರೂ

ಮುಗಿಯಲಿಲ್ಲ, ಅರ್ಧಗಂಟೆಯಾದರೂ ಮುಗಿಯಲಿಲ್ಲ.

ರಾಜಣ್ಣ ತನ್ನ ಕೆಲವು ಪತ್ರಗಳಲ್ಲಿ "ನಿಮ್ಮ ತಂದೆ ಏನು ಮಾಡುತ್ತಿದಾರೆ ?" ಎಂದು ಪ್ರಶ್ನಿಸಿದ್ದ. ಅದಕ್ಕೆ ಇಂದು,

ರಾಜು,

ನೀವು ನಮ್ಮ ತಂದೆ ಏನು ಕೆಲಸ ಮಾಡುತ್ತಾರೆ ಎಂದು ಕೇಳುತ್ತಲೇ ಇದ್ದೀರಿ. ಈದಿನ ಎಲ್ಲವನ್ನೂ ಹೇಳಬೇಕೆಂದು ಮನಸ್ಸು ಮಾಡಿದ್ದೇನೆ.

ನಮ್ಮ ತಂದೆ ಕ್ಲೋಸ್‌ಪೇಟೆಯ ಕೋರ್ಟಿನಲ್ಲಿ ಮೊದಲು ಗುಮಾಸ್ತರಾಗಿದ್ದರು. ಈಗ ಹತ್ತು ವರ್ಷದ ಹಿಂದೆ, ಹಿಂದೂಸ್ತಾನ್ ವಿಮಾನ ಕಾರ್ಖಾನೆ ಸ್ಥಾಪಿತವಾದ ಕೂಡಲೇ ಅಲ್ಲಿ ಕೆಲಸಕ್ಕೆ ಸೇರಬೇಕು ಎಂದು ಮನಸ್ಸು ಮಾಡಿಕೊಂಡರು. ಆಗ ನಾವೆಲ್ಲ ಮಿಡ್ಲ್‌ಸ್ಕೂಲಿನಲ್ಲಿ ಓದುತ್ತಿದ್ದೆವು. ನಮಗೆಲ್ಲರಿಗೂ ಕಾಲೇಜು ವಿದ್ಯಾಭ್ಯಾಸ ದೊರಕಿಸಬೇಕೆಂದು ಅವರಿಗೆ ಬಹಳ ಇಷ್ಟವಿತ್ತು. ಕ್ಲೋಸ್‌ಪೇಟೆಯಲ್ಲೇ ಇದ್ದಿದ್ದರೆ ಸ್ಥಳ, ಸಂಬಳ ಒಂದೂ ಆ ಉದ್ದೇಶ ಸಾಧನೆಗೆ ಸಾಲುತ್ತಿರಲಿಲ್ಲ. ಅವರು ಪ್ರಯತ್ನಿಸಿದ್ದಕ್ಕೆ ಆಗ ಕಾರ್ಖಾನೆಯಲ್ಲಿ 'ನಾನ್ನೂರು' ರೂ, ಸಂಬಳದ ಕೆಲಸ ದೊರೆಯಿತು ! ನಮ್ಮ ತಂದೆಯ ಕನಸುಗಳೆಲ್ಲಾ ನೆನಸಾಗುವ ಸಮಯ ಬಂದಿತು.

ಹಳೆಯ ಕೆಲಸಕ್ಕೆ ಅವರು ರಾಜೀನಾಮೆ ಕೊಟ್ಟರು. ನಮ್ಮೆಲ್ಲರೊಡನೆ ಇಲ್ಲಿಗೆ ಬಂದರು. ಇಲ್ಲಿ ಈಗ ಎರಡು ವರ್ಷಗಳವರೆಗೂ ಬಹಳ ಸುಖವಾಗಿದ್ದೆವು. ಶೇಷಾದ್ರಿಪುರದ ಬಾಡಿಗೆ ಮನೆಯೊಂದಕ್ಕೆ ತಿಂಗಳಿಗೆ ಎಂಭತ್ತು ರೂಪಾಯಿ ಕೊಡುತ್ತಿದ್ದೆವು. ಈ ಮನೆಗೆ ಬಂದು ಎರಡು ವರ್ಷವಾಯ್ತು.

ನಮ್ಮ ದೊಡ್ಡಣ್ಣ ಓದಲಿಲ್ಲ. ಇಂಟರ್‌ನಲ್ಲೇ ಐದಾರು ಬಾರಿ ಫೇಲಾಗಿ, ಕೊನೆಗೆ ಮದುವೆಯಾದ. ಆಗಲೇ ನನ್ನ ಮದುವೆಯನ್ನೂ ಮಾಡಿಬಿಡಬೇಕು ಎಂದು ನಮ್ಮ ತಾಯಿ

ಬಹಳ ಆತುರಪಡಿಸಿದರು. ನಾನು ಆಗತಾನೇ ಕಾಲೇಜಿಗೆ ಹೋಗಲು ಪ್ರಾರಂಭಿಸಿದ್ದೆ. 'ಇನ್ನೂ ಚಿಕ್ಕ ವಯಸ್ಸು... ಒಳ್ಳೇ ವರ ಬರಲಿ....ಚೆನ್ನಾಗಿ ವಿದ್ಯಾಭ್ಯಾಸ ಮಾಡಲಿ' ಎಂದು ನಮ್ಮ ತಂದೆ, ತಾಯಿಯ ಬಾಯಿ ಮುಚ್ಚಿಸಿದರು.

ಆಮೇಲೆ ನಮ್ಮ ತಾಯಿಗೆ ದೊಡ್ಡ ಖಾಯಿಲೆ ಬಂತು. ಒಂದು ವರ್ಷ ಆಸ್ಪತ್ರೆಯಲ್ಲಿದ್ದರು. ಈಗಲೂ ಅವರಿಂದ ಮನೆ ಕೆಲಸ ಮಾಡಲು ಆಗುವುದಿಲ್ಲ. ನಾನೇ ಮಾಡುತ್ತೇನೆ.

ನಾನು ಸೀನಿಯರ್ ಇಂಟರಿನಲ್ಲಿ ಓದುತ್ತಿದ್ದಾಗ ನಮ್ಮ ತಂದೆಯವರಿಗೆ ನಾನೂರರಿಂದ ಮುನ್ನೂರು ರೂಪಾಯಿ ಕೆಲಸಕ್ಕೆ ಹಾಕಿದರು. ನಮ್ಮ ತಂದೆ ಸುಮ್ಮನೆ ಇದ್ದರು. ಕೆಲವು ತಿಂಗಳಾದ ಮೇಲೆ ಮುನ್ನೂರರಿಂದ, ನೂರೈವತ್ತರ ಕೆಲಸಕ್ಕೆ ಹಾಕಿದರು. ಇನ್ನು ಕೆಳಮಟ್ಟಕ್ಕೆ ಇಳಿಸುವುದಿಲ್ಲ ಎಂದು ಮೇಲಧಿಕಾರಿಗಳು ಭರವಸೆ ಕೊಟ್ಟಮೇಲೆ ನಮ್ಮ ತಂದೆ ಸುಮ್ಮನಿದ್ದರು. ಆದರೆ ಇನ್ನೊಂದು ತಿಂಗಳಿನಲ್ಲಿಯೇ ಎಪ್ಪತ್ತೈದು ರೂಪಾಯಿ ಕೆಲಸಕ್ಕೆ ಇಳಿಸಿದರು. ನಮ್ಮ ತಂದೆ ಬಹಳ ಗಾಬರಿಯಾದರು. ಆಗಲೇ ನಮ್ಮ ತಾಯಿ ಆಸ್ಪತ್ರೆಯಲ್ಲಿದ್ದುದು. ನಮ್ಮ ತಂದೆ ಆಗ ಊಟ, ನಿದ್ರೆ ಎಲ್ಲವನ್ನೂ ಬಿಟ್ಟರು. ಒಂದು ರಾತ್ರಿ ನನಗೆ ಎಚ್ಚರವಾದಾಗ ಅವರು ಕೂಡಿಟ್ಟ ಹಣ ಎಣಿಸುತ್ತಿರುವುದು ಕೇಳಿ ಬಂತು. ಆಗ ಗೊತ್ತಾಗದಿದ್ದ ಕಾರಣ ಈಗ ನನಗೆ ತಿಳಿಯುತ್ತಿದೆ.

ನಾನು ಜೂನಿಯರ್ ಬಿ.ಎ.ನಲ್ಲಿ ಓದುತ್ತಿದ್ದಾಗ ನಮ್ಮ ತಂದೆಯ ಕೆಲಸವನ್ನು ಕಿತ್ತುಕೊಂಡರು. 'ಡಿಪಾರ್ಟ್‌ಮೆಂಟಲ್ ರಿಟ್ರೆಂಚ್‌ಮೆಂಟ್' ಆಯಿತಂತೆ.

ಅಂದಿನಿಂದ ನಮ್ಮ ತಂದೆ, ನಮ್ಮ ಅಣ್ಣ ಬೇರೆ ಕೆಲಸ ಹುಡುಕುತ್ತಲೇ ಇದ್ದಾರೆ. ಆದರೆ ಒಬ್ಬರಿಗೂ ಕೆಲಸ ಸಿಕ್ಕಿಲ್ಲ. ನೋಡಿ, ಸ್ವಾತಂತ್ರ್ಯ ಬಂದ ಮೇಲೆಯೇ ನಾವು ಇಂಥ ಕಷ್ಟಕ್ಕೆ ಗುರಿಯಾದದ್ದು.

ನಿಮಗೆ ಇದನ್ನೆಲ್ಲಾ ಬರೆಯಬಾರದು ಎಂದು ಮನಸ್ಸು ಮಾಡಿದ್ದೆ. ಆದರೆ ನೀವು ಬಹಳ ವಿಚಾರ ಮಾಡಿದಿರಿ. ನೀವು ಬಹಳ ಸಹಾನುಭೂತಿಯುಳ್ಳವರು. ನನ್ನ ಹೃದಯಕ್ಕೆ ಯಾರೂ ಇಷ್ಟು ಹತ್ತಿರ ಬಂದಿರಲಿಲ್ಲ. ಆದುದರಿಂದಲೇ ನಾನು ಈ ಪತ್ರ ಬರೆದಿರುವೆ.

ಹಿಂದೆ ನಮ್ಮ ತಂದೆ, ಅನುಕೂಲದಲ್ಲಿ ಇಲ್ಲದಿದ್ದ ಬಡ ನೆಂಟರಿಗೆ, ಗೆಳೆಯರಿಗೆ ಎಷ್ಟು ಸಹಾಯ ಮಾಡಿದ್ದಾರೆ! ಎಷ್ಟು ಜನ ವಿದ್ಯಾರ್ಥಿಗಳು ನಮ್ಮ ಮನೆಯಲ್ಲಿದ್ದು ಪಧವೀಧರರಾಗಿ ಹೋಗಿದ್ದಾರೆ. ಒಳ್ಳೆ-ಒಳ್ಳೆ ಸ್ಥಾನಗಳಲ್ಲಿದ್ದಾರೆ. ಆದರೆ ಈಗ ಯಾರೂ ನಮ್ಮನ್ನು ಕೇಳುತ್ತಿಲ್ಲ. ಮನುಷ್ಯ ಸ್ವಭಾವ ಹೀಗೇ ಎಂದು ಹೇಳಲು ಅಸಾಧ್ಯ.

ಪುನಃ ನನ್ನ ಗೋಳನ್ನೇ ಬರೆಯುತ್ತಿದೇನೆ! .... ನಿಮ್ಮ ಪರಿಚಯ ಮತ್ತು ಸ್ನೇಹ ದೊರೆತದ್ದು ನನ್ನ ಸೌಭಾಗ್ಯವೇ ಇರಬೇಕು. ನೀವೂ ನನ್ನಲ್ಲಿ ಯಾವ ಮುಚ್ಚುಮರೆಯನ್ನಿಟ್ಟಿಲ್ಲ.. ನನಗೂ ಮುಚ್ಚುಮರೆ ಮಾಡಲು ಮನಸ್ಸಿಲ್ಲ. ನಮ್ಮ ಗೆಳೆತನ ಎಂದಿಗೂ, ಎಂದೆಂದಿಗೂ ಹೀಗೇ ಇರುವಂತೆ ನನ್ನ ಪ್ರಾರ್ಥನೆ.... ದೇವರಲ್ಲಿ ಮತ್ತು ನಿಮ್ಮಲ್ಲಿ.

ಈಗೊಂದು ಸಂತೋಷದ ಸುದ್ದಿ !

ಇನ್ನು ಎರಡು ಮೂರು ದಿನಗಳಲ್ಲೇ ನಮ್ಮ ಕಾಲೇಜಿನಲ್ಲಿ ಒಂದು ಸಮಾರಂಭ ಆಗುತ್ತೆ. ಅಂದೇ ನಮ್ಮ ಕಾಲೇಜಿನಲ್ಲಿ ಸಹಾಯಾರ್ಥವಾಗಿ ಒಂದು ಇಂಗ್ಲಿಷ್ ಸಿನಿಮಾ ಇದೆ.... ಮಾರ್ನಿಂಗ್ ಷೋ! ಅದಕ್ಕೆ ನೀವು ಬರಲೇ ಬೇಕು. ಟಿಕೆಟನ್ನು ನಾನೇ ತೆಗೆದಿಟ್ಟಿರುತ್ತೇನೆ.

ಈಗ ನೀವು ಬಹುಶಃ ಓದುತ್ತಿರಬಹುದು. ನಿಮ್ಮ ನೆಚ್ಚಿನ ಆರ್ಗ್ಯಾನಿಕ್ ಕೆಮಿಸ್ಟ್ರಿಯನ್ನು! .... ಆ ವಿಷಯ ತುಂಬಾ ಸೊಗಸಾಗಿದೆ.....ನಿಮಗೆ ಬರುವ ಪ್ರೊಫೆಸರುಗಳು ಎಷ್ಟು ಆಕರ್ಷಕವಾಗಿ ಬೋಧಿಸುತ್ತಾರೆ, ಎಂದು ನೀವು ನಟನೆಮಾಡಿ, ವಿವರಿಸಿ

ದುದು ನನ್ನ ಕಣ್ಣಿಗೆ ಕಟ್ಟಿದಂತಿದೆ. ಹೆಸರುಘಟ್ಟದಲ್ಲಿ ನೀವು ಮಾಡಿದ ತಮಾಷೆ, ನೀರಿನಲ್ಲಿ ಆಡಿದ ಆಟಗಳು ಎಲ್ಲವನ್ನೂ ನೆನೆಸಿಕೊಂಡರೆ.... ನನಗೆ ನಕ್ಕುನಕ್ಕು ಸಾಕಾಗುತ್ತೆ.

ಇರಲಿ....ಈಗ ನಾನು ಮಲಗುತ್ತೇನೆ. ಶ್ಯಾಮಲ ಆಗಲೇ ಏನೋ 'ದಿಲೀಪ್ ಕುಮಾರ್....ಚೆನ್ನಾಗಿಲ್ಲ!' ಎಂದು ಕನವರಿಸುತ್ತಿದಾಳೆ....ಅವಳಿಗೆ ಅದೇ ಧ್ಯಾನ! ಪೋಲಿ.

ಈಗ ನೀವೂ ಮಲಗಿಕೊಳ್ಳಿ. ನಿಮಗೆ ಸುಖಕರವಾದ, ಸುಂದರವಾದ ಕನಸುಗಳು ಬೀಳಲಿ....

ಎಂದು ಇನ್ನೂ ಏನೋ ಬರೆಯಬೇಕೆಂದಿದ್ದಳು. ಆದರೆ ಅದನ್ನು ಅಲ್ಲಿಗೇ ತಡೆದು, ಆ ಪತ್ರಕ್ಕೆ ಒಂದು ಮುತ್ತನ್ನಿಟ್ಟು,

ನಿಮ್ಮ ಬಾಳ ಗೆಳತಿ....ಶಾಂತ

ಎಂದು ಬರೆದಳು. ಆಗವಳಿಗೆ 'ತಾನೂ-ರಾಜಣ್ಣ ಒಂದೇ ಮನೆಯಲ್ಲಿದ್ದಿದ್ದರೆ....ಈಗ ನಾನು ಹೇಗೆ ಅವನ ಹೊದಿಕೆ ಸರಿಪಡಿಸ ಬಹುದು, ಅವನ ಹಣೆ, ಮುಂಗುರುಳನ್ನು ತೀಡಿ, ಒಂದು ಪ್ರೇಮದ ಚುಂಬನವಿತ್ತು, ದೀಪ ಆರಿಸಿ, ಮಲಗಬಹುದು; ಕಿಟಕಿಯಿಂದ ಕಾಣುನ ತಾರೆಗಳನ್ನು ನೋಡುತ್ತಾ, ಅವನ ತೋಳು ಹಿಡಿದು ನಿದ್ರಿಸ ಬಹುದು' ಎಂಬ ಮಧುರ ಆಲೋಚನೆಗಳು ತಲೆಗೆ ನುಗ್ಗಿದವು.

'ಆಗಲಿ.. ಒಂದು ದಿನ ಆ ಸೌಭಾಗ್ಯವೂ ನನಗೆ ದೊರಕ ಬಹುದು' ಎಂದು ದೀಪ ಆರಿಸಿ, ಹಾಸಿಗೆಯಲ್ಲಿ ಬಳಲಿದ ಅಂಗಾಂಗ ಗಳನ್ನೆಲ್ಲಾ ನೀಳವಾಗಿ ಚಾಚಿ, ಒಮ್ಮೆ ಮೈಮುರಿದು ಕಣ್ಣು ಮುಚ್ಚಿದಳು. ಅವಳ ತುಟಿಗಳ ಮೇಲೆ ಸವಿಕನಸಿನ ಕಿರುನಗೆಯೊಂದು ಮೂಡಿದ್ದಿತು.

* * *

ಮಾರನೆಯ ದಿನ ಬೆಳಗ್ಗೆ ವರದ ಸಪ್ಪೆ ಮುಖ ಹಾಕಿಕೊಂಡು ರಾಜಣ್ಣನ ಬಳಿಗೆ ಬಂದ.

"ರೀ, ರಾಜಣ್ಣ, ನಿಮ್ಮ ಸೈಕಲ್ ಮುಂದಿನ ಚಕ್ರ ಬಹಳ

ಬೆಂಡ್ ಆಗೋಗಿದೆ. ದಾರಿಯಲ್ಲಿ ಒಂದು ಜಟಕಾ ಬಂಡಿ ಢಿಕ್ಕಿ ಹೊಡೆಯಿತು. ಆ ಸಾಬಿಗೆ ವ್ಹೈ-ಮುರಿದು ಬಂದೆ ಅನ್ನಿ! ಅದಕ್ಕೆ ಬದಲಾಗಿ ಒಂದು ಹೊಸ ಚಕ್ರ ಹಾಕಿಸಿಕೊಡ್ತೀನೆ. ಇನ್ನೊಂದು ದಿನ ದಯವಿಟ್ಟು ಕಾಯುತ್ತೀರಾ"

ಎಂದ. ರಾಜಣ್ಣ ಸ್ವಲ್ಪ ಹೊತ್ತು ಸುಮ್ಮನೆ ಇದ್ದ. ಅದು ಅವನ ಅಣ್ಣ ಎರಡು ವರ್ಷದ ಹಿಂದೆ ಕೊಡಿಸಿದ್ದ ಹೊಸ ಸೈಕಲ್. ಅದನ್ನವನು ತುಂಬಾ ಎಚ್ಚರಿಕೆಯಿಂದ ನೋಡಿಕೊಂಡಿದ್ದ. ಆದರೂ ಈಗ ಹೊಸ ಚಕ್ರ ಹಾಕಿಸಿಕೊಡಲು ವರದ ಸಂಪಾದನೆ ಮಾಡುತ್ತಿಲ್ಲ. ಅವರ ಮನೆಯವರೂ ಅಷ್ಟೇನೂ ಅನುಕೂಲ ಸ್ಥಿತಿಯಲ್ಲಿಲ್ಲ. ವರದನ ಮೇಲೆ ತನಗೆ ಅಭಿಮಾನ, ಈ ಪುಟ್ಟ ತಪ್ಪನ್ನು ಮನ್ನಿಸಿಬಿಡುವ ಹುರುಪು ಇಲ್ಲದಿದ್ದರೂ ಅವನ ತಂದೆಯ ಸ್ಥಿತಿ ನೆನೆದು ಹೇಳಿದ:

"ಬೇಡಿ ವರದ, ನೀವು ತೊಂದರೆ ತೆಗೆದುಕೊಳ್ಳಬೇಡಿ. ಹಾಗೇ ಹಿಂದಿರುಗಿಸಿಬಿಡಿ."

"ಇಲ್ಲ. ಸ್ವಲ್ಪ ತಡಿಯಿರಿ. ನಾನೇನೇ ಸರಿಮಾಡಿಸಬೇಕು. ಐ ಆಮ್ ವೆರಿ ಸಾರಿ ಫಾರ್ ದಿ ಆಕ್ಸಿಡೆಂಟ್."

"ಪರವಾಗಿಲ್ಲ. ನೀವೇನೂ ತಿಳಿದುಕೊಳ್ಳಬೇಡಿ. ಎಷ್ಟೇ ಆಗಲಿ ಆಕಸ್ಮಿಕವಲ್ಲವೇ. ನನಗಾದರೂ ಆಗಬಹುದಾಗಿತ್ತು! ಈಗ ಅದನ್ನು ಇರುವ ಹಾಗೇ ಕಳಿಸಿಬಿಡಿ. ನನಗೊಬ್ಬ ಸೈಕಲ್-ಷಾಪ್ ಮಿತ್ರ ಇದಾನೆ. ಅಲ್ಲಿ ಸರಿಮಾಡಿಸುತ್ತೀನೆ" ಎಂದ.

ವರದ ಮನೆಯ ಆಳನ್ನು ದರ್ಪದಿಂದ ಕರೆದು ಸೈಕಲನ್ನು ಹೊರಿಸಿ ಕಳಿಸಿದ. ರಾಜಣ್ಣನೂ ಆ ಹುಡುಗನನ್ನು ಅಷ್ಟು ದರ್ಪದಿಂದ ಕರೆಯುತ್ತಿರಲಿಲ್ಲ. ಆ ವಿಧೇಯ ಬಾಲಕ ಸೈಕಲ್ ತಂದಾಗ.... "ಆಂಥೋಣಿ ಸೈಕಲ್ ಷಾಪಿಗೆ ಕೊಟ್ಟು ಬಾರೋ ರಾಮು...."ಎಂದು ಅವನ ಕಾಫಿಗೆ ನಾಲ್ಕಾಣೆ ಕೊಟ್ಟು ಕಳಿಸಿದ.

ಈ ಪ್ರಸಂಗವನ್ನು ತಿಳಿದ ಶಾಂತ ರಾಜಣ್ಣನಿಗೆ ಕೂಡಲೇ ಇನ್ನೊಂದು ಪತ್ರ ಬರೆದಳು.

ರಾಜು,

ನೀವು ನಮ್ಮ ಅಣ್ಣನಿಗೆ ಏಕೆ ಸೈಕಲ್ ಕೊಟ್ಟಿರಿ. ಅವರ ಸ್ವಭಾವ ನಿಮಗೆ ತಿಳಿದಿಲ್ಲ. ಅವರನ್ನು ಕಂಡರೆ ನನಗೆ ಸ್ವಲ್ಪವೂ ಆಗುವುದಿಲ್ಲ. ಅವನು ನನ್ನ ಅಣ್ಣ ಎಂದು ಭಾವಿಸಿ ಸೈಕಲ್ ಕೊಡಬೇಡಿ ಇದರಿಂದ ನನ್ನ ಮನಸ್ಸು ತುಂಬಾ ನೋಯುತ್ತೆ. ನನ್ನ ತಂದೆಯವರು ಅವನ ದೆಸೆಯಿಂದ ಎಷ್ಟು ಕೊರಗುತ್ತಿದಾರೆ ಎಂದು ನಿಮಗೆ ಗೊತ್ತಿಲ್ಲ.

ದಯವಿಟ್ಟು ಇನ್ನು ಮೇಲೆ ಅವನಿಗೆ ಏನನ್ನೂ ಕೊಡಬೇಡಿ. ಅವನ ಜೊತೆ ಸೇರಲೂ ಬೇಡಿ.

ಶಾಂತ.

—ಇವೆರಡು ಪತ್ರಗಳೂ ಅಂದು ಬೆಳಿಗ್ಗೆ ಕಾಲೇಜಿಗೆ ಹೋಗುವ ಮುಂಚೆಯೇ ರಾಜಣ್ಣನಿಗೆ ಒಂದಾದ ಮೇಲೊಂದು ತಲುಪಿದವು. ಅವುಗಳಿಂದ ಅವನಿಗೆ ತುಂಬಾ ಆಶ್ಚರ್ಯವಾಯಿತು. ಸ್ವಲ್ಪ ವಿಷಾದ, ದುಃಖವೂ ಉಂಟಾದುವು. ಬೆನಿಫಿಟ್ ಷೋಗೆ ಸುಮ್ಮನೆ ದುಡ್ಡು ಖರ್ಚು ಮಾಡುತ್ತಿದಾಳಲ್ಲ ಎಂದುಕೊಂಡ.

ಸಿನಿಮಾಗೆ ಐದು ರೂಪಾಯಿನ ಟಿಕೆಟ್ಟನ್ನು ತೆಗೆದುಕೊಂಡಿದ್ದಳು. 'ಅವನಿಗೆ ಈ ದುಂದು ವೆಚ್ಚ ಏಕೆ' ಎನಿಸಿತು. ಒಂದೆಡೆ ಎತ್ತಿಟ್ಟಿದ್ದ ಇಪ್ಪತ್ತು ರೂಪಾಯಿಗಳನ್ನೂ ಖರ್ಚು ಮಾಡಿದ್ದಳು ಎಂದು ಅವನಿಗೆ ತಿಳಿಯಲಿಲ್ಲ. ಅವಳಿಗೆ ಐದು ರೂಪಾಯಿನ ಟಿಕೆಟ್ ಸಹ ತನ್ನ ರಾಜಣ್ಣನಿಗೆ ಕಡಿಮೆ ದರ್ಜೆಯದೇ ಎಂದು ಭಾವನೆ.

ಸಿನಿಮಾ ಮಂದಿರದಲ್ಲಿ ಶಾಂತ ವಿರಾಮ ಕಾಲದವರೆಗೂ ಅವನಿಗೆ ಕಂಡುಬರಲಿಲ್ಲ. ಏಕೆಂದರೆ ಅಲ್ಲಿ ಅಷ್ಟು ಅಸಂಖ್ಯಾತ ರಮಣಿಯರ ಹಾವಳಿ. ಅಂದಿನ ಸಮಾರಂಭವನ್ನು ಒಂದು 'ಬ್ಯೂಟಿ-ಪೆರೇಡ್' ಎಂದಿದ್ದರೆ ಬಹು ಚೆನ್ನಾಗಿ ಒಪ್ಪುತ್ತಿತ್ತು. ತಮ್ಮ ಉಡುಪು, ಅಲಂಕಾರ, ವಿಲಾಸ, ವೈಯಾರಗಳನ್ನು ಪ್ರದರ್ಶಿಸಲು ನಿಂತ ಸ್ವಯಂ ಸೇವಕಿಯರು ಎಲ್ಲರಿಗೂ ಬರೀ ತಿರುಗಾಟ. ಮಾಡಲು ಕೆಲಸವಿಲ್ಲ.

ಕುಳಿತುಕೊಳ್ಳಲು ಮನಸ್ಸಿಲ್ಲ. ಒಬ್ಬಳು ಟಿಕೆಟ್ ತೆಗೆದುಕೊಳ್ಳುವವ ಳಾದರೆ, ಅದನ್ನು ಹರಿಯುವವಳೇ ಒಬ್ಬಳು, ಚೂರನ್ನು ಹಿಂತಿರುಗಿಸಿ ಕೊಡುವವಳೇ ಇನ್ನೊಬ್ಬಳು. ಆ ಅವಕಾಶಕ್ಕಾಗಿಯೇ ಕಾಯುತ್ತಾ, ಒಳಗೆ ಹೋಗುವ ನವಯುವಕರನ್ನೇ ಮನದಣಿಯುವಂತೆ ನೋಡುತ್ತಾ ನಿಂತಿರುವ ಬೆಡಗುಗಾತಿಯರ ಗುಂಪು; ಘಮ್! ಎಂದು ಸುವಾಸನೆ. ಪಾಂಡ್ಸ್, ಹ್ಯಾಜೆಲೈನ್, ಈವಿನಿಂಗ್ ಇನ್ ಪ್ಯಾರಿಸ್, ಷೇಪ್ರೆ, ಕೆನೇಲ್ ಫೈವ್, ಸ್ವೀಟ್ ಹಾರ್ಟ್, ಮಲ್ಲಿಗೆ, ಸಂಪಿಗೆ ಎಲ್ಲಾ! ....ಸೀರೆಗಳ ಸರಸರ ಧ್ವನಿ; ಷೂ, ಚಪ್ಪಲಿಗಳ ಚಟಪಟ ಧ್ವನಿ... ಕೆಲಸವಿಲ್ಲದ ತಿರುಗಾಟ....ಅವಶ್ಯಕವಿಲ್ಲದ ಅವಸರ....ಉಪಯೋಗಕ್ಕೆ ಬಾರದ ಕೂಗುಗಳು.....ಸೇವೆಗೆ ಬಾರದ ಸ್ವಯಂ ಸೇವಕಿಯರು...... . ಅರ್ಥವಿಲ್ಲದ ಮಾತು, ನಗು, ಕೂಗಾಟ, ಸ್ತ್ರೀಕಂಠಗಳ ಸಂತಸದ ಚೀರಾಟ, ಉತ್ಸಾಹ, ಕೋಲಾಹಲ, ಹೊಳೆಯುವ ಸುಂದರ ನಯನ ಗಳ ಓರೆನೋಟ, ಪಿಸುಮಾತು, ಗುಪ್ತನಗೆಗಳು....ಇವುಗಳ ಮಸಕು ಬೆಳಕಿನ ರಂಗುರಂಗಿನ ಉನ್ಮಾದಕ ಲೋಕದಲ್ಲಿ ರಾಜಣ್ಣ ಇನ್ನೂ ಇತರ ಇಪ್ಪತ್ತು ಮೂವತ್ತು ಯುವಕರೊಡನೆ ಕುಳಿತಿದ್ದ. ಇನ್ನು ಶಾಂತಿಯಿಂದ ಚಿತ್ರವನ್ನು ನೋಡುವುದೆಲ್ಲಿ! ಒಂದು ಬಾರಿ ಚಿತ್ರ ಮುಂದಿರವೆಲ್ಲ ನಕ್ಕರೆ, ಎಲ್ಲರೂ ಅಮಲೇರಿದವರಂತೆ ನಗುತ್ತಲೇ ಇದ್ದರು. ಆ ರೋಮಾಂಚಕ ಮದ್ಯದ 'ಕಿಕ್' ಅಷ್ಟು ಪ್ರಬಲ ವಾಗಿತ್ತು.

ವಿರಾಮ ಸಮಯದಲ್ಲಿ ಶಾಂತ ತನ್ನ ಸೀಟಿನಲ್ಲಿ ಎದ್ದು ನಿಂತು ಸುತ್ತಲೂ ನೋಡಿದಳು. ಅವಳಿಗೆ ರಾಜಣ್ಣ ಕಂಡುಬರಲಿಲ್ಲ. ತನಳ ನಿರಾಶೆಯ ಮುಖವನ್ನು ನೋಡಿ, ರಾಜಣ್ಣನೇ ಮೇಲೆದ್ದು ತನಳ ಕಡೆ ನೋಡುತ್ತಾ, ಹೊರಕ್ಕೆ ಹೊರಟ. ಶಾಂತ ಅವನನ್ನು ಗುರುತಿಸಿ ಮುಗುಳು ನಕ್ಕಳು....ಹೊರಗೆ ಹೋಗಿ ನಿಂತು, ಒಂದು ಸಿಗರೇಟು ಹೊತ್ತಿಸಿದ ರಾಜಣ್ಣ, ಶಾಂತ ಹೊರಕ್ಕೆ ಬರಬಹುದೇನೋ ಎಂದು ನಿರೀಕ್ಷಿಸುತ್ತಿದ್ದ. ಆದರೆ ಅವಳು ಹೊರಗೆ ಎದ್ದು ಬರುವಂತೆಯೇ ಇರಲಿಲ್ಲ.

ಸಿನಿಮಾ ಮುಗಿದ ಮೇಲೆ ಅವನು ಶಾಂತಳಿಗಾಗಿ ಹೊರಗೆ ಕಾಯುತ್ತಿದ್ದ. ಅವಳ ಸಂಗಡ ಈ ದಿನ ಮಾತಾಡುತ್ತಾ ಮನೆಯ ವರೆಗೆ ಹೋಗಬೇಕೆಂದು, ಇಲ್ಲವೇ ಲಾಲ್‌ಬಾಗಿಗೋ, ಕಬ್ಬನ್ ಪಾರ್ಕಿಗೋ ಹೋಗಬೇಕೆಂದು ಉತ್ಸಾಹಪೂರಿತನಾಗಿದ್ದ. ಆದರೆ ಅವಳು ತನ್ನ ಗೆಳತಿಯರ ಗುಂಪಿನಲ್ಲಿ ಬಂದಿದ್ದನ್ನು ಕಂಡು ತುಂಬಾ ನಿರಾಶೆಯಾಯಿತು. ಶಾಂತ ಅವನನ್ನು ನೋಡಿ ಗೆಳತಿಯರ ಗುಂಪಿ ನಿಂದ ನುಣುಚಿಕೊಳ್ಳಲು ಯತ್ನಿಸಿದಳು. ಆದರೆ ಇದ್ದ ಗೆಳತಿಯರೆ ಲ್ಲರೂ ಒಂದೇ ಕ್ಲಾಸಿನವರು, ಒಂದೇಕಡೆ ಮನೆ ಇರುವವರು, ಒಂದೇ ಬಸ್ಸಿನಲ್ಲಿ ಹೋಗುವವರು. ಅದನ್ನು ಕಂಡು ಅವಳು "ಇಂದು ಬೇಡ. ದಯವಿಟ್ಟು ಕ್ಷಮಿಸು" ಎನ್ನುವಂತೆ ನೋಟಬೀರಿ, ಮುಂದೆ ಸಾಗಿದಳು.

ಮನೆ ಸೇರಿದ ಕೂಡಲೇ, ರಾಜಣ್ಣನಿಗೆ,

"ನಿಮ್ಮೊಂದಿಗೆ ಮಾತಾಡಲಾಗಲಿಲ್ಲ. ದಯವಿಟ್ಟು ಕ್ಷಮಿಸಿ. ನನ್ನ ಸಂಗಡ ಶಕ್ಕು ಇದ್ದಳು. ಅವಳಿಗೆ ಗಿಡುಗನಂತೆ ಕಣ್ಣುಗಳು.... ನಾನು ನಿಮಗೆ ಸನ್ನೆ ಮಾಡಿದ್ದನ್ನೂ ಹಿಡಿದು ಬಿಟ್ಟಳು....ಸಿನಿಮಾ ಚೆನ್ನಾಗಿದ್ದಿತೆ? ನಿಮ್ಮ ಸಂಗಡ ಮಾತಾಡುವ ಸುಯೋಗ ಮತ್ತೆ ಯಾವ ಘಳಿಗೆಗೆ ಸಿಗುತ್ತೋ ಎಂದು ನಾನು ಕಾತುರಳಾಗಿದ್ದೇನೆ...."

ಎಂದು ಚೀಟಿ ಬರೆದು ಕಳಿಸಿದಳು. ರಾಜಣ್ಣನೂ ಕೂಡಲೇ,

"ಶಾಂತ,....ನಿಮ್ಮ ಮೂರು ಪತ್ರಗಳೂ ತಲುಪಿದುವು. ಸಿನಿಮಾ ಬಹಳ ಚೆನ್ನಾಗಿತ್ತು. ನಂಜೆ ನಾನು ಸಿನಿಮಾಕ್ಕೂ ಕರೆದುಕೊಂಡು ಹೋಗುತ್ತೇನೆ....ಬರುವಿರಾ ...?....ನಿಮ್ಮೊಂದಿಗೆ ಈಗ ನಾನು ಕೆಲವು ಮಾತುಗಳನ್ನು ಆಡಲೇ ಬೇಕಾಗಿವೆ. ಅಷ್ಟು ಆಸೆಯಾಗಿದೆ. ಇಂದು ಸಂಜೆ ನಾಲ್ಕೂವರೆಗೆ ಕೆರೆಯ ಏರಿಯ ಕಡೆ ತಿರುಗಾಡಿಕೊಂಡು, ಪ್ಯಾಲೆಸ್ ಆರ್ಚರ್ಡ್ ಬಳಿ ಇರಲು ಯತ್ನಿಸಿ. ನಾನು ಅಲ್ಲಿ ಸಿಗುತ್ತೇನೆ. ಕಾಗದದಲ್ಲಿ ಬರೆಯುವುದಕ್ಕಿಂತಲೂ ಮಾತಾಡುವುದೇ ಸೊಗಸು. ದಯವಿಟ್ಟು ನೀವು ಅಲ್ಲಿಗೆ ಬರಬೇಕು." ಎಂದು ಬರೆದ.

ಈ ಪತ್ರವನ್ನು ತಾನು ಅವಳಿಗೆ ಅಂದಿನ ದಿನದ 'ಪ್ರೆಸೆಂಟ್' ಆಗಿ ತಂದಿದ್ದ 'ಡಿಸ್ಕವರಿ-ಆಫ್ ಇಂಡಿಯಾ' ಗ್ರಂಥದಲ್ಲಿರಿಸಿ ಕಳುಹಿಸಿದ.

ಶಾಂತಳಿಂದ,

"ನೀವು ಕಳಿಸಿರುವ ಪುಸ್ತಕ ಓದಬೇಕೆಂದು ಬಹು ದಿನಗಳಿಂದಲೂ ಮನಸ್ಸಿತ್ತು. ..ಆದರೆ ದೊರಕೇ ಇರಲಿಲ್ಲ. ನಿಮಗೆ ತುಂಬಾ ಧನ್ಯವಾದಗಳು ... ಸಂಜೆ ನೀವು ಹೇಳಿದ ಕಡೆಗೆ ಬರುತ್ತೇನೆ...."

ಶಾಂತ.

—ದಯವಿಟ್ಟು ಈ ಚೀಟಿಗಳನ್ನೆಲ್ಲಾ ಸುಟ್ಟು ಬಿಡಿ.

ಎಂದಿತ್ತು. ರಾಜಣ್ಣನಿಗೆ ಸಂಜೆ ಎಷ್ಟು ಹೊತ್ತಿಗೆ ಆಗುತ್ತದೆಯೋ ಎಂದು ಅವಸರ. ಸಂಜೆಯಾದ ಕೂಡಲೇ ಇಬ್ಬರೂ ಕೆರೆಯ ಏರಿಯ ಕಡೆಗೆ ಪ್ರತ್ಯೇಕವಾಗಿ ಹೊರಟು, ಅಲ್ಲಿ ಸಂಧಿಸಿದರು. ಹತ್ತಿರ ಬಂದಾಗ ಶಾಂತ, ಅವನನ್ನು ಕಾಲಿನಿಂದ ತಲೆಯವರೆಗೂ ನೋಡಿ, ಆಶ್ಚರ್ಯ ಸಂತಸಗಳಿಂದ,

"ಇದೇನು ಒಂದು ಕ್ಷಣದಲ್ಲಿ ಬೆಳಗ್ಗೆಯ ಉಡುಪು ಬದಲಾಯಿಸಿ ಬಿಟ್ಟಿರಲ್ಲ !"

ಎಂದಳು. ರಾಜಣ್ಣ ಅವಳನ್ನೇ ವಿನೋದದಿಂದ ನೋಡಿ,

"ನಾನೆಲ್ಲಿ ಬದಲಾಯಿಸಿದೆ....!.... ಮೊದಲೇ ಈ ಉಡುಪು ಹಾಕಿದ್ದೆ."

ಎಂದ. ಶಾಂತ ಅಪನಂಬಿಕೆಯ ನೋಟದಿಂದ ಅವನನ್ನೇ ನೋಡುತ್ತಾ,

"ಬೆಳಗ್ಗೆ ನೀವು ಬುಷ್ ಷರಟು ಹಾಕೇ ಇರಲಿಲ್ಲ. ಫುಲ್ ಸೂಟಿನಲ್ಲಿ ಬಂದಿದ್ದಿರಿ. ......ಆಗಲೇ ಸುಳ್ಳು !"

ಎಂದಳು. ರಾಜಣ್ಣನಿಂದ ತನ್ನ ಸುಳ್ಳನ್ನು ಸಮರ್ಥಿಸಿಕೊಳ್ಳಲಾಗಲಿಲ್ಲ. ಸೋಲೊಪ್ಪಿ ನಕ್ಕು, ಕೈ ಆಡಿಸುತ್ತಾ,

"ಇನ್ನೇನು ಮಾಡುವುದು .... ಮೊದಲೇ ನಿಮ್ಮ ಆರ್ಡರ್ ಬಂದಿದೆಯಲ್ಲ !....ನಾನು ಇಂಥ ಬಟ್ಟೆಗಳನ್ನೇ ಹಾಕಬೇಕೆಂದು"

ಎಂದ. ಶಾಂತ ಅದನ್ನೊಪ್ಪದೆ ತಲೆ ಆಡಿಸುತ್ತಾ,

"ನಾನೇನು ನಿಮಗೆ ಆರ್ಡರ್ ಮಾಡಲಿಲ್ಲ.......ಸುಮ್ಮನೆ ಸೂಚಿಸಿದ್ದೆ."

ಎಂದಳು. ರಾಜಣ್ಣ ಹೇಳಿದ.

"ಓ....ಅಷ್ಟೇನೋ....!"

"ಹು, ಅಷ್ಟೆ....ನೀವು ಹಾಗೆ ತಿಳಿದುಕೊಳ್ಳುವುದಾದರೆ, ಬಿಳಿ ಸೀರೆ ಉಡಬೇಕು ಎಂದು ನೀವು ಆರ್ಡರ್ ಮಾಡಿರುವಿರೆಂದೇ ನಾನೂ ಹೇಳಬಹುದಲ್ಲವೇ....?"

ಎಂದಳು. ರಾಜಣ್ಣ ಒಪ್ಪಿಗೆಯ ನಗೆ ಬೀರಿ, ಕೇಳಿದ,

"ಸರಿ....ಈಗೆಲ್ಲಿ ಹೋಗೋಣ ?"

"ಹೀಗೇ ರಸ್ತೆಯುದ್ದಕ್ಕೂ...."

"ಎಲ್ಲಿಯವರೆಗೆ....?"

"ಮನಸ್ಸು ಬಂದಷ್ಟು ದೂರ...."

'ನಾವಿರಾರು ಮೈಲಿಗಳಾದರೂ ಪರವಾಗಿಲ್ಲ ತಾನೇ !"

"ಓ....ಅದಕ್ಕೇನು...."

ಎಂದು ರಾಜಣ್ಣನನ್ನೇ ಉತ್ಸಾಹದ ಅರಳುಗಣ್ಣುಗಳಿಂದ ನೋಡಿದಳು. ಅವನು ಅವಳನ್ನೇ ವಿನೋದದಿಂದ ನೋಡುತ್ತಾ ಹೇಳಿದ:

"ಆದರೆ ನೋಡಿ, ... ನಮ್ಮ ಮನೆಯಲ್ಲಿ ನನ್ನನ್ನು ಬಹಳ ಒಳ್ಳೆಯ ಹುಡುಗ. ಎಲ್ಲಗೆ ಹೋದರೂ ಮನೆಗೇ ಹಿಂತಿರುಗಿ ಬರುತ್ತಾನೆ, ಎಂದು ತಿಳಿದಿರುವರಲ್ಲಾ—!"

"ನಮ್ಮ ಮನೆಯಲ್ಲಿ ನನ್ನನ್ನೂ ಹಾಗೇ ತಿಳಿದುಕೊಂಡಿದ್ದಾರಲ್ಲಾ....!"

"ಸರಿ, ಹಾಗಿದ್ದಮೇಲ ಯಾವುದಾದರೂ ಪಿಕ್ಚರ್‌ಗೆ ಹೋಗೋಣ. ಕ್ಯಾಂಟ್‌ನಲ್ಲಿ ಒಳ್ಳೇ ಪಿಕ್ಚರ್ ಇದೆ .... ನಾಲ್ಕೂ ಮುಕ್ಕಾಲಿಗೆ ಬಸ್ ಬೇರೆ ಸಿಗುತ್ತೆ...."

ಎಂದ. ಶಾಂತಳ ತುಟಿಗಳ ಮೇಲೆ ಸವಿಯಾದ ಅಸಮ್ಮತಿಯ ಕಿರುನಗೆ ಮೂಡಿತು. ಅವಳು ಅವನನ್ನೇ ಬೇಡಿಕೆಯಿಂದ ನೋಡಿ

ಹೇಳಿದಳು,

"ಬೇಡ....ಬಹಳ ಹೊತ್ತಾಗುತ್ತೆ. ಏಳು ಗಂಟೆಯಲ್ಲಿ ಮನೆಯೊಳಗಿರಬೇಕು."

"ಏಳು ಗಂಟೆಯೊಳಗೇ!"

"ಹು"

ಎಂದು ನಿರಾಸೆ, ನಿಸ್ಸಹಾಯಕತೆಯಿಂದ ಉಸುರಿ ಕುಸಿದಳು. ರಾಜಣ್ಣ ನಾಲ್ಕಾರು ಹೆಜ್ಜೆ ಯೋಚಿಸಿ ಹೇಳಿದ,

"ಹಾಗಾದರೆ ಪ್ಯಾಲೆಸ್ ಸ್ಕ್ವೇರ್ ಮೂಲಕ ಕಬ್ಬನ್ ಪಾರ್ಕಿಗೆ ಹೋಗೋಣ. ಅಲ್ಲಿ ಒಳ್ಳೆ ಹೋಟೇಲ್ ಇದೆ."

"ಅವೆಲ್ಲಾ ಬೇಡಿ. ಹೊತ್ತಾದರೆ ತುಂಬಾ ಕಷ್ಟ."

"ಏನಿಲ್ಲ. ಏಳು-ಏಳೂವರೆಯೊಳಗೇ ರಿಟರ್ನ್ ಆಗಿಬಿಡೋಣ. ಸರಿಯೇ?"

"ಹು....ಆಗಲಿ"

ಎಂದು ನಗುತ್ತಾ ರಾಜಣ್ಣನನ್ನು ನೋಡಿದಳು. ಅವಳು ಉಲ್ಲಾಸಪೂರಿತಳಾಗಿದ್ದಳು. ಅವಳ ಕಣ್ಣುಗಳಲ್ಲಿ ಒಲುಮೆ, ಆನಂದದ ಕಾಂತಿ ತುಂಬಿ ತುಳುಕಾಡುತ್ತಿತ್ತು. ಒಂದೊಂದು ಬಾರಿ ಭಯ ನುಳಿದು ಹಿಂತಿರುಗಿ ನೋಡುತ್ತಿದ್ದಳು. ನಂತರ ರಾಜಣ್ಣನೆಡೆಗೆ ಹುಬ್ಬೇರಿಸಿ, ಕಣ್ಣರಳಿಸಿ, ತುಂಟನಗೆ ಬೀರಿ ಕೇಳಿದಳು.

"ಏನು, ನನ್ನ ಜೊತೆಯಲ್ಲಿ ತುಂಬ ಮಾತಾಡಬೇಕೆಂದು ಬರೆದಿದ್ದಿರಲ್ಲಾ! ಅಷ್ಟು ಮಹತ್ವಪೂರಿತ ವಿಷಯ ಯಾವುದು?"

"ಓ, ಹಾಗೆ ಹೇಳಿದ್ದೆನೆ? ನನಗೆ ಮರೆತೇ ಹೋಯ್ತಲ್ಲ."

"ಒಳ್ಳೇ ಮರೆವು ನಿಮ್ಮದು. ಹೋಗಲಿ ಸಿನಿಮಾ ಹೇಗಿತ್ತು?"

"ಸಿನೀಮಾಗಿಂತಲೂ ನಿಮ್ಮ ಹುಡುಗಿಯರ ಕುಣಿದಾಟವೇ ಚೆನ್ನಾಗಿತ್ತು"

ಎಂದ. ಶಾಂತ ಬೇಸರ-ವಿಷಾದ ಭರಿತ ಧ್ವನಿಯಲ್ಲಿ ಹೇಳಿದಳು.

"ನಮ್ಮ ಸ್ವಯಂಸೇವಕಿಯರೇ ಹಾಗೆ."

"ನೀವೇಕೆ ಸ್ವಯಂಸೇವಕಿ ಆಗಿರಲಿಲ್ಲ ?"

'ಥೂ, ನನಗೆ ಆ ಕೆಲಸಗಳೆಲ್ಲಾ ರುಚಿಸುವುದಿಲ್ಲ."

"ಏಕೆ ? ಅದೇನು ಅಷ್ಟು ಕೆಟ್ಟದ್ದೆ !"

"ಹಾಗಲ್ಲ ! ಅಲ್ಲಿ ಅಷ್ಟು ಸ್ವಯಂಸೇವಕಿಯರ ಅವಶ್ಯಕತೆಯೇ ಇಲ್ಲ. ಹತ್ತು-ಹದಿನೈದು ಮಂದಿ ಇದ್ದರೆ ಸಾಕು. ಆದರೆ ನೀವೇ ನೋಡಬೇಕು ... ಎಷ್ಟು ಮಂದಿ ಸ್ವಯಂಸೇವಕಿಯರು ಇದ್ದರು ಎಂದು."

'ಹು, ಚೆನ್ನಾಗಿಯೇ ನೋಡಿದೆ. ಒಂದು ಎಪ್ಪತ್ತು-ಎಂಭತ್ತು ಮಂದಿ ಇದ್ದರು.... ಸುಮಾರಾಗಿ."

'ಸರಿ ಅವರ ಹಾಗೆ 'ಬ್ಯೂಟೀ-ಪೆರೇಡ್' ಮಾಡಲು ನನಗೆ ಇಷ್ಟವಿಲ್ಲ."

'ಇನ್ನೇನು ಮಾಡಲು ಇಷ್ಟ ? ಹೀಗೆ !"

ಎಂದು ಅವಳನ್ನೇ ವಿನೋದದಿಂದ ನೋಡಿದ. ಅವಳು ಅದನ್ನು ಅರ್ಥಮಾಡಿಕೊಂಡು ಠೀವಿಯಿಂದ ತಲೆಹಾಕಿ,

"ಹೌದು, ಹೀಗೆ ತಿರುಗಾಡಲು ತುಂಬ ಇಷ್ಟ"

ಎಂದಳು. ಅವಳ ಸುಂದರ ನಯನಗಳು ಸಮ್ಮತಿ, ತೃಪ್ತಿ, ನಿರೀಕ್ಷಣೆಯ ಹೊಳಪಿನಿಂದ ಕೂಡಿದ್ದುವು.

ಆ ಸಂಜೆಯೆಲ್ಲಾ ಅವರು ತಮ್ಮ ಕಾಲೇಜು, ಪತ್ರಿಕೆಯ ಲೇಖಕರು, ಉಪಾಧ್ಯಾಯರು, ನಟ-ನಟಿಯರು, ಗೆಳೆಯರು, ಈ ವಿಚಾರವಾಗಿ ಮಾತಾಡಿದರು. ರಾಜಣ್ಣ ತನ್ನ ಹಳ್ಳಿಯ ಕೆಲಸ ಗಳನ್ನೆಲ್ಲಾ ತಿಳಿಸಿದ. ಕಬ್ಬನ್‌ಪಾರ್ಕಿನ ಮೋಹಕ ಹಿನ್ನೆಲೆಗಳಲ್ಲಿ ಶಾಂತಳನ್ನು ವಿವಿಧ ಭಂಗಿಗಳಲ್ಲಿ ನಿಲ್ಲಿಸಿ, ಫೋಟೋ ತೆಗೆದ. ಅವನಿಗೆ ಅವಳು ಉಟ್ಟಿದ್ದ ಬಿಳಿಯ ಸೀರೆ ನಿರಾಸೆಗೊಳಿಸಿತು. ಒಂದೊಂದು ಸ್ನ್ಯಾಪಿಗೂ ಅವಳು ಒಂದೊಂದು ಸೀರೆ ಬದಲಾಯಿಸಿದರೆ ಎಷ್ಟು ಸೊಗಸಾಗಿರುತ್ತದೆ ! ಎಂದು ಯೋಚಿಸಿದ. ಆಗ ಅವನಿಗೆ ಒಂದು ವಿಷಯ ನೆನಪಿಗೆ ಬಂತು. ಇಂದು ಅವಳನ್ನು ಜೊತೆಗೆ ಕರೆತಂದುದು ಒಂದು ಒಳ್ಳೆಯ ಸೀರೆ ಪ್ರೆಸೆಂಟ್ ಮಾಡುವುದಕ್ಕೆ – ಅವಳೇ ಯಾವು

ದನ್ನು ಬೇಕಾದರೂ ಆರಿಸಿಕೊಳ್ಳಲಿ ಎಂದು ಜೇಬಿನಲ್ಲಿ ತಾನು ಇದು ವರೆಗೂ ದುಂದುವೆಚ್ಚ ಮಾಡದೆ ಇರಿಸಿದ್ದ ಇನ್ನೂರೈವತ್ತು ರೂಪಾಯಿ ಹಾಕಿಕೊಂಡು ಬಂದಿದ್ದ.

ಅವಳಿಗೆ ಕಟ್ಟಕಡೆಯವರೆಗೂ ಈ ಸುದ್ದಿಯನ್ನು ಗೋಪ್ಯ ವಾಗಿಯೇ ಇರಿಸಿದ್ದು, ಹಠಾತ್ತನೆ ಸೀರೆ ಕೊಡಿಸಬೇಕೆಂದು ಅವನ ಉದ್ದೇಶವಾಗಿತ್ತು.

"ಕಾಫಿ ಕುಡಿಯಲು 'ಬಾರ್'ಗೆ ಹೋಗೋಣ ಬನ್ನಿ"

ಎಂದು ಅವಳನ್ನು ಒತ್ತಾಯ ಮಾಡಿ ಸೌತ್ ಪೆರೇಡಿಗೆ ಕರೆದೊಯ್ದ.

ದಾರಿಯಲ್ಲಿ 'ಚಂದೀರಾಮ್ ಬ್ರದರ್ಸ್' ಅಂಗಡಿಯ ಮುಂದೆ ಬೇಕೆಂದೇ ನಿಂತು,

"ಶಾಂತಾ, ನೋಡಿ, ಎಂತೆಂಥ ಸೀರೆಗಳಿವೆ ಷೋ-ಕೇಸ್‌ಗಳಲ್ಲಿ! ನೋಡೋಣವೇ ಸ್ವಲ್ಪ ಹೊತ್ತು."

ಎಂದ. ಅವಳು ಅವನನ್ನು ನಿಷ್ಕಪಟ-ನಿರಾಸಕ್ತ ನಯನಗಳಿಂದ ನೋಡಿ,... ....

"ಆಗಲಿ....'

ಎಂದಳು. ಇಬ್ಬರೂ ಹೊರಗೆ ಕಾಣಿಸುವ ಹತ್ತಾರು ಸೀರೆ ಗಳನ್ನು ನೋಡಿದರು. ನಂತರ ರಾಜಣ್ಣ ಕೇಳಿದ—

"ನಿಮಗೆ ಯಾವ ಸೀರೆ ಚೆನ್ನಾಗಿ ಕಾಣುತ್ತೆ?"

"ಎಲ್ಲಾ ಸೀರೆಗಳೂ ಚೆನ್ನಾಗಿವೆ...."

"ಹಾಗಲ್ಲ.. . .ನೀವು ಇವುಗಳಲ್ಲಿ ಅತಿಯಾಗಿ ಮೆಚ್ಚುವುದು ಯಾವುದು ?"

"ಯಾವುದನ್ನೂ ಇಲ್ಲ...."

ಎಂದಳು ಶಾಂತ. ಅದರಿಂದ ರಾಜಣ್ಣನಿಗೆ ಆಶ್ಚರ್ಯವಾಯಿತು.

"ಹಾಗಾದರೆ ಒಳಗೆ ಹೋಗಿ ವಿಚಾರಿಸೋಣ ಬನ್ನಿ. ಬೇರೆ ಸೀರೆಗಳಿರುತ್ತೆ...."

ಎಂದ. ಆಗ ಶಾಂತಳಿಗೆ ಅವನ ಉದ್ದೇಶ ಮಸಕು ಮಸಕಾಗಿ

ಹೊಳೆಯಿತು. ಪರಿಹಾಸಮಾಡಿ ನಗುತ್ತಾ,

‘ ಏಕೆ ? .. . ಸೀರೆಯನ್ನು ಕಂಡರೆ ನಿಮಗಿಷ್ಟು ಪ್ರೀತಿ... .... ನೀವೇನು ಅವನ್ನ ಉಟ್ಟುಕೊಳ್ತೀರಾ... ? ”

ಎಂದಳು. ರಾಜಣ್ಣ ಆತುರದಿಂದ.

“ ಯಾರೋ!. ಅಂತೂ ಉಡಬೇಕಾದವರು ಉಡುತ್ತಾರೆ.... ನೀವು ಬನ್ನಿ ಒಳಗೆ....”

ಎಂದು ಬಾಗಿಲಿಗೆ ಹೋದ. ಆದರೆ ಶಾಂತ ಅವನನ್ನು ಹಿಂಬಾಲಿಸಲಿಲ್ಲ. ಮುಗ್ಧಳು ನಗುತ್ತಾ, ತಾನು ನಿಂತಲ್ಲೇ ನಿಂತಳು. ರಾಜಣ್ಣ ಅವಳ ಬಳಿಗೆ ಹೋಗಿ,

“ ನೋಡಿ....ಈಗ ನೀವು ಒಳಗೆ ಬರಬೇಕು....”

ಎಂದ. ಶಾಂತ ಅವನನ್ನೇ ಪ್ರೀತಿ ಸಂಶಯಗಳಿಂದ ನೋಡುತ್ತಾ

“ ಏಕೆ ಎಂದು ಹೇಳಿಬಿಡಿ.... ನಂತರ ಬರುತ್ತೇನೆ”

ಎಂದಳು. ಆಗ ಅವನು ಹೇಳಲೇ ಬೇಕಾಯಿತು

“ ನೀವೊಂದು ಸೀರೆ ಆರಿಸಿ, ಬನ್ನಿ... ಅದನ್ನು ನಾನು ಕೊಂಡುಕೊಳ್ಳಬೇಕು ”

ಎಂದ. .ಶಾಂತ ಸ್ಥಿರವಾಗಿ ಕೇಳಿದಳು.

“ ಯಾರಿಗೆ ಅದು....? ”

“ ಯಾರಿಗೋ....ಈಗಲೇ ಏಕೆ ? ..... ಕೊಂಡಮೇಲೆ ತಾನೇ ತಾನಾಗಿ ಗೊತ್ತಾಗುತ್ತೆ....ಬನ್ನಿ ...”

ಎಂದ. ಶಾಂತ ಅಸಮ್ಮತಿಯಿಂದ ಕೈಕಟ್ಟಿ ನಿಂತು,

“ ಹಾಗಾದರೆ ಅದನ್ನು ಯಾರು ಉಡಬೇಕೋ ಅವರನ್ನೇ ಕರೆದುಕೊಂಡು ಹೋಗಿ.... ನಾನೇಕೆ ಆರಿಸಬೇಕು ?

ಎಂದಳು ನಸುನಗುತ್ತಾ. ರಾಜಣ್ಣ ಅವಳನ್ನೇ ಬೇಡಿಕೆಯಿಂದ ನೋಡುತ್ತಾ ಹೇಳಿದ.

“ ನೋಡಿ ಇಷ್ಟೇಕೆ ಸತಾಯಿಸುತ್ತೀರ....ಹೋಗಲಿ ಹೇಳಿಬಿಡುತ್ತೇನೆ....ನೀವು ಆರಿಸುವ ಸೀರೆ ನಿಮಗೇ....ಈಗ ಬರುವಿರಾ ?”

“ ಇಲ್ಲ....”

“ ಏಕೆ ?”

“ ನನಗೆ ಯಾವ ಸೀರೆಯೂ ಬೇಡ.”

“ ಏಕೆ ? ಮನೆಯಲ್ಲಿ ಇದೆಲ್ಲಿಂದ ಬಂತು ಎಂದು ಪ್ರಶ್ನೆ ಮಾಡುತ್ತಾರೆಂದೇನು ? ”

“ ಅಲ್ಲ....ಸೀರೆ ಪಡೆಯಲು ಇಷ್ಟವಿದ್ದರೆ ........ ಮನೆಯವರಿಗೆ ಏನಾದರೂ ಒಂದು ಸುಳ್ಳು ಹೇಳಿಬಿಡಬಹುದು.....ಆದರೆ ... ನನಗೆ ಯಾವ ಸಿಲ್ಕು, ಜಾರ್ಜೆಟ್ ಸೀರೆಗಳೂ ಬೇಡ....”

“ ಏಕೆ........ ನಿಮ್ಮ ತಾಯಿ ದಿನವೂ ಸಿಲ್ಕು ಸೀರೆಗಳನ್ನೇ ಉಡುತ್ತಾರಲ್ಲ !”

“ ಅವರು ಉಡುತ್ತಾರೆಂದರೆ ನಾನೂ ಉಡಬೇಕೆ ?”

“ ಹಾಗಲ್ಲ ಶಾಂತ, ಇಲ್ಲಿ ನೋಡಿ....ನೀವು ಒಂದು ನೀಲಿ ರೇಷ್ಮೆ ಸೀರೆ ಉಟ್ಟಿರುವುದನ್ನು ನೋಡಲು ನನಗೆ ಎಷ್ಟು ಆಸೆಯಿದೆ ಗೊತ್ತೇ? ನಿಮ್ಮ ಗುಲಾಬಿ ಬಣ್ಣ, ಕರ್‍ರಗೆ ಹೊಳೆಯುವ ತಲೆ ಕೂದಲು, ಕಣ್ಣು, ಕೆಂಪು ತುಟಿ, ಹಿಮ್ಮಡಿಗಳಿಗೆ....ಅದು ಎಷ್ಟು ಸೊಗಸಾಗಿರುತ್ತೆ....... ಗೊತ್ತೇ!....ನಾನು ನೀಲಿ ಸೀರೆ ಉಟ್ಟ ಯುವತಿಯರನ್ನು ನೋಡಿ ದಾಗಲೆಲ್ಲಾ....ನನಗೆ ನಿಮ್ಮ ನೆನಪಾಗುತ್ತೆ. ನಿಮ್ಮನ್ನು ಆ ಉಡುಪಿನಲ್ಲಿ ನೋಡಿ ಆನಂದಪಡಬೇಕೆನಿಸುತ್ತೆ....ಈಗ ಬನ್ನಿ....ದಯವಿಟ್ಟು....ನನ್ನ ಪ್ರಾರ್ಥನೆ ಮುರಿದುಹಾಕಬೇಡಿ ”

ಎಂದ ಆದರೆ ಶಾಂತ ಅಚಲಳಾಗಿ ನಿಂತಿದ್ದಳು. ಅವನೇ ಪುನಃ ಕೇಳಿದ.

“ ಬನ್ನೀ .... ಶಾಂತ .... ನೋಡಿ ಆಗಲೇ ನಾಲ್ಕಾರು ಜನ ನಮ್ಮನ್ನೇ ನೋಡುತ್ತಿದಾರೆ....”

“ ಪರವಾಗಿಲ್ಲ....ಇಲ್ಲಿಂದ ಹೊರಟು ಹೋಗೋಣ ಬನ್ನಿ.. ”

“ ಏಕೆ ನಿಮಗೆ ನನ್ನ ಮೇಲೆ ಪ್ರೀತಿಯಿಲ್ಲವೇ ?....”

“ ಇದೆ....”

“ ಹಾಗಾದರೆ ಒಳಗೆ ಬನ್ನಿ....”

“ ಒಳ್ಳೇ ವಿಚಿತ್ರ ವಾದ ನಿಮ್ಮದು....ನಿಮಗೆ ಈ ವಿಚಾರ ಒಂದೂ

ತಿಳಿಯೊಲ್ಲ .... ಬೇಕಾದರೆ ಇನ್ನೊಂದು ದಿನ ಬರೋಣ ಬನ್ನಿ.... ನಾನೇನು ನಿಮ್ಮಿಂದ ಪ್ರೆಸೆಂಟ್‌ಗಳನ್ನು ಪಡೆಯಲು ಹಿಂಜರಿಯೊಲ್ಲ.... ಈಗಲೇ ಸೀರೆ ಮುಂತಾದುವೆಲ್ಲಾ ಬೇಡ."

"ಹೋಗಲಿ....ಒಂದು ಸಿಲ್ಕು ಕರ್ಚೀಫ್"

ಎಂದು ಕಟ್ಟ ಕಡೆಯದಾಗಿ ಬೇಡಿದ. ಶಾಂತ ತಲೆ ಅಲ್ಲಾಡಿಸುತ್ತಾ,

"ಅದೂ ಬೇಕಾಗಿಲ್ಲ....ಈಗ ನಾನು ಹೋಗ್ತೇನೆ...."

ಎಂದುಬಿಟ್ಟಳು. ರಾಜಣ್ಣ ನಿರಾಸೆಗೊಂಡು ಹೇಳಿದ,

"ಹೋಗಲಿ .... ನಾನಾದರೂ ಒಂದು ಕರ್ಚೀಫ್ ತೆಗೆದುಕೊಳ್ತೇನೆ....ಬರ್ತೀರಾ...."

ಎಂದ....ಆಗ ಶಾಂತ ಅಂಗಡಿಯೊಳಕ್ಕೆ ಬಂದಳು.

ರಾಜಣ್ಣ ಕಾಲು ಡಜ಼ನ್ ಸಿಲ್ಕು ಕರ್ಚೀಫ್‌ಗಳನ್ನು ಕೊಂಡ. ಸೇಲ್ಸ್-ಮನ್ ಸೀರೆಗಳು, ವ್ಯಾನಿಟಿ-ಬಾಗ್, ಬ್ಯಾಸ್ಕೆಟ್‌ಗಳು, ಹೇರ್ ಸೆಟ್‌ಗಳು, ಬ್ರಾಸ್ಸೈರ್ಸ್ ಎಲ್ಲವನ್ನೂ ಶಾಂತಳ ಮುಂದೆ ಬಿಚ್ಚಿ, ಹರಡುತ್ತಿದ್ದ.

ಅವಳು ಒಂದನ್ನಾದರೂ ಆರಿಸಬಹುದೆಂದು ರಾಜಣ್ಣ ಅವಳನ್ನೇ ಕಾತುರದಿಂದ ನಿರೀಕ್ಷಿಸುತ್ತಿದ್ದ. ಆದರೆ, ಅವಳು ಎಲ್ಲವನ್ನೂ ನೋಡಿಯೂ ನೋಡಿದವಳಂತೆ ನಿಂತಿದ್ದು, ರಾಜಣ್ಣನನ್ನು ಕೇಳಿದಳು.

"ಮುಗಿಯಿತೇ ನಿಮ್ಮ ವ್ಯಾಪಾರ ?"

"ಮುಗಿಯಿತು."

"ಬನ್ನಿ ಹೋಗೋಣ."

ಎಂದಳು. ರಾಜಣ್ಣ ಅವಳನ್ನೇ ಮೌನವೇಡಿಕೆಯಿಂದ ಈಕ್ಷಿಸಿದ. ಆದರೆ ಅವಳು ಮುಗುಳುನಗುತ್ತಾ ಹೊರಕ್ಕೆ ಬಂದುಬಿಟ್ಟಳು. ರಾಜಣ್ಣನೂ ಅವಳೊಡನೆ ಹಿಂತಿರುಗಬೇಕಾಯ್ತು.

ದಾರಿಯಲ್ಲಿ ಇಬ್ಬರೂ ಎರಡು ಫರ್ಲಾಂಗಿನವರೆಗೂ ಮೌನವಾಗಿ ನಡೆದರು. ರಾಜಣ್ಣ ತುಂಬಾ ನಿರಾಸೆಗೊಂಡಿದ್ದ. ಖಿನ್ನಮನಸ್ಕನಾಗಿದ್ದ. ಅವನಿಗೆ ಪಕ್ಕದಲ್ಲಿ ಬಿಳಿಯ ಸೀರೆಯುಟ್ಟು, ನಡೆಯುತ್ತಿದ್ದ

ಶಾಂತ, ಒಬ್ಬ ಯೋಗಿನಿಯಂತೆ ಕಂಡಳು. ಅವಳು ಕೈಗಳನ್ನು ಕಟ್ಟಿ ಮುಂದೆ ನೋಡುತ್ತಾ ಗಂಭೀರವಾಗಿ ಅಡಿಯಿರಿಸುತ್ತಿದ್ದಳು ರಾಜಣ್ಣನ ಎದೆಯಲ್ಲಿ ಎಲ್ಲಿಲ್ಲದ ದುಃಖ ಒತ್ತಿ ಬಂತು ಅವಳನ್ನು ದೀನಸ್ವರದಲ್ಲಿ ಕೇಳಿದ.

"ಶಾಂತ... ನಿಮಗೆ ನನ್ನ ಗೆಳೆತನ ಬೇಕಿಲ್ಲವೆ ?"

"ಬೇಕು...."

"ಹಾಗಾದರೆ ಏಕೆ ಹೀಗೆ ನೀವು ನನ್ನ ಮನಸ್ಸು ನೋಯಿಸಿದಿರಿ. ಒಂದು ಸೀರೆ ಆರಿಸಿದ್ದಿದ್ದರೆ ಪ್ರಮಾದವಾಗುತ್ತಿತ್ತೆ ?"

ಎಂದ. ಶಾಂತ, ಅವನನ್ನೇ ಒಂದು ನಿಮಿಷ ನೋಡಿ ಮುಗುಳು ನಕ್ಕಳು. ಅವಳ ನಯನಗಳು ಪ್ರೀತಿ, ಸಹಾನುಭೂತಿ, ಮಮತೆಯ ಹಾಲುಮಳೆ ಕರೆಯುತ್ತಿದ್ದುವು....ನಂತರ ಒಂದು ಆಳವಾದ ನಿಟ್ಟುಸಿರುಬಿಟ್ಟು ಹೇಳಿದಳು.

"ರಾಜು, ನಿಮಗೆ ಒಂದು ಚೂರೂ ಗೊತ್ತಾಗೊಲ್ಲ. ನಾವಿನ್ನೂ ವಿದ್ಯಾರ್ಥಿಗಳು. ನಮ್ಮ ಹಿರಿಯರ ಪೋಷಣೆಯಲ್ಲಿರುವವರು. ನಾವೇನು ಈಗಾಗಲೇ ನಮ್ಮ ಕಾಲಿನ ಮೇಲೆ ನಿಂತುಕೊಳ್ಳುವಂಥ ಸ್ವತಂತ್ರರಲ್ಲ. ಹೀಗಿರುವಾಗ ನಮಗೇಕೆ ಈ ದುಂದು, ದೌಲತ್ತುಗಳು! ನಮ್ಮ ತಾಯಿ ಉಡುವುದೇನೋ ಸಿಲ್ಕು ಸೀರೆಗಳೇ. ನಮ್ಮ ಜಾತಿಯವರು ವಿಶೇಷವಾಗಿ ಉಡುವುದೂ ಆ ಉಡುಪನ್ನೇ. ಆದರೆ ನಾನು ಮಾತ್ರ .. ಅದನ್ನು ನಾನೇ, ನನ್ನ ಹಣದಲ್ಲೇ ಕೊಂಡು ಉಡುವ ಸ್ಥಿತಿಗೆ ಬರುವವರೆಗೂ ಅಂಥ ಆಸೆಗಳಿಗೆ ಬಲಿಯಾಗೊಲ್ಲ. ಯಾವಾಗಲೂ ನಾವು ಹಾಸಿಗೆ ಇದ್ದಷ್ಟು ಕಾಲು ಚಾಚಬೇಕು ಅಲ್ಲವೆ? ನಿಮ್ಮ ತಂದೆ ಶ್ರೀಮಂತರು, ನಿಮ್ಮ ಭಾವ ಶ್ರೀಮಂತರು. ಅದಕ್ಕೇ ನಿಮ್ಮ ಅಕ್ಕ ಮುಂತಾದವರು ದಿನವೂ ಒಳ್ಳೇ ಉಡುಪನ್ನೇ ಉಟ್ಟುಕೊಳ್ತಾರೆ. ಈಗ ಕೆಲವು ವರ್ಷಗಳ ಹಿಂದೆ ನಾನೂ ಹಾಗೇ ಇದ್ದೆ. ನಮ್ಮ ತಂದೆ ನನಗೂ ಎರಡು-ಮೂರು ಸಿಲ್ಕು ಸೀರೆಗಳನ್ನು ಕೊಡಿಸಿದಾರೆ. ಅವನ್ನು ಉಡಲು ನಾನೇ ಅದೇಕೋ ಈಗೀಗ ಬಯಸ್ತಾ ಇಲ್ಲ. ಏಕೆಂದರೆ ನನ್ನಲ್ಲೇ ಈಗ ಎರಡು ವರ್ಷದಿಂದ ಒಂದು ಪರಿವರ್ತನೆ

ಆಗ್ತಿದೆ. 'ನಾನು ಸ್ವತಂತ್ರಳೂ ಆಗಿರಬೇಕು, ಷೋಕೀನೂ ಮಾಡ್ತಿರಬೇಕು ಎಂದರೆ ಹೇಗೆ ಸಾಧ್ಯ?' ಎಂದು ಆ ಚಪಲಗಳನ್ನೆಲ್ಲಾ ಜಯಿಸುತ್ತಿದೇನೆ. ಹಾಗೆಂದಮಾತ್ರಕ್ಕೆ ನನಗೆ ಭೂಷಣ, ಅಂದ, ಚೆಂದಗಳು ಬೇಡ ಎಂದಲ್ಲ. ಬೇಕು. ಆದರೆ ಅವನ್ನೆಲ್ಲಾ ಸರಳ ಉಡುಪಿನಲ್ಲೂ ಸಾಧಿಸಿಕೊಳ್ಳಬಹುದು. ಇದೇ ನನ್ನ ನಂಬಿಕೆ, ಆಚರಣೆ. ಅದಕ್ಕೇ ಇಂದು ನಿಮ್ಮ ಸೀರೆ ಬೇಡ ಎಂದಿದ್ದು. ನೀವಲ್ಲದೆ ಒಂದು ವೇಳೆ ಈಗ ನಮ್ಮ ತಂದೆ, ಇಲ್ಲವೆ ಅಣ್ಣ ಕೊಡಿಸಲು ಬಂದರೂ ನಾನು ಬೇಡ ಎನ್ತೀನಿ. ಹಾಗೆಂದಮಾತ್ರಕ್ಕೆ ನಿಮ್ಮ ಮೇಲೆ, ಅವರ ಮೇಲೆ, ಪ್ರೀತಿ ಇಲ್ಲ ಎಂದೇ? ನೀವು ನಿಮ್ಮನ್ನೇ ಮರೆತು ಕೊಂಡಂತಿದೆ! ಪತ್ರದಲ್ಲಿ ಏನೇನೋ ಸಮಾಜ ಸುಧಾರಣೆಗಳು ಮಾಡಬೇಕು ಎನ್ತೀರಿ, ದುಷ್ಟ ಶಕ್ತಿಗಳನ್ನು ನಿರ್ಮೂಲ ಮಾಡಬೇಕು ಎನ್ತೀರಿ. ಹೀಗೆ ಸಿಲ್ಕು, ಪಲ್ಕು, ಥಳುಕಿಗೆ ಸಿಕ್ಕಬಿದ್ದರೆ ತುಂಬಾ ಕಷ್ಟ ಇದೆ ನಿಮಗೆ" ಎಂದಳು.

ಅದರಿಂದ ರಾಜಣ್ಣ ಕೋಪಗೊಳ್ಳಲಿಲ್ಲ. ಅದಕ್ಕೆ ಬದಲು ಆಳವಾದ ಯೋಚನೆಗೆ ಬಿದ್ದ. ಶಾಂತಳ ಮಾತುಗಳು ಅವನ ಮನಸ್ಸನ್ನು ಆಳವಾಗಿ ಹೊಕ್ಕಿದ್ದುವು. ಅವನಿಗೆ ಅವಳ ಮಾತಿನ ಹಿಂದಿದ್ದ ನಿಷ್ಠೆಯ ಮನೋಭಾವ ಸಂಪೂರ್ಣವಾಗಿ ಅರ್ಥವಾಯಿತು. ಅವನಿಗೆ ಅವಳು ಕೇಶವಯ್ಯಂಗಾರರಂಥ ಶ್ರೇಷ್ಠ ವ್ಯಕ್ತಿಗಳ ಶ್ರೇಷ್ಠ ಪುತ್ರಿ ಎಂಬುದು ತಿಳಿದು ಬಂತು.

ಅವನು ಬೆಂಗಳೂರಿಗೆ ಬಂದಾಗಿನಿಂದ ತನ್ನಲ್ಲುಂಟಾಗಿದ್ದ ಸೂಕ್ಷ್ಮ ಪರಿವರ್ತನೆಗಳನ್ನೂ, ಕಂಡೂ-ಕಾಣದಂತೆ ಬದಲಾಗುತ್ತಿರುವ ಮನೋಭಾವವನ್ನೂ ಈಗ ಮತ್ತೊಮ್ಮೆ ಪ್ರಯತ್ನಪೂರ್ವಕವಾಗಿ ಜ್ಞಾಪಿಸಿಕೊಂಡ.

ಚಂದ್ರಪ್ಪನ ಜೀವನದ ನಯ – ಮಾಧುರ್ಯ – ಆಕರ್ಷಣೆಗಳ ಹಿಂದೆ, ಕಾಣದಂತೆ ಅಡಗಿಕೊಂಡಿದ್ದ ಭೋಗದಾಹ, ಅಧಿಕಾರ ಲಾಲಸೆ, ಈಗ ಅವನಿಗೆ ಚೆನ್ನಾಗಿ ಅರಿವಾದುವು. ಅವನ ಮನೆಯ ಸುಖಭೋಜನ, ಮೆತ್ತೆ ಸೋಫಾಗಳು, ಕಾರಿನ ಕುರ್ಷನ್‌ಗಳು ಅವನನ್ನು

ತುಸು ಬದಲಾಯಿಸಿದ್ದುವು. ಹಳ್ಳಿಯಲ್ಲಿ ರಾಜಶೇಖರನೊಡನೆ ನಡೆಸಿದ್ದ ಸರಳಜೀವನ, ಸೇವಾಮನೋಭಾವ, ತ್ಯಾಗದೀಕ್ಷೆಗಳು ಇಲ್ಲಿ ಕಲುಷಿತವಾಗಿದ್ದುವು. ಸರಳ ಉಡುಸಿಗೆ ಬದಲು ಈಗ ಟ್ವೀಡ್, ಗ್ಯಾಬರ್ಡೀನ್‌ಗಳೇ ಬೇಕಾಗಿದ್ದುವು ಬಸ್, ಸೈಕಲ್‌ಗಳಿಗಿಂತ ಕಾರಿನ ಪ್ರಯಾಣವೇ ನಾಗರೀಕರಿಗೆ ತಕ್ಕುದು ಎನಿಸ ತೊಡಗಿತ್ತು. ಹಳ್ಳಿಯ ನಿರುದ್ಯೋಗ ಬದುಕಿಗಿಂತಲೂ ನಗರದ ಬಣ್ಣದ ಬದುಕೇ ಸುಖಕರ ಎನಿಸಲಾರಂಭಿಸಿತ್ತು. ಈ ರೀತಿಯ ಪರಿವರ್ತನೆ ಅವನಲ್ಲಿ ಉಂಟಾಗಲು ಚಂದ್ರಪ್ಪ ಅಗೋಚರವಾಗಿ ಕಾರ್ಯಾಚರಣೆ ನಡೆಸಿದ್ದರು. ಮಧ್ಯಮವರ್ಗದಿಂದ ಶ್ರೀಮಂತವರ್ಗಕ್ಕೆ ಜಾರಿ ಕೊಳ್ಳುವ ಮನೋಭಾವವನ್ನು ಅವರು ಅವನಲ್ಲಿ ಹದಗೊಳಿಸು ತ್ತಿದ್ದರು.

ಈಗೀಗ ಅವನು ಬಾಯಿನಲ್ಲಿ ಸೇವೆ, ಸ್ವಾರ್ಥ-ತ್ಯಾಗದ ಮಾತು ಗಳನ್ನಾಡುತ್ತಿದ್ದರೂ, ಆ ಭಾವನೆಗಳು ಎದೆಯಲ್ಲಿ ಅಷ್ಟು ಉದ್ವೇಗ ದಿಂದ ಉಕ್ಕುತ್ತಿರಲಿಲ್ಲ. ಹರುಕುಚಡ್ಡಿಯ, ಮೂಳೆ-ಮುಳಿ ದೇಹದ ರೈತರಾಗಲೀ, ಜೋತು-ಬತ್ತಿದ ಮೊಲೆಯ ತಾಯಂದಿರಾಗಲೀ, ಅವರ ಪ್ರೇತ-ಶಿಶುಗಳಾಗಲೀ, ಅವನ ನಿದ್ರೆಯನ್ನು ಭಂಗಪಡಿಸುತ್ತಿರ ಲಿಲ್ಲ; ಅವನ ಕನಸನ್ನು ಕೆಡಿಸುತ್ತಿರಲಿಲ್ಲ.

ಈಗ ಶಾಂತ, 'ನೀವು ನಿಮ್ಮನ್ನೇ ಮರೆತುಕೊಂಡಂತಿದೆ!' ಎಂದ ಮಾತು ಅವನ ಅಂತರಾತ್ಮವನ್ನು ಶೂಲದಂತೆ ಚುಚ್ಚಿ ನೋಲೆಬ್ಬಿಸಿತ್ತು. 'ನನ್ನ ಬಾಳು ನನ್ನ ಒಳಿತಿನ ಮಾತ್ರಕ್ಕಲ್ಲ. ನನ್ನ ಜನರ ಒಳಿತಿಗೆ. ಮಾನವೀಯತೆಯ ಒಳಿತಿಗೆ' ಎಂಭ ಪ್ರಜ್ಞೆ ಹೆಡೆಯೆತ್ತಿ ನಿಂತಿತು. 'ಕರ್ತವ್ಯ ವಿಮುಖಗೊಳಿಸುವಷ್ಟು ಭೋಗ-ದಾಹ ಇಟ್ಟುಕೊಳ್ಳ ಬಾರದು. ನನ್ನ ಕರ್ತವ್ಯದ ನಿರ್ವಹಣೆಗಾದರೋ, ನನ್ನ ಸರ್ವ ಶಕ್ತಿಯೂ ಸಾಲದು. ಹೀಗಿರುವಾಗ–ಈ ಷೋಕಿ, ಈ ದೌಲತ್ತು ಮಾಡಲು ಹೊರಟರೆ, ನಾನು ನಿಜವಾಗಿಯೂ ಅವುಗಳ ಗುಲಾಮ ನಾಗುವುದಿಲ್ಲವೆ? ಕಡೆ-ಕಡೆಗೆ ಏರೇರಿ ಬರುವ ಅಸಾಮರ್ಥ್ಯ ದೌರ್ಬಲ್ಯಗಳಿಂದ ನನ್ನ ಬಾಳಿನ ಕರ್ತವ್ಯವನ್ನೇ ಕಡೆಗಾಣಿಸುವಂತೆ

ಆಗುವುದಿಲ್ಲವೇ ? ಶಾಂತಳ ಮಾತು ನಿಜ, ಸತ್ಯ' ಎಂದುಕೊಂಡ.

ಈಗ ಅವನಲ್ಲಿ ಅವಳ ಬಗೆಗೆ ಅಪಾರ ಗೌರವ, ಅಭಿಮಾನ, ಪ್ರೇಮ ಉಕ್ಕೇರಿದುವು.

ಎದೆಯ ಮೇಲೆ ಕೈಕಟ್ಟಿ, ಪಕ್ಕದಲ್ಲೇ ಗಂಭೀರವಾಗಿ ಅಡಿಯಿಡು ಸುತ್ತಾ, ತನ್ನನ್ನೇ ಆಗಾಗ ಕುತೂಹಲ, ಪ್ರೇಮದಿಂದ ನೋಡಿನೋಡಿ ಸಾಗುತ್ತಿದ್ದ ಶಾಂತಳ ತೋಳು ಹಿಡಿದು ಅವನು ಹೇಳಿದ:

"ಶಾಂತ........ನೀವು ಹೇಳಿದ್ದೆಲ್ಲ ಸರಿ. ನಿಜವಾಗಿಯೂ ನನ್ನನ್ನು ನಾನೇ ಮರೆತುಕೊಂಡಿದ್ದೆ. ನನ್ನ ಮನಸ್ಸು, ಹೃದಯಗಳ ಮೇಲೆ ಸುತ್ತುಮುತ್ತಿನ ವಾತಾವರಣ ಸುಲಭವಾಗಿ ಪ್ರಭಾವ ಬೀರಿ ಬಿಡುತ್ತೆ. ತನ್ನಂತೆ ಪರಿವರ್ತಿಸಿಕೊಳ್ಳುತ್ತೆ .... ನೀವು ಈಗ ನನಗೆ ತುಂಬಾ ಉಪಕಾರ ಮಾಡಿದಿರಿ....ನಿಮಗೆ ನಾನು ತುಂಬಾ ಕೃತಜ್ಞ"

ಎಂದ. ಅವಳು ಅವನನ್ನೇ ಒಲುಮೆಯ ಓರೆನೋಟದಿಂದ ನೋಡಿ ನಕ್ಕಳು. ರಾಜಣ್ಣನೂ ಅವಳ ಒಲುಮೆಯನ್ನೇ ಹೀರಿಕೊಳ್ಳು ವನಂತೆ ನೋಡಿ ಮುಗುಳುನಕ್ಕು ಹೇಳಿದ.

"ಹೋಗಲಿ. .. ಈ ಸಿಲ್ಕ್ ಕರ್ಚೀಫ್ಸ್ ತೆಗೆದುಕೊಂಡುಬಿಟ್ಟಿದೀ ನಲ್ಲಾ . ಇದರಲ್ಲಿ ಒಂದು ನಾನು ಇಟ್ಟುಕೊಳ್ತೀನೆ. ಒಂದು ನಮ್ಮ ಅಕ್ಕನಿಗೆ ಕೊಡ್ತೀನೆ.. .ಇನ್ನೊಂದು. . ನೀವು ತೆಗೆದುಕೊಳ್ತೀರಾ ?"

"ಓ....ಅದಕ್ಕೇನು, ಕೊಡಿ."

ಎಂದು ಅವನು ಮುಂದೆ ಹಿಡಿದ ಕರವಸ್ತ್ರವನ್ನು ಫಕ್ಕನೆ ಕಸಿದು ಕೊಂಡಳು. ನಂತರ ಅವನನ್ನೇ ನೋಡುತ್ತಾ,

"ನಾನೇನು ಸನ್ಯಾಸಿನಿ .'ನನ್' ಎಂದು ತಿಳಿದುಕೊಳ್ಳಬೇಡಿ. ನಾನೂ ಮಾಡುವ ಸಮಯ ಸಂದರ್ಭಗಳಲ್ಲಿ ಷೋಕಿ ಮಾಡೇ ಮಾಡ್ತೀನಿ....ಆದರೆ ಈಗಲೇ ಆ ಕಾಲ ಬರೋಲ್ಲ... ಬಹಳ ದಿನ ಕಾಯಬೇಕು."

ಎಂದಳು. ರಾಜಣ್ಣ ಕುತೂಹಲದಿಂದ ಕೇಳಿದ:

"ಎಷ್ಟು ದಿನ ಕಾಯಬೇಕು ? .... ಗ್ರಾಜುಯೇಷನ್ ಮುಗಿಸ ವರೆಗೆ ಏನು ?"

ಎಂದ. ಅವಳು ತುಂಟತನದಲ್ಲಿ,

"ಹೂ" .... "ಅಲ್ಲ"

ಎನ್ನುವಂತೆ ಏಕಕಾಲದಲ್ಲಿ ತಲೆಹಾಕಿ, ಅಲ್ಲಾಡಿಸಿದಳು. ರಾಜಣ್ಣ,

"ಹೌದೋ? ಅಲ್ಲವೋ?....ಒಂದನ್ನು ಹೇಳಿ"

ಎಂದು ನಕ್ಕ. ಶಾಂತ,

"ಗ್ರಾಜುಯೇಟ್ ಆದಮೇಲೂ ಅಲ್ಲ...."

ಎಂದು ತನ್ನಲ್ಲಿ ತಾನೇ ಗೂಢವಾಗಿ ನಗತೊಡಗಿದಳು. ರಾಜಣ್ಣ ಅವಳನ್ನೇ ಓರೆನೋಟದಿಂದ ನೋಡಿ, ನಕ್ಕು,

"ನನಗೆ ಗೊತ್ತಾಯ್ತು....ನನಗೆ ಗೊತ್ತಾಯ್ತು .... ಊಹೂ! ನಿಮ್ಮ ಆಸೆ ತುಂಬಾ ಸೊಗಸಾಗಿದೆ."

ಎಂದ. ಶಾಂತ ಕುತೂಹಲ, ಗಾಬರಿಯಿಂದ ನಗುತ್ತಾ ಕೇಳಿದಳು.

"ಏನು ಗೊತ್ತಾಯ್ತು? ಹೇಳಿ ನೋಡೋಣ."

"ಹೇಳಿಬಿಡಲಾ?"

"ಹೂ...."

"ಬೇಡಿ....ನೋಡಿ....ಆಮೇಲೆ ನೀವು ಕೋಪಿಸಿಕೊಳ್ತೀರ!"

"ಇಲ್ಲ....ಹೇಳಿ...."

"ಸರಿ. ಹೇಳ್ತೀನೆ.... ನೀವು ಷೋಕಿ ಮಾಡಲು ಪ್ರಾರಂಭಿಸುವುದು ವಿವಾಹವಾದ ಮೇಲೆ — ಅಲ್ಲವೆ?"

"ಏನಲ್ಲ....!"

ಎಂದು ಕೂಗುಟ್ಟ ಆಗತಾನೇ ಮೂಡಿದ್ದ ಬೆಳದಿಂಗಳೆಡೆಗೆ ತಲೆ ಹೊರಳಿಸಿ ನಕ್ಕಳು ಶಾಂತ.

"ಸುಳ್ಳು....ಸುಳ್ಳು....ಶುದ್ಧ ಸುಳ್ಳು!"

ಎಂದು ಕೂಗಿದ ರಾಜಣ್ಣ.

ಸ್ವಲ್ಪ ದೂರ ಇಬ್ಬರೂ ಮೌನವಾಗಿ ಮಧುರ ಆಲೋಚನೆಗಳಲ್ಲಿ ಮುಳುಗಿ, ಒಬ್ಬರನ್ನೊಬ್ಬರು ಗುಪ್ತವಾಗಿ ನೋಡಿಕೊಂಡು

ನಡೆದರು ಒಂದೊಂದು ಬಾರಿ ನೋಟ ಕದಿಯುವ ಕಾರ್ಯದಲ್ಲಿ ಕಳ್ಳ-ಕಳ್ಳಿಯರಿಬ್ಬರೂ ಒಬ್ಬರಿಗೊಬ್ಬರು ಸಿಕ್ಕಿಬೀಳುತ್ತಿದ್ದರು!

ಕಬ್ಬನ್‌ಪಾರ್ಕ್ ರೆಸ್ಟೋರಾದಲ್ಲಿ ಮೇಜಿನ ಆಚೆ ಈಚೆ ಎದುರು ಬದುರಾಗಿ ಕುಳಿತಾಗಲೂ ಅಷ್ಟೆ. ಅವರು ತಿಂಡಿ ರುಚಿ, ಉಪಚಾರದ ಮಾತುಗಳನ್ನೆಲ್ಲಾ ಯಾಂತ್ರಿಕವಾಗಿ, ಹುಡುಗಾಟಿಕೆಯಿಂದ ಆಡುತ್ತಿದ್ದರು. ಆದರೆ ಅವರ ಎದೆಯ ಭಾಸ, ಕಣ್ಣಿನ ನೋಟ ಇವು ಮಾತ್ರ....'ವಿವಾಹ'ದ ಪ್ರಭೆಯನ್ನೇ, ರಂಗುರಂಗನ್ನೇ, ಪುಳಕವನ್ನೇ ಹೊಂದಿದ್ದುವು, ರಾಗ ರಂಜಿತವಾಗಿದ್ದುವು.

ಆಗ ಇದ್ದಕ್ಕಿದ್ದಂತೆಯೇ ಆಕ್ಯುಪೇಷನಲ್ ಇನ್‌ಸ್ಟಿಟ್ಯೂಟ್‌ನ ಗೋಪುರದ ಗಡಿಯಾರ ಒಂದಾದ ಮೇಲೊಂದು ಗಂಟೆ ಬಾರಿಸತೊಡಗಿತು. ವೈಟರ್ ತಂದಿಟ್ಟ ಟ್ರೇನಲ್ಲಿದ್ದ ಕಾಫಿಯ ಡಿಕಾಕ್ಷನ್, ಹಾಲು, ಸಕ್ಕರೆ ಇವೆಲ್ಲಾ ಬೆರೆಸಿ ಎರಡು ಕಪ್ ಕಾಫಿ ಸಿದ್ಧಗೊಳಿಸುತ್ತಿದ್ದ ಶಾಂತ, ಅರ್ಧದಲ್ಲಿಯೇ ತನ್ನ ಕೆಲಸ ನಿಲ್ಲಿಸಿದಳು. ರಾಜಣ್ಣನನ್ನು ಗಾಬರಿಯಿಂದ ನೋಡುತ್ತಾ "ಟೈಮ್ ಎಷ್ಟು....?" ಎಂದು ಕೇಳಿದಳು. ರಾಜಣ್ಣ ತನ್ನ ಗಡಿಯಾರ ನೋಡಿ ಹೇಳಿದ :

"ಎಂಟು ಗಂಟೆ...."

"ಓ!....ನೋಡಿ, ಹೀಗಾಗುತ್ತೆ ಎಂದು ನನಗೆ ಮೊದಲೇ ಅನುಮಾನವಾಗಿತ್ತು."

ಎಂದು ಉಳಿದ ಹಾಲನ್ನು ಎರಡು ಲೋಟಗಳಿಗೂ ಸಮನಾಗಿ ಸುರಿದಳು. ಅವುಗಳಿಗೆ ಸಕ್ಕರೆ ಬೆರೆಸುತ್ತಾ ರಾಜಣ್ಣ ಕೇಳಿದ :

"ಏಕೆ, ತುಂಬಾ ಹೊತ್ತಾಗಿ ಹೋಯಿತಾ....?"

"ಹು....ಎಂಟು ಗಂಟೆ, ಹೊತ್ತಲ್ಲವೇ? ಇರಲಿ, ಚಿಂತೆಯಿಲ್ಲ ಈಗ ಬೇಗ ಬೇಗ ಹೋಗಿಬಿಡೋಣ."

ಎಂದಳು. ರಾಜಣ್ಣ ಕಾಫಿ ಸವಿಯುತ್ತಾ ಹೇಳಿದ.

"ನೋಡಿ .... ನಿಮ್ಮನ್ನು ತೊಂದರೆಗೆ ಸಿಕ್ಕಿಸುವುದು ಏಕೆ?.... ಒಂದು ಆಟೋರಿಕ್ಷಾ ಮಾಡಿಕೊಂಡು ಮನೆಯ ಹತ್ತಿರದವರೆಗೂ ಹೋಗಿಬಿಡೋಣ....ಸರಿಯಾ....?"

"'ಸರಿ'....'ಬೆಸ' ಎಲ್ಲಾ ಒಂದೇ ಈಗ. ನಡೆಯಿರಿ, ಹೇಗೆ ಬೇಕಾದರೂ ಹೋಗೋಣ." ಎಂದಳು.

ಇಬ್ಬರೂ ಜಯಚಾಮರಾಜೇಂದ್ರ ಸರ್ಕಲ್ಲಿಗೆ ಬಂದು ಒಂದು ಆಟೋರಿಕ್ಷಾದಲ್ಲಿ ಕುಳಿತರು. ಅದು ಪ್ಯಾಲೆಸ್ ಸ್ಕ್ವೇರ್ ಕಡೆಗೆ ತಿರುಗಿ ಹೊರಟ ಕೂಡಲೇ ಶಾಂತ ಕಿವಿ ಮುಚ್ಚಿಕೊಂಡಳು. ಆದರೂ ಅವಳೇ ಹೇಳಿದಳು :

"ನಾವು ಹೈಸ್ಕೂಲ್ ಬಳಿಯೇ ಇಳಿದು ಬೇರೆಯಾಗಿ ಬಿಡೋಣ...."

"ಏಕೆ ?....ಹೈಸ್ಕೂಲಿಗೂ, ಮನೆಗೂ ಬಹಳ ದೂರ ಅಲ್ಲವೇ? ....ಇನ್ನೂ ಸ್ವಲ್ಪ ಮುಂದೆ ಹೋಗೋಣ."

"ಬೇಡಿ. ಅಲ್ಲೇ ನಮ್ಮಣ್ಣ ಆಟವಾಡಲು ಹೋಗ್ತಾನೆ."

"ಸರಿ, ನೀವು ಹೇಳಿದ ಹಾಗೇ ಆಗಲಿ"

ಎಂದ....ಅಷ್ಟು ಹೊತ್ತಿಗೆ ಸರಿಯಾಗಿ ರಿಕ್ಷಾ ಡ್ರೈವರ್‌ನ ಸನ್ ಕ್ಯಾಪ್ ಎದುರಿನಿಂದ ತೀಡಿ ಬೀಸುವ ಗಾಳಿಗೆ ಹಾರಿ ಹೋಯಿತು ! ಅವನು ರಿಕ್ಷಾ ನಿಲ್ಲಿಸಿ, ಅದನ್ನು ತರಲು ಹಿಂದೆ ಓಡಿದ. ಅವನನ್ನೇ ವಿನೋದದಿಂದ ಇಬ್ಬರೂ ನೋಡಿ ನಕ್ಕರು. ಅವನು ಟೋಪಿ ಸರಿಯಾಗಿ ಹಾಕಿಕೊಂಡು ಓಡಿ ಬಂದು ರಿಕ್ಷಾ ಬಿಟ್ಟ. ಆಗ ರಾಜಣ್ಣ ಕೇಳಿದ :

"ಶಾಂತಾ, ನೀವೇಕೆ ನಿಮ್ಮ ಅಣ್ಣನನ್ನು ಅಷ್ಟು ದ್ವೇಷಿಸುತ್ತೀರಿ ?"

"ಹೌದು, ಅವನನ್ನು ದ್ವೇಷಿಸುವುದು ನಾನೊಬ್ಬಳೇ ಅಲ್ಲ. ನಮ್ಮ ಮನೆಯವರೆಲ್ಲರೂ. ಅವನ ವಿಷಯ ಈಗೇಕೆ ? ಬನ್ನಿ."

"ಏಕೆ....ಮನೆಯಲ್ಲಿ ಕೂಡ ಅಷ್ಟು ಕೆಟ್ಟವರೆ ಅವರು... ?"

"ಕೆಟ್ಟವನು ಅಷ್ಟೇ ಅಲ್ಲ. ಅವನು ನನ್ನ ಶತ್ರು ಎಂದೇ ಹೇಳಬೇಕು. ನನ್ನನ್ನು ಮತ್ತು ನನ್ನ ತಂಗಿಯನ್ನು ಅಷ್ಟು ಇಲ್ ಟ್ರೀಟ್ ಮಾಡ್ತಾನೆ...."

"ಏಕೆ ? .... ಅವರ ಸಂಘದ ಸಭೆಗಳಲ್ಲಿ ಸ್ತ್ರೀಯರನ್ನು

'ಮಾತೆ,' ಎಂದು ಸಂಭೋಧಿಸುತ್ತಾರೆ. ಗೌರವಿಸುತ್ತಾರೆ. ಮನೆಯಲ್ಲೇಕೆ ಈ ದುರ್ವರ್ತನೆ ?"

"ಯಾಕೋ, ಯಾರಿಗೆ ಗೊತ್ತು ! ಅವನ ದೃಷ್ಟಿಯಲ್ಲಿ ಸ್ತ್ರೀಯರೆಲ್ಲರೂ ತುಚ್ಛ ಜಂತುಗಳು. ಅವರು ವಿದ್ಯೆ ಕಲಿಯಬಾರದು, ಮನೆಗೆಲಸ ಮಾಡ್ಕೊಂಡು ಕತ್ತಲು ಕೋಣೇಲ್ಲಿ ಬಿದ್ದಿರಬೇಕು ಎಂಬ ಭಾವನೆ... ಅದನ್ನೆಲ್ಲಾ ಮುಚ್ಚಿಕೊಳ್ಳೋಕೆ ಹೊರಗೆ 'ಮಾತೆ' ....'ಪೂಜ್ಯೆ'....'ದೇವತೆ' ಎಂದೆಲ್ಲಾ ಹೇಳೋದು; ಬೆಪ್ಪು ಹೆಂಗಸರನ್ನು ಮರುಳು ಮಾಡೋದು" ಎಂದಳು.

ಅಷ್ಟು ಹೊತ್ತಿಗೆ ಪುನಃ ಡ್ರೈವರ್‌ನ ಟೋಪಿ ಗಾಳಿಗೆ ಹಾರಿ ಹೋಯಿತು. ಅವನು ಹಠಾತ್ತನೆ ಗಾಡಿ ನಿಲ್ಲಿಸಿದ. ಶಾಂತ ರಾಜಣ್ಣನ ಕೈ ಹಿಡಿದುಕೊಂಡು,

"ಓ ... ಇದೇನು ಹೀಗೆ !. .. ಇವನಿಗೆ ಟೋಪೀ ಇಟ್ಟುಕೊಳ್ಳೋದೂ ನೆಟ್ಟಗೆ ಬರೊಲ್ಲ....ನಮ್ಮನ್ನೆಲ್ಲಾದರೂ ತಗೊಂಡ್ಹೋಗಿ ಎತ್ತಿ ಹಾಕ್ತಾನೆ....ನನಗೆ ಗೊತ್ತು !"

ಎಂದಳು. ರಾಜಣ್ಣನ ಕೈಯಿನ ಆಧಾರದಿಂದ ಮುಂದೆ ವಾಲಿದ್ದ ದೇಹವನ್ನು ಹಿಂದಕ್ಕೆ ಸರಿಸಿ, ಸರಿಯಾಗಿ ಕುಳಿತುಕೊಂಡಳು.... ಡ್ರೈವರ್ ಬಂದು ಪುನಃ ಸೀಟಿನ ಮೇಲೆ ಕುಳಿತ. ಅವನನ್ನು ನೋಡಿ ನಗುತ್ತಾ ರಾಜಣ್ಣ,

"ಕ್ಯಾಜೀ, ಹೀಗೆ ಟೋಪಿ ಬೀಳಿಸ್ತೋತೀಯಾ?.... ಈ ಬೇಗಂ ಸಾಬ್ ಏನು ಹೇಳ್ತಾರೆ ಕೇಳು. ಟೋಪಿ ಸರಿಯಾಗಿ ಹಾಕ್ಕೊಳ್ಳೋಕೆ ಬರ್ದೋನು....ನಮ್ಮನ್ನು ಎಲ್ಲಾದರೂ ಕುಕ್ಕಿಬಿಡ್ತಾನೆ .... ಎನ್ತಾರೆ.... ಏನು ಹೇಳ್ತೀಯ ?"

ಎಂದ. ಅದಕ್ಕೆ ಆ ಡ್ರೈವರ್,

"ಹೆಂಗೆ ಮಾಡೋಲ್ರಮ್ಮ...." ಎಂದು, ರಾಜಣ್ಣನಿಗೆ ಹೇಳಿದ:

"ಏ ಟೋಪೀ ಮೇರಾ ನಹಿ ಸಾಬ್....ಏ, ಮೇರೆ ದೋಸ್ತ್‌ಕಾ. ಓ....ಮುಶ್ಕಿರೀಸೆ ಮೇರೆ ಟೋಪಿ ಲೇಲೇಕೋ....ಚಲೇಗಯಾ...."

ಎಂದು ಅದನ್ನು ಪುನಃ ಹಾಕಿಕೊಂಡು ರಿಕ್ಷಾಬಿಟ್ಟ.

ರಾಜಣ್ಣ ಈಗ ಶಾಂತಳ ಎರಡು ಕೈಗಳನ್ನೂ ಹಿಡಿದುಕೊಂಡು, ಅವಳನ್ನೇ ನೋಡುತ್ತಾ ವಿನೋದದಿಂದ ಕೇಳಿದ—

"ನೀವು ಈಗ ಮನೆಗೆ ಹೋಗಿ ಏನು ಮಾಡ್ತೀರಾ ?"

"ಏನು ಮಾಡೋದು ?.... ಬೇಗ ಹೋಗಿದ್ದಿದ್ರೆ ಅಡಿಗೆ ಮಾಡ ಬೇಕಾಗ್ತಿತ್ತು.... ಆದರೆ ಈಗಾಗಲೇ ಶ್ಯಾಮಲ ಮಾಡಿಬಿಟ್ಟಿರ್ತಾಳೆ... ಹೋಗಿ ಅದನ್ನು ಊಟ ಮಾಡ್ತೇನೆ..."

"ಆಮೇಲೆ ?"

"ಓದುತ್ತೇನೆ..."

"ಆಮೇಲೆ ?"

"ಆಮೇಲೆ ಇನ್ನೇನು ?........ಗೊತ್ತೇ ಇದೆಯಲ್ಲ .... ನಿದ್ರೆ ಮಾಡುವುದು !"

"ಆಮೇಲೆ ?"

"ಬೆಳಿಗ್ಗೆ ಮೇಲಕ್ಕೆ ಏಳುವುದು."

"ಅಷ್ಟೇನೆ? "

"ಹೂ.... ಇನ್ನೂ ಏನಿರಬೇಕು ....?"

"ನಿಮಗೆ ಕನಸು ಬೀಳೋಲ್ಲವೆ ?"

"ಇಲ್ಲ.... ನಿಮಗೆ ?"

"ನನಗೆ ರಾತ್ರಿಯೆಲ್ಲಾ ಕನಸಿನ ಸುರಿಮಳೆ"

"ಅಬ್ಬಾ !.... ಎಂತೆಂಥ ಕನಸುಗಳೋ... !"

"ಎಲ್ಲ ವಿಚಿತ್ರ ಕನಸುಗಳೇ ! .... ಫೆಂಟಸಿಗಳೇ !.... ನೋಡಿ- ರೂಮಿನಲ್ಲಿ ಏನನ್ನೋ ಬರೆಯಲು ಪೆನ್ ಕ್ಯಾಪ್ ತೆಗೆದು, ಅದನ್ನು ಅಲ್ಲಿಟ್ಟು ಬರೆಯುತ್ತಿರುತ್ತೇನೆ... ಕನಸಿನಲ್ಲೇ ! ........ ಆಗ ಆ ಪೆನ್ ಕ್ಯಾಪಿನಿಂದ ಒಂದು ಕೋಮಲ ಕಂಠದ ಚೀತ್ಕಾರ ಕೇಳಿಬರುತ್ತೆ! ಏನೆಂದು ಅದರಲ್ಲಿ ನೋಡಿದರೆ, ಅದೇ ಒಂದು ಲೋಕವಾಗಿ ಬಿಡುತ್ತೆ. ಕತ್ತಿ ಹಿಡಿದು ಎನ್. ಟಿ. ರಾಮರಾವ್‌ನಂತೆ ನಾನು ಅದರಲ್ಲಿ ಹೋಗ್ತೇನೆ.... ಆ ಕಗ್ಗತ್ತಲ ಗವಿಯಲ್ಲಿ ಒಂದು ತಿಳಿನೀರಿನ ಸರಸ್ಸು! ಅಲ್ಲೊಬ್ಬ ಮೋಹಿನಿ ! ಹೆಲ್ಪ್ ! .... ಹೆಲ್ಪ್! .... ರಕ್ಷಿಸು ! ರಕ್ಷಿಸು!

ರಕ್ಷಿಸು ! ಎನ್ನುತ್ತಿರುತ್ತಾಳೆ. ಹೋಗಿ ಹೆಲ್ಪ್ ಮಾಡುವುದರಲ್ಲೇ ಅವಳು ಮಾಯವಾಗಿಬಿಡ್ತಾಳೆ. ನಾನು ಹಾಸಿಗೆಯಲ್ಲಿ ಹೊದಿಕೆ ಹೊದ್ದು ಮಲಗಿಬಿಟ್ಟಿರ್ತೀನೆ !. .. ಹೀಗೆ ... ಕೈಗೆ ಸಿಕ್ಕಿದವಳು ತಪ್ಪಿಸಿ ಕೊಂಡುಬಿಡ್ತಾಳೆ.. ."

ಎಂದ. ಶಾಂತ ಅವನನ್ನೇ ನಗೆಗಣ್ಣುಗಳಿಂದ ನೋಡುತ್ತಾ, ಎರಡು ಬಾರಿ ಕನಿಕರದಿಂದ ಲೊಚಗುಟ್ಟಿ, ತಲೆ ಅಲ್ಲಾಡಿಸಿ, ಕೌತುಕ ದಿಂದ ಕೇಳಿದಳು—

" ಅವಳು ಹೇಗಿರುತ್ತಾಳೆ? ........ ನಾನೇ ಏನಾದರೂ ಬರುತ್ತೀನೋ....!"

" ನೀವಲ್ಲ....ಆದರೆ ಅವಳೂ ನಿಮ್ಮಂತಯೇ ಇರುತ್ತಾಳೆ....!"

" ಅಂತೂ, ನಿಮ್ಮನ್ನು ತುಂಬಾ ಆಟ ಆಡಿಸುತ್ತಿದಾಳೆ .... ಅಲ್ಲವೆ ?"

" ತುಂಬಾ ಎಂದರೆ....!....ಅಷ್ಟಿಷ್ಟಲ್ಲ...."

" ಅವಳು ಕೈಗೆ ಸಿಕ್ಕಿಬಿದ್ದಳು—ಕನಸಿನಲ್ಲಿ, ಇಲ್ಲಲ್ಲ ! .... ಆಗ ನೀವೇನು ಮಾಡುತ್ತೀರಿ ?"

" ಏನು ಮಾಡ್ತೀನೋ....ನನಗೇ ಗೊತ್ತಿಲ್ಲ...."

" ಸಧ್ಯ - ಏನೂ ಮಾಡಬೇಡಿ!"

ಎಂದು ಕೊರಳನ್ನು ಕೊಂಕಿಸಿ, ತುಂಟನಗುವನ್ನು ಕಣ್ಣು ತುಟಿಯಂಚುಗಳಿಂದ ಚಿಮ್ಮಿ, ವಯ್ಯಾರದಿಂದ ಹೇಳಿದಳು. ರಾಜಣ್ಣ ಅವಳ ಕೈಗಳೆರಡನ್ನೂ ಜಗ್ಗಿ ಅವಳನ್ನೇ ಹಟಮಾರಿ ಬಾಲಕನಂತೆ ನೋಡುತ್ತಾ ಹೇಳಿದ,

" ಇಲ್ಲ, .... ನಾನು ಅವಳಿಗೆ ಏನಾದರೂ ಮಾಡಲೇಬೇಕು."

' ಏನು ಮಾಡ್ತೀರಿ...?"

" ಅಂಥ ಸೀರಿಯಸ್ ಏನೂ ಮಾಡೊಲ್ಲ . . . ಅಷ್ಟು ಆಟ ಆಡಿಸಿದ್ದಕ್ಕೋಸ್ಕರ ಒಂದು ಬಾರಿ ಚುಂಬಿಸಲೂ ಬಾರದೆ ?"

" ಓಹೊ...ಧಾರಾಳವಾಗಿ "

ಎಂದಳು ಅವಳನ್ನು ಹಿಡಿದು ಅಲ್ಲೇ ಚುಂಬಿಸಬೇಕು ಎನ್ನು

ವುದರಲ್ಲಿ ಮತ್ತೆ ಡ್ರೈವರ್‌ನ ಟೋಪಿ ಹಾರಿಹೋಯಿತು.

"ಓ! ಸರಿಯಾಯ್ತು .... ಒಳ್ಳೇ ಶಿಷ್ಯನನ್ನು ಆರಿಸಿಕೊಂಡಿರಿ ನೀವು !"

ಎಂದಳು ಶಾಂತ. ರಾಜಣ್ಣ ನಿರಾಶೆಯಿಂದ ಸಿಟ್ಟುಸಿರು ಬಿಡುತ್ತಾ ಗಾಡಿ ನಿಲ್ಲಿಸಿದ ಡ್ರೈವರ್ ಕಡೆ ತಿರುಗಿ,

"ಕ್ಯಾಜೀ, ನಾಲಾಯಕ್ ಟೋಪೀವಾಲಾ !"

ಎಂದ. ಅವನು ಅದನ್ನು ಕೇಳಿ ಗಟ್ಟಿಯಾಗಿ ನಗುತ್ತಾ, ಓಡಿ ಹೋಗಿ ಟೋಪಿ ಎತ್ತಿಕೊಂಡು ಬಂದ. ಅದನ್ನು ಈ ಬಾರಿ ತನ್ನ ಬುಷ್ ಕೋಟಿನ ಜೇಬಿನಲ್ಲಿ ತುರುಕಿಕೊಂಡು, "ಅಬ್ ಐಸಾ ನಹಿ ಹೋತಾ ಸಾಬ್ !" ಎಂದು ಗಾಡಿ ಬಿಟ್ಟ.

ಶಾಂತ ನಿರಾಸೆ, ಅಸಮಾಧಾನಗಳಿಂದ ಸಪ್ಪೆಯಾದ ರಾಜಣ್ಣನ ಮುಖವನ್ನು ನೋಡಿ ನಕ್ಕು, ನಗುವಿನ ತರಂಗಗಳಿಂದ ಕೂಡಿದ ಕಂಠದಲ್ಲಿ ಕೇಳಿದಳು.

"ಅವಳು ಕನಸ್ಸಿನಲ್ಲಿ ಎಂಥ ಸೀರೆ ಉಟ್ಟಿರುತ್ತಾಳೆ ?.. ಬಿಳೀ ಸೀರೆಯೇನು ?..."

"ಅಲ್ಲ.. .ನೀಲೀ....ರೇಷ್ಮೆ ಸೀರೆ !"

"ಬಹಳ ಚೆನ್ನಾಗಿ ಕಾಣ್ತಾಳೇನು ?"

"ಓ, ತುಂಬಾ ಸೊಗಸಾಗಿದ್ದಾಳೆ !... ಅಬ್ಬಾ ! ...ಆ ಗುಲಾಬಿ ವರ್ಣದ ಸುಂದರ ವದನ....ಹಾಲುಗೆಂಪಿನ ತುಂಬು ಮೈ, ಹೊಳೆಯುವ ಮೋಹಕ ನಯನಗಳು....ಕಣ್ಗೆ ಮಿಂಚುವ ಒತ್ತಾದ ತಲೆ ಕೂದಲು .... ಹಕ್ಕಿಯಂತೆ ಹಗುರವಾದ ನಡಿಗೆ....ಹಾಗೆ ಹುಚ್ಚು ಹಿಡಿಸುವಷ್ಟು ಮನೋಹರೆ ಅವಳು....!"

"ಇದೇನು ಕವಿಗಳೇ ಆಗಿಬಿಟ್ಟಿರಲ್ಲ....ಇದೆಲ್ಲಾ ಎಲ್ಲಿ ಕಲಿತಿರಿ?

"ಪ್ರೇಮ ಕಾಶ್ಮೀರದಲ್ಲಿ, ಮೈಸೂರು ಮಲ್ಲಿಗೆಯಿಂದ !"

"ಹಾಗಾದರೆ ಅವಳ ಹುಚ್ಚು ತುಂಬಾ ಹಿಡಿದಿದೆ... ನಿಮಗೆ !"

"ಹು, ತುಂಬಾ..."

"ಅಯ್ಯೋ....ನಿಮಗೆ ಹುಚ್ಚೇ ಹಿಡಿದು ಬಿಟ್ರೆ... ನಾನೇನು

ಮಾಡ್ಲಿ !"

" ಚಿಕಿತ್ಸೆ ಮಾಡಿ."

" ಚಿಕಿತ್ಸೆ ಬಹಳ ಕಷ್ಟ"

' ಯಾರಿಗೆ ?"

" ಹುಚ್ಚು ಹಿಡಿದವರಿಗೆ !"

" ಪರವಾಗಿಲ್ಲ....ಪ್ರಾಣ ಹೋದರೂ ಸರಿಯೆ "

" ಓಹೋ !....ಅದಕ್ಕೂ ಸಿದ್ಧರೇನು ?"

" ಓ...."

" ಹಾಗಾದರೆ ಚಿಕಿತ್ಸೆ ಮಾಡೋಣ."

" ಎಂದು ?....ಎಲ್ಲಿ?"

" ಓಹೋ....ಇಷ್ಟು ಅವಸರಪಟ್ಟರೆ ಹೇಗೆ?....ಸ್ವಲ್ಪ ತಾಳ್ಮೆ ಇರಲಿ....ಆಮೇಲೆ ಚಿಕಿತ್ಸೆ ಅಸಾಧ್ಯವಾದೀತು."

"ಹು, ಸರಿ. ತಾಳ್ಮೆಯಿಂದಲೇ ಇರುತ್ತೇನೆ."

"ಇರುತ್ತೀರಿ ತಾನೆ !"

"ನನ್ನಾಣೆಗೂ."

"ಸರಿ, ಹಾಗಾದರೆ ಕೈಬಿಡಿ."

"ಏಕೆ ?"

"ಬಿಡಿ. ಬಿಟ್ಟರೇ ನಾನು ಮುಂದೆ ಮಾತಾಡುವುದು."

"ಇಗೋ ಬಿಟ್ಟೆ. ಏನು ಹೇಳಿ."

"ಈಗ ಏನೂ ಹೇಳುವುದಿಲ್ಲ."

"ಹಾಗಾದರೆ ಪುನಃ ಕೈ ಹಿಡಿಯಬೇಕಾಗುತ್ತೆ !"

"ಬೇಕಾಗಿಲ್ಲ. ನಾನು ಎಲ್ಲಾ ಮುಂದಿನ ಪತ್ರದಲ್ಲಿ ತಿಳಿಸುತ್ತೇನೆ."

"ಸತ್ಯವಾಗಿ !"

"ಪ್ರಮಾಣವಾಗಿ !"

ಎಂದಳು. ರಾಜಣ್ಣ ಸಮಾಧಾನದ ನಿಟ್ಟುಸಿರುಬಿಡುತ್ತಾ, ಹಿಂದಕ್ಕೊರಗಿ ಕುಳಿತ. ಶಾಂತ ಸೆರಗನ್ನು ತಲೆಯ ಮೇಲೆಳೆದು

ಕೊಂಡು, ಅವನನ್ನೇ ಓರನೋಟದಿಂದ ನೋಡುತ್ತಾ ತನ್ನಲ್ಲಿ ತಾನೇ ನಗುತ್ತಿದ್ದಳು. ರಾಜಣ್ಣನ ಎದೆ ಕೂತೂಹಲ-ಉದ್ರೇಕದಿಂದ ಬಡಿದುಕೊಳ್ಳುತ್ತಿತ್ತು.

ಈಗಾಗಲೇ ರಿಕ್ಷಾ ಪ್ಯಾಲೆಸ್ ಆರ್ಚರ್ಡ್ :ಗೇಟನ್ನು ದಾಟಿತ್ತು. ಶಾಂತ ಅವನ ಕಡೆಗೆ ತಿರುಗಿ ಕೇಳಿದಳು :

"ನಾಳೆ ನೀವೇನು ಮಾಡ್ತೀರ ?"

"ಏನೂ ಇಲ್ಲ."

"ಹಾಗಾದರೆ ನಿಮ್ಮಿಂದ ಒಂದು ಕೆಲಸ ಆಗಬೇಕಾಗಿದೆ."

"ಏನು ಕೆಲಸ ಅದು ?"

"ನೀವು ಬಸ್ ಪಾಸ್ ತಂದುಕೊಡಬೇಕು. B.T.C. ಆಫೀಸ್ ಲಾಲ್‌ಬಾಗ್ ಹತ್ತಿರ ಇದೆ."

ಎಂದು ಅದಕ್ಕೆ ಬೇಕಾದ ದುಡ್ಡನ್ನು ಕೊಡಲು ಬಂದಳು. ರಾಜಣ್ಣ,

"ಅದನ್ನು ಹಾಗೇ ಇಟ್ಟಿರಿ. ನಾನು ಮೊದಲು ಪಾಸ್ ತರುತ್ತೇನೆ"

ಎಂದ. ಅವಳು ನಗುತ್ತಾ,

"ಹೇಗೆ ತರುತ್ತೀರಿ? ಈ ದುಡ್ಡು ಅಲ್ಲಿ ಬಡಿದರೇ ಅವರು ಪಾಸ್ ಕೊಡೋದು. ನೀವು ಕೈಬೀಸಿಕೊಂಡು ಹೋಗಿ ಕೇಳಿದ್ರೆ, ನಿಮ್ಮ ಮುದ್ದು ಮುಖ ನೋಡಿ ಅವರು ಪಾಸ್ ಕೊಡೊಲ್ಲ. ನಿಮಗೆ ಗೇಟ್‌ಪಾಸ್ ಕೊಟ್ಟು ಕಳಿಸ್ತಾರೆ"

ಎಂದಳು. ರಾಜಣ್ಣ ತಲೆ ಕುಲುಕಿಸುತ್ತಾ ಹೇಳಿದ :

"ಹಾಗಾದರೆ ನಿಮಗೆ ಅಷ್ಟೇ ಗೊತ್ತಿರೋದು!.... ನಾನು ಹೋಗಿ ಸುಮ್ಮನೆ ಒಂದು ಬಾರಿ ಕೇಳಲಿ....ಅವರು ನನಗೆ ಕೇಳಿದ ಪಾಸ್ ಕೊಟ್ಟು ಕಳಿಸ್ತಾರೆ."

"ಅದೇ ಗೇಟ್ ಪಾಸ್!.. .ನನಗೆಲ್ಲ ಗೊತ್ತು ನಿಮ್ಮ ಯೋಚನೆ. ಹಿಡಿಯಿರಿ ಇದನ್ನು"

ಎಂದು ನೋಟುಗಳನ್ನು ಮುಂದೆ ಹಿಡಿದಳು. ಅವನು ಅದನ್ನು

ಮುಟ್ಟಲಿಲ್ಲ. ಶಾಂತ ಅವನ ಕೈ ಹಿಡಿದು ಅದನ್ನು ತುರುಕಲು ಯತ್ನಿಸಿದಳು. ಆದರೆ ಅವನ ಮುಷ್ಟಿ ಬಿಡಿಸುವ ಶಕ್ತಿಪರೀಕ್ಷೆ ಆಯಿತೇ ಹೊರತು ಅವನ ಮುಷ್ಟಿ ತೆರೆದುಕೊಳ್ಳಲಿಲ್ಲ. ಸೋಲಿನ ನೋವು ತೀರಿಸಿಕೊಳ್ಳಲು ಅವನ ಕೈ ಹಿಂಡಿ, ನಿಷ್ಠುರವಾಗಿ ಹೇಳಿದಳು :

" ನೋಡಿ ! ನೀವು ಹಾಗೆಲ್ಲಾ ಮಾಡಬಾರದು... ಹಿಡಿಯಿರಿ ಈ ದುಡ್ಡು."

" ಹಾಗಾದರೆ ನಾನು ಬಸ್ ಪಾಸ್ ತರಕೂಡದೇ ?"

" ತನ್ನಿ....ಆದರೆ ನನ್ನ ದುಡ್ಡಿನಲ್ಲೇ ತರಬೇಕು."

" ಸರಿ, ಹಾಗಿದ್ದಮೇಲೆ .... ನಾನೂ ಸಿನಿಮಾ ದುಡ್ಡನ್ನು ಹಿಂತಿರುಗಿಸಬಹುದು ತಾನೆ !"

" ಇದೇನು ಹೀಗೆ ಹೇಳುತ್ತೀರಿ ?"

" ಹೌದು, ಹಾಗೆಯೇ !"

" ಏಕೆ, ಇಷ್ಟು ಹೊತ್ತು ಚೆನ್ನಾಗಿದ್ದಿರಲ್ಲ !....ನಾನು ಗಟ್ಟಿಯಾಗಿ ಹಿಂಡಿಬಿಟ್ಟನೇ ? ಅಯ್ಯೋ ಪಾಪ....ಒರೆಸಿ ಊದಿಬಿಟ್ಟು ನೋಡಿ."

ಎಂದು ಹಾಗೇ ಮಾಡಿದಳು. ಆದರೂ ರಾಜಣ್ಣ ಮಾತಾಡಲಿಲ್ಲ. ಗಟ್ಟಿಯಾಗಿ ಅವುಡು ಕಚ್ಚಿ, ಕಲ್ಲಿನಂತೆ ಕುಳಿತ ಅವಳೇ ಕೇಳಿದಳು.

" ಏಕೆ, ಕೋಪ ಬಂದು ಬಿಟ್ಟಿತೇ ?"

" ಸಿಟ್ಟು ಬರುವ ಮಾತಿಗೆ ಕೋಪವೇಕೆ !"

ಎಂದು ನಿಟ್ಟುಸಿರು ಬಿಡುತ್ತಾ ಹಿಂದಕ್ಕೊರಗಿದ. ಅದನ್ನು ಕೇಳಿ ಶಾಂತ ವಿನೋದದಿಂದ ನಕ್ಕಳು. ನಂತರ ಏನೋ ಉಪಾಯ ಆಲೋಚಿಸಿಕೊಂಡವಳಂತೆ, ತುಟಿ ಕಚ್ಚಿ ಹೊಳೆಯುವ ಕಣ್ಣುಗಳನ್ನು ಅರಳಿಸಿ, ತಲೆ ತೂಗುತ್ತಾ, ಕೃತಕ ಒಮ್ಮತದಿಂದ

" ಸರಿ, ನಿಮ್ಮ ಇಷ್ಟಬಂದಂತೆ ಮಾಡಿ. ಎಲ್ಲೋ ನಿಮ್ಮ ಜೇಬಿನಲ್ಲಿ ದುಡ್ಡು ಕುಣಿಯುತ್ತಿರಬಹುದು."

ಎಂದಳು. ಅದರಿಂದ ರಾಜಣ್ಣನಿಗೆ ಬಹಳ ಸಮಾಧಾನವಾ

ಯಿತು. ಸೀರೆ ಪಡೆಯದಿದ್ದರೂ ಪಾಸನ್ನಾದರೂ ಒಪ್ಪಿಕೊಂಡಳಲ್ಲಾ ಎಂದು ತುಂಬಾ ಸಂತೋಷಪಟ್ಟ.

ಅಷ್ಟುಹೊತ್ತಿಗೆ ಹೈಸ್ಕೂಲಿನ ಬಳಿಗೆ ರಿಕ್ಷಾ ಬಂದಿತ್ತು. ಇಬ್ಬರೂ ಇಳಿದರು. ಡ್ರೈವರ್‌ಗೆ ಹಣ ಕೊಟ್ಟು ಕಳಿಸಿದುದಾಯ್ತು. ಶಾಂತ--ರಾಜಣ್ಣ ಇಬ್ಬರೂ... 'ಮುಂದಿನ ಭೇಟಿಯ ವರೆಗೆ! ಬೈ! ಬೈ!' ಹೇಳಿ ಬೇರೆ ಬೇರೆ ದಾರಿ ಹಿಡಿದರು.

೬

ರಾಜಣ್ಣ ಬೀದಿಯುದ್ದಕ್ಕೂ ನಡೆದು ಬರುತ್ತಿದ್ದ, ತನ್ನನ್ನು ತಾನೇ ಮರೆತವನಂತೆ! ಆಗತಾನೇ ಆಕಾಶದಿಂದ ಕೆಳಕ್ಕೆ ಬಿದ್ದವ ನಂತೆ! ಅವನಿಗೆ ಬೀದಿಯಲ್ಲಿ ನಡೆಯುತ್ತಿದ್ದ ಸಹಸ್ರ ವ್ಯಾಪಾರಗಳು ಕಣ್ಣಿಗೆ ಕಾಣುತ್ತಿದ್ದವೇ ವಿನಃ ಮನಸ್ಸಿಗೆ ಮುಟ್ಟುತ್ತಿರಲಿಲ್ಲ.

ಊಟ ಮಾಡುವಾಗ, ಪುಸ್ತಕ ಹಿಡಿದು ಕುಳಿತಾಗ, ಹಾಸಿಗೆ ಯಲ್ಲುರುಳಿ, ನೀಲನಭದ ತಾರೆಗಳನ್ನೇ ದಿಟ್ಟಿಸಿ ನೋಡುತ್ತಿರುವಾಗ, ಅವನ ಕಣ್ಣಿವೆಗಳಲ್ಲಿ ಶಾಂತಳ ರೂಪವೇ ಸೆರೆಯಾಗಿತ್ತು. ಅವನು ಇಷ್ಟುದಿನಗಳ ವರೆಗೂ, ಒಂಟಿಯಾಗಿ ಹಳ್ಳಿಯಲ್ಲಿದ್ದಾಗ ಎದೆಯಲ್ಲಿ ಪ್ರೇಮ, ಮಧುರಭಾವಗಳ ಚಿಲುಮೆ ಆಗಾಗ ಉಕ್ಕೇರುತ್ತಿತ್ತು. ಅವನಿಗೆ ಒಬ್ಬ ಬಾಳ ಸಂಗಾತಿ ಬೇಕೆನಿಸುತ್ತಿತ್ತು. ಅವಳ ಮೇಲ ತನ್ನೆದೆಯ, ತನ್ನ ಜೀವನ ಸರ್ವಸ್ವದ ಸವಿ ಭಾವಗಳೆಲ್ಲವನ್ನೂ ಹೂಮಳೆ ಗರೆಯಬೇಕೆನಿಸುತ್ತಿತ್ತು. ಅವಳ ಕೈಹಿಡಿದು ಬಾಳಿನ ಯಾತ್ರೆಯಲ್ಲಿ ಜೊತೆ ಜೊತೆಗೇ ಅಡಿಯಿರಿಸಿ ಮುಂದೆ ಸಾಗಬೇಕೆನಿಸುತ್ತಿತ್ತು. ಆಗ ಅವನ ಬಯಕೆಯ ನಯನಗಳ ಮುಂದೆ ಸುಳಿದಾಡುತ್ತಿದ್ದ ಮಧುರ ಅಸ್ಪಷ್ಟಮೂರ್ತಿಯೇ ಈಗ ಶಾಂತಳಲ್ಲಿ ಸಾಕಾರ, ಜೀವಂತ ಸ್ವರೂಪ ಪಡೆದಿತ್ತು. ಅವನು ತನ್ನ ಮುಂದಿನ ಸಂಗಾತಿಗೆ ವಿವೇಕವಿರಬೇಕು,

ತಾಳ್ಮೆಯಿರಬೇಕು, ಕೆಲವು ಆದರ್ಶಗಳಿರಬೇಕು, ಮೃದು ವಿಶಾಲ ಹೃದಯವಿರಬೇಕು, ಸ್ನೇಹಪರತೆ, ಅನುನಯ, ತ್ಯಾಗಶೀಲತೆ, ಗಾಂಭೀರ್ಯ, ಬಾಹ್ಯ ಸೌಂದರ್ಯ, ಆತ್ಮ ಸೌಂದರ್ಯ ಜೀವನೋದ್ವೇಗ, ಸರಸ ಪ್ರವೃತ್ತಿಗಳಿರಬೇಕು; ಎಲ್ಲಕ್ಕೂ ಮಿಗಿಲಾಗಿ ಅವಳು ತನ್ನ ಆದರ್ಶ, ಮನೋಭಾವ, ಅಭಿಪ್ರಾಯಗಳನ್ನು ಅರ್ಥ ಮಾಡಿಕೊಳ್ಳಬೇಕು, ಮೆಚ್ಚಬೇಕು; ಅವುಗಳ ಸಾಧನೆಯಲ್ಲಿ ತನ್ನ ಪೂರ್ಣ ಉತ್ಸಾಹೀ ಸಹಕಾರ ಹಸ್ತ ನೀಡಬೇಕು; ಒಮ್ಮೊಮ್ಮೆ ಮೇಲೇಳುವ ಒಳ ತೋಟಿಗಳನ್ನು ಬಗೆ ಹರಿಸುವ ಮನಸ್ಸನ್ನು ನೆಟ್ಟಗೆ, ನೆಮ್ಮದಿಯ ಭಂಗಿಯಲ್ಲಿ, ಆತ್ಮ ವಿಶ್ವಾಸದ ಶಿಖರದ ಮೇಲೆ, ನಿಲ್ಲಿಸಬಲ್ಲ ಶಕ್ತಿಯಿರಬೇಕು, ಚೈತನ್ಯವಿರಬೇಕು; ತನ್ನ ಕಾರ್ಯದಲ್ಲಿ ತನ್ನನ್ನು ಹುರುದುಂಬಿಸಿ, ಸಾಮರ್ಥ್ಯ ತುಂಬಿ ಮುನ್ನುಗ್ಗುವಂತೆ ಪ್ರೇರೇಪಿಸುವವಳಾಗಬೇಕು; ತನ್ನನ್ನು ತನ್ನ ಜೀವನದ ಗಹನ ಗುರುತರ ಪಥದಿಂದ, ಬೇರೆ ಕ್ಷುಲ್ಲಕ ಮಾರ್ಗಗಳಿಗೆ ಸೆಳೆಯದವಳಾಗಿರಬೇಕು ಎಂಬ ಅಭಿಲಾಷೆ, ಉನ್ನತಾಕಾಂಕ್ಷೆಗಳಿದ್ದುವು. ಅವುಗಳೆಲ್ಲವೂ ತಾನಿಂದು ಹೊಸದಾಗಿ ಕಂಡಿದ್ದ ಶಾಂತಳ ದಿವ್ಯ ಸುಂದರಮೂರ್ತಿಯಲ್ಲಿ ಸುಪೂರ್ಣವಾಗಿ ಅರಳಿ ಸಾಕ್ಷಾತ್ಕಾರ ಪಡೆದಿದ್ದುವು. 'ಶಾಂತ ನನ್ನ ಜೀವನದ ಅತ್ಯಮೂಲ್ಯ, ಅನುಪಮ ನಿಧಿ! ನನ್ನ ಜೀವದ ಜೀವ! ಆತ್ಮದ ಆತ್ಮ!!' ಎಂದುಕೊಂಡ ರಾಜಣ್ಣ.

ಎಷ್ಟು ಹೊತ್ತಾದರೂ ಅವಳ ನಗು, ಆ ಮೋಹಕ ತುಟಿಗಳ ಬೆಡಗು, ಹೊಳೆಯುವ ನಯನಗಳ ಉಲ್ಲಾಸ, ಪ್ರಶಾಂತ ಕಾಂತಿ, ತೇಜಸ್ಸುಗಳು ಅವನ ಮನೋನಯನಗಳಲ್ಲಿ ತುಳುಕಾಡುತ್ತಿದ್ದುವು. ಅವಳಾಡಿದ್ದ ಮಾತುಗಳೇ, ಅವಳ ಕೋಮಲ ಕಂಠದ ಮಂಜುಳ ವಾಣಿಯೇ ಕಿವಿಯಲ್ಲಿ ಮರುದನಿಗೈಯುತ್ತಿದ್ದುವು. ಅವಳು ಮುಡಿದಿದ್ದ ಮಲ್ಲಿಗೆಯ ಸೌರಭವೇ ಮೆದುಳನ್ನಾವರಿಸಿತ್ತು; ಕಂಪುಗೊಳಿಸಿತ್ತು. ಅವಳ ಮೃದು ಹಸ್ತ ಮುಂಗೈಗಳ ನುಣಪೇ ಅವನ ಹಸ್ತಗಳಿಗೆ ಲೇಪಿಸಿಕೊಂಡಿತ್ತು ... ಅವಳು ಅವನ ಹೃದಯದಲ್ಲಿ ಬಂದು ನೆಲೆಸಿದ್ದಳು. ಅವಳಲ್ಲಿ ಅವನ ಹೃದಯ ಹೋಗಿ ನೆಲೆಸಿತ್ತು, ಬಂಧಿಯಾಗಿತ್ತು,

ಐಕ್ಯವಾಗಿತ್ತು. ತನ್ನ ಕೊಠಡಿಯಲ್ಲಿ ಅವನು ಏಕಾಂಗಿಯಾಗಿ ಮಲಗಿದ್ದರೂ, ತನ್ನ ಪಕ್ಕದಲ್ಲೇ, ತನ್ನ ತೋಳತೆಕ್ಕೆಯಲ್ಲೇ, ತನ್ನ ಹೃದಯ ಮಂದಿರದಲ್ಲೇ ಶಾಂತ ಮಲಗಿ, ಪ್ರೇಮದ ಮೆಲುನುಡಿಗಳನ್ನಾಡುತ್ತಿರುವಂತೆ ಭಾಸವಾಯಿತು ... ಅವನ ಕಣ್ಣುಗಳಲ್ಲಿ ಆನಂದದ ವಿರಹದ ಬಾಷ್ಪಗಳು ಒಸರಿದುವು... ರಾತ್ರಿ ಎರಡು, ಮೂರು, ನಾಲ್ಕು ಗಂಟೆಗಳಾದರೂ ಅವನಿಗೆ ನಿದ್ರೆ ಹತ್ತಲಿಲ್ಲ ಅವನ ವಿರಹವನ್ನು ನೋಡಿ ನೋಡಿ ನಗುತ್ತಾ ನೀಲನಭದ ತಾರೆಗಳು ಮಿನುಗಿ ಮಿನುಗಿ ಅಣಕ ಮಾಡುತ್ತಿದ್ದುವು. ಚಂದ್ರ ಅಲ್ಲಿ ನಿಲ್ಲದೆ ನಾಚಿ ದಿಗಂತದೆಡೆಗೆ ಇಳಿಯುತ್ತಿದ್ದ.

* * *

ಬೆಳಿಗ್ಗೆ ಎಚ್ಚರವಾದಾಗ ಒಂಭತ್ತೂವರೆ ಗಂಟೆಯಾಗಿತ್ತು. !

ಸುಧಾ, ಕುರ್ಚಿಯ ಮೇಲಿದ್ದ ಅವನ ಪ್ಯಾಂಟನ್ನು ಹುಡುಕಿ, ಹತ್ತು ರೂಪಾಯಿನ ಮೂರು ನೋಟುಗಳನ್ನು ತೆಗೆದು ಆಟವಾಡುತ್ತಿದ್ದಳು. ಅವನು ಕೂಡಲೇ ಬುಷ್ ಷರಟಿನಲ್ಲಿರಿಸಿದ್ದ ಪರ್ಸ್ ತೆಗೆದು ಹಣ ನೋಡಿದ – ಅವನ ಹಣ ಇದ್ದಷ್ಟೇ ಇತ್ತು. ಮತ್ತೆ 'ಆ ಮೂರು ನೋಟುಗಳು ಹೇಗೆ ನನ್ನ ಜೇಬಿಗೆ ಬಂತು' ಎಂದು ವಿಸ್ಮಯಗೊಂಡ. ಹಾಸಿಗೆಯಿಂದ ಎದ್ದು ಅವಳಿಂದ ಆ ನೋಟುಗಳನ್ನು ತೆಗೆದುಕೊಳ್ಳಲು ಹೋದ.

ಸುಧಾ ಅವನ್ನು ಕೊಡಲು ನಿರಾಕರಿಸಿದಳು. "ಉಹೂ....ನಾನು ಕೊಡೋಲ್ಲ ಹೋಗ್" ಎಂದು ತುಟಿಯನ್ನು ಮುಂದೆ ಚಾಚಿ, ತನ್ನ ಹಿಂದೆ ಹಣ ಬಚ್ಚಿಟ್ಟುಕೊಂಡು, ತನ್ನ ಪುಟ್ಟ ಬಲಗೈಯಿಂದ ರಾಜಣ್ಣನ ಕೈಗೆ ಹೊಡೆದಳು. ಅವನು ಹೇಳಿದ,

"ಅದನ್ನು ಹರಿದುಹಾಕಬೇಡ !"

"ಇಲ್ಲ....ಹಾಗೇ ಇಟ್ಕೊಂಡಿರ್ತೀನೆ. ನಿಂಗೆ ಮಾತ್ರ ಕೊಡೋಲ್ಲ" ಎಂದಳು ಸುಧಾ.

"ಸರಿ" – ಎಂದು ಮನೆಯೊಳಕ್ಕೆ ಹೋಗಿ, ಮುಖ ತೊಳೆದು ಕಾಫಿ ಕುಡಿದು, ಮುಖಕ್ಷೌರ ಮಾಡಿಕೊಳ್ಳಲಾರಂಭಿಸಿದ.

ಆಗ ಅವನಿಗೆ ಹೊಳೆಯಿತು, ಆ ನೋಟುಗಳು ಹೇಗೆ ತನ್ನ ಜೇಬಿನಲ್ಲಿ ಬಂದುವು ಎಂದು

'ಅಬ್ಬಾ! ಎಂಥ ಚಮತ್ಕಾರದ ಹುಡುಗಿ .... ಈ ಶಾಂತ! ನಾನು ಮೈಮರೆತು ಕುಳಿತಿರುವಾಗ ಜೇಬಿಗೆ ದುಡ್ಡು ಹಾಕಿಬಿಟ್ಟಿದಾಳೆ; ಕೊನೆಗೂ ತನ್ನ ಹಟ ಸಾಧಿಸಿಕೊಂಡಳು. ಇರಲಿ, ಅವಳಿಗೆ ಸರಿಯಾಗಿ ಬುದ್ಧಿ ಕಲಿಸುತ್ತೇನೆ!' ಎಂದುಕೊಂಡ.

ಸುಧಾ, ಅವನು ಕ್ಷೌರ ಮಾಡಿಕೊಳ್ಳುವುದನ್ನೇ ನೋಡುತ್ತಾ ನಿಂತಳು. ಅದು ಅವಳ ಅಭ್ಯಾಸ. ಆಗ ರಾಜಣ್ಣ ಅವಳಿಗೆ ಬ್ಲೇಡಿನ ಒಂದು ಖಾಲಿ ಕವರನ್ನು ಕೊಟ್ಟು, ಹಣ ಕೇಳಿದ. ಅವಳು ಅದನ್ನು ಕೊಡದೆ, ಎಷ್ಟು ನೋಟುಗಳಿರುವುವೋ ಎಂದು ಮತ್ತೆ ಎಣಿಸಿಕೊಂಡಳು. ಮೂರು ನೋಟುಗಳಿದ್ದುವು. ಆಗ

"ನೀನೂ ನೂರು ಕವರ್ ಕೊಟ್ಟಿರೇನೆ!"

ಎಂದು ಅವನ್ನು ಬಚ್ಚಿಟ್ಟುಕೊಂಡಳು.

ಅವಳ ಕರಾರಿನ ಪ್ರಕಾರವೇ ನೋಟನ್ನು ಒಂದಕ್ಕೆ ಪಡೆದು, ಸ್ನಾನ ತಿಂಡಿ ಆದಮೇಲೆ ಬಸ್ ಆಫೀಸಿಗೆ ಹೋದ. ಬೆಳಿಗ್ಗೆ ಬಾಗಿಲು ಹಾಕಿತ್ತು. ನಿರಾಶನಾಗಿ ಹಿಂತಿರುಗಿದ.

ಪುನಃ ಸಂಜೆ ಹೋದಾಗ ಬಾಗಿಲು ತೆರೆದಿತ್ತು. ಪಾಸ್ ತೆಗೆದುಕೊಂಡು ಬಂದ. ಪಾಸಿನ ಜೊತೆಯಲ್ಲೇ ಒಂದು ಪತ್ರವನ್ನೂ ಶಾಂತಳಿಗೆ ಕಳುಹಿಸಿದ. ಅದರಲ್ಲಿ,

ಶಾಂತಾ, ನಿಮ್ಮಂಥ ಮೋಸಗಾತಿಯನ್ನು ನಾನೆಲ್ಲಿಯೂ ಕಂಡಿರಲಿಲ್ಲ. ಆಸೆ ತೋರಿಸಿ ಮೋಸ ಮಾಡಿದಿರಿ. ಮಾತು ಕೊಟ್ಟು, ಮಾತು ಮುರಿದಿರಿ. ಇರಲಿ, ಪಾಸ್ ಕಳಿಸಿದ್ದೇನೆ.

ಎರಡು ಬಾರಿ ಆಫೀಸಿಗೆ ಹೋಗಬೇಕಾಯ್ತು. ಸೈಕಲ್ ತುಳಿದು ಕಾಲುಗಳೆಲ್ಲಾ ನೋಯುತ್ತಿವೆ. ನೀವು ನನ್ನ ಜೇಬಿನಲ್ಲಿ ಕಾಣದಂತೆ ದುಡ್ಡು ಹಾಕಿರುವುದನ್ನು ತಿಳಿದು ನನ್ನ

ಉತ್ಸಾಹವೇ ಹೊರಟುಹೋಯ್ತು. ಮನಸ್ಸೆಲ್ಲಾ ಸಪ್ಪೆಯಾಯ್ತು.

ಮನನೊಂದ-ರಾಜು

ಈ ಪತ್ರ ಅವಳನ್ನು ನೇರವಾಗಿ ತಲುಪಲಿಲ್ಲ. ಅವಳ ಮನಸ್ಸು ತುಂಬಾ ಅಳುಕತೊಡಗಿತು.

ನಿನ್ನೆಯ ದಿನವೇ ಮನೆಗೆ ಹೊತ್ತಾಗಿ ಬಂದಿದ್ದರಿಂದ ಅವಳ ತಾಯಿ ತುಂಬಾ ಕೋಪಗೊಂಡಿದ್ದರು. ಗಂಡ ಎಷ್ಟು ಸಮಾಧಾನ ಹೇಳಿದ್ದರೂ ಕೇಳಿರಲಿಲ್ಲ. ಇಂದು ಅವರ ಕೋಪ ಇಳಿದೇ ಇರಲಿಲ್ಲ. ಏಕೆಂದರೆ ರಾಜಣ್ಣನ ಪತ್ರ ಅವರ ಕೈಗೆ ಬಂದಿತ್ತು! ಸುಧಾ ಕೈಯಲ್ಲಿದ್ದ ಪತ್ರವನ್ನು ಅವರೇ ಅನುಮಾನದಿಂದ ಕಿತ್ತುಕೊಂಡಿದ್ದರು. ಅದನ್ನು ಓದಿ ನೇರವಾಗಿ ಮಗಳ ಬಳಿಗೆ ಬಂದು, ಅದನ್ನು ಶಾಂತಳ ಕೈಯಲ್ಲಿಟ್ಟು,

"ಇವನು ಏಕೆ ಹೀಗೆ ಕಾಗದ ಬರೆದಿದ್ದಾನೆ ?"

ಎಂದು ಉಗ್ರ-ಗಾಂಭೀರ್ಯದಿಂದ ಕೇಳಿದರು. ಶಾಂತಳ ತಲೆಯ ಮೇಲೆ ಆಕಾಶವೇ ಕಳಚಿಬಿದ್ದಂತಾಯ್ತು.

"ಸುಮ್ಮನೆ....ಬಸ್ ಪಾಸ್ ತರಲು ಹೇಳಿದ್ದೆ. ಪಾಸನ್ನೂ ಕಳಿಸಿರಬೇಕು ಅಲ್ಲವೆ ?"

ಎಂದು ಧೈರ್ಯವಾಗಿ ಹೇಳಿದರೂ ಅವಳ ಕೈ ಕಾಲುಗಳು ನಡುಗುತ್ತಿದ್ದುವು. ಧ್ವನಿ ಅದುರುತ್ತಿತ್ತು. ಅವಳನ್ನೇ ಕ್ರೂರವಾಗಿ ಈಕ್ಷಿಸುತ್ತಾ ಅವಳ ತಾಯಿ ಹೂಂಕರಿಸಿದರು.

"ಹೊ..-.ಪಾಸೂ ಇದೆ."

"ಸರಿ. ಅದರ ಜೊತೆಯಲ್ಲೇ ಹಾಗೇ ಕಾಗದವನ್ನೂ ಬರೆದಿರಬಹುದು."

"ಬರೆದಿರಬಹುದು! ... 'ನನ್ನ ಜೇಬಿನಲ್ಲಿ ಕಾಣದಂತೆ ದುಡ್ಡು ಹಾಕಿದ್ದು ಕಂಡು ಉತ್ಸಾಹವೇ ಹೋಯ್ತು ...' ಎಂದು ಏನೇನೋ ಬರೆದಿದ್ದಾನೆ. ಏನು ಉತ್ಸಾಹ ಕೊಟ್ಟವ್ಳೆ ನೀನು!"

ಶಾಂತಳಿಗೆ ಏನು ಉತ್ತರ ಹೇಳಬೇಕೋ ತಿಳಿಯಲಿಲ್ಲ. ಕಡೆಗೆ ಈ ಕ್ಷಣದಲ್ಲಿ ಎದೆಗುಂದಬಾರದೆಂದು ರಭಸವಾಗಿ,

"ಏನೂ ಇಲ್ಲ .. ನಾನು ಪಾಸ್‌ಗೆ ನಾಗಮ್ಮನವರ ಮೂಲಕ ದುಡ್ಡು ಕೊಟ್ಟಿದ್ದಕ್ಕೆ ಹಾಗೆ ಬರೆದಿರಬಹುದು. ಅಷ್ಟೇ. ಪಾಸ್ ಎಲ್ಲಿ? ಕೊಡು! ಆ ಪಾತ್ರೇಲಿದ್ದ ಹಾಲ್ನೆಲ್ಲಾ ಯಾವ್ದೋ ಹಾಳು ಬೆಕ್ಕು ಕುಡಿದುಬಿಟ್ಟಿದೆ ನೋಡು!"

ಎಂದು ಮಾತು ಬದಲಾಯಿಸಿ, ಆ ಕಂಟಕದಿಂದ ಪಾರಾದಳು. ಆದರೂ ಅವರ ತಾಯಿಗೆ ಅನುಮಾನ ನೊಳೆಯತೊಡಗಿತು. ಅವಳ ಮೇಲೆ ಸಿಟ್ಟಾಗಿಯೇ ಇದ್ದರು.

ಆ ದಿನವೆಲ್ಲ ಶಾಂತಳಿಗೆ ಊಟ ಮಾಡುವುದೂ ಬೇಕಿಲ್ಲ, ರಾತ್ರಿ ನಿದ್ರೆಯೂ ಬೇಕಿಲ್ಲ. ಅವಳ ಜೀವನ ನೌಕೆ ತನ್ನ ಸಂಸಾರದ ನದಿಯನ್ನು ಬಿಟ್ಟು ತನ್ನದೇ ಆದ ಮತ್ತೊಂದು ಮಧುರವೇಣಿಯಲ್ಲಿ ಹೋಗುವುದರಲ್ಲಿತ್ತು. ಸಂಗಮದಲ್ಲಿ ಸುಳಿಗಳೂ, ಮಡುಗಳೂ, ಅಪಾಯಕರ ಸ್ಥಳಗಳೂ ಇರುವಂತೆ ಇಲ್ಲಿ ಕೂಡ ವಿಪರೀತವಾಗಿದ್ದುವು. ಈ ಘಟನೆಯೇ ಪ್ರಥಮ ಅಪಾಯಸೂಚಕ ಚಿಹ್ನೆ! ಧೈರ್ಯದಿಂದ ಮುಂದುವರೆಯಲೋ, ಹಿಂತಿರುಗಿ ತನ್ನ ಹಳೆಯ ಪಾತ್ರದಲ್ಲೇ ಸುರಕ್ಷಿತವಾಗಿ, ನಿರುದ್ವೇಗಿಯಾಗಿ, ಜಡವಾಗಿ ಸಾಗಲೋ? ಎಂದು ಅವಳು ಎಷ್ಟು ಯೋಚಿಸಿದರೂ ಮುಂದೆ ಹೋಗುವ ಸೆಳವಿನ ಬಲವೇ ಅಧಿಕವಾಗಿತ್ತು. ಮುಟ್ಟಬೇಕೆಂದಿದ್ದ ಕನಸಿನ ಲೋಕವೇ ಬಹು ಸುಂದರವಾಗಿತ್ತು, ಆಹ್ಲಾದಕರವಾಗಿತ್ತು. 'ಅಪಾಯಗಳಿಗೆ ಹೆದರದಿರೋಣ, ಆದಷ್ಟು ದಿನ ತಲೆ ತಪ್ಪಿಸಿಕೊಳ್ಳೋಣ' ಎಂದುಕೊಂಡಳು.

ವಿಚಾರವಾಹಿನಿ ತಲೆಯಲ್ಲಿ ಪ್ರಸರಿಸತೊಡಗಿ ಭವಿಷ್ಯ ಜೀವನದ ಸ್ವಪ್ನನೌಕೆ ಬಾಳಿನ ಕುರುಡು ಪ್ರವಾಹದಲ್ಲಿ ಕಲ್ಲು ಬಂಡೆಗಳಿಗಪ್ಪಳಿಸಿ ಏಳು ಬೀಳಾಗಿ ಸಾಗುತ್ತಿರುವಾಗ ಅವಳಿಗೆ ನಿದ್ರೆ ಎಲ್ಲಿಂದ ಬರಬೇಕು?

ತಾನು ಅವನ ಜೇಬಿನಲ್ಲಿ ದುಡ್ಡನ್ನು ಕಳ್ಳತನದಿಂದ ಹಾಕಿದ್ದ ಚಮತ್ಕಾರಕ್ಕಾಗಿ ತನ್ನನ್ನು ತಾನೇ ಬಹಳ ಹೊಗಳಿಕೊಂಡಿದ್ದಳು. ಬಹಳ ಸಂತೋಷಪಟ್ಟಿದ್ದಳು ... ನಿನ್ನೆಯ ದಿನದ ಸುಖ-ಸಂಭ್ರಮದ

ಉತ್ತುಂಗ ಸ್ಥಿತಿಯಂತೆ ತೋರಿತು ಅವಳ ಆ ಚಮತ್ಕಾರ.

ಏಕೆಂದರೆ ಅವಳಿಗೆ ರಾಜಣ್ಣನಿಂದ ಯಾವ ಐಹಿಕ ವಸ್ತುಗಳೂ ಬೇಕಾಗಿರಲಿಲ್ಲ. ಅವಳಿಗೆ ಅವನ ಸ್ನೇಹ ಪ್ರೇಮಗಳು ಮಾತ್ರ ಬೇಕಾಗಿತ್ತು. ಅವಳು ಬಹು ಹಿಂದೆಯೇ ತನ್ನ ಪತಿ ಹೇಗಿರ ಬೇಕೆಂದು ಬಯಸಿಕೊಂಡಿದ್ದಳು. ಅವಳಿಗೆ ಈಗ ಒಂದು ವರ್ಷ ದಿಂದಲೂ ಕಣ್ಣಿಗೆ ಮೊದಲು ಕಂಡ ಸುಂದರ, ಹಣವಂತ ಯುವಕನೇ ತನ್ನ ಪತಿಯಾಗಬೇಕೆಂಬ ಆಸೆಯಿರಲಿಲ್ಲ. ಅವಳಿಗೆ ತನ್ನ ಪತಿಯಂತೆ ತಾನೂ ಸ್ವತಂತ್ರಳಾಗಿರಬೇಕು, ಸಂಪೂರ್ಣ ವ್ಯಕ್ತಿತ್ವವುಳ್ಳವಳಾಗ ಬೇಕು, ಒಬ್ಬ ನಿಜವಾದ ಗೆಳತಿ, ಸಂಗಾತಿಯಾಗಿರಬೇಕು; ಅವನ ಮೇಲೆ ಮೋಹ ಜಾಲ ಬೀಸಿ, ಅವನನ್ನು ತನ್ನ ಒಲುಮೆ ವೈಯಾರದ ಸೆರೆಯಾಳಾಗಿರಿಸಿಕೊಂಡು, ತನ್ನ ಬಯಕೆ, ಲಾಲಸೆಗಳನ್ನೆಲ್ಲಾ 'ಬೇಡ' 'ಬೇಡ'ವೆಂದೇ ಸಂಪೂರ್ಣವಾಗಿ, ಸ್ವಚ್ಛಂದವಾಗಿ ಪೂರೈಸಿಕೊಳ್ಳುವ ಆಸೆಯಿರಲಿಲ್ಲ. ಜೀವನದ ಉದ್ದಕ್ಕೂ ತಾವಿಬ್ಬರೂ ಆಪ್ತ-ಮಧುರ ಮಿತ್ರ-ಮಿತ್ರೆಯರಂತೆ ಇರಬೇಕು. ಒಬ್ಬರನ್ನೊಬ್ಬರು ಕಡೆಗಣಿಸಿ ಮೂಲೆಗೆ ತಳ್ಳಬಾರದು. ತಾನೇ ಅವಳ ಸಕಲ ಅವಶ್ಯಕತೆಗಳ ಭಾರ ವನ್ನೂ ಹೊತ್ತು ಮೈ ನೋಯಿಸಿಕೊಳ್ಳಬಾರದು. ಆ ನೋವಿನ ಪರಿ ಹಾರಕ್ಕೆಂದು ಅವಳು ತನ್ನ ವ್ಯಕ್ತಿತ್ವವನ್ನೇ ಋಣದ-ದಾಸ್ಯತೆಯಲ್ಲಿ ಕಲುಷಿತಗೊಳಿಸಬಾರದು. ಅವರಿಬ್ಬರ ನಡುವೆ ಋಣ ಏನಿದ್ದರೂ ಪರಿಶುದ್ಧ ಪ್ರೇಮದ-ಪವಿತ್ರ ಆತ್ಮದ-ಪರಸ್ಪರ ತ್ಯಾಗದ ಋಣವಾಗಿರ ಬೇಕು, ನೆರವಿನ ರೂಪವಾಗಿರಬೇಕು .... ಅಧಿಕಾರ-ವಿಧೇಯತೆಗಳ ಸೋಂಕನ್ನು ಹೊಂದಿರಬಾರದು ಎಂದುಕೊಂಡಿದ್ದಳು.

ಅದೆಲ್ಲವನ್ನೂ ರಾಜಣ್ಣ ಈಗಾಗಲೇ ಅರಿತಿರುವನೆಂದು ಅವಳು ಭಾವಿಸಲಿಲ್ಲ. ಆದರೂ ಅವನು ತನ್ನನ್ನು ಅರ್ಥಮಾಡಿಕೊಳ್ಳ ಬಲ್ಲ; ತನ್ನೊಡನೆ ಸಹಕರಿಸಿ....ಸವಿ ಸ್ನೇಹ-ಪ್ರೇಮಗಳನ್ನೆರೆಯ ಬಲ್ಲ. ತನ್ನ ಅಸನುಗ್ರ ಸ್ತ್ರೀತ್ವದೊಡನೆ ಪೂರಕವಾದ ತನ್ನ ಪುರುಷತ್ವನನ್ನೂ ಬೆರೆಸಿ, ಒಂದು ಮಧುರ ಸುಸಂಪೂರ್ಣ, ಭವ್ಯ ಬಾಳನ್ನು ಅರಳಿಸಬಲ್ಲ ಎಂಬ ನಂಬಿಕೆ-ಹಿರಿಯಾಸೆಗಳಿದ್ದುವು. ಅದನ್ನು ಅವನು ಅರ್ಥ

ಮಾಡಿಕೊಂಡು ಆಚರಿಸಬಲ್ಲನೆಂಬ ಪೂರ್ಣ ವಿಶ್ವಾಸವಿತ್ತು.

ಅಲ್ಲದೆ ಅವಳು ರಾಜಣ್ಣನ ದೇಹಕ್ಕೂ ಮಾರು ಹೋಗಿದ್ದಳು, ಸರಸ-ಪ್ರವೃತ್ತಿಗೂ ಮನ ಸೋತಿದ್ದಳು. ರಿಕ್ಷಾದಲ್ಲಿ ಅವನು ಕೈ ಹಿಡಿದುಕೊಂಡು 'ಆಮೇಲೆ!' 'ಆಮೇಲೆ!' ಎನ್ನುತ್ತಿದ್ದುದನ್ನು ಅವಳು ನೆನೆಸಿಕೊಂಡಳು. ಅವಳಿಗೆ ಹೊಟ್ಟೆ ತುಂಬ ನಗು ಉಕ್ಕಿತು. ಆಗ ಅವನೊಬ್ಬ ಪುಟ್ಟ ಬಾಲಕನಂತೆ ಅವಳಿಗೆ ಕಂಡಿದ್ದ....ಆ ಕೆಲವು ಕ್ಷಣಗಳಲ್ಲಿ ತನ್ನ ಜೀವನದ ಜವಾಬ್ದಾರಿಯ ಅರಿವು-ಭಾರಗಳನ್ನೇ ನಿವಾರಣೆ ಗೊಳಿಸಿದ್ದ. ಆಗವಳಿಗೆ ತನ್ನ ಬಾಲ್ಯದ ದಿನಗಳು ನೆನಪಾಗಿದ್ದುವು. ತಿಳಿಮನದ ಪ್ರೇಮಿಗಳು ಎಲ್ಲಿದ್ದರೂ, ಯಾವ ಕಷ್ಟದ ನಡುವೆ ಸಿಕ್ಕಿ ಬಿದ್ದಿದ್ದರೂ, ಎಷ್ಟು ವಯಸ್ಸಾಗಿದ್ದರೂ, ಬಾಲಕ ಬಾಲಕಿಯರಷ್ಟೇ ನಿಷ್ಕಪಟರು, ಪರಿಶುದ್ಧರು, ಆತ್ಮೋಲ್ಲಾಸಿಗಳು ಎಂಬ ಭಾವನೆ ಅವಳ ಮನದಲ್ಲಿ ಸುಳಿದಿತ್ತು. ಅದರ ಜೊತೆಗೆ ತಾರುಣ್ಯದ ತಾಪಕ್ಕೆ ತೌರಾಗಿದ್ದ ಅವನ ದೇಹ, ಅವನ ಹಸ್ತ, ತನ್ನ ಹಸ್ತಗಳನ್ನು ಹಿಡಿದು, ಮೃದುವಾಗಿ ಮರ್ದಿಸಿ, ಮುಂಗೈ-ಸವರಿದ್ದಾಗ ಅವಳ ಎದೆಯಲ್ಲಿ ಆನಂದದ ಭೀತಿಯ ಪುಳಕಗಳೆದ್ದಿದ್ದುವು. ಅವಳ ಎದೆ ಉಬ್ಬಿ, ಉಸಿರು ಆವೇಗಗೊಂಡಿತ್ತು. ಯುವತಿಯ ಅವ್ಯಕ್ತ ಬಯಕೆ ಹೆಡೆಯೆತ್ತಲಾರಂಭಿಸಿತ್ತು.

ಕೂಡಲೇ ಅವಳ ಮನ ಇನ್ನೇನನ್ನೋ ನೆನೆಯಿತು. ಹಿಂದೆ, ಬಹು ಹಿಂದೆ, ಈಗೊಂದು ವರ್ಷಕ್ಕೂ ಹಿಂದೆ ಅದೇ ರೀತಿಯ ಟ್ಯಾಕ್ಸಿಯ ಪಯಣವೊಂದರಲ್ಲಿ ತರುಣನೊಬ್ಬನೊಡನೆ ಆದ ಅನುಭವ ನೆನಪಿಗೆ ಬಂತು. ಶಾಂತ ಅವನ ಒರಟುತನ, ಪಶುತ್ವ, ಅಸಹ್ಯಕರ ವರ್ತನೆಯನ್ನು ಜ್ಞಾಪಿಸಿಕೊಂಡಳು. ಅವಳ ಮನ ವಿಷಾದದಿಂದ ಕಪ್ಪಾಯಿತು. ತನ್ನನ್ನೊಂದು ಹೂವಿನಂತೆ ನಿನ್ನೆ ಪರಿಗಣಿಸಿದ್ದ ರಾಜಣ್ಣನ ಬಗೆಗೆ ಧನ್ಯವಾದ ಉಕ್ಕಿತು. ಹಾಗೆಯೇ ಅವನ ಪುಟ್ಟ ಬಯಕೆಗಳೊಂದನ್ನೂ ಪುರಸ್ಕರಿಸದಿದ್ದುದನ್ನು ನೆನೆದು ತುಂಬಾ ನೊಂದುಕೊಂಡಳು. ಅವಳ ಮನ ಬೇಗ ಬೇಗನೆ ತನ್ನ ನಿರ್ಮಲ ಸ್ಥಿತಿಯನ್ನು ಕಳೆದುಕೊಂಡಿತು. ನೂರೆಂಟು ನೆನಪುಗಳು,

ಚಿಂತೆಗಳು, ಅಸಮಾಧಾನಗಳು, ವ್ಯಸನಗಳು ನಿರ್ವಿಕಾರತೆಯ ಕಟ್ಟೆ ಒಡೆದು, ಮನದ ಮೈದಾನಕ್ಕೆ ನುಗ್ಗಿದುವು.

ಮೊಟ್ಟಮೊದಲು ತನ್ನನ್ನು ರಾಜಣ್ಣ 'ಮೋಸಗಾತಿ' ಎಂದು ಕರೆದುದು, ನಂತರ, ತಮ್ಮ ಗುಪ್ತ-ಪ್ರಣಯ ತಾಯಿಗೆ ಅನಾವಶ್ಯಕ ವಾಗಿ ಅರಿವಾದುದು, ದಿನವೆಲ್ಲಾ ತಾಯಿ ತನ್ನನ್ನು ದೂಷಿಸಿ, ಚುಚ್ಚು ಮಾತುಗಳನ್ನಾಡಿದುದು ... ಹಿಂದಿನ... ಈಗ ಒಂದು ವರ್ಷದ ಹಿಂದಿನ ಆ ಟ್ಯಾಕ್ಸಿ ಪ್ರಯಾಣದ ನೆನಪು .... ಎಲ್ಲವೂ ಅವಳನ್ನು ಕಾಡಿಸಿ, ಕಾಡಿಸಿ ಗೋಳಾಡಿಸಿದುವು. ಅವಳ ಮನಸ್ಸು ಖಿನ್ನವಾಯಿತು. ಕರುಣಾದ್ರ್ರವಾಯಿತು, ನಿದ್ರೆ ದೂರವಾಯಿತು. ಆಗ ರಾಜಣ್ಣನೇ ತನ್ನ ಚಿಂತೆಗಳನ್ನೆಲ್ಲಾ ದೂರಮಾಡುವ ಸವಿಯಾದ ವ್ಯಕ್ತಿಯೆಂದು ತೋರಿತು. ಕೂಡಲೇ ಮೇಲೆದ್ದು ಆತನಿಗೊಂದು ಪತ್ರ ಬರೆದಳು. ಅದರಲ್ಲಿ—

ರಾಜು,

ನೀವೆಂಥ ತಪ್ಪು ಮಾಡಿದಿರಿ ಇವತ್ತು... ನಮ್ಮ ಗುಟ್ಟೆಲ್ಲ ತಾಯಿಗೆ ಗೊತ್ತಾಗಿಹೋಯಿತು. ಹೆಣ್ಣಿನ ಜನ್ಮವೇ ಹೀನ ಎಂದು ಅವರ ಅಭಿಪ್ರಾಯ. ಇನ್ನುಮುಂದೆ ನನ್ನ ವಿಚಾರದಲ್ಲಿ ತುಂಬಾ ತುಚ್ಛ ಭಾವನೆಗಳನ್ನು ಅವರು ಪಡೆಯುತ್ತಾರೆ. ಆದರೂ ಸಧ್ಯ, ಏನೂ ವಿಪರೀತಕ್ಕೊಳಗಾಗದೆ ಪಾರಾದೆ. ಇನ್ನುಮೇಲೆ ನಾನು ಅಥವಾ ನನ್ನ ತಂಗಿ ಹೊರಗೆ ಕಂಡು ಬಂದರೆ ಮಾತ್ರ ನೀವು ಪತ್ರ ಕಳಿಸಿ. ಇಲ್ಲದಿದ್ದರೆ ಕಳಿಸಬೇಡಿ.

ಎರಡು ಬಾರಿ ಬಸ್-ಆಫೀಸಿಗೆ ಹೋಗಿದ್ದಿರಾ? .... ಪಾಪ, ಅಷ್ಟುದೂರ ಸೈಕಲ್‌ನಲ್ಲಿ, ಒಂದೇ ದಿನದಲ್ಲಿ ಎರಡು ಬಾರಿ ಹೋಗಿ ಬರುವುದು ಸಾಮಾನ್ಯವೆ? ನಿಮ್ಮ ಕಾಲು ಗಳೂ, ತೊಡೆಗಳೂ ಎಷ್ಟು ನೋಯುತ್ತಿವೆಯೋ! ನನಗೆ ಹೇಗೆ ಗೊತ್ತಾಗಬೇಕು? ನಿಮ್ಮನ್ನು ಬಂದು ಉಪಚರಿಸೋಣ, ನಿಮ್ಮ ಕಾಲನ್ನು ಒತ್ತಿ ಆಯಾಸ ಪರಿಹಾರಮಾಡೋಣ ಎಂದು

ಮನಸ್ಸಾಗುತ್ತಿದೆ. ಆದರೆ ಅದು ಹೇಗೆ ಸಾಧ್ಯ ?

ಇರಲಿ. ಒಂದು ದಿನ ಎಲ್ಲವೂ ಸಾಧ್ಯವಾಗಬಹುದು. ಈಗ ನಿಮ್ಮ ನೋವು ತಕ್ಷಣ ಮಾಯವಾಗಲಿ ಎಂದು ಹೃದಯದ ಆಳದಿಂದ ಬಯಸುತ್ತೇನೆ. ಅಷ್ಟೇ ನನ್ನಿಂದ ಈಗ ಸಾಧ್ಯವಾಗು ವುದು. ನಾನು ನಿಮಗೆ ಬಹಳ ತೊಂದರೆ ಕೊಟ್ಟಿರುವೆ. ಕ್ಷಮಿಸಿ.

ಹಾಗೆಯೇ ನಾನು ನಿನ್ನೆ ದಿನ ಮಾಡಿದ ಮೋಸವನ್ನೂ ಮನ್ನಿಸಿ. ನಿಮಗೆ ಮೋಸ ಮಾಡಿದ್ದರಿಂದಲೋ ಏನೋ ನಾನು ಇಂದು ಸಿಕ್ಕಿಬಿದ್ದಿರುವೆ. ನೀವೂ ನನ್ನನ್ನು ಮೋಸಗಾತಿ ಎಂದು ನಿಷ್ಕರುಣೆಯಿಂದ ಕರೆದಿರುವಿರಿ. ಇರಲಿ .... ಈ ಮಾತಿನಿಂದ ನನ್ನ ಹೃದಯವನ್ನೇ ಇರಿದಂತಾಗಿದೆ ... ಖಂಡಿತವಾಗಿಯೂ ರಾಜು. ಅದನ್ನು ನೆನೆದುಕೊಂಡರೆ ಕಣ್ಣಲ್ಲಿ ನೀರು ಬಳಬಳನೆ ಬಂದುಬಿಡುತ್ತೆ. ನೀವು ಏನೇ ಅಂದರೂ ಚಿಂತೆಯಿಲ್ಲ. ನಾನು ಕೋಪಿಸಿಕೊಳ್ಳುವುದಿಲ್ಲ. ನಾನು ಈ ವಿಚಾರದಲ್ಲೂ ಮೋಸ ಗಾತಿಯಲ್ಲ, ಇನ್ನಾವ ವಿಚಾರದಲ್ಲೂ ಸಹ ಮೋಸಗಾತಿಯಲ್ಲ ಎಂಬುದು ಮುಂದೆ ನಿಮಗೇ ಗೊತ್ತಾಗುತ್ತದೆ. ಆ ರೀತಿ ನಾನು ವರ್ತಿಸುತ್ತೇನೆ. ನಾನು ಬಾಯಲ್ಲಿ ಏನೂ ಕೊಚ್ಚಿಕೊಳ್ಳೋಲ್ಲ, ಕಾರ್ಯತಃ ಮಾಡಿ ತೋರಿಸುತ್ತೇನೆ.

ದಯವಿಟ್ಟು ಕಾಗದಗಳನ್ನು ಬಹಳ ಜಾಗರೂಕತೆಯಿಂದ ಕಳಿಸಿ. ನನ್ನ ಕಾಗದಗಳನ್ನು ಸುಟ್ಟುಬಿಡಿ.

ನಿಮ್ಮ ಬಾಳಿನ ಸಂಗಾತಿ,
ಶಾಂತ.

ಎಂದು ಬರೆದಳು. ಪತ್ರ ಬರೆಯುತ್ತಿದ್ದಂತೆ ರಾಜಣ್ಣನೇ ಅವಳ ಮುಂದೆ ಇದ್ದಂತೆ ಭಾಸವಾಯಿತು. ಆ ಭಾವೋದ್ವೇಗದಲ್ಲಿ ಹಾಗೇ ಬರಹ ನಿಲ್ಲಿಸಲಾಗಲಿಲ್ಲ. **ಪುನಃ,**

ನಿಮಗೆ ಸುಖವಾಗಿ ನಿದ್ರೆ ಬರಲಿ. ಅದರಲ್ಲಿ ಸುಂದರ ವಾದ ಕನಸು ಬೀಳಲಿ....ನಿಮ್ಮ ಹುಡುಗಿಯೂ ಬರಲಿ. ನಿಮಗೆ

ಚುಂಬನಗಳನ್ನು ಕೊಟ್ಟು ಸುಖಪಡಿಸಲಿ... ಶಾಂತಿ ಪಡಿಸಲಿ.

ನಿಮ್ಮ ಪ್ರೇಮದ ಗೆಳತಿ,
ಶಾಂತ.

ಎಂದು ಬೇರೆ ಬರೆದಳು. ಈ ವಾಕ್ಯಗಳನ್ನು ಬರೆಯುವಾಗ ಅವಳ ಕೆನ್ನೆ ಕೆಂಪೇರಿತು. ಮಲಗಿ ನಿದ್ರಿಸಲು ಯತ್ನಿಸಿದರೂ ನಿದ್ರೆ ಹತ್ತಲಿಲ್ಲ. ಕಣ್ಣು ಮುಚ್ಚಿಕೊಂಡರೂ ರಾಜಣ್ಣನ ರೂಪು ದೂರ ವಾಗಲಿಲ್ಲ..... ಕಲ್ಪನಾಪ್ರಪಂಚಕ್ಕೆ ಮಿತಿಯಿರಲಿಲ್ಲ.

* * *

ಮಾರನೆಯ ಬೆಳಿಗ್ಗೆ ಈ ಪತ್ರವನ್ನು ಓದಿದಂತೆಲ್ಲಾ ರಾಜಣ್ಣ ನಿಗೆ ವರ್ಣಿಸಲಸದಳವಾದ ಆನಂದ ಮತ್ತು ಆಶ್ಚರ್ಯಗಳಾಗುತ್ತಿ ದ್ದುವು. 'ನಾನು ಬಂದು ನಿಮ್ಮ ಕಾಲನ್ನು ಒತ್ತುತ್ತೇನೆ, ಸೇವೆ ಮಾಡುತ್ತೇನೆ....ನಿಮ್ಮ ಪ್ರೇಮದ ಗೆಳತಿ, ಶಾಂತ'— ಎಂದೆಲ್ಲಾ ಬರೆ ದಿರುವುದನ್ನು ಕಂಡು ಹೇಳಲಾರದ ಭಾವಗಳು ಅವನೆದೆಯಲ್ಲಿ ಚಿಮ್ಮಿ ದುವು. ತನ್ನಿಂದ ಏನನ್ನೂ ಬಯಸದಿರುವ ಒಬ್ಬ ಯುವತಿಯ ಅಂತರಂಗದಲ್ಲಿ ಇಷ್ಟೊಂದು ಮಮತೆ, ವಾತ್ಸಲ್ಯ ಇರುತ್ತದೆಯೆ ? ಎಂದು ಬೆರಗುಗೊಂಡ. ಅವಳಿಂದ ಅಂಥ ದಿವ್ಯಪ್ರೇಮದ ಸವಿ ಉಣ್ಣುತ್ತಿರುವ ಭಾಗ್ಯಶಾಲಿ ತಾನು ಮಾತ್ರವೇ ಎಂದು ತಿಳಿದು ಆನಂದಗೊಂಡ. ಉತ್ಸಾಹದಿಂದ, 'ಏನಾದರೂ ಸರಿಯೆ, ನಾನು ಅವಳನ್ನು ವಿವಾಹವಾಗಲೇಬೇಕು. ಅವಳಿಂದ ಮಾತ್ರವೇ ನನ್ನ ಜೀವನಕ್ಕೆ ಸವಿ, ಸಾರ್ಥಕತೆ ದೊರೆಯುವುದು' ಎಂದು ತೀರ್ಮಾನಿಸಿದ.

ಆದರೆ ಇನ್ನೊಂದು ಯೋಚನೆಯ ಕಹಿಪ್ರವಾಹ ಅವನ ತೀರ್ಮಾನದ ಬಂಡೆಯ ಕೆಳಗೆ ರಭಸದಿಂದ ಹರಿದು ಅದರ ನಿಶ್ಚಲತೆ ಯನ್ನು ನಿರ್ನಾಮ ಮಾಡುತ್ತಿತ್ತು.

ಅವನಿಗೆ ಪ್ರಭಾವತಿಯ ನೆನಪು ಬಂದಿತು. ಅವಳ ಸಂಬಂಧ ಮಾಡಿದ್ದ ತಾನು ಅಪವಿತ್ರ ಎಂದುಕೊಂಡ ಶಾಂತಳಂತಹ ಪವಿತ್ರ, ಪರಿಶುದ್ಧ ಜೀವಿಯನ್ನು ಸೇರಿ, ಅವಳ ಜೀವನಧಾರೆಯೊಂದಿಗೆ ಬೆರೆತು

ಮುಂದೆ ಸಾಗಿದರೆ, ಅವಳ ಪವಿತ್ರತೆ ಮತ್ತು ಪರಿಶುದ್ಧತೆ ನಾಶಹೊಂದು ವುದಿಲ್ಲವೆ? 'ಅಯ್ಯೋ ನಾನೇಕೆ....ಪ್ರಭಾವತಿಯ ಮಾಯಕ್ಕೆ ಬಲಿ ಯಾದೆ?' ಎಂದು ಚಿಂತಿಸುತ್ತಿದ್ದ. ಆಗ ಅವನಿಗೆ ಒಂದು ಕ್ಷಣದ ಹಿಂದೆ ದೊರೆತಿದ್ದ ಶಾಂತಿ, ಆನಂದಗಳು ಮಾಯವಾಗಿ, ನೋವು-ಪಶ್ಚಾತ್ತಾಪಗಳು ಎದೆಯನ್ನು ಕೊರೆಯುತ್ತಿದ್ದುವು.

'ಬೇಡ, ಅವಳನ್ನು ವಿವಾಹವಾಗುವುದೇ ಬೇಡ. ಅದಕ್ಕೆ ಬದಲು ಅವಳನ್ನು ಮನಸಾರೆ ಪ್ರೇಮಿಸುತ್ತೇನೆ. ನನ್ನ ಹೃದಯೇಶ್ವರಿ ಯಂತೆ ಪೂಜಿಸುತ್ತೇನೆ. ಬ್ರಹ್ಮಚಾರಿಯಾಗಿಯೇ ಜೀವಿಸುತ್ತೇನೆ' ಎಂದು ಒಂದು ಕ್ಷಣ ಯೋಚನೆ ಹೊರಳಿತು.

ಇನ್ನೊಂದು ಕ್ಷಣದಲ್ಲಿಯೇ, ತನ್ನ ಮೂರ್ಖತನಕ್ಕಾಗಿ, ಭಾವುಕ ತನದ ಕ್ಷಣಿಕ ಮೈ ಮರೆವಿಗಾಗಿ ತನ್ನಲ್ಲಿ ತಾನೇ ನಕ್ಕುಬಿಟ್ಟ.

'ನನ್ನನ್ನು ನಾನೇ ವಂಚನೆ ಮಾಡಿ ಕೊಳ್ಳುತ್ತಿದೇನಲ್ಲ!.... ನಾನು ಶಾಂತಳನ್ನು ಪ್ರೇಮಿಸಿರುವುದು ನಿಜ. ಅವಳನ್ನು ನನ್ನ ಹೃದಯ ಮಂದಿರದಲ್ಲಿ ಇಟ್ಟುಕೊಂಡಿರುವುದೂ ಸತ್ಯ .... ಅವಳ ಜೀವದೊಂದಿಗೆ ಬೆರೆಯಲು ನನ್ನ ಜೀವ ಹಾತೊರೆಯುತ್ತಿದೆ. ಅಷ್ಟೆ ಅಲ್ಲ, ಅವಳ ದೇಹದೊಂದಿಗೆ ಬೆರೆಯಲು ನನ್ನ ದೇಹವೂ ಹಾತೊರೆ ಯುತ್ತಿದೆ. ಹಾಗಲ್ಲದಿದ್ದ ಮೇಲೆ ನಿನ್ನೆ ಏಕೆ ಉನ್ಮಾದದಲ್ಲಿ ಅವಳ ಕೈ ಹಿಡಿದಿದ್ದೆ. ಅದನ್ನೇಕೆ ಮೃದುವಾಗಿ ಮರ್ದಿಸುತ್ತಿದ್ದೆ. ಅವಳನ್ನು ಚುಂಬಿಸಲು ಏಕೆ ಅಷ್ಟು ಅವಸರ ಪಟ್ಟೆ.... ಇಲ್ಲ!.... ನಾನು ಆತ್ಮವಂಚನೆ ಮಾಡಿಕೊಳ್ಳುವುದಿಲ್ಲ. ಈ ವಿಚಾರದಲ್ಲಿ ಯಾವ ಅನುಮಾನವೂ ಬೇಕಿಲ್ಲ: ನಾನು ಅವಳನ್ನೇ ಪ್ರೇಮಿಸುವುದು, ಅವಳನ್ನೇ ವಿವಾಹವಾಗುವುದು. ಇಡೀ ಜಗತ್ತನ್ನೇ ಈ ಸಾಧನೆ ಗೋಸ್ಕರ ಎದುರು ಹಾಕಿಕೊಳ್ಳಲೂ ಸಿದ್ಧನಿದ್ದೇನೆ.'

ಎಂದು ಯೋಚನೆ ಮಾಡುತ್ತಾ ಮೈಮರೆತಿರುವಾಗ ಹೊರಗಡೆ ಯಾರೋ 'ರಾಜಣ್ಣ!—ರಾಜಣ್ಣ!' ಎನ್ನುತ್ತಿದ್ದರು. ಅವನು ಮೇಲೇಳುವುದರೊಳಗಾಗಿ ಶಾಂತಳ ಅಣ್ಣ ರೂಮಿನೊಳಕ್ಕೆ ದಢಾರನೆ ಬಂದು, ರಾಜಣ್ಣ 'ಏನು?' ಎಂದು ಕೇಳುವುದರಲ್ಲಿಯೇ, ಕೈಯಲ್ಲಿ

ಏನನ್ನೋ ಇಟ್ಟು, ಅಟ್ಟಹಾಸದಿಂದ,

"ತೆಗೆದುಕೊಳ್ಳಿ .... ಸೈಕಲ್ ರಿಪೇರಿ ಖರ್ಚು!"

ಎಂದು ಹೊರಟೇ ಹೋದ.

ಅವನ ವರ್ತನೆ ರಾಜಣ್ಣನನ್ನು ಅಸಹ್ಯಗೊಳಿಸಿತು. ಕೈ ತೆರೆದು ನೋಡಿದ....ಹತ್ತು ರೂಪಾಯಿನ ನೋಟೊಂದು ಇತ್ತು. ಅದನ್ನೆತ್ತಿ ನೆಲಕ್ಕೆ ಬಡಿದ.

* * *

ಶಾಂತಳ ಮನೆಯಲ್ಲಿ ಮಕ್ಕಳೆಲ್ಲರೂ ಕಾಲೇಜಿಗೆ ಹೋದ ಮೇಲೆ ಅವರ ತಾಯಿ ಊಟದ ಮನೆಯನ್ನು ಚೊಕ್ಕಟಪಡಿಸಿ, ಅಡಿಗೆ ಮನೆಯಲ್ಲಿ ಪಾತ್ರೆಗಳೆಲ್ಲವನ್ನೂ ಸರಿಯಾಗಿ ಇಡುತ್ತಿದ್ದರು. ಅವರ ಪತಿ ಯಾವುದೋ ಮನೆಯ ಪದಾರ್ಥ ತರಲು ಮನಸ್ಸಿಲ್ಲದ ಮನಸ್ಸಿನಿಂದ ತಮ್ಮ ಖಜಾನೆಯನ್ನು ತೆರೆದರು. ಬಸ್ ಪಾಸ್‌ಗೋಸ್ಕರ ಶಾಂತಳಿಗೆ ಮೂವತ್ತು ರೂಪಾಯಿ ಕೊಡುವುದಕ್ಕೇ ಅವರಿಗೆ ಮನಸ್ಸಿರಲಿಲ್ಲ; ಕೊಡದೇ ಇರುವುದಕ್ಕೂ ಮನಸ್ಸಿರಲಿಲ್ಲ. ಅವಳು ಕೇಳಿದ ತಕ್ಷಣ ಯಂತ್ರದಂತೆ ಹಣವನ್ನು ತೆಗೆದು ಅವಳ ಕೈಗೆ ಕೊಟ್ಟಿದ್ದರು.

ಆದರೆ ಈಗ ಬೇಕಾಗಿರುವುದು ಯಾವುದೋ ಮನೆಯ ಪದಾರ್ಥ. 'ಅದಿಲ್ಲದೆ ಇರಲು ಸಾಧ್ಯವೇ?' ಎಂದು ಯೋಚಿಸಿದರು. ಅದು' ಎಂದರೆ ಸಕ್ಕರೆ! ಸಕ್ಕರೆ ಇಲ್ಲದಿದ್ದ ಮೇಲೆ ಕಾಫಿ ಎಲ್ಲಿಂದ ಬಂತು? ಸಕ್ಕರೆ ಸಿಗುವುದೂ ಅಪರೂಪವೇ! ಸಿಕ್ಕಿದಾಗ ತಂದಿಟ್ಟು ಕೊಳ್ಳಬೇಕು ಎಂದು ಯೋಚಿಸಿ ಪೆಟ್ಟಿಗೆ ತೆರೆದರು.

ದುಡ್ಡಿಗೆ ಕೈಹಾಕಿದರೆ ಅಲ್ಲಿದ್ದ ನೂರ ಹತ್ತು ರೂಪಾಯಿನಲ್ಲಿ ಹತ್ತು ರೂಪಾಯಿ ಮಾಯವಾಗಿದೆ! ಅವರಿಗೆ ಆಶ್ಚರ್ಯವಾಯಿತು. ಎಷ್ಟು ಜ್ಞಾಪಿಸಿಕೊಂಡರೂ ನೂರ ಹತ್ತು ರೂಪಾಯಿ ಇಟ್ಟಿದ್ದುದೇ ಸ್ಪಷ್ಟವಾಗಿ ನೆನಪಿಗೆ ಬರುತ್ತೆ. ಹತ್ತು ರೂಪಾಯಿ ಯಾವಾಗ ಖರ್ಚು ಮಾಡಿದೆ?' ಎಂದು ಯೋಚಿಸಿದರು. ಮನಸ್ಸಿಗೆ ಹೊಳೆಯಲಿಲ್ಲ. ಹುಡುಗರು ಯಾರಾದರೂ ತೆಗೆದುಕೊಂಡಿರಬಹುದು ಎಂದು ಯೋಚಿಸಲಿಲ್ಲ. ಏಕೆಂದರೆ ಅವರ ಮಕ್ಕಳು ಎಂದೂ ಅಂಥ ಕೆಲಸ ಮಾಡಿರ

ಲಿಲ್ಲ. ಅದಕ್ಕೆ ಬದಲು ಅಡಿಗೆ ಮನೆಯಲ್ಲಿದ್ದ ಹೆಂಡತಿಯನ್ನು ಅಭ್ಯಾಸಬಲದಿಂದ ಗ್ರಹಚಾರವಶಾತ್ ಕೇಳಿದರು.

"ಲೇ, ಪೆಟ್ಟಿಗೆಯಲ್ಲಿ ಹತ್ತು ರೂಪಾಯಿ ತಗೊಂಡೆಯಾ ?"

ಅವರ ಪತ್ನಿಯೂ ಅದನ್ನು ನೋಡಿರಲಿಲ್ಲ. ಅವರ ಮನಸ್ಸಿಗೆ ಈಗೆರಡು ದಿನಗಳಿಂದಲೂ ಬೇಸರವಾಗಿತ್ತು. ಇನ್ನು 'ದುಡ್ಡು ತೆಗೆದು ಕೊಂಡೆಯಾ ?' ಎಂದು ಬೇರೆ ಗಂಡ ಕೇಳಿದಮೇಲೆ ತುಂಬಾ ಕೋಪ ಬಂದುಬಿಟ್ಟಿತು. ಗಂಡನ ಮೇಲೆ ಸಿಕ್ಕಾಪಟ್ಟೆ ರೇಗಿ,

'ಯಾರಿಗೆ ಕೊಟ್ಟಿರೋ ? . . . ಎಲ್ಲಿ ಇಟ್ಟಿರೋ ? ... ಇಲ್ಲಿ ಯಾರನ್ನು ಕೇಳುತ್ತೀರಿ. ಒಂದಿಷ್ಟು ದುಡ್ಡು ಇಟ್ಟುಕೊಳ್ಳೋಕೆ ಬರೋದಿಲ್ಲ...ಹಾಳಾಗಿ ಹೋಗ್ಲಿ....ನನಗೆ ಒಂದು ಕಾಸು ಕೂಡ ಬೇಕು ಎಂದರೂ ಕಣ್ಣಿನಲ್ಲಿ ರಕ್ತ ಬರುತ್ತದೆ...ಈಗ !"

ಎಂದು ಕೈ ಬೀಸಿ ಹಂಗಿಸಿದರು. ಅವರ ಪತಿದೇವರಿಗೂ ಸಿಟ್ಟೇರಿ, ಅಸಹಾಯಕತೆಯಿಂದ,

"ಏನು ? ಕೇಳಿದ್ದೂ ತಪ್ಪಾಯ್ತೇನೇ ! ಒಳ್ಳೇ ಮನೆ !! ಇಟ್ಟ ದುಡ್ಡೇ ಮಂಗಮಾಯವಾದರೆ ಇನ್ನು ಹೇಗೆ ಅಂತ, ಮನೆಯಲ್ಲೇ ಯಾವ ಕಳ್ಳ ಬಂದ ? ಹು, ಸರಿ....ಎಲ್ಲಾ ಚೆನ್ನಾಗಿದೆ...ಬಹಳ ಚೆನ್ನಾಗಿದೆ !"

ಎಂದು ಪೆಟ್ಟಿಗೆಗೆ ಭದ್ರವಾಗಿ ಬೀಗ ಹಾಕಿ ಹೊರಟರು. ಅವರ ಮನಸ್ಸೆಲ್ಲಾ ಶಾಂತ ಈ ವರ್ಷ ಪರೀಕ್ಷೆಗೆ ಕುಳಿತು ಕೊಳ್ಳು ತ್ತಾಳೆ. ಪರೀಕ್ಷೆಯ ಫೀಸಿಗೆ ಎಲ್ಲಿಂದ ಹಣ ತರುವುದು, ಎಂದು ಯೋಚಿಸುತ್ತಿತ್ತು... 'ಆ ಒಂಭೈನೂರು ರೂಪಾಯಿ ಬ್ಯಾಲೆನ್ಸ್ ಆದರೂ ಬೇಗ ಬರಬಾರದೇ' ! ಎಂದು ದೇವರಿಗೆ ಮೊರೆಯಿಡುತ್ತಿತ್ತು ಅವರ ಹೃದಯ.

* * *

ಆ ರಾತ್ರಿ ಒಂದು ಗಂಟೆಯಲ್ಲಿ ರಾಜಣ್ಣನಿಗೆ ಸುಖ ನಿದ್ರೆ. ಶಾಂತಳಿಗೆ ಒಂದು ಕನಸು ಬಿದ್ದು ಆಗತಾನೇ ಎಚ್ಚರವಾಗಿತ್ತು. ಆದಿನ ಬೆಳಿಗ್ಗೆ ರಾಜಣ್ಣ ಅವಳಿಗೊಂದು ಪತ್ರ ಬರೆದಿದ್ದ.

ಶಾಂತ,

ನಿಮ್ಮ ಪತ್ರವನ್ನೋದಿ ನನ್ನ ಕಣ್ಣಿನಲ್ಲಿ ನೀರು ಬಂತು. ದುಃಖ ಮತ್ತು ಸುಖ ಎರಡರ ಕಣ್ಣೀರೂ ಏಕ ಕಾಲದಲ್ಲಿ ಬಂದುವು. ನಾನು ನಿಮ್ಮನ್ನು 'ಮೋಸಗಾತಿ' ಎಂದು ತಮಾಷೆಗೆ ಕರೆದಿದ್ದೆ. ಆದರೆ, ಅದರಿಂದ ನಿಮ್ಮ ಮನಸ್ಸು ನೊಂದಿರುವಂತೆ ಕಾಣುತ್ತದೆ. ಹಾಗೆ, ನಿಮ್ಮನ್ನು ನೋಯಿಸಬೇಕೆಂದು ನಾನು ಕನಸಿನಲ್ಲಿಯೂ ಎಣಿಸಲಾರೆ....ದಯವಿಟ್ಟು ನನ್ನನ್ನು ಕ್ಷಮಿಸಿ.

ನೀವು ನನ್ನ ಕಾಲನ್ನೊತ್ತಿ ಉಪಚರಿಸುವಿರೆಂದು ಬರೆದಿದ್ದೀರಿ. ಇಷ್ಟು ಪ್ರೀತಿ ಮತ್ತು ಮಮತೆಯನ್ನು ನನ್ನ ತಾಯಿ ಅಕ್ಕ ಇಬ್ಬರೇ ನನಗೆ ತೋರಿರುವುದು. ಇನ್ನಾರೂ ಹಾಗೆ ಮಾಡುವರೆಂದು ಎಣಿಸಿರಲಿಲ್ಲ. ನಿಮ್ಮ ಆ ಮಾತು ನನ್ನ ಕಣ್ಣುಗಳಲ್ಲಿ ಆನಂದಭಾಷ್ಪ ಮಿಡಿಸಿತು.

ನನ್ನ ಕಾಲನ್ನು ಒತ್ತಲು ನೀವು ಯಾರು? ಒತ್ತಿಸಿಕೊಳ್ಳಲು ನಾನು ಯಾರು? ನನಗೆ ಅಷ್ಟು ಅರ್ಹತೆ ಇದೆಯೆ? ಅಗತ್ಯವಿದೆಯೆ? ಎಂಬ ಯೋಚನೆಗಳೆಲ್ಲಾ ಬಂದುವು. ಆ ಮಾತನ್ನು ಕೇಳಿದ ಕೂಡಲೇ ನನ್ನ ಮೈ ಕೈ ನೋವೆಲ್ಲವೂ ಮಾಯವಾಯ್ತು. ಅದೆಲ್ಲಾ ನಿಮ್ಮ ಪವಿತ್ರ ಪ್ರೇಮದ ಫಲ ಎಂದು ತಿಳಿಯುತ್ತೇನೆ.

ನಿಮ್ಮನ್ನು ನೆನೆದಂತೆಲ್ಲಾ ನನಗೆ ಊಟ, ನಿದ್ದೆ, ಒಂದೂ ಬೇಕಾಗುವುದಿಲ್ಲ. ನನ್ನ ಮನಸ್ಸು, ಹೃದಯ ಎಲ್ಲವೂ ನಿಮ್ಮ ಬಳಿಯಲ್ಲೇ ಇದೆ. ದೇಹ ಮಾತ್ರ ಆ ಭಾಗ್ಯ ಪಡೆಯದೆ ಇಲ್ಲೇ ವಿರಹಿಸುತ್ತಿದೆ. ನಿಮ್ಮ ಬಳಿ ಅಂಥ ಪವಾಡ ಶಕ್ತಿ ಇದೆ, ಅಷ್ಟು ಸವಿ, ಸೌರಭಗಳಿವೆ. ನಿಮ್ಮ ಕೈ ಹಿಡಿಯುವವನು ಅದೃಷ್ಟ ಮಾಡಿರಬೇಕು.

ಎಂದು ಬರೆದಿದ್ದ. ಈ ಪತ್ರವನ್ನು ಶಾಂತ ಪುನಃ ಪುನಃ

ಓದಿಕೊಂಡಿದ್ದಳು. ಆದಿನವೆಲ್ಲಾ ಅವಳು ಯಾವುದೋ ಒಂದು ಪ್ರಬಲ, ಜೀವಂತ ಶಕ್ತಿಯ ಅಡಿಯಾಳಾಗಿದ್ದಳು. ಅದರ ಪ್ರಭಾವ ಕ್ಕೊಳಗಾಗಿ ಒಂದು ಪತ್ರವನ್ನೂ ರಾಜಣ್ಣನಿಗೆ ಬರೆದು,

ಪ್ರಿಯ ರಾಜು,

ನನ್ನನ್ನು ಕೈ ಹಿಡಿಯುವವನು ಬಹಳ ಅದೃಷ್ಟ ಮಾಡಿರ ಬೇಕು ಎಂದು ಬರೆದಿರುವಿರಿ. ನನಗಂತೂ ಹಾಗೆ ತೋರುವು ದಿಲ್ಲ. ನಿಮ್ಮನ್ನು ಮದುವೆಯಾಗುವವಳು ತುಂಬಾ ಅದೃಷ್ಟ ಮಾಡಿರಬೇಕು, ಎಂದು ನನಗೆ ಅನಿಸುತ್ತದೆ....ನಾನಂತೂ ನಿಮ್ಮನ್ನೇ ವಿವಾಹವಾಗುವುದು- ಅದು ಸಾಧ್ಯವಿಲ್ಲದಿದ್ದರೆ ಸಾಯುವವರೆಗೂ ಬ್ರಹ್ಮಚಾರಿಣಿಯಾಗೇ ಇದ್ದು ಬಿಡುತ್ತೇನೆ. ನಾನು ಈ ಘಳಿಗೆಯಿಂದಲೇ ನಿಮ್ಮ ಪತ್ನಿ....ನನ್ನ ಪ್ರೇಮವನ್ನು ನಿಮ್ಮ ಪಾದಗಳ ಬಳಿ ಇಟ್ಟಿದ್ದೇನೆ. ನನ್ನ ಆತ್ಮನನ್ನೇ ಇಟ್ಟಿ ದ್ದೇನೆ....ಸ್ವೀಕರಿಸುವ ಅಥವ ತಿರಸ್ಕರಿಸುವ ವಿಚಾರ ನಿಮಗೇ ಸೇರಿದ್ದು ... ಓ, ರಾಜೂ ! ನನಗೆ ಇನ್ನೊಂದು ಅಕ್ಷರ ಬರೆ ಯಲೂ ಸಾಧ್ಯವಿಲ್ಲ. ನನ್ನ ಕೈ ಕಾಲುಗಳೇ ನಡುಗಲಾರಂಭಿ ಸಿವೆ. ಎಲ್ಲವನ್ನೂ ನಿಮ್ಮ ಕೈಯಲ್ಲಿ ಬಿಟ್ಟಿದ್ದೇನೆ. ನನ್ನನ್ನು ಕಾಪಾಡುವ ಭಾರ ನಿಮ್ಮದೇ.

ನಿಮ್ಮ ಪ್ರೇಮದ
ಶಾಂತ.

ಎಂದು ಬರೆದಳು. ಆ ಪತ್ರವನ್ನು ಅನೇಕ ಬಾರಿ ಓದಿದಳು. ಛೂ, ಇದೆಂಥ ಹುಚ್ಚು!...ಹರಿದುಹಾಕಿ ಬಿಡೋಣ!!' ಎಂದು ಯೋಚಿಸಿದಳು. ಆ ಯೋಚನೆ ಬಹಳ ಕಹಿಯಾಗಿ, ದುಸ್ಸಹವಾಗಿ, ಅಸಾಧ್ಯವಾಗಿ ಕಂಡುಬಂತು. ಅದನ್ನು ಹರಿದುಹಾಕಲು ಬೇಕಾದ ಮನಶ್ಶಕ್ತಿಯಾಗಲೀ, ದೈಹಿಕ ಶಕ್ತಿಯಾಗಲೀ, ಅವಳಲ್ಲಿ ಉಳಿದಿರಲಿಲ್ಲ.

'ಇಲ್ಲ ! .... ನಾನೆಂದಿಗೂ, ಎಂದೆಂದಿಗೂ ಈ ಪತ್ರವನ್ನು

ಹರಿಯುವುದಿಲ್ಲ. ಇದರಲ್ಲಿ ನನ್ನ ಹೃದಯವಾಣಿಯೋ, ಆತ್ಮಸಿಧಿಯೋ ಅಡಗಿದೆ!' ಎಂದು ಅದಕ್ಕೆ ಅನಂತ ಮುತ್ತುಗಳನ್ನಿಟ್ಟಳು. ಎದೆಗವಚಿ ಕೊಂಡಳು. ಸಂಜೆ ರಾಜಣ್ಣನಿಗೆ ತಾನೇ ಕೊಟ್ಟು ಬಂದಳು.

ರಾತ್ರಿ ಮಲಗಿದಾಗ ಅವಳಿಗೆ ಬಹಳಹೊತ್ತು ನಿದ್ದೆ ಬಂದಿರ ಲಿಲ್ಲ. ಒಂದು ಬಾರಿ ನಿದ್ದೆ ಸುಳಿದಿತ್ತು. ಆಗಲೇ ಸ್ವರ್ಗಲೋಕ ವೊಂದರಲ್ಲಿ ತಾನೂ ರಾಜಣ್ಣನೂ ವಿಹರಿಸುತ್ತಿರುವಂತೆಯೂ, ವಿಷ ಸರ್ಪವೊಂದು ಅವನನ್ನು ಕಚ್ಚಿದಂತೆಯೂ ಕನಸು ಬಿದ್ದು, ಈಗ ಎಚ್ಚರವಾಗಿತ್ತು. ಅವಳ ಮೈ ಕೈ ಎಲ್ಲವೂ ನಡುಗುತ್ತಿದ್ದುವು. 'ಬರೀ ಕನಸಲ್ಲವೆ? ಏಕೆ ಹೆದರುವುದು' ಎಂದು ಸಮಾಧಾನ ತಂದು ಕೊಂಡರೂ, ಅವಳ ಹೆದರಿಕೆ ಕಡಮೆಯಾಗಲಿಲ್ಲ. ಹಾಗೆಯೇ ಕಣ್ತೆರೆದು ಮಲಗಿ, ರೂಮಿನ ಕಗ್ಗತ್ತಲನ್ನೇ ನೋಡುತ್ತಿದ್ದಳು. ರಾತ್ರಿಯ ಮೌನವನ್ನು ಕಲಕುತ್ತಾ ಅವಳ ತಂದೆ ತಾಯಿ ಇವರ ಪಿಸುಮಾತುಗಳು ಕಿವಿಯ ಮೇಲೆ ಬೀಳುತ್ತಿದ್ದುವು. ಅವಳತಾಯಿ ಪ್ರಶ್ನಿಸುತ್ತಿದ್ದರು.

"ಏನು...ದುಡ್ಡು ಕೊಟ್ಟರೇ?"

"ಇಲ್ಲ"

"ಇನ್ನಾವಾಗ ಕೊಡ್ತಾರಂತೆ?"

"ಇನ್ನೂ ಒಂದು ತಿಂಗಳು ಕಾಯ್ಬೇಕೇನೋ"

"ಸರಿ, ಈಗ ಅವಳ ಪರೀಕ್ಷೆಗೆ ಏನು ಮಾಡ್ತೀರ?"

"ಏನೂ ಮಾಡುವಂತಿಲ್ಲ...ನೀನೇ ಗಂಟು ಬಿಚ್ಚಬೇಕು."

"ಪರವಾಗಿಲ್ಲಾ...ಮಾತಾಡಿಸಿದರೆ ಮೈಮೇಲೇ ಬರ್ತೀರಿ. ನನ್ನ ಹತ್ತಿರ ಯಾವ ಗಂಟು ಕೊಟ್ಟು ಇಟ್ಟಿದೀರಿ?"

"ಲೇ ... ಇನ್ನೊಂದು ನೂರು ಕೊಟ್ಟಿಡು ... ಬಡ್ಡಿ ಸಹಿತ ಹಿಂದಕ್ಕೆ ಕೊಡ್ತೇನೆ."

"ಬಡ್ಡೀನೂ ಬೇಡ, ಏನೂ ಬೇಡ. ನನ್ನ ಹತ್ರ ಒಂದು ಕುರುಡು ಕವಡೇನೂ ಇಲ್ಲ .... ಏಕೆ, ಆ ಕೆಳಗಿನ ಮನೆ ರಂಗಪ್ಪನ್ನ ಕೇಳ್ತೀನಿ ಅಂತಿದ್ರಿ ... ಅವನು ಕೊಡಲಿಲ್ಲವೇ?"

"ಇಲ್ಲ. ಅವನೇಕೆ ಕೊಡಬಾರದು! ಕಪಟಿ. ಶೇಷಾದ್ರಿ ಪುರದಲ್ಲಿ ಒಂದು ಬಂಗಲೆ ಕಟ್ಟಿಸಿದಾನೆ. ಲಂಚ ಹೊಡೆದೂಹೊಡೆದೂ ಸರಿಯಾಗಿ ಒಂದು ಲಕ್ಷ ಇಟ್ಟಿದಾನಂತೆ. ಒಂದು ಇನ್ನೂರು ರೂಪಾಯಿ ಸಮಯದಲ್ಲಿ ಇಲ್ಲವಂತೆ...ಪುನಃ ಸಕ್ಕರೆಯಂಥ ಮಾತು ಬೇರೆ."

"ಹಾಗೋ ... ನಾನೇನೋ ಅವನ್ನ ಒಳ್ಳೇಯೋನು ಎಂದೇ ತಿಳಿದಿದ್ದೆ. ಹಾಗಾದ್ರೆ ಈಗೇನು ಮಾಡ್ತೀರ?"

"ಏನು ಮಾಡೋದು? ಚಂದ್ರಪ್ಪನನ್ನು ಕೇಳಬೇಕು. ಒಳ್ಳೇ ಮನುಷ್ಯ. ಆದರೆ ದುಂದುಗಾರ... ಸ್ವಲ್ಪ ನನ್ನಹಾಗೆ! ಕೈ ಸಡೀತಿದೆ ಎಂದು ಸಿಕ್ಕಿದಂತೆ ಖರ್ಚು ಮಾಡ್ತಿರ್ತಾನೆ. ಕೇಳಿದರೆ ಒಂದುವೇಳೆ ದುಡ್ಡಿದ್ರೆ, ಕೊಡ್ತಾನೆ. ಅವನ ಹತ್ತಿರ ಚಿಕ್ಕಬುದ್ಧಿ ಇಲ್ಲ...ನೋಡೋಣ."

"ಬೆಳಗ್ಗೆ ಹತ್ತು ರೂಪಾಯಿ ಯಾರು ತೆಗೆದುಕೊಂಡರು ಗೊತ್ತಾಯ್ತೆ ?"

"ಇಲ್ಲ."

"ಇನ್ನಾರು ತೆಗೆದುಕೊಂಡಿರ್ತಾರೆ....ವರದನೆ !"

"ಅವನೇ ತೆಗೆದುಕೊಂಡಿದ್ದಾನೆಯೆ ?"

"ಹು.... ಅವನೇ."

". . . "

"ಕೇಳಲಿಲ್ಲವೆ ನೀವು ?"

"ಏನನ್ನು ... ?"

'ದುಡ್ಡು ತೆಗೆದುಕೊಂಡೆಯಾ ಎಂದು."

"ಇಲ್ಲ."

"ಕೇಳುತ್ತೀರಾ ?"

'ಊಹು, ಬೆಳೆದಿದ್ದಾನೆ... ಗ್ರ್ಯಾಜುಯೇಟ್ ಆಗಿದಾನೆ. ಚಿಕ್ಕ ಮಗುಗನಂತೆ ದುಡ್ಡು ಕದೀತಾನೆ. ಅವನಿಗೆ ಗೊತ್ತಾಗೋದಿಲ್ಲ ಎಂದರೆ, ನಮಗೂ ಗೊತ್ತಾಗೋದಿಲ್ಲವೇನೆ ?"

"ನೀವು ಹೀಗೇ ಇದ್ದರೆ ಅವನಿಗೆ ಯಾರು ಬುದ್ಧಿ ಹೇಳೋರು"

"ಶ್ರೀಕೃಷ್ಣನೇ ಹೇಳಬೇಕು !"

ಅನಂತರ ಮಾತು ನಿಂತಿತು. ಸ್ವಲ್ಪ ಹೊತ್ತು ಬಳೆಗಳ ಶಬ್ದವಾಯಿತು. ನಂತರ ಅವಳ ತಾಯಿ ಕೇಳಿದರು.

"ಶಾಂತಾಗೆ ಬಂದ ಕಾಗದ ನೋಡಿದಿರಾ ! ಆ ಹುಡುಗನಿಗೆ ಸ್ವಲ್ಪ ಎಚ್ಚರಿಕೆ ಕೊಡೋದಿಲ್ಲವೆ ?"

"ಏನು ಎಚ್ಚರಿಕೆ ಕೊಡಲೀ ?"

"ಹೀಗೆಲ್ಲ ನಮ್ಮ ಮಗಳಿಗೆ ಕಾಗದ ಬರೀ ಬೇಡ ಎಂದು."

"ಒಳ್ಳೇ ಹುಚ್ಚಿ ಕಣೇ ನೀನು ! ಅವನು ಕಾಗದ ಬರೆದರೆ ಏನಾಯ್ತು ... ಅವನಂಥ ಒಳ್ಳೇ ಹುಡುಗನ್ನ ನಾನು ಇದುವರೆಗೂ ಕಂಡಿಲ್ಲ."

"ಹಾಗಾದ್ರೆ ಅವನಿಗೆ ಏನೂ ಮಾಡೋಲ್ವೆ ?"

"ನೀನು ತೆಪ್ಪಗಿರು."

"ಆ ಚಂದ್ರಪ್ಪನಿಗಾದರೂ ಹೇಳಿ."

"ನೀನು ಬಾಯಿಗೆ ಬೀಗ ಹಾಕಿಕೊ !"

"ಇದೇನು ! ನಿಮಗೆ ಒಂದು ಚೂರೂ ಭಯವೇ ಇಲ್ಲವಲ್ಲ ! ನಾಳೆ ದಿನ ಅವಳಿಗೆ ಏನಾದ್ರೂ ಹೆಚ್ಚು ಕಡಮೆ ಆದರೆ, ಅದನ್ನು ಕಣ್ಣಿಂದ ನೋಡೋರು ಯಾರು ? ಕೆಟ್ಟ ಹೆಸರು ಯಾರಿಗೆ ಬರುತ್ತೆ ? ನಿಮಗೆ ಬುದ್ಧಿ ನೆಟ್ಟಗಿದೆಯೋ ಇಲ್ಲವೋ ?"

"ಅವನು ಹಾಗೆಲ್ಲ ಮಾಡೋದಿಲ್ಲ ಕಣೇ ... ಬಹಳ ಯೋಗ್ಯ. ಅವನ ಹತ್ತಿರ ಎರಡು ನಿಮಿಷ ಮಾತಾಡು, ಗೊತ್ತಾಗುತ್ತೆ."

"ಅಯ್ಯೋ, ನೀವೇ ಮಾತಾಡಿಕೊಳ್ಳಿ. ಮಾತಿಗೇನು ? ಈಗಿನ ಕಾಲದಲ್ಲಿ ಎಲ್ಲರೂ ಚೆನ್ನಾಗೇ ಆಡ್ತಾರೆ ... ನಂಬಿದರೆ ಆಗ ಗೊತ್ತಾಗುತ್ತೆ ... ಕೊರಳು ಕೊಯ್ಯೋ ಬುದ್ಧಿ."

ಎಂದು ಅವರು ನಂಬಿ ಸಹಾಯಮಾಡಿದ್ದವರೆಲ್ಲ ಹೇಗೆ ದ್ರೋಹ ಮಾಡಿದರು, ಮಾಡುತ್ತಿದ್ದಾರೆ ಎಂಬುದನ್ನು ವಿವರಿಸಿದರು.

ಆ ಮಾತಿನ ಕೊನೆ ಕೊನೆಗೆ. ಶಾಂತಳ ತಂದೆ ಹೇಳಿದರು :

"ಕಣ್ಣು ಬಹಳ ಉರೀತಿದೆ ಕಣೇ."

"ಉಷ್ಣ ಆಗಿರಬೇಕು; ನಾಳೆ ಎಣ್ಣೆ–ನೀರು ಹಾಕ್ಕೊಳ್ಳಿ."

"ಒಳ್ಳೇ ಎಣ್ಣೆ-ನೀರು ಹೇಳ್ದೆ. ನನಗೇನೋ ಒಂದೂ ಬೇಕಾಗಿಲ್ಲ."

"ನೀವು ಹೀಗೇ ಹೇಳ್ತಿದೀರಿ ... ಈಗ ಎರಡು ತಿಂಗಳಿಂದಲೂ. ನಾಳೆ ಸುಮ್ಮನಿರಿ. ನಾನೇ ತಲೆಗೆ ಎಣ್ಣೆ ಒತ್ತಿ ... ನೀರು ಹಾಕ್ತೇನೆ."

"ಹೂ."

"ನಿದ್ದೆ ಬಂದುಬಿಟ್ಟಿತೇ ?"

"ಇಲ್ಲ."

"ಕ್ಲೋಸ್‌ಪೇಟೆಯ ಗಂಡಿಗೆ ಏನು ಕಾಗದ ಬರೆದಿರಿ ?"

"ಮನೆಯ ಹತ್ತಿರ ಕಾಲಿಡಬೇಡ ಎಂದು ಬರೆದೆ."

"ಅಯ್ಯೋ, ಅದೇಕೆ ಹಾಗೆ ಬರೆದ್ರೀಂದ್ರೆ !"

"ಇನ್ನೇನು ಮತ್ತೆ .... ಮೂರನೆಯ ಮದುವೆ, ಮುದಿಯ ಆಗಿದಾನೆ. ಇನ್ನೂ ಮದುವೆ ಗಂಡು ಆಗುವ ಚಪಲ... ನೀಚ !"

"ನಿಮಗೆ ಕೊಂಚಾನೂ ಬುದ್ಧಿ ಇಲ್ಲ ಕಣ್ರೀ ! ಎಷ್ಟು ಸಾಹುಕಾರನಂತೆ ಅವನು....ವರದಕ್ಷಿಣೆ ಬೇರೆ ಇಲ್ಲ .... ಹುಡುಗಿ ಸುಖವಾಗಿರುತ್ತಿದ್ದಳು."

"ಆ ಸುಖಕ್ಕೆ ಬೆಂಕಿ ಬೀಳ !"

"ಸರಿ, ಹಾಗಾದ್ರೆ ... ಈ ಶಾಂತಿ ಪಾಡು ಏನು ಅಂತ"

"ಏನು ಅಂದರೆ, ಓದಿಕೊಂಡು ಇರ್ತಾಳೆ."

"ಅದೂ ಮುಗಿಯುತ್ತಲ್ಲ."

"ಸರಿ, ಕೆಲಸಕ್ಕೆ ಸೇರುತ್ತಾಳೆ."

"ಬಹಳ ಚೆನ್ನಾಗಿದೆ ನಿಮ್ಮ ಮಾತು!"

"ಇನ್ನೇನು ಮಾಡಬೇಕೇ ? ಓದಿ ಕೆಲಸಕ್ಕೆ ಸೇರಲಿ. ಸುಖವಾಗಿರಲಿ, ಮನಸ್ಸು ಬಂದರೆ ತನಗೆ ಒಪ್ಪಿಗೆಯಾದವರನ್ನು ಮದುವೆ ಆಗ್ಲಿ."

"ಹಾಗಾದ್ರೆ ನಾವಿದ್ದೂ ಏನು ಸಾರ್ಥಕ ಆಯ್ತು ?"

"ವಿದ್ಯೆ ಕಲಿಸಿ ಆಯ್ತು .... ಬದುಕಿದ್ದರೆ ಮದುವೆಯನ್ನೂ

ನೋಡೋಣ."

"ನಿಮ್ಮನ್ನು ಕಟ್ಟಿಕೊಂಡು ಹೆಣಗಿ ಹೆಣಗಿ ಸಾಕಾಯ್ತು!"

"ನೋಡೆ, ನಾನು ಹೇಳೋದು ಸ್ವಲ್ಪ ಕೇಳು. ನಾವೇಕೆ ಇಷ್ಟು ಭಂಗಪಟ್ಟು ಮಕ್ಕಳನ್ನು ಓದಿಸಿರೋದು, ಒಳ್ಳೇ ಗಂಡ ಸಿಗಲಿ ಎಂದು ತಾನೆ? ಒಳ್ಳೇ ಗಂಡು ಎನ್ನಿಸಿಕೊಳ್ಳುವವರೆಲ್ಲಾ 'ನಾಲ್ಕು ಸಾವಿರ ಬೇಕು', 'ಅಮೆರಿಕಾಕ್ಕೆ ಕಳಿಸಬೇಕು' ಎಂದು ಎದೆ ಉಬ್ಬಿಸಿಕೊಂಡು ತಿರುಗಾಡ್ತಾರೆ. ಕಟ್ಟಿಕೊಂಡ ಮೇಲೆ ಸರಿಯಾಗಿ ಬಾಳಿಸುವುದಕ್ಕೂ ಬರೋಲ್ಲ ... ನೀನೇ ನೋಡಿದ್ದೀಯಲ್ಲಾ... ಎಷ್ಟು ಜನ ಹುಡುಗಿಯರನ್ನು ಕೈ ಬಿಟ್ಟು ಹಳ್ಳಕ್ಕೆ ದೂಡಿದ್ದಾರೆ....ಎಂದು! ಅಂಥದ್ದರಲ್ಲಿ ನಾವೇಕೆ ನಾಲ್ಕು ಸಾವಿರ ಕೊಡಬೇಕು....ಇಂಗ್ಲೆಂಡ್ ಅಮೆರಿಕಾಕ್ಕೆ ಕಳಿಸೋಕೆ ಮನೆ ಹಾಳು ಮಾಡಿಕೋಬೇಕು?"

"ನಮ್ಮ ತಂದೆ ನಿಮಗೆ ಕೊಡಲಿಲ್ಲವೆ?"

"ಅದು ಬೇರೆ ವಿಷಯ....ನಾನು ಬಾಯಿಬಿಟ್ಟು ಕೇಳಿದೆನೇ? ನಮ್ಮ ಮನೆಯುವರು ಕೇಳಿದರೆ?"

"ಇಲ್ಲ."

"ನಿಮ್ಮ ತಂದೆಯೇ, ಅದೊಂದು ಸಂಪ್ರದಾಯ. ನಡೆದು ಬರಲಿ, ಎಂದು ಕೊಡಲಿಲ್ಲವೆ?"

"ಹೌದು."

"ಈಗ ಹಾಗಿದೆಯೆ? ಎಲ್ಲ ಬದಲಾಯಿಸಿ ಬಿಟ್ಟಿದೆ. ಗಂಡುಗಳೆಲ್ಲಾ ತಾವು ಮಾರ್ಕೆಟ್ ಬದನೇಕಾಯಿಗಳು ಎಂದು ತಿಳಿದುಕೊಂಡು ಬಿಟ್ಟಿದಾರೆ ... ಈ ಹಣ! ಹಣದ ಬೆಂಕೀಲ್ಲಿ ... ಅವರ ಗಂಡಸುತನವೇ ಸುಟ್ಟು ಬೂದಿಯಾಗಿದೆ. ಎಲ್ಲ ಒಳ್ಳೇ ಸ್ವಭಾವಗಳೂ ಹಾಳಾಗ್ತಿವೆ."

"ಸರಿ ... ಈಗೇನು ಮಾಡಬೇಕು ಎಂದಿದ್ದೀರಿ?"

"ಏ....ನಿಲ್ಲಿ. ಸುಮ್ಮನೆ ಮಲಗಿಕೋ....ಏತಕ್ಕೆ ಚಿಂತಿಸ್ತೀಯ ಕಾಲ ಬಂದಾಗ ಶ್ರೀಕೃಷ್ಣ ಎಲ್ಲಾ ನಡೆಸಿಕೊಡ್ತಾನೆ."

ಎಂದರು. ಕೆಲವು ಕಾಲದ ನಂತರ ಅವಳ ತಾಯಿ, "ನೋಡ,

ನಾಳೆ ಆ ಚಂದ್ರಪ್ಪನ ಹತ್ತಿರ ದುಡ್ಡು ಸಿಕ್ಕದಿದ್ದರೆ, ಆಗ ನಾನೇ ಅವಳ ಪರೀಕ್ಷೆಗೆ ದುಡ್ಡು ಕೊಡ್ತೀನೆ. ನನ್ನ ಚಿನ್ನದ ಬಳೆ ಇನ್ನೂ ಎರಡು ಇವೆ. ಅವನ್ನು ಮಾರಿ, ಆಮೇಲೆ ನೀವು ನನಗೆ ಪುನಃ ಮಾಡಿಸಿ ಕೊಡಬೇಕು !" ಎಂದರು

ಈ ಮಾತುಗಳನ್ನೆಲ್ಲಾ ಆಲಿಸುತ್ತಿದ್ದ ಶಾಂತಳಿಗೆ ಒಮ್ಮೆಗೇ ದುಃಖ, ಸಂತೋಷ, ಕನಿಕರ, ಹೆಮ್ಮೆ, ಅಪಮಾನ, ಆಶೆ, ನಿರಾಶೆ ಗಳೆಲ್ಲವೂ ಉಂಟಾಗುತ್ತಿದ್ದುವು. ಜೀವನದ ರುದ್ರಸಮುದ್ರದಲ್ಲಿ, ಬಡತನದ ಬಿರುಗಾಳಿಗೆ ಸಿಕ್ಕಿ, ಅವಳ ತಂದೆ ತಾಯಿಗಳ ಸಂಸಾರ ನೌಕೆ ಆಗಲೋ ಈಗಲೋ ಮುಳುಗುವಂತಿತ್ತು. ತನ್ನ ಜೀವನ ಆ ನೌಕೆಗೆ ಹಗ್ಗದಿಂದ ಕಟ್ಟಿದ್ದ ಪುಟ್ಟದೋಣಿಯಂತೆ ತೋರಿತು. ತಾನು ಇಷ್ಟುದಿನವೂ ತಾಯಿಯನ್ನು 'ಇವಳು ಎಂದಾದರೂ ನಮ್ಮ ತಂದೆಯನ್ನು ಪ್ರೇಮಿಸಿದ್ದಾಳೆಯೇ ?' ಎಂದು ಅನುಮಾನಿಸಿದ್ದನ್ನು ನೆನೆದು ತುಂಬಾ ನಾಚಿಕೆ, ಅವಮಾನ ಮತ್ತು ಪಶ್ಚಾತ್ತಾಪಗಳಾದವು. ನಾನು ಆ ರೀತಿ ಯೋಚಿಸಿ ಮಾತೃದ್ರೋಹಿಯಾದೆ ಎಂದುಕೊಂಡಳು. ಸದಾಕಾಲವೂ ಗೃಹಲಕ್ಷ್ಮಿಯಾಗಿದ್ದುಕೊಂಡು, ಗಂಡ – ಮಕ್ಕಳೊಂದಿಗೆ ಜೀವನದ ಏರು ಇಳಿತದಲ್ಲಿ ಧೀರತೆಯಿಂದ ಕಾಲತಳ್ಳಿದ ಆ ಸಾಧ್ವಿಯ ನಿಸ್ವಾರ್ಥ ಜೀವನವನ್ನು ಕಂಡು ಎಲ್ಲಿಲ್ಲದ ಪೂಜ್ಯ ಭಾವ ಶಾಂತಳ ಹೃದಯವನ್ನಾವರಿಸಿತು. ತನ್ನ ಹಾಸಿಗೆಯಲ್ಲೇ ಮಲಗಿ ತನ್ನ ಮನೋನಯನಗಳೆದುರು ನಿಂತಿದ್ದ ಆ ಪೂಜ್ಯ ಮಾತೆಯ ಪಾದಗಳ ಮೇಲೆ ಹಣೆ ಇಟ್ಟು ಬಹುಹೊತ್ತು ಮಲಗಿದ್ದಳು.... ಪಶ್ಚಾತ್ತಾಪದ ಕಣ್ಣೀರಿಡುತ್ತಾ ಕ್ಷಮೆ ಯಾಚಿಸಿದಳು.

ಕ್ರಮೇಣ ಕ್ರಮೇಣ ರಾಜಣ್ಣ ಮನಸ್ಸಿನಲ್ಲಿ ಸುಳಿಯತೊಡಗಿದ. ಅವನಿಗೆ ಸರ್ಪದಂಶನವಾದ ಕನಸು ನೆನಪಿಗೆ ಬಂತು. ಉದ್ವೇಗ ಪೂರಿತ ಬಾಹುಗಳಿಂದ ಅವನನ್ನು ಎದೆಗವಚಿ, ಅವನ ತಲೆಸವರುತ್ತಾ ಕಣ್ಣೀರಿಟ್ಟಳು.

* * *

ಮಾರನೆಯ ದಿನ ರಾಜಣ್ಣ ಶಾಂತಳ ಪತ್ರವನ್ನು ಮತ್ತೆ ಮತ್ತೆ

ಓದಿದ. ಅವನಿಗೆ ತನ್ನನ್ನು ತಾನೇ ನಂಬಲಾಗಲಿಲ್ಲ. .... ಶಾಂತಳಿಗೆ ಕಂಡು ಬಂದ ಆದರ್ಶವ್ಯಕ್ತಿ ತಾನೇ ಎಂದು ತಿಳಿದು ಅವನಿಗೆ ಅಷ್ಟು ಆನಂದವಾಗಿತ್ತು!

ದಿನವೆಲ್ಲಾ ಹೊಯ್ದಾಡಿದ ಮನಸ್ಸನ್ನು ಹಿಡಿದು, ನಂತರ ಉಗ್ರ ನಿಶ್ಚಯದಿಂದ ಶಾಂತಳಿಗೆ ಒಂದು ಪತ್ರ ಬರೆದ—

" ಶಾಂತ,

ನಿಮ್ಮ ಪತ್ರ ಓದಿ, ನನಗೆ ದಿಕ್ಕೇ ತೋಚದಂತಾಗಿದೆ. ನಮ್ಮ ಸ್ನೇಹ ಇಷ್ಟು ಗಾಢವಾಗಿ, ಇಷ್ಟು ಪರಿಪೂರ್ಣವಾಗಿ ಬೆಳೆದು, ಪ್ರೇಮಕ್ಕೆ ತಿರುಗೀತು ಎಂದು ನಾನು ಕನಸಿನಲ್ಲೂ ಎಣಿಸಿರಲಿಲ್ಲ.

ಹಾಗಾಯ್ತು!....ನನಗೆ ತಡೆಯಲಾರದಷ್ಟು ಆನಂದವಾಗಿದೆ !! ....ಈಗ ನೀವೇ 'ನನ್ನ ಆತ್ಮ ಮತ್ತು ಪ್ರೇಮವನ್ನು ನಿಮ್ಮ ಪಾದಗಳ ಬಳಿ ಇರಿಸಿದ್ದೇನೆ. ಸ್ವೀಕರಿಸುವ ಅಥವಾ ತಿರಸ್ಕರಿಸುವ ಭಾರ ನಿಮ್ಮದು' ಎಂದು ಬರೆದಿರುವಿರಿ. ಇದರಿಂದ ನನಗೆ ಹೇಗ್ಹೇಗೋ ಆಗಿದೆ. ನಿಮ್ಮಂಥವರ ಕೈಹಿಡಿಯಲು ಅರ್ಹನೇ ಎಂದು ಅಳುಕುತ್ತಿದೇನೆ. ಜಾತಿಯಲ್ಲಿ ನಾನು ಕೀಳು ಎಂದು ಭಾವಿಸುತ್ತಿಲ್ಲ. ಏಕೆಂದರೆ ಮನುಷ್ಯನ ಜಾತಿಯನ್ನು ಹುಟ್ಟಿನಿಂದ ನಿರ್ಣಯಿಸಲಾಗುವುದಿಲ್ಲ. ಅವನ ಯೋಗ್ಯತೆ, ಸಂಸ್ಕಾರ, ಗುಣ, ಶೀಲಗಳಿಂದ ನಿರ್ಣಯಿಸ ಬೇಕು; ಅದು ನಿಮಗೂ ಗೊತ್ತಿದೆ .... ಆದರೆ ಇನ್ನೊಂದು ವಿಚಾರ ನಿಮಗೆ ಗೊತ್ತಿಲ್ಲ. ಆ ವಿಚಾರದಲ್ಲಿ ನಾನು ನಿಮಗಿಂತಲೂ ಕೀಳು. ಮುಚ್ಚುಮರೆಯಿಲ್ಲದೆ ಹೇಳುತ್ತೇನೆ ಕೇಳಿ. ಕ್ಷಮಿಸುವ ಅಥವಾ ಬಿಡುವ ಭಾರ ನಿಮ್ಮದು.

ನಾನು ಜೂನಿಯರ್ ಬಿ.ಎಸ್ ಸಿ. ನಲ್ಲಿದ್ದಾಗ ಒಬ್ಬ ಯುವತಿ ಯೊಡನೆ ಕಾಮ ಸಂಬಂಧವನ್ನು ಬೆಳೆಸಿದ್ದೆ. ಆ ಸಂಬಂಧದ ನೆನಪು ಬಂದಾಗಲೆಲ್ಲ ನಿಮ್ಮನ್ನು ನೋಡುವುದಕ್ಕೆ ಸಹ ನನಗೆ ನಾಚಿಕೆ ಆಗುತ್ತದೆ.

ನಾನು ಈ ವಿಷಯವನ್ನು ನಿಮಗೆ ತಿಳಿಸದೆ ಇದ್ದರೆ ಮೋಸ

ಗೊಳಿಸಿದಂತಾಗುತ್ತದೆ, ದ್ರೋಹ ಮಾಡಿದಂತಾಗುತ್ತದೆ........ ಈಗ ನಿಮ್ಮ ಉತ್ತರಕ್ಕಾಗೀ ಕಾತುರದಿಂದ ಎದುರು ನೋಡುತ್ತಿದೇನೆ.

— ರಾಜು."

ಎಂದು ಬರೆದು, ಸುಧಾಳನ್ನು ಕರೆಯಲು ಹೊರಗೆ ಬಂದ. ಅಷ್ಟರಲ್ಲೇ ಕೇಶವಯ್ಯಂಗಾರರು ಮೆಟ್ಟಿಲು ಹತ್ತಿಬಂದು ಕೇಳಿದರು :

"ನಿಮ್ಮ ಭಾವ ಇದಾರೇನು ?"

"ಇದಾರೆ ಬನ್ನಿ. ಕುಳಿತುಕೊಳ್ಳಿ"

ಎಂದು ಅವರಿಗೆ ಸೋಫಾ ತೋರಿಸಿ, ಚಂದ್ರಪ್ಪನನ್ನು ಕರೆದ. ಅವರಿಬ್ಬರೂ ಪರಸ್ಪರ ವಂದನೆ ಮಾಡಿ, ಕುಳಿತು ಮಾತಾಡುತ್ತಿದ್ದರು.

ಸುಧಾ ಆಗಲೇ ಸ್ನಾನಮಾಡಿ ಹೋಗಿ, ಶಾಂತಳ ಬಳಿ ತಲೆ ಬಾಚಿಸಿಕೊಳ್ಳುತ್ತಿದ್ದಳು. ರಾಜಣ್ಣ ಹೊರಗೆ ಬಂದು ಅವರಿಬ್ಬರನ್ನೂ ನೋಡಿದ. ಅವಳು ಅವನನ್ನು ನೋಡಿದ ಕೂಡಲೇ ರಾಜಣ್ಣ, ತನ್ನ ಕೈಯಲ್ಲಿದ್ದ ಪತ್ರ ತೋರಿಸಿದ. ಶಾಂತ ಅದನ್ನು ನೋಡಿ, ನಸು ನಗುತ್ತಾ, ಸುಧಾಳ ಕೂದಲನ್ನು ಜಡೆ ಹಾಕುತ್ತಿದ್ದಳು. ರಾಜಣ್ಣ ಆ ಪತ್ರವನ್ನು ಇನ್ನೊಂದು ಬಾರಿ ತೋರಿಸಿ ಕೆಳಗೆಹಾಕಿಬಿಟ್ಟ. 'ಹಾಗೆ ಮಾಡಬೇಡಿ' ಎಂದು ಶಾಂತ ಸನ್ನೆ ಮಾಡುತ್ತಿರುವಾಗಲೇ ಅದು ಕೈತಪ್ಪಿತ್ತು. ಶಾಂತ ಓಡಿಬಂದು ಅದನ್ನೆತ್ತಿಕೊಂಡಳು. ಕೆಳಗಿನ ಮನೆಯ ಕೆಲವು ಹೆಂಗಸರು ಅದನ್ನು ನೋಡಿಬಿಟ್ಟರು.

ಶಾಂತಳ ಮುಖ ಮುನಿಸು, ಕೋಪ, ಅಪಮಾನದಿಂದ ಮುದುರಿಕೊಂಡಿತು. ಅದನ್ನು ಕಂಡ ರಾಜಣ್ಣ ವ್ಯಸನದಿಂದ, ತನ್ನ ಅಚಾತುರ್ಯ, ಅವಸರಕ್ಕಾಗಿ ನಾಲಿಗೆ ಕಚ್ಚಿಕೊಂಡ. ಅಲ್ಲಿಂದ ಹಿಂದೆ ಸರಿದು ಬಳಿಯಲ್ಲೇ ಇದ್ದ ಕುರ್ಚಿಯೊಂದರ ಮೇಲೆ ಕುಳಿತ.

ಸ್ವಲ್ಪಹೊತ್ತಾದ ಮೇಲೆ ಚಂದ್ರಪ್ಪ ತನ್ನ ದುಡ್ಡಿನ ಪೆಟ್ಟಿಗೆಯನ್ನು ತೆಗೆಯುತ್ತಿರುವುದು ಕೇಳಿಬಂತು. ಐದಾರು ನಿಮಿಷಗಳಾದ ತರುವಾಯ ಕೇಶವಯ್ಯಂಗಾರರು ಹೊರಗೆ ಬಂದರು. ರಾಜುವಿನ ಓದು ಹೇಗೆ ಸಾಗಿದೆಯೆಂದು ವಿಚಾರಿಸಿ, ಮನೆಗೆ ಹೊರಟರು.

ಶಾಂತಳ ಮನೆಯ ವಿಚಾರವೆಲ್ಲವೂ ರಾಜಣ್ಣನಿಗೆ ಸ್ಪಷ್ಟವಾಗಿ ಅರ್ಥವಾಗಿತ್ತು. ಅವನಿಗೆ ಅಲ್ಲಿ ಮುಖ್ಯವಾಗಿ ಕಂಡುಬಂದುದು, ಅವರ ಬಡತನ ಮತ್ತು ದೊಡ್ಡ ಗುಣ. ಅಷ್ಟು ಒಳ್ಳೆಯ ಜನರು ಕಷ್ಟಕ್ಕೆ ಸಿಕ್ಕಿರುವುದನ್ನು ಕಂಡು ಅವನ ಮನ ಮರುಗಿತ್ತು. ಕೇಶವಯ್ಯಂಗಾರರ ಸಾತ್ವಿಕ-ದಿವ್ಯ ವ್ಯಕ್ತಿತ್ವಕ್ಕೆ ಅವನು ತಲೆಬಾಗಿದ್ದ. ಈಗ ಅವರು ಕಷ್ಟದಲ್ಲಿರುವುದನ್ನು ಕಂಡು ಅವರಿಗೆ ಸಹಾಯ ಮಾಡ ಬೇಕೆನ್ನಿಸಿತು. ಅವನ ಬಳಿ ಈಗ ಇನ್ನೂರೈವತ್ತು ರೂ. ಹಣವಿತ್ತು. ಊರಿನಿಂದ ಬೇಕಾದರೆ ಇನ್ನೂ ನೂರು ನೂರೈವತ್ತು ತರಿಸಿಕೊಳ್ಳ ಬಹುದಾಗಿತ್ತು. ಈ ಹಣವೆಲ್ಲಾ ಅವರಿಗೆ ಕೊಟ್ಟುಬಿಡೋಣ ಎಂದುಕೊಂಡ. ಆದರೆ ಅವರನ್ನು ಕಂಡು ತುಂಬಾ ಗೌರವವಿದ್ದುದ ರಿಂದ ತಾನಾಗಿ ದುಡ್ಡು ಕೊಡುವುದು ಅವನಿಗೆ ಸರಿಯೆನಿಸಲಿಲ್ಲ.

ಅರ್ಧಗಂಟೆಯ ನಂತರ ಸುಧಾ ಮನೆಗೆ ಓಡಿಬರುತ್ತಿದ್ದಳು. ಅವಳ ಓಟದ ವೇಗ ಈ ದಿನ ಹೆಚ್ಚಾಗಿ ಮುಗ್ಗರಿಸಿಬಿದ್ದಳು. ಅವಳ ಅಳುವಿನ ಶಬ್ದ ಕೇಳಿದ ಕೂಡಲೇ ರಾಜಣ್ಣ ಕೆಳಗಿಳಿದು, ಅವಳನ್ನೆತ್ತಿ ಕೊಂಡು ಬಂದ. ಹಣೆಯಲ್ಲಿ ಚಿಕ್ಕ ಗಾಯವಾಗಿ ರಕ್ತ ಬಂದಿತು. ಅದನ್ನು ತೊಳೆದು, ಕುಂಕುಮ ಹಚ್ಚಿ, ಅಳು ನಿಲ್ಲಿಸಲು ಸೇಬು ಹಣ್ಣನ್ನು ಕೊಯ್ದು ಕೊಟ್ಟು, ನಾಗಮ್ಮನ ಕೈಗೆ ಅವಳನ್ನು ಕೊಟ್ಟ. ಆಗ, ಅವಳ ಬಳಿ ಶಾಂತಳ ಪತ್ರವಿರಬಹುದು ಎಂದು ಮನಸ್ಸಿಗೆ ಹೊಳೆಯಿತು. ಚತುರತೆಯಿಂದ ಅವಳ ಉಡುಪಿನಲ್ಲಿ ಹುಡುಕಿದ. ಆದರೆ ಪತ್ರವಿರಲಿಲ್ಲ. ಅವಳು ಬಿದ್ದ ಸ್ಥಳದಲ್ಲೇನಾದರೂ ಇರಬಹು ದೇನೋ ಎಂದು ಕೆಳಗೆ ನೋಡಿದ. ಅದು ಅಲ್ಲೇ ಇತ್ತು! ಕೆಳಕ್ಕೆ ಬೀಳುವುದನ್ನೂ ಲೆಕ್ಕಿಸದೆ ಓಡಿ, ಅದನ್ನೆತ್ತಿಕೊಂಡು, ನಿಧಾನವಾಗಿ, ಸಮಾಧಾನವಾಗಿ ಮೆಟ್ಟಲು ಹತ್ತಿ ಬಂದ.

ಆದರೂ ಪತ್ರದಲ್ಲಿ ಏನಿದೆಯೋ ಎಂದು ಅವನ ಎದೆ ಬಡಿದು ಕೊಳ್ಳತೊಡಗಿತು. ಪರೀಕ್ಷೆಯ ಫಲಿತಾಂಶ ನೋಡುವ ವಿದ್ಯಾರ್ಥಿ ಯಂತೆ ಪತ್ರವನ್ನು ಕಾತುರದಿಂದ ಬಿಚ್ಚಿದ.

" ರಾಜು,

ನೀವು ಈ ದಿನ ಎಂಥ ತಪ್ಪು ಮಾಡಿದಿರಿ.........ಆ ರೀತಿ ಕಾಗದವನ್ನು ಬಿಸಾಕಬಾರದಿತ್ತು. ಕೆಳಗಿನ ಮನೆಯ ಹೆಂಗಸು ನೋಡಿಬಿಟ್ಟಳು. ಆ ರಂಗಪ್ಪನ ಹೆಂಡತಿ, ಹೆಣ್ಣು ಮಕ್ಕಳಿಗೆಲ್ಲ ನಮ್ಮಿಬ್ಬರ ಮೇಲೂ ಮೊದಲಿನಿಂದ ಅನುಮಾನ. ದಿನವೂ ನನ್ನ ತಂಗಿಗೆ ಉಬ್ಬಿಸಿ ನಮ್ಮ ವಿಚಾರ ಕೇಳುತ್ತಿದ್ದರಂತೆ. ಆದರೆ ನನ್ನ ತಂಗಿ ಕಿಲಾಡಿ. ಅವರ ವಿಷಯಗಳನ್ನೆಲ್ಲಾ ತಿಳಿದುಕೊಂಡು ನಮ್ಮ ದನ್ನು ಹೇಳದೇ ಬಂದುಬಿಡುತ್ತಿದ್ದಳು. ಈ ದಿನ ನಾವೇ ಸಿಕ್ಕಿಹಾಕಿ ಕೊಂಡಿದ್ದೇವೆ. ಇರಲಿ, ಸರವಾಗಿಲ್ಲ. ಇನ್ನು ಮೇಲೆ ಖಂಡಿತ ಹಾಗೆ ಮಾಡಬೇಡಿ.

ನಿಮ್ಮ ಪತ್ರ ನನ್ನನ್ನು ಚಕಿತಗೊಳಿಸಿದೆ. ದುಃಖಗೊಳಿಸಿದೆ. ಮನಸ್ಸೇಕೋ ಕಗ್ಗತ್ತಲೆಯಾಗಿದೆ.

ನನಗೆ ದಯವಿಟ್ಟು ಒಂದು ದಿನ ಅವಕಾಶ ಕೊಡಿ. ನಿಮ್ಮ ಈ ಔದಾರ್ಯ, ಬಿಚ್ಚು ಮನಸ್ಸು, ನಿಷ್ಕಪಟ ವರ್ತನೆಯನ್ನು ನಾನು ತುಂಬಾ ಮೆಚ್ಚುತ್ತೇನೆ. ನಾನು ಪುನರಾಲೋಚನೆ ಮಾಡುವ ಅವಕಾಶ ಕೊಟ್ಟಿದ್ದಕ್ಕಾಗಿ ತುಂಬಾ ಧನ್ಯವಾದಗಳು .... ಆದರೆ.... ನನ್ನ ಸಮರ್ಪಣೆ, ಹಿಂದಕ್ಕೆ ತೆಗೆದುಕೊಂಡಿಲ್ಲ ... ನಿಮ್ಮ ಅಪೇಕ್ಷೆ ಯಂತೆಯೇ ಕೆಲವು ಕಾಲ ಚೆನ್ನಾಗಿ ಆಲೋಚಿಸುತ್ತೇನೆ.... ಸಂಜೆ ಇನ್ನೊಂದು ಪತ್ರದಲ್ಲಿ ಎಲ್ಲವನ್ನೂ ತಿಳಿಸುತ್ತೇನೆ

ನೀವು ಸುಮ್ಮನೆ ಒಬ್ಬ ಯುವತಿಯೊಡನೆ ಕಾಮ ಸಂಬಂಧ ಮಾಡಿರುವೆ ಎಂದು ತಿಳಿಸಿರುವಿರಿ. ಆ ಯುವತಿ ಯಾರು ? ಎಲ್ಲಿ ದ್ದಾಳೆ ? ಏನು ಮಾಡುತ್ತಿದಾಳೆ ? ನಿಮಗೂ ಅವಳಿಗೂ ಹೇಗೆ ಸಂಬಂಧ ಬೆಳೆಯಿತು. ಎಲ್ಲವನ್ನೂ ಕೂಲಂಕಷವಾಗಿ ತಿಳಿಸಿ. ಅವಳ ಸ್ವಭಾವ, ಅಭಿರುಚಿ, ಗುಣವನ್ನೂ ತಿಳಿಸಿ. ನಿಮ್ಮ ಸಂಬಂಧ ಹೇಗಿತ್ತು ಎಂಬುದನ್ನೂ ತಿಳಿಸಿ. ಆಗ ನಾನು ಅದು ಶುದ್ಧವೋ— ಅಶುದ್ಧವೋ ಎಂಬುದನ್ನು ಅರ್ಥಮಾಡಿಕೊಳ್ಳಬಹುದು. ಬೇಗ

ತಿಳಿಸಿ. ತುಂಬಾ ಕಾತುರಳಾಗಿದ್ದೇನೆ— ಗಾಬರಿಯಾಗಬೇಡಿ!

ನಿಮ್ಮ ಪ್ರೇಮದ ಗೆಳತಿ,
ಶಾಂತ."

ಆ ಪತ್ರವನ್ನೋದಿ ರಾಜಣ್ಣನ ಮನ ಬಹಳ ಗೊಂದಲಕ್ಕೆ ಬಿದ್ದಿತು. ಅವನಿಗೆ ತನ್ನ ಗತಜೀವನದ ಒಂದು ಕಹಿ ಅಧ್ಯಾಯವನ್ನು ಪ್ರಯತ್ನಪೂರ್ವಕವಾಗಿ ಮತ್ತೊಮ್ಮೆ ನೆನೆದು, ಅದರ ಕೊಳಕು ವಿವರಗಳನ್ನೆಲ್ಲಾ ತನ್ನ ಪ್ರೇಮಿಗೆ ತಿಳಿಸುವುದು ಬಹು ದುಸ್ಸಹವಾಗಿ ತೋರಿತು....ಅದನ್ನರಿತ ಶಾಂತ ತನ್ನನ್ನು ಹೀನವಾಗಿ ಪರಿಗಣಿಸಿ ದೂರ ಸರಿಯುವಳೆಂಬ ಶಂಕೆ ಅಷ್ಟಿಲ್ಲದಿದ್ದರೂ ಆ ಕಾರ್ಯದಿಂದ ಅವನ ಮನಕ್ಕೆ ಬಹು ವೇದನೆಯಾಗುತ್ತಿತ್ತು.

ಏನೇ ಆಗಲಿ....ಇರುವ ಸಂಗತಿಯೆಲ್ಲವನ್ನೂ ಶಾಂತಳಿಗೆ ತಿಳಿಸೇ ಬಿಡಬೇಕು....ಎದೆ ಹಗುರ ಮಾಡಿಕೊಳ್ಳಬೇಕು .... ಎಂದು ಗಟ್ಟಿ ಮನಸ್ಸು ಮಾಡಿದ. ಅವಳಿಗೆ ಒಂದು ಸುದೀರ್ಘ ಪತ್ರ ಬರೆಯ ತೊಡಗಿದ ... ಅದರಲ್ಲಿ ಅವನ ಗತಜೀವನದ ಒಂದು ಮಹತ್ತರ ಅಧ್ಯಾಯವೇ ಅಡಕವಾಗಿತ್ತು.

" ಶಾಂತ,

ಈಗ ನಾನು ಬರೆಯಹೊರಟಿರುವ ವಿಚಾರಗಳೆಲ್ಲವನ್ನೂ ಅರಿತು ನಿಮ್ಮ ಕುತೂಹಲ ತೃಪ್ತಿಯಾದರೂ, ನಿಮ್ಮ ತಿಳಿಮನಕ್ಕೆ ದೊಡ್ಡ ಆಘಾತವಾಗಬಹುದು. ಅದರಿಂದ ನೀವು ಚೇತರಿಸಿಕೊಂಡು, ಮತ್ತೊಮ್ಮೆ ನಮ್ಮ ಸುಂದರ–ಸ್ನೇಹ ಮುಂದುವರಿಸುವಿರೋ–ಇಲ್ಲವೋ ಎಂಬ ಶಂಕೆ ಮನವನ್ನು ಒಮ್ಮೊಮ್ಮೆ ಕಾಡುತ್ತಿದೆ. ತುಂಬಾ ಕಳವಳವಾಗುತ್ತಿದೆ.

ಆದರೆ ನನ್ನ ಜೀವನದ ಹಾಸುಹೊಕ್ಕಾಗಿ ನಡೆದು ಹೋಗಿರುವ ಒಂದು ಅಂಶವನ್ನಾದರೂ ಎಂಥ ಮಹತ್ಕಾರಣಕ್ಕಾಗಲೀ ನಿಮ್ಮಿಂದ ಮುಚ್ಚಿಡಲಾರೆ.

ಇಂಥ ಸಂಗತಿಗಳೆಲ್ಲವನ್ನೂ ವಿವಾಹಿತ ದಂಪತಿಗಳೂ ಒಬ್ಬರು ಮತ್ತೊಬ್ಬರಿಗೆ ಹೇಳುವುದಿಲ್ಲವೇನೋ .... ಎಲ್ಲವನ್ನೂ ಗೌಪ್ಯವಾಗಿ, ಕಳ್ಳತನದಲ್ಲಿ, ತಮ್ಮ ಎದೆಯಲ್ಲೇ ಹುದುಗಿಸಿಕ್ಕೊಂಡಿರುತ್ತಾರೇನೋ. ಆದರೂ ಸರಿ, ಇರುವ ವಿಷಯ ನಿಮಗೆ ತಿಳಿಯಬೇಕು.

ಏಕೆಂದರೆ ನನ್ನ ಕಲ್ಪನೆಯ ಪ್ರಕಾರ, ವಿವಾಹವಾಗಬೆಳೆಸುವ ಪ್ರೇಮಿಗಳಿಬ್ಬರು, ಆ ಪವಿತ್ರ ಸಂಗಮಕ್ಕೆ ಮೊದಲು ಪರಸ್ಪರವಾಗಿ ಮತ್ತೊಬ್ಬರ ಬಾಳಿನ ಸುಂದರ, ವಿಕಾರ ಅಂಶಗಳೆಲ್ಲವನ್ನೂ ತಿಳಿದಿರ ಬೇಕು. ಕೇವಲ ಸುಂದರ ಅಂಶಗಳನ್ನು ಮಾತ್ರ ಮೊದಲು ತಿಳಿದು, ನಂತರ ವಿಕಾರ ಅಂಶಗಳು ತಾವೇ ತಾವಾಗಿ ಪ್ರಕಟವಾದಾಗ ಬದುಕು ವಿರಸಕೂಪವಾಗಿ ಬಿಡುಗಡೆಯ ದಾರಿ ಕಾಣದೆ ಪರಿತಪಿಸುವುದು ಬೇಡ ಎಂದು ನಂಬಿರುವ ಕೆಲವರಲ್ಲಿ ನಾನೂ ಒಬ್ಬ.

ಆದ್ದರಿಂದ ನಮ್ಮ ಭವಿಷ್ಯಜೀವನದ ಬುನಾದಿಯನ್ನು ಭದ್ರ ಪಡಿಸಿಕೊಳ್ಳಬೇಕೆಂದಿರುವೆ. ಪರಸ್ಪರರಲ್ಲೂ ಇರುವ ಒಳಿತು ಕೆಡಕು ಗಳನ್ನು ಸಂಪೂರ್ಣವಾಗಿ ಬಯಲಿಗಿಡಬೇಕೆಂದಿರುವೆ.

ಆ ಸಂಗತಿ ನಡೆದುದು ಈ ರೀತಿ :

ಈಗ್ಗೆ ಸರಿಯಾಗಿ ನಾಲ್ಕು ವರ್ಷ ಆರು ತಿಂಗಳ ಹಿಂದೆ ನಾನು ಅದುವರೆಗೂ ಇದ್ದ ಹಾಸ್ಟೆಲನ್ನು ಬಿಟ್ಟು, ಒಂದು ಪ್ರತ್ಯೇಕ ರೂಮು ಮಾಡಿಕೊಂಡೆ. ಹೀಗೆ ನನ್ನ ಸ್ಥಳಾಂತರವಾಗಲು ನನಗೆ ಹಾಸ್ಟೆಲಿನ ಜೀವನ ಸರಿಬರದಿದ್ದುದೇ ಕಾರಣ. ಅದು ಸಾಮಾನ್ಯವಾಗಿ ಶ್ರೀಮಂತ ವಿದ್ಯಾರ್ಥಿಗಳೇ ಇದ್ದ ಹಾಸ್ಟೆಲ್. ಅಲ್ಲಿ ನನ್ನ ಕ್ಲಾಸಿನವರೂ ಅನೇಕರು ಇದ್ದರು. ಆ ಗುಂಪೇ ಕಾಲೇಜಿನಲ್ಲೂ ಒಂದು ಗುಂಪಾಗಿತ್ತು. ನಮ್ಮ ಕ್ಲಾಸಿನ ಪಾಠದಲ್ಲಿ ಆ ಗುಂಪಿಗೆ ಸ್ವಲ್ಪವೂ ರುಚಿಯಿರುತ್ತಿರಲಿಲ್ಲ. ಆಗ ಪ್ರಾಕ್ಸಿ ಅಟೆಂಡೆನ್ಸಿಗೆ ಏರ್ಪಾಟುಮಾಡಿ ಕ್ಲಾಸಿಗೆ ಚಕ್ಕರ್ ಹಾಕು ತ್ತಿದ್ದೆವು. ರೂಮಿಗೆ ಹೋಗಿ ಇಸ್ಪೀಟು ಆಡುವುದು, ಇಲ್ಲವೆ ಹೊಟೇಲು, ಸಿನಿಮಾ, ಹರಟೆ, ಬಣ್ಣದ ಸೆರಗಿನ ಬೇಟೆಯಲ್ಲಿ ಕಾಲ ಕಳೆದುಬಿಡು ತ್ತಿದ್ದೆವು. ರಾತ್ರಿಯಾದರೂ ಓದುವ ವಾತಾವರಣ, ಮನೋಭಾವ ಉಂಟಾಗುತ್ತಿರಲಿಲ್ಲ. ಈ ರೀತಿಯೇ ಮುಂದುವರೆದರೆ ವಿದ್ಯಾರ್ಜನೆ

ಮಾಡಲಾಗುವುದಿಲ್ಲವೆಂದು ನನಗೆ ಕೊನೆಗೆ ಅರಿವಾಯಿತು. ಆಗ ಆ ಸಹವಾಸ ಬಿಡಲು ನಿರ್ಧರಿಸಿದೆ.

ಅಲ್ಲದೆ, ನನ್ನ ರೂಮ್ ಮೇಟನೊಡನೆ ಒಂದು ಮನಸ್ತಾಪವೂ ಹತ್ತಿಕೊಂಡಿತು. ಅವನು ಲೈಂಗಿಕ ವಿಚಾರಗಳಲ್ಲಿ ತುಂಬಾ ಪಳಗಿದವನು. ಬೇಕೆನಿಸಿದಾಗೆಲ್ಲಾ ಎಲ್ಲಿಂದಲೋ ಒಬ್ಬ ಕಾಲೇಜು ಹುಡುಗಿಯನ್ನು ಹೇಗೋ ಪಿಕ್ ಮಾಡಿಕೊಂಡು ಯಾವುದಾದರೂ ಆಂಗ್ಲ ಹೊಟೇಲಿಗೆ ಕರೆದೊಯ್ಯುತ್ತಿದ್ದ. ಅಲ್ಲಿಂದ ಬಂದನಂತರ, ಅದನ್ನೆಲ್ಲಾ ನನ್ನ ಮುಂದೆ ವರ್ಣಿಸಿ ಮನಸ್ಸು ಕೆಡಿಸುತ್ತಿದ್ದ.

ಆಗ ನನಗಿನ್ನೂ ಹತ್ತೊಂಬತ್ತು ವರ್ಷ ವಯಸ್ಸು. ಲೈಂಗಿಕ ವಿಚಾರಗಳಲ್ಲಿ ತುಂಬಾ ಕುತೂಹಲವಿತ್ತು. ಆದರೆ ಏನೇನೂ ತಿಳಿದಿರಲಿಲ್ಲ........ಈಗ ಅವನು ಹೇಳುತ್ತಿದ್ದುದನ್ನೆಲ್ಲಾ ಮೊದಲು ಮೊದಲು ನಾನೂ ಕುತೂಹಲದಿಂದ ಕೇಳುತ್ತಿದ್ದೆ ....ನಂತರ ಹಾಗೇ ಮಾಡುತ್ತಿರುವುದನ್ನು ಕಂಡು ನನಗೆ ಹೇಸಿಗೆಯಾಯಿತು. ಅವನು ಅಂಥ ಸಂಗತಿಗಳನ್ನು ಹೇಳಲು ಹೊರಟಾಗಲೆಲ್ಲಾ ಮುಖ ಮುರಿದುಬಿಡುತ್ತಿದ್ದೆ. ಅದನ್ನು ಅವನು ಸಭ್ಯ ರೀತಿಯಲ್ಲಿ ಸ್ವೀಕರಿಸುತ್ತಿರಲಿಲ್ಲ. ನನ್ನನ್ನು 'ರಾಜು....ದಿ....ಇನ್ನೋ ಸೆಂಟ್!... ದಿ ಆಬ್ಸೆಂಟ್!' ಎಂದು ರೇಗಿಸುತ್ತಿದ್ದ. ತನ್ನ ಗೆಳೆಯರನ್ನೆಲ್ಲಾ ರೂಮಿಗೆ ಕರೆತಂದು ಇಸ್ಪೀಟು, ಗಲಾಟೆಗಳಲ್ಲಿ ತೊಡಗಿ ಪ್ರತೀಕಾರ ಮಾಡುತ್ತಿದ್ದ. ನನಗೆ ಅವರೊಡನೆ ಒಡನಾಡಿ ಮನಸ್ಸಿಗೆ ರೋಸಿಹೋಗಿತ್ತು. ಅವರದು ಎಂಥಾ ಪಶು ಜೀವನ ! ಎಂದು ನೊಂದುಕೊಳ್ಳುತ್ತಿದ್ದೆ. ಗ್ಯಾಬರ್ಡೀನ್ ಉಡುಪು, ಪೆರೇಡ್ ಕೆಫೆಯ ಕಾಫಿ, ಕಬ್ಬನ್‌ಪಾರ್ಕಿನ ಓಡಾಟದಿಂದಲೇ....ಅವರು ನಾಗರೀಕರಂತೆ ನನಗೆ ತೋರುತ್ತಿರಲಿಲ್ಲ. ನಿಜವಾಗಿಯೂ ವಿಕಾರ ದನಗಳಂತೆ ಕಾಣುತ್ತಿದ್ದರು. ಹಳ್ಳಿಯಲ್ಲಿದ್ದ ರಾಜಶೇಖರನೆಂಬ ಒಬ್ಬ ಆದರ್ಶವಾದೀ ಗೆಳೆಯನ ಉದಾಹರಣೆ ನನ್ನ ಕಣ್ಣುಮುಂದೆ ಇಲ್ಲದೆ ಇದ್ದಿದ್ದರೆ ನನಗೂ ಆ ಬಣ್ಣದ ಬರಡು ಜೀವನ ಒಪ್ಪಿಗೆಯಾಗಬಹುದಿತ್ತೇನೋ !

ಆದರೆ ನಾನು ಅದಕ್ಕಿಂತಲೂ ಉತ್ತಮ ರೀತಿಯಲ್ಲಿ ಕಾಲ

ಕಳೆಯುವುದನ್ನು ಅರಿತಿದ್ದೆ. ಅವನ ದುರ್ವರ್ತನೆಗೆ ಪ್ರತಿಯಾಗಿ ಧೂರ್ತತನದಿಂದ ವರ್ತಿಸಲು ನನಗೂ ಬರುತ್ತಿತ್ತು. ಆದರೆ ಹಾಗೆ ಮಾಡಿ ಎಷ್ಟೇ ಕೆಟ್ಟದಾದ ಗೆಳೆತನವಾಗಲೀ ಅದನ್ನು ಪೂರ್ಣವಾಗಿ ಹಾಳು ಮಾಡಿ, ಹಗೆತನ ಕಟ್ಟಿಕೊಳ್ಳಲು ನನಗೆ ಮನಸ್ಸಿರಲಿಲ್ಲ. ಅಂಥ ವಾತಾವರಣ ಬಿಟ್ಟು ದೂರವಾಗುವುದೇ ಉತ್ತಮ ಎಂದು ದೃಢ ಮನಸ್ಸು ಮಾಡಿದೆ.

ಒಳ್ಳೆಯ ರೂಮು ಒಂದನ್ನು ಹುಡುಕುತ್ತಿರುವಾಗ ಹಿಂದೆ ಬ್ರಿಟಿಷ್ ಅಧಿಕಾರಿಗಳಿದ್ದು, ಈಗ ನಗರದ ಶ್ರೀಮಂತ ಸೊಗಸುಗಾರರೇ ಅಧಿಕವಾಗಿ ವಾಸಿಸುವ ಪ್ರದೇಶದಲ್ಲಿ ಒಂದು ಅಂದವಾದ ರೂಮು ಸಿಕ್ಕಿತು.

ಈಗ ನಾವಿರುವಂಥ ಒಂದು ಮನೆ. ಆದರೆ ಮುಂದಿನ ಉದ್ಯಾನ ಇಲ್ಲಿಗೂ ದೊಡ್ಡದು. ಕೆಳಗೆ ಮಾತ್ರ ಒಬ್ಬ ಶ್ರೀಮಂತ ಸಿಂಧಿಗಳ ಸಂಸಾರ. ಮೇಲಿನ ಮನೆ ಸಂಪೂರ್ಣವಾಗಿ ಖಾಲಿ. ಅದರ ಮುಂದೆ ಅಟಾಚ್ಡ್ ಬಾತ್‌ರೂಮ್ ಇದ್ದ ಒಂದು ವಿಶಾಲ ಕೊಠಡಿ ನನಗೆ ದೊರೆಯಿತು. ಅದೊಂದಕ್ಕೆ ಮೂವತ್ತು ರೂ. ಬಾಡಿಗೆ ಕೊಡಲು ನಾನು ಹಿಂಜರಿಯಲಿಲ್ಲ. ಏಕೆಂದರೆ ನಾನು ಅಲ್ಲಿರಬೇಕಾದುದು ಎರಡೇ ತಿಂಗಳು. ಮತ್ತು ಅಷ್ಟು ಸೊಗಸಾಗಿತ್ತು ಆ ಸನ್ನಿವೇಶ. ಅಲ್ಲದೆ, ರೂಮಿನಿಂದ ಹೊರಬಂದ ಕೂಡಲೇ ಮಹಡಿಯ ಮುಂಭಾಗದಲ್ಲಿ ಹಿಡಿ-ತಡೆಯಿಲ್ಲದೆ ಅಡ್ಡಾಡಬಹುದಾಗಿತ್ತು. ಬೆಳದಿಂಗಳ ರಾತ್ರಿಯಲ್ಲಿ ಮುಂದಿನ ಉದ್ಯಾನದ ಕಡೆಯಿಂದ ಬರುವ ರಾತ್ರಿರಾಣಿ ಪುಷ್ಪಗಳ ಸೌರಭವನ್ನು ಸವಿಯುತ್ತಾ ಅಲ್ಲಿ ನಿಂತು ತಂಗಾಳಿಗೆ ಮೈ ಒಡ್ಡಿದರೆ ಸ್ವರ್ಗವೇ ಭುವಿಗಿಳಿದಂತಾಗುತ್ತಿತ್ತು.

ಅಲ್ಲದೆ ಆ ಸನ್ನಿವೇಶ ಅಷ್ಟು ಮನೋಹರವಾಗಿ ಕಾಣಲು ಎದುರು ಮನೆಯ ಒಬ್ಬ ಸುಂದರಿಯೂ ಕಾರಣ.

ಆ ಮನೆಯಲ್ಲೂ ಹೆಚ್ಚಿಗೆ ಜನರು ವಾಸವಾಗಿರಲಿಲ್ಲ. ಆ ಸುಂದರ ತರುಣಿ, ಅಡಿಗೆಯವಳು, ಒಬ್ಬ ಮುದಿ ಜವಾನ, ಇಷ್ಟೇ ಮಂದಿ. ಒಂದು ಕಾರು ಯಾವಾಗಲೂ ಮನೆಯ ಮುಂದೆ ನಿಂತಿರು

ತ್ತಿತ್ತು- ಒಂದು ನಾಯಿ ಉದ್ಯಾನದಲ್ಲೆಲ್ಲಾ ಅಡ್ಡಾಡುತ್ತಾ ಇರುತ್ತಿತ್ತು.

ಬೆಳಗಾದ ಕೂಡಲೇ ನಾನು ವ್ಯಾಯಾಮ ಮಾಡಿ, ಹೊಟೇಲಿಗೆ ಹೋಗಿ ಸ್ನಾನ, ತಿಂಡಿ-ಕಾಫಿ ಮುಗಿಸಿ ಬಂದು ಓದಲು ಕುಳಿತು ಕೊಳ್ಳುತ್ತಿದ್ದೆ. ಮೇಜಿನ ಮೇಲಿಂದ ತಲೆಯೆತ್ತಿದರೆ ಸಾಕು, ಕಿಟಕಿ ಯಿಂದ ಹೊರಗೆ ಆ ಸುಂದರಿಯ ಮನೆ ಕಾಣುತ್ತಿತ್ತು. ಅವಳು ಆಗತಾನೇ ಸ್ನಾನಮಾಡಿ, ಸರಳವಾಗಿ ಸೀರೆಯುಟ್ಟು, ಸಡಿಲವಾಗಿ ಜಡೆ ಹೆಣೆದು ಹೊರಗೆ ಉದ್ಯಾನದಲ್ಲಿ ನಿಂತಿರುತ್ತಿದ್ದಳು. ಸೆರಗನ್ನು ಸೊಂಟಕ್ಕೆ ಕಟ್ಟಿ, ಒಬ್ಬ ರಾಣಿಯಂತೆ ನಿಂತು, ಆಳು ಮತ್ತು ಅವನ ಮಕ್ಕಳಿಗೆ ಆಜ್ಞೆಗಳನ್ನು ಕೊಡುತ್ತಿದ್ದಳು. ಅವಳು ತೋರಿಸಿದ ಗಿಡಗಳಿಗೆಲ್ಲ ಅವರು ನೀರು, ಗೊಬ್ಬರ ಹಾಕಿ, ಅಗೆಯುವುದು, ಪಾತಿ ಕಟ್ಟುವುದು ಮುಂತಾದ ಕೆಲಸಗಳನ್ನು ಮಾಡುತ್ತಿದ್ದರು.

ಅವಳು ದರ್ಪದಿಂದ ಕೈ-ತೋರಿಸಿ ಆಜ್ಞೆ ಮಾಡುವುದು, ಸಡಿಲ ವಾದ ಸೆರಗನ್ನು ಕೆಲಸ ಮಾಡುವವಳಿಗಿಂತಲೂ ಹೆಚ್ಚಾಗಿ ಪುನಃ-ಪುನಃ ಸೊಂಟಕ್ಕೆ ಸಿಕ್ಕಿಸಿಕೊಳ್ಳುವುದು, ಅಲೆ-ಅಲೆಯಾಗಿ ಇಳಿದ ಒತ್ತಾದ ಕರಿಯ ಕೂದಲನ್ನು ಠೀವಿಯಿಂದ ಎಡ-ಬಲಕ್ಕೆ ಎಸೆದು ನಿರ್ಧರದ ಅಡಿಗಳಿಂದ ನಡೆಯುವುದು ಇವೆಲ್ಲವನ್ನೂ ನೋಡುವುದ ರಲ್ಲೇ ಪ್ರಾತಃಕಾಲ ಕಳೆದುಹೋಗುತ್ತಿತ್ತು.

ಓದಬೇಕೆಂದು ಕುಳಿತವನು ಹೊರಗೆ, ಮಹಡಿಯ ಮುಂಭಾ ಗಕ್ಕೆ ಬಂದು ನಿಂತುಬಿಡುತ್ತಿದ್ದೆ. ಅವಳನ್ನೇ ನೋಡುತ್ತಿದ್ದೆ.

ಪ್ರತಿ ದಿನವೂ ಅವಳ ಮುದಿ ಸೇವಕ ಅವಳ ಮುದ್ದಿನ ಬಿಳಿ ನಾಯೊಂದನ್ನು ಜೊತೆಗೆ ಕರೆದುಕೊಂಡು ಹೊರಬರುತ್ತಿದ್ದ. ಅದೇನೋ, ನಾನೊಂದು ಬಾರಿ ಚಿಟಿಕೆ ಹಾಕಿದೊಡನೆಯೇ ಅದು ನನ್ನೆಡೆಗೆ ಹಾರಿ ಓಡಿಬರುತ್ತಿತ್ತು ! ಬಹುಶಃ ನಾನು ಮೊದಲ ದಿನವೇ ತಿನ್ನಿಸಿದ್ದ ಕೇಕ್ ರುಚಿಯಿಂದ ಇರಬೇಕು. ಆ ನಾಯಿ ಬಂದೊಡ ನೆಯೇ ಆ ಮುದಿ ಸೇವಕನೂ ಅದರ ಹಿಂದೆಯೇ ಬರುತ್ತಿದ್ದ.

ಅವನು ಸಿಗರೇಟಿಗೆ ಕಾಸು ಕೇಳಿದರೆ ಕೊಡುತ್ತಿದ್ದೆ. ಅಷ್ಟು

ರಿಂದಲೇ ಅವನು ಸಂತೃಪ್ತನಾಗಿಬಿಡುತ್ತಿದ್ದ.

ನಂತರ ಅವನು ಮತ್ತು ಆ ನಾಯಿ ನನ್ನ ರೂಮಿಗೆ ಖಾಯಂ ಭೇಟಿಗಾರರಾದರು. ಪ್ರತಿದಿನ ಬೆಳಗಾದೊಡನೆಯೇ ನಾಯಿ ನನ್ನ ಬಳಿಗೆ ಬಂದುಬಿಡುತ್ತಿತ್ತು. ನಾನೊಂದು ರಬ್ಬರ್ ಚೆಂಡನ್ನು ತಂದು ಅದನ್ನು ಕೆಳಗಿನ ಉದ್ಯಾನಕ್ಕೆ ಎಸೆಯುತ್ತಿದ್ದೆ. ಅದು ಗಬಗಬನೆ ಕೆಳಗೋಡಿ, ಆ ಚೆಂಡನ್ನು ಒಂದು ಕ್ಷಣದಲ್ಲಿ ಕಚ್ಚಿಕೊಂಡು ನನ್ನೆಡೆಗೆ ಹಿಂತಿರುಗಿ ಬರುತ್ತಿತ್ತು. ಹೀಗೇ ಹತ್ತಿಪ್ಪತ್ತು ಬಾರಿ ಓಡಾಡಿದ ಕೂಡಲೇ ಅದರ ಮೈ ಬೆವರಿ, ಕೂದಲುಗಳೆಲ್ಲಿ ಮಿರುಗುವ ಹೊಂಬಣ್ಣ ಪಡೆಯುತ್ತಿದ್ದುವು. ಆಗ ನಾನು ಅದಕ್ಕೆ ಬಿಸ್ಕತ್‌ಗಳನ್ನು ಕೊಡುತ್ತಿದ್ದೆ.

ಮುದುಕನಿಗೂ ಸಹ, ನಾಲ್ಕೆಂಟು ಆಣೆಗಳನ್ನು ಕೇಳಿದಾಗ ಲೆಲ್ಲಾ ಕೊಡುತ್ತಿದ್ದೆ. ಅವನೂ ಸಹ ನನಗೆ ಬೇಕೆಂದಾಗ ಹೊಟೇಲಿಗೆ ಹೋಗಿ ಥರ್ಮಾಸ್‌ನಲ್ಲಿ ಕಾಫಿ ತರುತ್ತಿದ್ದ. ದಿನಪತ್ರಿಕೆ, ಬ್ಲೇಡ್, ಅಗಸರ ಬಟ್ಟೆ, ಎಲ್ಲವನ್ನೂ ತಂದುಕೊಡುತ್ತಿದ್ದ. ದಿನವೂ ರೂಮಿನ ಕಸ ಗುಡಿಸಿಕೊಡುತ್ತಿದ್ದ ಕೊನೆಗವನು ನನಗೂ ಒಬ್ಬ ಸೇವಕನೇ ಆಗಿಬಿಟ್ಟ.

ಆ ಸುಂದರಿ ಯಾವಾಗಲೂ ಮಹಡಿಯ ಮುಂಭಾಗದಲ್ಲೇ ನಿಂತಿರುತ್ತಿದ್ದಳು. ಇಲ್ಲವೇ ಒಂದು ಬೆತ್ತದ ಕುರ್ಚಿಯಲ್ಲಿ ಕುಳಿತಿರುತ್ತಿದ್ದಳು. ಆದರೂ ನನ್ನ ಕಡೆಗೊಂದು ಬಾರಿಯೂ ನೋಡುತ್ತಿರಲಿಲ್ಲ. ಏನನ್ನೋ ಚಿಂತಿಸುವವಳಂತೆ ತಲೆ ಬಾಗಿಸಿ, ಕೈ ಮೇಲೆ ಗಲ್ಲ ಕಪೋಲವನ್ನೂರಿ, ಮಹಡಿಯ ಕಟಕಟೆಗೆ ಒರಗಿ ನಿಂತುಬಿಡುತ್ತಿದ್ದಳು. ಅವಳ ಒತ್ತಾದ ಕರಿಯ ಜಡೆ ಎದೆಯ ಮೇಲೆ ಬಿದ್ದಿರುತ್ತಿತ್ತು. ಅವಳು ಉಡುತ್ತಿದ್ದ ತೆಳುವಾದ ಜಾರ್ಜೆಟ್ ಸೀರೆಯ ಸೆರಗು ಗಾಳಿಗೆ ಹಾರಾಡುತ್ತಿತ್ತು.

ಅದನ್ನು ನೋಡಿ ನೋಡಿ ನಾನು ಪಾಠ, ಕಾಲೇಜ್ ಎಲ್ಲವನ್ನೂ ಮರೆತು ಬಿಡುತ್ತಿದ್ದೆ

ಸ್ವಲ್ಪ ದಿನಗಳ ತರುವಾಯ ಅವಳೂ ನನ್ನೆಡೆಗೆ ಗುಪ್ತವಾಗಿ ನೋಡುತ್ತಿರುವುದು ನನ್ನ ಗಮನಕ್ಕೆ ಬಂತು. ಆಗ ನನ್ನ

ಆಲೋಚನೆಗಳ ಓಟ ಮತ್ತೊಂದು ದಿಕ್ಕು ಹಿಡಿಯಿತು.

ಅನಂತರ ಅವಳು ತನ್ನ ಮಂಚವನ್ನು ಅಗಲವಾಗಿದ್ದ ಕಿಟಕಿಯ ಬಳಿಗೆ ಬದಲಾಯಿಸಿಕೊಂಡಳು. ಕಿಟಕಿಯ ಬಾಗಿಲುಗಳೆಲ್ಲವನ್ನೂ ತೆರೆದು, ಅದರಲ್ಲಿ ಉರುಳಿ ಯಾವುದಾದರೂ ಪುಸ್ತಕಗಳನ್ನೋದು ತ್ತಿದ್ದಳು.

ಈಗ ನನಗೆ ಅವಳ ದಿನಚರಿಯೆಲ್ಲಾ ಆ ಕಿಟಕಿಯ ಮೂಲಕ ಗೋಚರಿಸುತ್ತಿತ್ತು. ಆ ಉದ್ದೇಶದಿಂದಲೇ ಅವಳು ಈ ಹೊಸ ಏರ್ಪಾಟನ್ನು ಮಾಡಿರುವಳೇ ಎಂಬ ಸಂಶಯ ಉದಿಸಿತು.

ಕಡೆಗೆ ಅವಳು ಸ್ನಾನ ಮಾಡಿ ಬಂದು, ಲಂಗ ಬಾಡಿಯಲ್ಲಿ ನಿಂತು ಉಡುಪು ಧರಿಸುವುದೂ ನನಗೆ ಗೋಚರಿಸುವಂತೆ ಅವಳ ದಿನಚರಿ ನಡೆಯ ತೊಡಗಿತು. ಆಗ ಅವಳ ಪರಿಪೂರ್ಣ ದೇಹ ಸೌಂದರ್ಯವನ್ನು ನೋಡಿ ಉದ್ರೇಕದಿಂದ ಬೆವರಿಡುತ್ತಿದ್ದೆ.

ಹೀಗೆ ದಿನಗಳೆದಂತೆಲ್ಲಾ ಅವಳ ದೇಹದೊಡನೆ ದೇಹ ಬೆರೆಸಿ ರಮಿಸುವ ಆಸೆ ಉತ್ಕಟವಾಯಿತು.

ಹಾಗಾಗುವುದಕ್ಕೆ ನಾನು ಆವರೆಗೂ ಹೆಣ್ಣಿನ ದೇಹದ ಸವಿ ಯನ್ನಾಗಲೀ, ಪ್ರೇಮದ ಸವಿಯನ್ನಾಗಲೀ ಅನುಭವಿಸದ ಮುಗ್ಧ ನಾಗಿದ್ದುದೇ ಕಾರಣ.

ದಿನೇದಿನೇ ಆ ಆಸೆ ಬೆಂಕಿಯಂತೆ ನನ್ನ ದೇಹ ಮನಸ್ಸುಗಳನ್ನು ದಹಿಸುತ್ತಿತ್ತು. ಅಷ್ಟರಲ್ಲಿ ಪರೀಕ್ಷೆಯೂ ಸಮೀಪಿಸುತ್ತಿತ್ತು. ಮನ ಸ್ಸನ್ನು ಹತೋಟಿಯಲ್ಲಿಟ್ಟು ವ್ಯಾಸಂಗ ಮಾಡಲು ಸಾಧ್ಯವಾಗುತ್ತಲೇ ಇರಲಿಲ್ಲ. ಹೊರಗೆ ಬಂದು ನಿಲ್ಲುವುದನ್ನು ಅಧಿಕಗೊಳಿಸಿದೆ.... ರಬ್ಬರ್ ಚೆಂಡನ್ನು ಈಗ ಅವಳ ಉದ್ಯಾನಕ್ಕೇ ಎಸೆದು ಬಿಡುತ್ತಿದ್ದೆ. ನಾಯಿ ಅಲ್ಲಿಗೂ ಓಡಿ, ಚೆಂಡನ್ನೆತ್ತಿಕೊಂಡು ಬರುತ್ತಿತ್ತು.

ಆ ಸುಂದರಿ ತನ್ನ ನಾಯಿಯ ಆಟವನ್ನು ನೋಡುತ್ತಾ ಸುಮ್ಮ ನಿದ್ದು ಬಿಡುತ್ತಿದ್ದಳು. ಅದಕ್ಕೆ ಅಡ್ಡಿಯನ್ನು ಮಾಡುತ್ತಲೂ ಇರಲಿಲ್ಲ. ಪ್ರೋತ್ಸಾಹಿಸುತ್ತಲೂ ಇರಲಿಲ್ಲ.

ಪರೀಕ್ಷೆಯ ಸಮಯ ಮತ್ತೂ ಹತ್ತಿರವಾದಂತೆಲ್ಲಾ ನಿಧಾನವಾಗಿ

ಓದನ್ನು ಕುದುರಿಸಿಕೊಂಡೆ. ರೂಮಿನಿಂದ ಹೊರಗೆ ಹೋಗುವುದನ್ನು ನಿಲ್ಲಿಸಿದೆ. ಅವಳ ಮನೆಯ ಕಡೆಗೆ ಬೆನ್ನು ಇರುವಂತೆ ಕುರ್ಚಿ ಮೇಜುಗಳನ್ನು ಜೋಡಿಸಿದೆ....ಆದರೂ ಒಮ್ಮೊಮ್ಮೆ ಮನ ಅವಳೆಡೆಗೆ ಹರಿಯುತ್ತಿತ್ತು.

ಆ ಸಮಯದಲ್ಲೇ ನಮ್ಮ ಪರಿಚಯವನ್ನು ಬೆಳೆಸಲು ನಲ್ಲಿಯ ನೀರು ಕಾರಣವಾಯಿತು. ನಾನಿದ್ದ ಮನೆಯಲ್ಲಿ ನಲ್ಲಿಯ ನೀರು ಬೆಳಿಗ್ಗೆ ಹತ್ತಕ್ಕೇ ನಿಂತು ಹೋಗುತ್ತಿತ್ತು. ಸಂಜೆ ಆರರವರೆಗೂ ಪುನಃ ಬರುತ್ತಿರಲಿಲ್ಲ. ಆಗ ನನ್ನ ಗಾಜಿನ ಹೂಜಾವನ್ನು ಆ ಮುದಿ ಸೇವಕನ ಕೈಯಲ್ಲಿ ಕೊಟ್ಟು ಅವಳ ಮನೆಗೆ ನೀರಿಗಾಗಿ ಕಳುಹಿಸುತ್ತಿದ್ದೆ. ಮೊದಲನೆಯ ದಿನ ಅವನು ಶುಚಿಯಾದ ನೀರನ್ನು ತಂದ. ಎರಡನೆಯ ದಿನ ಮಧ್ಯಾಹ್ನ ಅವನು ನೀರು ತರುತ್ತಿರುವಾಗ ಆ ಸುಂದರಿ ಆ ಜವಾನನನ್ನು ಮೇಲಕ್ಕೆ ಕರೆದಳು. ಅವನು ಹೂಜಿಯನ್ನು ಕೆಳಗಿಟ್ಟು ಅವಳೆಡೆಗೆ ಹೊರಟಿದ್ದನ್ನು ಕಂಡು ಏನನ್ನೋ ಅವನಿಗೆ ಆಜ್ಞಾಪಿಸಿದಳು. ಅವನು ಈಗ ನನ್ನ ಹೂಜಿಯನ್ನೂ ಅವಳೆಡೆಗೆ ತೆಗೆದುಕೊಂಡು ಹೋದ. ಅದನ್ನೇನು ಮಾಡುವಳೋ....ಎಂದು ನಾನು ಕುತೂಹಲದಿಂದ ನೋಡುತ್ತಿದ್ದೆ. ಹೂಜಿಯನ್ನು ಸೇವಕನ ಕೈಯಿಂದ ತೆಗೆದುಕೊಂಡು ಮಹಡಿಯ ಅಂಚಿಗೆ ಬಂದಳು. ಅದನ್ನೆತ್ತಿ ನೀರೆಲ್ಲವನ್ನೂ ಅಲ್ಲಿದ್ದ ಹೂವಿನ ಗಿಡದ ಕುಂಡಕ್ಕೆ ಬಗ್ಗಿಸಿ, ಬರಿದಾದ ಹೂಜಿಯೊಡನೆ ಮನೆಯೊಳಕ್ಕೆ ಹೋದಳು.

ಸೇವಕ ನನ್ನ ಬಳಿಗೆ ಬಂದು, ಲಂಪಟನಂತೆ ಕಣ್ಣು ಹೊಡೆಯುತ್ತಾ ಹೂಜಿಯನ್ನು ಕೈಗಿತ್ತ. ಕೈ ಕೊರೆದು ಹೋಯಿತು! ಅವಳು ಐಸ್-ಕೋಲ್ಡ್ ವಾಟರನ್ನೂ, ಒಂದು ಮಂಜಿನ ಗಡ್ಡೆಯನ್ನೂ ಆ ಹೂಜಿಯಲ್ಲಿ ಹಾಕಿ ಕಳಿಸಿದ್ದಳು!

ಅವಳ ಕೃಪಾಕಟಾಕ್ಷ ನನ್ನ ಮೇಲೆ ಬೀಳಲಾರಂಭಿಸಿದಾಗಲೇ ನಾನು ಹಿಂಜರಿದೆ. ಅದಕ್ಕೆ ಮುಖ್ಯ ಕಾರಣ ಪರೀಕ್ಷೆ! ಇನ್ನು ಕೇವಲ ಹದಿನೈದೇ ದಿನಗಳಲ್ಲಿ ಪ್ರಾರಂಭವಾಗುತ್ತಿತ್ತು. ನಾನು ಅವಳ ಕಡೆಗೆ ಗಮನವನ್ನು ತುಂಬಾ ಕಡಮೆ ಮಾಡಿದೆ... ಅವಳ

ಗಮನ ಮಾತ್ರ ಬೆಳೆಯುವ ಸೂಚನೆಗಳೇ ದಿನ ದಿನಕ್ಕೂ ಅತಿಯಾಗು ತ್ತಿದ್ದುವು. ಬಾದಾಮಿ ಹಾಲು, ಸಿಹಿ ತಿಂಡಿಗಳೂ ಒಮ್ಮೊಮ್ಮೆ ಅಲ್ಲಿಂದ ಬರತೊಡಗಿದುವು.

ಒಂದು ದಿನ ಬೆಳಿಗ್ಗೆ ಚೆಂಡನ್ನು ಅವಳ ಉದ್ಯಾನಕ್ಕೆಸೆದೆ. ನಾಯಿ ಅದನ್ನು ಪುನಃ ತರಲಿಲ್ಲ. ನಾಯಿಯೂ ಹಿಂತಿರುಗಲಿಲ್ಲ. ಒಳ್ಳೆಯದೇ ಆಯಿತು, ಎಂದುಕೊಂಡು ವ್ಯಾಸಂಗದಲ್ಲಿ ಮುಳುಗಿದೆ. ಅವಳ ಚಿಂತೆ ಸಂಪೂರ್ಣವಾಗಿ ದೂರವಾಯಿತು. ಪರೀಕ್ಷೆಯನ್ನೂ ತೃಪ್ತಿಕರವಾಗಿ ಮುಗಿಸಿದೆ.

ಹಳ್ಳಿಗೆ ಹಿಂತಿರುಗುವ ಮುನ್ನ ಆರಾಮವಾಗಿ ನಾಲ್ಕಾರು ದಿನ ಕಳೆಯ ತೊಡಗಿದೆ .... ನಾನು ಹೊರಡುವುದು ಇನ್ನೇನು ಎರಡು ದಿನಗಳಿದ್ದುವು.

ಆಗ ಒಂದು ಪ್ರಾತಃಕಾಲ, ಮಾರ್ನಿಂಗ್ ಷೋಗೆ ಹೋಗಲು ಯೋಚಿಸುತ್ತಾ ಮಹಡಿಯ ಮುಂಭಾಗದಲ್ಲಿ ನಿಂತಿದ್ದೆ. ಕೂಡಲೇ ಕೆಳಗಿನ ಉದ್ಯಾನಕ್ಕೆ ಕಳೆದು ಹೋಗಿದ್ದ ನನ್ನ ಚೆಂಡು ಬಿತ್ತು. ಮರುಕ್ಷಣವೇ ಅವಳ ನಾಯಿ ಬುಸುಗುಟ್ಟುತ್ತಾ ಓಡಿ ಬಂದು, ಚೆಂಡನ್ನೆತ್ತಿಕೊಂಡು ಓಡಿತು.

ತಲೆಯೆತ್ತಿ ನೋಡಿದೆ. ಎದುರು ಮನೆಯ ಮುಂದೆ ಆ ಸುಂದರಿ ನಿಂತಿದ್ದಳು. ಚೆಂಡನ್ನು ಬಾಯಿನಲ್ಲಿ ಕಚ್ಚಿಕೊಂಡಿದ್ದ ನಾಯಿಯನ್ನು ನೋಡಿ 'ಅಲ್ಲಿಗೆ ತೆಗೆದುಕೊಂಡು ಹೋಗಿ ಕೊಡು!' ಎಂದು ನನ್ನ ಕಡೆಗೆ ಕೈ ತೋರಿಸುತ್ತಿದ್ದಳು. ನಾಯಿ ಅವಳ ಸುತ್ತ ನೆಗೆಯುತ್ತಾ ಅಲ್ಲೇ ನಿಂತಿತ್ತು. ಈಗ ಆ ಚೆಂಡನ್ನು ಅವಳೇ ಪುನಃ ನಾನು ನಿಂತೆಡೆಗೆ ಮತ್ತೂ ರಭಸದಿಂದ ಎಸೆಯುತ್ತಿದ್ದಳು. ಈಗಲೂ ನಾಯಿ ಓಡಿ ಬಂದು ಅದನ್ನುಎತ್ತಿಕೊಂಡು ಹೋಗುತ್ತಿತ್ತು.

ಕಡೆಗೆ ಅವಳು ಮನೆಯ ಮುಂದಿನ ಗೇಟಿನ ಬಳಿ ಬಂದು ನಿಂತಳು. ನಾನು ಕೆಳಗಿಳಿದು ಹೊರಟೆ. ನಾನಿದ್ದ ಮನೆಯ ಗೇಟನ್ನು ಹಾಕಿ, ರಸ್ತೆಗೆ ಅಡಿಯಿರಿಸುತ್ತಾ ಅವಳೆಡೆಗೆ ಒಂದು ಬಾರಿ, ಕುತೂಹಲ ದಿಂದ ಸ್ಪಂದಿಸುವ ನೋಟ ಬೀರಿದೆ. ನಮ್ಮ ನೋಟ ಕ್ಷಣಕಾಲ

ಒಂದಾದುವು. ಅವಳು ಗಂಭೀರವಾಗಿ, ನನ್ನನ್ನೊಮ್ಮೆ ಹುಬ್ಬುಗಂಟಿಕ್ಕಿ ನೋಡಿ, ನಿಧಾನವಾಗಿ ಪಕ್ಕಕ್ಕೆ ತಲೆ ಹೊರಳಿಸಿ ಮತ್ತೇನನ್ನೋ ಮೇಲೆ ನೋಡತೊಡಗಿದಳು. ಆಗ ಅವಳ ಹುಬ್ಬು ಮೇಲೇರಿ, ಕಣ್ಣು ಗಳು ಅರಳಿ, ತುಟಿಯಂಚಿನಲ್ಲಿ ಕಿರುನಗೆಯೊಂದು ಸರ್ತಿಸುತ್ತಿತ್ತು.

ಅಷ್ಟು ಸಮೀಪದಿಂದ ನಾನವಳ ಕಣ್ಣುಗಳನ್ನು ನೋಡಿರಲಿಲ್ಲ. ವಿಶಾಲವಾದ ಆ ಮೋಹಕ ನೇತ್ರಗಳು ಮದಿಸಿದ ತುಂಬು ಗಾಂಭೀರ್ಯ ದಿಂದ ಹೊಳೆಯುತ್ತಿದ್ದುವು. ಅದನ್ನು ನೋಡಿದ ಕ್ಷಣವೇ ನಾನವಳ ಅಡಿಯಾಳಾದಂತೆ ಭಾಸವಾಯಿತು. ಅವಳ ನೀಳವಾದ ತುಂಬು ಕೊರಳು, ಉಬ್ಬಿದ ವಕ್ಷಸ್ಥಳ, ದುಂಡು ತೋಳು, ಮುಂಗೈಗಳನ್ನು ಕಂಡು ನನ್ನ ದೇಹ ನವುರಾದ ಕಂಪನಕ್ಕೀಡಾಯಿತು. ತೊಡೆ, ತೋಳು, ಕುತ್ತಿಗೆಗಳು ಬಿಗಿದುಕೊಂಡವು.

ತುಟಿಯ ಮೇಲೆ ಮೂಡಿದ್ದ ಬೆವರೊರೆಸಿಕೊಳ್ಳುತ್ತಾ ಉದ್ವೇಗ ದಿಂದ ಏರಿಳಿಯುವ ಉಸಿರಿನಲ್ಲಿ, ಬಡಿದುಕೊಳ್ಳುವ ಎದೆಯಿಂದ ಮಾರ್ನಿಂಗ್ ಷೋಗೆ ಹೋದೆ.

ಊಟ ಮಾಡಿ ರೂಮಿಗೆ ಬಂದು ಮಲಗಿದಾಗ ಪುನಃ ನನ್ನ ದೇಹ ಅವಳ ದೇಹಕ್ಕಾಗಿ ಹಸಿದ ಹೆಬ್ಬುಲಿಯಂತೆ ಹೂಂಕರಿಸಿ,.... ಹಾತೊರೆಯುತ್ತಿತ್ತು.

ಅಂದು ಸಂಜೆ ನಾಲ್ಕು ಗಂಟೆಗೇ ನಾನು ಹಾಸಿಗೆಯಿಂದೆದ್ದು ಹೊರಗೆ ಬಂದೆ. ಅವಳು ಆಗಲೇ ಉಡುಪು ಧರಿಸಿ ನನ್ನ ರೂಮಿನ ಕಡೆಗೇ ನೋಡುತ್ತಾ ನಿಂತಿದ್ದಳು. ನನ್ನನ್ನು ಕಂಡೊಡನೆಯೇ ನನ್ನ ಕಡೆಗೇ ಎವೆಯಿಕ್ಕದೆ ನೋಡುತ್ತಾ, 'ಬಾ' ಎಂದು ಕರೆಯುವಂತೆ ತೋರುವ ಕೈಯಿಂದಲೇ ಒಂದೆರಡು ಬಾರಿ ತಲೆಕೂದಲನ್ನು ಮುಟ್ಟಿ ನೋಡಿ, ಮುಂಗುರುಳು ಸರಿಪಡಿಸಿಕೊಂಡಳು. ನಾನು ಸೆಟೆದು ನಿಂತು ದನ್ನು ಕಂಡೊಡನೆಯೇ ತನ್ನ ನಾಯಿಯೊಡನೆ ಮಹಡಿಯ ಮೆಟ್ಟಿಲು ಇಳಿದು ಆದರೊಡನೆ ಆಟವಾಡಿ ನಗುತ್ತಾ, ನನ್ನನ್ನೇ ನೋಡಿ.... ನೋಡಿಕ್ಕೊಂಡು ತಿರುಗಾಡಲು ಹೊರಟಳು.

ಅವಳ ವರ್ತನೆಯನ್ನು ನೋಡಿ ನನಗೆ ಆಶ್ಚರ್ಯವಾಯಿತು.

ಅವಳು ನನಗಾಗಿಯೇ ಕಾಯುತ್ತಿದ್ದಳೇನೋ ಎಂಬ ಯೋಚನೆ ಮಿಂಚಿತು. ಕೂಡಲೇ ಮುಖ ತೊಳೆದು, ಉಡುಪು ಧರಿಸಿ, ತಲೆ ಬಾಚಿ ಹೊರಟೆ. ಅವಳು ಬೀದಿಯಲ್ಲಿ ಸುಮಾರು ಒಂದು ಫರ್ಲಾಂಗ್ ದೂರ ಹೋಗಿ, ಅಲ್ಲಿ ಕಾಯುತ್ತಾ ನಿಂತಿದ್ದಳು. ಅದನ್ನು ಕಂಡು ನಾನು ಅವಳನ್ನೇ ನೋಡುತ್ತಾ ರಸ್ತೆಯಲ್ಲಿ ನಿಂತೆ. ಆಗ ಅವಳು ಮತ್ತೊಮ್ಮೆ ನನ್ನೆಡೆಗೆ ನೋಡುತ್ತಾ, ತಲೆಕೂದಲು ಸರಿಪಡಿಸಿ ಕೊಂಡಳು. ಆಗ ನನಗೆ ಎಲ್ಲಿಲ್ಲದ ಉತ್ತೇಜನ ದೊರಕಿತು. ಅವಳ ಎಡೆಗೆ ಹೊರಟೆ. ನಾನು ಅವಳೆಡೆಗೆ ಬರುತ್ತಿರುವುದನ್ನು ಕಂಡ ಕೂಡಲೇ ಪುನಃ ಮುಂದೆ ನಡೆದಳು.

ಬೇಗಬೇಗ ಅವಳೆಡೆಗೆ ಹೋದೆ. ಅವಳ ಸರಿಸಮನಾಗಿಯೇ ರಸ್ತೆಯ ಇನ್ನೊಂದು ಕಡೆಯ ಫುಟ್‌ಪಾತಿನ ಮೇಲೆ ನಡೆಯುತ್ತಿದ್ದೆ. ನನ್ನ ನೋಟ ಅವಳ ಕಣ್ಣುಗಳನ್ನೇ ಕಾಯುತ್ತಿತ್ತು. ನನ್ನ ಅಡಿಗಳು ಅವಳ ಅಡಿಗಳೊಡನೆಯೇ ನಾಗುತ್ತಿದ್ದುವು. ನೂರಾರು ಹೆಜ್ಜೆ ಕಳೆದ ಮೇಲೆ ಅವಳು ನನ್ನೆಡೆಗೊಮ್ಮೆ ದೃಷ್ಟಿಬೀರಿ ಮುನ್ನಡೆದಳು..... ಅವಳ ನಾಯಿ—'ಪಪ್ಪಿ!' ಎಂದು ಅದರ ಹೆಸರು—ನನ್ನನ್ನು ಕಂಡೊಡನೆಯೇ ನನ್ನ ಬಳಿಗೆ ಬರಲು ಒದ್ದಾಡತೊಡಗಿತ್ತು. ಅದರ ಬಾಯಲ್ಲಿ ನನ್ನ ರಬ್ಬರ್ ಚೆಂಡನ್ನು ಕಚ್ಚಿಕೊಂಡಿತ್ತು.

ರಸ್ತೆಯಲ್ಲಿ ಯಾರೂ ಓಡಾಡದಿರುವ ಸ್ಥಳಕ್ಕೆ ಬಂದೆವು. ಆಗ ಅವಳು ಮತ್ತೊಮ್ಮೆ ನನ್ನೆಡೆಗೆ ದೃಷ್ಟಿಬೀರಿದಳು. ಅವಳ ಕಣ್ಣು, ತುಟಿ ಗಳ ಮೇಲೆ ಕಿರುನಗೆಯೊಂದು ಮಿಂಚಿ ಮಾಯವಾಯಿತು. ಕೂಡಲೇ ನಾನು ನಡೆಯುತ್ತಿದ್ದ ಫುಟ್‌ಪಾತ್ ಬಿಟ್ಟು, ಅವಳಿದ್ದ ಫುಟ್‌ಪಾತಿಗೆ ಬಂದೆ. ಅದನ್ನು ಕಂಡು ಅವಳು ಹೆಡೆಯೆತ್ತಿದ ನಾಗಸರ್ಪದಂತೆ ನನ್ನನ್ನು ಕಣ್ಣರಳಿಸಿ ನೋಡಿದಳು. ನನ್ನನ್ನು ಬೆದರಿಸುವುದಕ್ಕಿರ ಬೇಕು! ಆದರೆ ಅವಳ ನಯನಗಳಲ್ಲಿದ್ದ ವಿನೋದಭಾವ ನನ್ನ ಗಮನಕ್ಕೆ ಬಂದಿತ್ತು. ಅದಕ್ಕೇ ನಾನು ಗಂಭೀರವಾಗಿ ನನ್ನಲ್ಲಿ ನಾನೇ ನಗುತ್ತಾ ಅವಳೆಡೆಗೆ ಬಂದೆ. ಅವಳನ್ನು ನೋಡದವೆ, ಜೊತೆ ಜೊತೆಗೇ ಅಡಿಯಿರಿಸುತ್ತಾ "ಪಪ್ಪೀ, ನನ್ನ ಚೆಂಡು ಕೊಡೋದಿಲ್ಲವೆ!"

ಎಂದು ಕೇಳಿದೆ. ಪಪ್ಪೀ ನನ್ನೆಡೆಗೆ ಬರಲು ಹಾತೊರೆಯಿತು. ನಾನವಳ ಮುಖ ನೋಡಿದೆ. ಅವಳು ನನ್ನ ನಡಿಗೆ, ಉಡುಪು, ಷೂಸ್, ಸೊಂಟ, ಕೈಬೆರಳು, ಎದೆ, ಕತ್ತು. ಅವುಡುಗಚ್ಚಿದ್ದ ಗಲ್ಲ, ಮುಗುಳು ನಗೆಯ ಕಣ್ಣುಗಳು ಎಲ್ಲವನ್ನೂ ಗೋಪ್ಯವಾಗಿ ನೋಡಿದಳು. ಅನಂತರ ಅವಳ ವದನ ಸೌಮ್ಯಭಾವ ತಾಳಿತು. ತುಟಿ ಕಣ್ಣುಗಳಲ್ಲಿ ಕಿರುನಗೆ ಅರಳಿತು. ಅದನ್ನು ಕಂಡು ನಾನು, "ದಯವಿಟ್ಟು ಆ ಚೈನು ಬಿಡಿ, ಪಪ್ಪಿಯನ್ನು ನಾನು ಹಿಡಿದುಕೊಳ್ತೀನೆ" ಎಂದೆ.

ಅವಳು ಚೈನನ್ನು ಕೊಡಲಿಲ್ಲ. ನನ್ನ ಕಡೆಗೆ ನೋಡದಂತೆ ಎದುರು ರಸ್ತೆ ನೋಡುತ್ತಾ, ರಾಜಹಂಸೆಯಂತೆ ಮುಂದೆ ನಡೆಯು ತ್ತಿದ್ದಳು. ನಾನು ನಾಲ್ಕಾರು ಬಾರಿ ಮತ್ತೆ ಮತ್ತೆ ಪ್ರಾರ್ಥಿಸಿದರೂ ಅವಳು ತಿರುಗಿ ನೋಡಲಿಲ್ಲ. ಪಪ್ಪಿಯನ್ನೂ ಕೊಡಲಿಲ್ಲ.

ನನಗೆ ತುಂಬಾ ಅವಮಾನವಾಯಿತು. ಗಾಬರಿಯೂ ಆಯಿತು. ....'ಥೂ! ನಾನು ಹೀಗೆ ಮಾತಾಡಿಸಲು ಬರಬಾರದಾಗಿತ್ತು.... ದೊಡ್ಡ ತಪ್ಪು ಮಾಡಿದೆ!' ಎಂದುಕೊಂಡೆ. ಇನ್ನೊಂದು ಕ್ಷಣದಲ್ಲಿ ಏನಾಗುವುದೋ ಎಂದು ಅಳುಕೂ ಹುಟ್ಟಿತು. ಆದರೆ ಈಗ ಹಿಂದೆಗೆ ಯುವಂತಿರಲಿಲ್ಲ. ನಾನು ಬಹಳ ದೂರ ಮುಂದುವರೆದುಬಿಟ್ಟಿದ್ದೆ. ಹಿಂತಿರುಗುವುದು ಘೋರ ಅವಮಾನವಾಗಿ ಕಂಡಿತು ಮುಂದುವರೆ ಯುವುದು ಅಪಾಯಕರವಾಗಿ ತೋರಿತು. ಆಳವಾಗಿ ನಿಟ್ಟುಸಿರು ಬಿಟ್ಟು, 'ಆಗಲಿ, ಏನೇನು ಆಗುವುದೋ ... ಆಗೇ ಹೋಗಲಿ' ಎಂದು ಅವಳ ಪಕ್ಕಪಕ್ಕದಲ್ಲೇ ಅಡಿಯಿರಿಸತೊಡಗಿದೆ.

ಹೆಜ್ಜೆ ಹೆಜ್ಜೆಗೂ ನನ್ನ ತೊಡೆಗಳು ನಿತ್ರಾಣವಾಗುತ್ತಿದ್ದುವು. ಎದೆ ವೇಗ-ವೇಗವಾಗಿ ಬಡಿದುಕೊಳ್ಳುತ್ತಿತ್ತು. ಕೊರಳು ಬಿಗಿದು ಉಸಿರಾಡಲೂ ಆಗುತ್ತಿರಲಿಲ್ಲ. ಅವಳ ವದನವನ್ನೇ ಕಾತುರದಿಂದ ನೋಡುತ್ತಾ ನೂರಿನ್ನೂರು ಅಡಿಯಿರಿಸಿದೆ. 'ಹೀಗೆ ಬರುವುದು ಗೌರವವಲ್ಲ. ಹಿಂತಿರುಗೇಬಿಡೋಣ' ಎಂಬ ಯೋಚನೆಯೂ ಬಂತು. ಇನ್ನೊಂದು ಕ್ಷಣ ನೋಡೋಣವೆಂದು ಕಾಯ್ದೆ.

ಆ ಕ್ಷಣವೇ ಅವಳು ನನ್ನೆಡೆಗೆ ದೃಷ್ಟಿ ಹೊರಳಿಸಿದಳು. ನನ್ನ

ಕಣ್ಣುಗಳನ್ನೇ ನೋಡುತ್ತಾ ಮುಗುಳುನಗೆ ಬೀರಿದಳು. ನನಗೆ ಹೊಸ ಜೀವ ಬಂದಂತಾಯ್ತು. ಬೆವರೊಡೆದ ಹಣೆ, ಕತ್ತುಗಳನ್ನು ಕರವಸ್ತ್ರದಿಂದ ಒರೆಸಿಕೊಳ್ಳುತ್ತಾ ಅವಳನ್ನೇ ಧನ್ಯತೆಯಿಂದ ನೋಡಿದೆ. ಆಳವಾಗಿ ನಿಟ್ಟುಸಿರುಬಿಟ್ಟೆ. ಅವಳು ತಲೆಬಾಗಿಸಿ, ಹತ್ತಾರು ಅಡಿಗಳನ್ನಿರಿಸಿ, ನಂತರ ನನ್ನನ್ನು ಬಾಲ್ಯ ಸ್ನೇಹಿತೆಯಂತೆ ನೋಡುತ್ತಾ, "ಪಿಕ್ಚರ್‌ಗೆ ಬರುತ್ತೀಯಾ ?" ಎಂದು ಕೋಗಿಲೆಯಂತೆ ಕೇಳಿದಳು.

ನನಗೆ ತುಂಬಾ ಆಶ್ಚರ್ಯ-ಆನಂದಗಳಾದುವು. "ಓ, ಬರುತ್ತೇನೆ !" ಎಂದೆ.

"ನಿನ್ನ ಪರೀಕ್ಷೆ ಮುಗಿಯಿತೇ ?" ಎಂದು ವಯ್ಯಾರದಿಂದ ಕತ್ತು ಹೊರಳಿಸಿ ನನ್ನನ್ನೇ ಕುಡಿನೋಟದಿಂದ ನೋಡುತ್ತಾ ಕೇಳಿದಳು.

ಅವಳ ನೋಟದೊಡನೆ ನೋಟ ಬೆರೆಸುತ್ತಾ ಹೇಳಿದೆ,

"ಮುಗಿಯಿತು."

"ಪಾಸಾಗುವುದೋ ? !"

"ಆಗುತ್ತೆ"

"ಏನು ಆಗುತ್ತೋ....ಯಾವಾಗಲೂ ನನ್ನನ್ನೇ ನೋಡುತ್ತಿದ್ದೆಯಲ್ಲಾ....ನಿನಗೆ ಸ್ವಲ್ಪವೂ ಬುದ್ಧಿಯಿಲ್ಲ !"

"ಏಕೆ ?"

"ಹಾಗೆ ನೋಡಿದರೆ ಅಕ್ಕಪಕ್ಕದವರು ಏನು ತಿಳಿದುಕೊಂಡಾರು ಎಂಬ ಪ್ರಜ್ಞೆ ಬೇಡವೇ ? "

"ಯಾರಿಗೆ ? "

ಎಂದು ಪ್ರಶ್ನಿಸಿದೆ. ಅವಳು ನನ್ನನ್ನೇ ಹುಸಿ ಮುನಿಸಿನಿಂದ ನೋಡಿದಳು. ಆಗ ನಾನು ಹೇಳಿದೆ,

"ನೀನೇ ನನ್ನ ಮುಂದೆ ಇಪ್ಪತ್ತುನಾಲ್ಕು ಗಂಟೆ ನಿಂತಿರುತ್ತಿದ್ದೆಯಲ್ಲಾ !"

"ಹೌದು, ನಾನೇ ನಿಂತಿರುತ್ತಿದ್ದೆ. ಈಗ ನಿನ್ನನ್ನು ಮಾತಾಡಿಸಿದ್ದೇ ಶುದ್ಧ ತಪ್ಪು" ಎಂದು ನೇರವಾಗಿ ಎದುರಿಗೆ ನೋಡುತ್ತಾ ನಡೆಯಲಾರಂಭಿಸಿದಳು.

"ಎಲ್ಲಿ, ಪಪ್ಪಿಯನ್ನು ಕೊಡು" ಎಂದು ಅವಳ ಕೈ ಹಿಡಿದೆ.

"ಥೂ !....ಕೈ ಬಿಡು....ಯಾರೋ ಬರ್ತ್ತಿದಾರೆ." ಎಂದಳು.

ಹೌದು. ಯಾರೋ ಬರುತ್ತಿದ್ದರು....ದೂರದಲ್ಲಿ ! ಅವಳ ಕೈಬಿಟ್ಟು ಕೇಳಿದೆ,

"ಎಲ್ಲಿಗೆ ಹೋಗೋಣ ?"

"ಪ್ರಭಾತ್‌ಗೆ."

"ಯಾವುದು ಅಲ್ಲಿ ಪಿಕ್ಚರ್ ?"

"ಬರ್‌ಸಾತ್ !"

"ನಾನದನ್ನು ನೋಡಿದೀನಿ."

"ನಾನೂ ನೋಡಿದೀನಿ !"

"ಹಾಗಾದರೆ ಪುನಃ ಹೋಗಬೇಕೇ ?"

"ಹು."

"ಬೇರೆ ಪಿಕ್ಚರ್ ಬೇಡವೆ ?"

"ಬೇಡ."

"ಏಕೆ ?"

"ನಾನದನ್ನು ಮತ್ತೊಮ್ಮೆ ನೋಡಬೇಕು !"

"ಹಾಗಾದರೆ ಇದು ಎಷ್ಟನೇ ಬಾರಿ ?"

"ನಾಲ್ಕನೆಯ ಬಾರಿ."

"ಅಷ್ಟೇ ಬಾರಿಯೋ ?"

"ಏಕೆ, ನೀನೆಷ್ಟು ಬಾರಿ ನೋಡಿದ್ದೀ ?"

"ಒಂದು ಬಾರಿಯೂ ಇಲ್ಲ !"

"ನಿಜವಾಗಿಯೂ !"

"ಸತ್ಯವಾಗಿಯೂ...."

"ಆಗಲೇ ನೋಡಿದೆ ಎಂದು ಹೇಳಿದೆ !"

"ಬೇಕೆಂದೇ ಹೇಳಿದೆ. ನಿನ್ನನ್ನು ಗುಗ್ಗೂ ಮಾಡೋಕೆ"

ಎಂದು ಅಣಕನಗೆ ಬೀರಿದೆ. ಅವಳು ಅಲ್ಲೇ ನಿಂತು ನನ್ನನ್ನು ಮುನಿಸಿನಿಂದ ನೋಡಿದಳು. ನಾನು ವಿನೋದದಿಂದ ಕೇಳಿದೆ,

"ಏಕೆ....ನಿನ್ನನ್ನು ಗುಗ್ಗು ಎಂದು ಕರೆಯಬಾರದೆ ?"

"... ........"

"ಕೋಪ ಬಂತೇ ?

"..........."

"ಹಾಗಾದರೆ ನೀನು ಗುಗ್ಗು ಅಲ್ಲವೇ ?"

ಎಂದು ರೇಗಿಸಿದೆ. ಅವಳು ನನ್ನನ್ನೇ ಕಚ್ಚಿ-ತಿಂದುಬಿಡುವವಳಂತೆ ನೋಡಿ, ಆಳವಾಗಿ ನಿಟ್ಟುಸಿರು ಬಿಡುತ್ತಾ

"ಹೌದು, ನಾನೇ ಗುಗ್ಗು....ನೀನೇ ಕಿಲಾಡಿ. ನನ್ನನ್ನು ಮಾತಾಡಿಸಬೇಡ ಇನ್ನು ಮೇಲೆ !"

ಎಂದಳು....ಪಪ್ಪಿಯ ಕೊರಳಿಗೆ ಸರಪಳಿ ಸುತ್ತಿ ಮನೆಗೆ ಓಡಿಸಿದಳು.

ಜೊತೆಗೆ ಅಡಿಯಿರಿಸುತ್ತಿದ್ದ ಅವಳ ದರ್ಪ, ಜಂಬ ಎಲ್ಲವೂ ಮಾಯವಾಗಿದ್ದುವು. ಈಗವಳು ನನಗೊಬ್ಬ ನಿಸ್ಸಹಾಯಕಳಂತೆ ಕಂಡಳು. ಬಿಳಿಯ ಜಾರ್ಜೆಟ್ ಸೀರೆಯಲ್ಲಿ ನಲಿದಾಡುವ ಅವಳ ನೀಳ ದೇಹದ ಕಡೆಗೆ ನನ್ನ ನೋಟ ಹರಿಯಿತು. ಅವಳ ಪರಿಮಳಿತ ಕೇಶರಾಶಿ, ಕಂಡೂ ಕಾಣಿಸದಂತೆ ಲಿಪ್‌ಸ್ಟಿಕ್ ಬಳಿದ ತುಟಿ, ಭೋಗ ಸ್ವಾತಂತ್ರ್ಯದಲ್ಲಿ ಜೀವಿಸುವ ಸುಂದರ ಸ್ತ್ರೀಯ ದರ್ಪದ ವದನ. ಮದಭರಿತ ನಯನಗಳು, ದಂತದಂತೆ ಹೊಳೆಯುವ ದುಂಡು ಮುಂಗೈ, ಒಂದು ಕೈಯ್ಯಿನ ಪುಟ್ಟ ವಾಚ್, ಮತ್ತೊಂದು ಕೈಯ್ಯಿನ ಒಂಟಿ ಚಿನ್ನದ ದಪ್ಪ ಚಿತ್ರ-ವಿಚಿತ್ರ ಬಳೆ, ತುಂಬು ತೋಳು, ಪ್ರೌಢ ಸುಕುಮಾರ ಕೊರಳು, ಅದನ್ನು ಸುತ್ತುವರಿದು ಹೊಳೆವ ಒಂದೆಳೆ ಮುತ್ತಿನ ಸರ, ಸೊಕ್ಕೇರಿದ್ದ ದುಂಡು ಸ್ತನಗಳು, ಅವುಗಳನ್ನು ಮುಚ್ಚಿದ್ದ ಕೇಸರಿ ರೇಷ್ಮೆಯ ಕುಪ್ಪಸ .... ಠೀವಿಯಿಂದ ತುಸು ಅಲುಗಿ ಸಾಗುತ್ತಿರುವ ಅವಳ ತೊಡೆಗಳು, ಶ್ವೇತಪಾದದ ಸರಳ ನವೀನ ಚಪ್ಪಲಿ....ಇವುಗಳೆಲ್ಲವನ್ನೂ ಮನದಣಿಯುವಂತೆ ನೋಡಿದೆ ಪ್ರಯಾಸದಿಂದ ಉಸಿರಾಡಿದೆ.

ಸಿನಿಮಾದಿಂದ ಹಿಂತಿರುಗಿ ಬರುವಾಗ ಬೆಳದಿಂಗಳು ಬಂದಿತ್ತು.

ಅವಳ ಮೈಗೆ ಮೈ ಸೋಕುವಂತೆ ನಡೆಯುತ್ತಿದ್ದ ನನ್ನ ದೇಹವೆಲ್ಲಾ ಉದ್ರೇಕದಿಂದ ಕಂಪಿಸುತ್ತಿತ್ತು. ಒಂದೆರಡು ಬಾರಿ ಆಳವಾಗಿ ಉಸಿರೆಳೆದುಕೊಂಡು, ಎದೆಯ ಬಡಿತವನ್ನು ಸ್ಥಿಮಿತಕ್ಕೆ ತರಲು ಯತ್ನಿಸುತ್ತಾ, ಅವಳ ಕೈ ಹಿಡಿದು, ಉದ್ವೇಗದಿಂದ ಬಿಗಿದ ಕಂಠದಲ್ಲಿ

" ಬರುವುದಿಲ್ಲವೇ !"

ಎಂದೆ. ಅವಳು ನಸುನಗುತ್ತಾ, ಹುಬ್ಬುಗಳನ್ನೇರಿಸಿ, ಪ್ರಶ್ನಾರ್ಥಕವಾಗಿ ನನ್ನನ್ನೇ ನೋಡುತ್ತಾ,

" ಎಲ್ಲಿಗೆ ?"ಎಂದು ನಸು ನಕ್ಕಳು. ನಾನು ಬೇಡಿಕೆಯ ನೋಟ ಕಾರುತ್ತಾ ಹೇಳಿದೆ.

" ನನ್ನ ರೂಮಿಗೆ."

" ಏಕೆ ?" ಎಂದು ನನ್ನನ್ನೇ ಅಣಕ ಮಿಶ್ರಿತ ನಯನಗಳಿಂದ ನೋಡಿದಳು. ನಾನು ಅವಳ ಪಕ್ಕೆಗೆ ಕಚಕುಳಿಯಿಟ್ಟೆ. ಅವಳು ಮಿಸುಕಾಡಿ, ನಕ್ಕು ವೇಗವಾಗಿ ಉಸಿರಾಡುತ್ತಾ ನೆಟ್ಟಗೆ ನಿಂತಳು.

" ನೋಡು, ನಾನು ನಾಳೆಯೇ ಊರಿಗೆ ಹೋಗಿಬಿಡಬೇಕು. ಇದೊಂದು ರಾತ್ರಿಯೇ ಇಲ್ಲಿರುವುದು " ಎಂದೆ.

" ನಿಜವಾಗಿಯೂ !"

" ಪ್ರಮಾಣವಾಗಿಯೂ."

ಅವಳು ತಲೆ ಬಾಗಿಸಿ ನಡೆಯಲಾರಂಭಿಸಿದಳು. ಸ್ವಲ್ಪ ದೂರ ಬಂದ ಮೇಲೆ ನಾನವಳ ಬಳಿ ಸರಿದು, ಎರಡು ಕೈಗಳಿಂದಲೂ ಅವಳ ಹಸ್ತ, ತೋಳುಗಳನ್ನು ಬಿಗಿಯಾಗಿ ಹಿಡಿದು ಮರ್ದಿಸುತ್ತಾ, ಕಿವಿಯ ಬಳಿ ಬಾಯಿಟ್ಟು, ಉತ್ಕಂಠಿತನಾಗಿ

" ಈ ರಾತ್ರಿ ಬರುವೆಯಾ ?" ಎಂದುಸುರಿದೆ. ಅವಳು ಯೋಚಿಸ ತೊಡಗಿದಳು. ನನ್ನ ಕಾತುರ ಮುಗಿಲುಮುಟ್ಟಿತು....ಮತ್ತೆ....

" ಬರುವೆಯಾ....?" ಎಂದು ತೋಳು ಜಗ್ಗಿದೆ. ಅವಳು ತಲೆ ಬಾಗಿಸಿ, ಕೇಳಿಯೂ ಕೇಳಿಸದಂತೆ,

" ಹೂ...." ಎಂದಳು. ನನ್ನ ಎದೆ ಆನಂದದಿಂದ ಬಿರಿದರಳಿತು. ಆತುರದಿಂದ ಕೇಳಿದೆ,

"ಎಷ್ಟು ಗಂಟೆಗೆ ?"

"ಊಟ ಮಾಡಿದ ಮೇಲೆ"

"ಹೇಗೆ ಬರುತ್ತೀಯ....ಮನೆಯಲ್ಲಿ ಯಾರೂ ಇಲ್ಲವೆ ?"

"ಅದೆಲ್ಲಾ ನಿನಗೇಕೆ ?....ನಾನು ಬರ್ತೀನೆ ಅಂದಮೇಲೆ ಬಂದೇ ಬರ್ತೀನೆ. ನಿನ್ನ ರೂಮಿಗೆ ಯಾರೂ ಸ್ನೇಹಿತರು ಬರೋಲ್ಲವೆ ?"

"ಇಲ್ಲ....ಎಲ್ಲರೂ ಊರಿಗೆ ಹೋಗಿಬಿಟ್ಟಿದಾರೆ..."

"ಸರಿ, ಹಾಗಾದರೆ ಎಲ್ಲಾ ಸೇಫ್!"

ಅಂದು ರಾತ್ರಿ ಹನ್ನೊಂದು ಗಂಟೆಯ ಸಮಯದಲ್ಲಿ ಅವಳಿಗಾಗಿ ಕಾಯುತ್ತಾ ತವಕದಿಂದ ಮಹಡಿಯ ಮುಂದೆ ಅತ್ತಿತ್ತ ಅಲೆದಾಡು ತ್ತಿದ್ದೆ. ಅವಳು 'ಬರಬಹುದು....ಬರಲಾರಳು !' .... 'ಬರಬಹುದು ....ಬರಲಾರಳು !' ಎಂದು ನನ್ನೆದೆ 'ಡಗ್! ಡಗ್! ಡಗ್!' ಎಂದು ಬಡಿದುಕೊಳ್ಳುತ್ತಿತ್ತು. ಮನಸ್ಸಿಗೆ ಸಮಾಧಾನ ಮಾಡಿಕೊಳ್ಳಲು ರೂಮಿಗೆ ಬಂದೆ. ಒಂದೆರಡು ಲೋಟ ತಣ್ಣೀರು ಕುಡಿದೆ. ಹಿಂದಿನ ದಿನವೇ ಹಾಕಿದ್ದ ಬೆಡ್ ಕವರ್, ದಿಂಬು ಕವರ್‌ಗಳನ್ನು ಕಿತ್ತು ಎಸೆದೆ. ಇನ್ನೂ ಅಂದವಾಗಿರುವ ಹೊಸ ಕವರುಗಳನ್ನು ಹಾಕಿದೆ. ಕಪಾಟಿ ನಲ್ಲಿದ್ದ ಪರಿಮಳವನ್ನೆರಚಿದೆ. ನಂತರ ಗೇಟಿನ ಬಳಿ ಹೋಗಿ ನಿಂತೆ.

ಹತ್ತು ನಿಮಿಷ ಕಾಯ್ದರೂ ಅವಳು ಬಾರದಿರುವುದನ್ನು ಕಂಡು ನಿರಾಶೆಯಾಯಿತು. ಕೂಡಲೆ ನನ್ನೆದೆ ಆನಂದದಿಂದ ಅರಳಿತು. ಅವಳು ಕೈಯಲ್ಲೊಂದು ಹ್ಯಾಂಡ್ ಬ್ಯಾಗನ್ನು ಹಿಡಿದು ಮಹಡಿ ಇಳಿದು ಬರುತ್ತಿದ್ದಳು.

ಗೇಟನ್ನು ತೆರೆದು ಹೊರಬಂದು, ಅದನ್ನು ಸದ್ದಿಲ್ಲದೆ ಮುಚ್ಚಿ, ನಾನಿದ್ದೆಡೆಗೆ ಧಾವಿಸಿ ಬಂದು ಕೇಳಿದಳು—

"ಕೆಳಗಿನ ಮನೆಯವರು ಮಲಗಿದರೇ ?"

"ಹೂ....ದೀಪ ಆರಿಸಿಬಿಟ್ಟರು"

ಎಂದು ಅವಳ ತೋಳು ಹಿಡಿದು ಕರೆದೊಯ್ದೆ. ನನ್ನ ಬಲಗೈ ಅವಳ ಸೊಂಟವನ್ನು ಬಿಗಿಯಾಗಿ ಬಳಸಿತ್ತು. ಇಬ್ಬರೂ ಒಂದು ದೇಹದಂತೆ ಬೇಗ ಬೇಗ ಮೆಟ್ಟಿಲೇರಿದೆವು.

ರೂಮನ್ನು ತಲುಪಿ, ಬಾಗಿಲು ಹಾಕಿದ ಕೂಡಲೇ ಅವಳನ್ನು ವಿವಸ್ತ್ರಗೊಳಿಸಲೆತ್ನಿಸಿದೆ. ಅವಳು ನನ್ನ ಕೈಗೆ ಹೊಡೆದಳು. ನನ್ನನ್ನು ಬಳಿಯಿದ್ದ ಜೆತ್ತದ ಕುರ್ಚಿಗೆ ತಳ್ಳಿದಳು. ನಾನು ಅಲ್ಲಿ ಕುಳಿತು ಕೊಳ್ಳದೆ ಮೇಲೇಳಹೋದೆ. ಅವಳು ಅದಕ್ಕೆ ಆಸ್ಪದ ಕೊಡದೆ. ನನ್ನ ತೊಡೆಯಮೇಲೆ ಕುಳಿತುಕೊಂಡಳು. ಚೀಲದಲ್ಲಿ ತಂದಿದ್ದ ಸಿಹಿ ತಿಂಡಿಗಳನ್ನೆಲ್ಲಾ ತೆಗೆದು ನನ್ನ ಬಾಯಿಗೆ ತುರುಕಲೆತ್ನಿಸಿದಳು. ನಾನು ಆ ಕೈಚೀಲವನ್ನು ಅನಾಗರೀಕನಂತೆ ಅವಳ ಕೈಯಿಂದ ಕಿತ್ತು ಮೇಜಿನ ಮೇಲೆಸೆದೆ.

ಅವಳನ್ನು ಹಾಸಿಗೆಯ ಕಡೆಗೆ ಎತ್ತಿಕೊಂಡು ಹೊರಟೆ. ಅವಳು 'ಬಿಡು!....ಬಿಡು!' ಎಂದು ನನ್ನ ತಲೆ, ಕೆನ್ನೆ, ತುಟಿಗಳಿಗೆಲ್ಲಾ ಹೊಡೆಯುತ್ತಿದ್ದಳು.

ಅದನ್ನು ಲೆಕ್ಕಿಸದೆ, ಅವಳನ್ನು ಮಂಚದ ಮೇಲೆ ಇರಿಸಿ, ವಿವಸ್ತ್ರಗೊಳಿಸಲೆತ್ನಿಸಿದೆ.

ಹೆಣ್ಣಿನ ನಗ್ನದೇಹವನ್ನು ನೋಡಿ, ಮುಟ್ಟಿ, ಮರ್ದಿಸಿ, ಅಪ್ಪಿ, ಅದರಲ್ಲಿ ಸಂಪೂರ್ಣವಾಗಿ ಐಕ್ಯವಾಗುವ ಅವಕಾಶಕ್ಕಾಗಿ ಹಾತೊರೆಯುತ್ತಿದ್ದ ನನಗೆ ಅವಳ ಪ್ರತಿಭಟನೆ ಗೋಚರವಾಗಲೇ ಇಲ್ಲ. ಅವಳ ಸೀರೆ ಕುಪ್ಪುಸಗಳೆಲ್ಲ ಪರ್! ಪರ್! — ಎಂದು ಹರಿದು ಹೋದುವು. ಸ್ತ್ರೀಯ ಸಂಪೂರ್ಣ ನಗ್ನತೆಯನ್ನು ಕಂಡೊಡನೆಯೇ ಶತಮಾನಗಳಿಂದ ಹಸಿದ ಭೂತನಂತೆ ಅವಳನ್ನಪ್ಪಿದೆ ........ ರೌದ್ರ ಚುಂಬನ, ಉತ್ಕಟ ಆಲಿಂಗನ, ಉಗ್ರ ಕಾಮಕೇಳಿಯಲ್ಲಿ ಆ ರಾತ್ರಿ ಸಂಪೂರ್ಣವಾಗಿ ಸವೆದುಹೋಯಿತು.

ಬೆಳಗಿನ ಝಾವ ಐದು ಗಂಟೆಗೆ ಅವಳನ್ನು ಮನೆಯ ಗೇಟಿನ ವರೆಗೂ ಕರೆದೊಯ್ದೆ. ಅಗಲುವಾಗ,

"ಈ ರಾತ್ರಿ ರೈಲಿಗೇ ಊರಿಗೆ ಹೋಗಿಬಿಡುತ್ತೇನೆ" ಎಂದೆ.

"ಹೋಗಿಬಿಡುತ್ತೀಯಾ!" ಎಂದು ಅಪನಂಬಿಕೆಯಿಂದ, ಅಣಕ ಸ್ವರದಲ್ಲಿ ಕೇಳಿದಳು. ನಾನು ವಿಷಾದ ತುಂಬಿದ ಧ್ವನಿಯಲ್ಲಿ,

"ಹು" ಎಂದೆ. ಅವಳ ಅಣಕ ಮಾಯವಾಯಿತು. ಬೇಡಿಕೆಯ

ನೋಟ ಬೀರುತ್ತಾ ನನ್ನ ಕೈಯನ್ನು ಬಿಗಿಯಾಗಿ ಹಿಡಿದು, ಯೋಚನೆಯ ಸ್ವರದಲ್ಲಿ,

"ಇಷ್ಟೆಲ್ಲಾ ಆದ ಮೇಲೆ ನನ್ನನ್ನು ಬಿಟ್ಟು ಹೋಗುತ್ತೀಯಾ ?"

ಎಂದಳು. ಅವಳ ಕಣ್ಣು ಹನಿಗೂಡಿದ್ದುವು. ಅದನ್ನು ನೋಡಿ ನನ್ನ ಎದೆಯಲ್ಲಿ ಅನುಕಂಪ ಉಕ್ಕಿ ಬಂತು. ಅವಳು ಮತ್ತೆ ಕೇಳಿದಳು,

"ಹೊರಟುಹೋಗ್ತೀಯಾ ?"

"ಇಲ್ಲ....ಇದೊಂದು ರಾತ್ರಿ ಇರುತ್ತೇನೆ. ನೀನು ಬರುವೆಯಾದರೆ !" ಎಂದೆ. ಅವಳು ನಸುನಕ್ಕು, ನನ್ನ ಕೆನ್ನೆಗೆ ಮೃದುವಾಗಿ ಹೊಡೆದು ಮನೆಗೆ ಹೋದಳು.

ಅಂದಿನಿಂದ ಸುಮಾರು ಒಂದು ತಿಂಗಳವರೆಗೂ ನಮ್ಮ ಕಾಮ-ಪಿಪಾಸೆ ಬೃಹದಾಕಾರವಾಗಿ ಬೆಳೆದು, ಇಬ್ಬರನ್ನೂ ಪಶುಗಳನ್ನಾಗಿ ಮಾಡಿತು. ನನಗೆ ಅವಳ ದೇಹದ ಮೇಲೆ ಮೋಹ ! ಅವಳಿಗೆ ನನ್ನ ದೇಹದ ಮೇಲೆ ಮೋಹ ! ಅವುಗಳ ತೀಕ್ಷ್ಣ ಬೇಡಿಕೆಗಳ ತೃಪ್ತಿಯ ಸಂಘರ್ಷಣೆಯಲ್ಲಿ ಉಳಿದ ಜಗತ್ತಿಗೇನಾಗುವುದೋ, ನಮ್ಮ ಸಾಮಾಜಿಕ ಸ್ಥಾನ, ಮಾನ, ಗೌರವ ಮತ್ತು ನಮ್ಮದೇ ಆಪ್ತವಾದ ಜೀವ, ಹೃದಯ, ಆತ್ಮ ಇವಕ್ಕೆಲ್ಲಾ ಏನಾಗುವುದೋ ಎಂಬ ಯೋಚನೆ ನಮಗೆ ಲವಲೇಶವೂ ಇರಲಿಲ್ಲ.

ಪ್ರತಿದಿನ ಮುಂಜಾವೂ ನಾನು, "ಇಂದು ಊರಿಗೆ ಹೋಗಿಬಿಡುತ್ತೇನೆ" ಎನ್ನುವುದು. ಅವಳು, "ಹೋಗಿಬಿಡುತ್ತೀಯಾ....ಇಷ್ಟೆಲ್ಲಾ ಆದಮೇಲೆ !" ಎಂದು ಕೈಹಿಡಿದು ಕಣ್ಣೀರಿಡುವುದು....ಈ ಸೋಗಿನಲ್ಲೇ ಇಡೀ ಒಂದು ತಿಂಗಳು ಕಂಡು ಕೇಳದಂತೆ ಜಾರಿಹೋಯಿತು.

ಪ್ರತಿದಿನ ಮಧ್ಯಾಹ್ನ ಮ್ಯಾಟನಿ, ಪ್ರತಿ ರಾತ್ರಿಯೂ ಉಗ್ರ ಕಾಮಕೇಳಿಯ ಸಮಸ್ಪರ್ಧೆ....ಪ್ರಾತಃಕಾಲವೆಲ್ಲಾ ನಿದ್ರೆ. ಈ ರೀತಿ ಒಂದು ತಿಂಗಳು ವಿಲಕ್ಷಣವಾಗಿ ಉರುಳಿಹೋಯಿತು.

ಒಂದು ದಿನ ನನಗೆ ಕುತೂಹಲವಾಯಿತು. ಅವಳ ಬಾಹುಗಳಲ್ಲಿ ಮಲಗಿರುವಾಗ "ನಿನಗೆ ಮದುವೆಯಾಗಿದೆಯೇ ?" ಎಂದು ಕೇಳಿದೆ.

ಅವಳು ಮೌನವಾಗಿ ನಸುನಕ್ಕು ನನ್ನ ಕೆನ್ನೆಗೆ ಹೊಡೆದಳು. ಅವಳನ್ನು ಚುಂಬಿಸುತ್ತಾ "ಆಗಿದೆಯೇ ?" ಎಂದು ಮತ್ತೆ ಕೇಳಿದೆ.

"ಅದನ್ನು ಕಟ್ಟಿಕೊಂಡು ನಿನಗೇನು ?"

ಎಂದು ಕೆನ್ನೆಹಿಂಡಿ, ನನ್ನನ್ನಪ್ಪಿ ಮುದ್ದಾಡಿ,

"ನಿನಗೆ ತಂದೆತಾಯಿಗಳಿರುವರೇ ?"

ಎಂದು ಕೇಳಿದಳು. ನಾನು ಹೇಳಿದೆ,

"ಹು, ಇದಾರೆ."

"ಹಾಗಾದರೆ ನೀನೇಕೆ ಹೀಗೆ ಪೋಲಿಯಾದೆ ?"

"ನಿನ್ನಿಂದ" ಎಂದು ಅವಳ ಎದೆಯಲ್ಲಿ ಮುಖ ಹುದುಗಿಸಿದೆ. ಅವಳು ನನ್ನ ತಲೆ ಕೂದಲನ್ನು ಸವರುತ್ತಾ ಕೇಳಿದಳು,

"ನೀನು ಮದುವೆಯಾಗುವೆಯಾ ?"

"ಆದರೆ ನಿನ್ನನ್ನೇ...."ಎಂದು ಅವಳ ಸ್ತನಗಳಿಗೆ ತುಟಿಯೊತ್ತಿದೆ. ಅವಳು ನನ್ನ ಕಿವಿಹಿಂಡಿ,

"ನೀನು ಬೇರೆ ಯಾರನ್ನಾದರೂ ಮದುವೆಯಾಗುವೆಯಾ ?"

ಎಂದು ಕೇಳಿದಳು. ನಾನು,

"ನಿನಗೆ ಮದುವೆಯಾಗಿದೆಯಾ ಮೊದಲು ಹೇಳು. ಆಮೇಲೆ ನಿನಗೆ ಉತ್ತರ ಕೊಡ್ತೇನೆ"

ಎಂದು ಅವಳ ತುಟಿಗಳನ್ನು ದೀರ್ಘಕಾಲ ಹೀರಿದೆ. ಅವಳು ಏನನ್ನೋ ಹೇಳಲು ಹೊರಟಳು. ತುಟಿಗಳು ಜಾರಿ ಚುಂಬನ ಆಸ್ಫೋಟನೆಯಾಯಿತು. ಅವಳು ನಾಚಿಕೆಯಿಂದ ಚೀತ್ಕರಿಸಿ 'ಥೂ' ಎಂದು ನನ್ನನ್ನು ದೂರ ತಳ್ಳಿದಳು. ಒಬ್ಬರ ತೋಳಮೇಲೊಬ್ಬರು ತಲೆಯಿಟ್ಟು ಮಲಗಿದೆವು. ನಾನು ಅವಳ ಮುಂಗುರುಳನ್ನು ಸರಿಪಡಿಸುತ್ತಿದ್ದೆ, ಅವಳು ನನ್ನ ತುಟಿ ಒರೆಸಿ, ಹಣೆ ಮುಂಗುರುಳನ್ನು ಸವರುತ್ತಾ,

"ಹೌದು, ನನಗೆ ಮದುವೆಯಾಗಿದೆ" ಎಂದಳು.

ನಾನು ನಿಶ್ಚಲನಾದೆ. ನನ್ನ ದೇಹ ನಿರುದ್ವೇಗದಿಂದ ಸೆಟೆದು

ಕೊಂಡಿತು. ನನಗೆ ಅವಳ ಮೇಲಿದ್ದ ಆಸೆ ಕನಸುಗಳೆಲ್ಲ ಧೂಳು ಪಾಲಾದುವು. ಒಂದು ದೊಡ್ಡ ತಪ್ಪನ್ನು ಬೇರೆ ಮಾಡಿದೆನೆಂಬ ಪಶ್ಚಾತ್ತಾಪ ಎದೆಯಲ್ಲಿ ಉಕ್ಕಿತು. ನಾನು ಮೌನವಾದದ್ದನ್ನು ಕಂಡು ಅವಳು,

" ಏಕೆ....ಹೆದರಿಕೊಂಡೆಯಾ ?"

ಎಂದು ಕೇಳಿದಳು. ನಾನು ಅದನ್ನು ಲೆಕ್ಕಿಸದೆ, ಯಾವುದೋ ದೂರದಲ್ಲಿ ನೋಟ ನೆಟ್ಟು, ಪ್ರಶ್ನಿಸಿದೆ–

" ಎಷ್ಟು ವರ್ಷ ಆಯ್ತು ಮದುವೆಯಾಗಿ ?"

" ಐದು ವರ್ಷ...."

" ಮಕ್ಕಳಿದ್ದಾರೆಯೆ ?"

" ಇಲ್ಲ"

" ಏಕೆ, ನಿನ್ನ ಗಂಡ.... ಷಂ.... "

ಎನ್ನುತ್ತಿರುವಾಗಲೇ ಅವಳು ನನ್ನ ಬಾಯನ್ನು ಭದ್ರವಾಗಿ ಮುಚ್ಚಿ, ಹೇಳಿದಳು,

" ಅಲ್ಲ....ಹಾಗಲ್ಲ ! .... ನನಗೇ ಮಕ್ಕಳು ಬೇಡ."

" ಏಕೆ - ಬೇಡ ?"

" ನನಗೆ ಹೆದರಿಕೆ !.... ಅಲ್ಲದೆ ಅದೊಂದು ಗೋಳು .... ನಮ್ಮ ಸುಖಕ್ಕೆ ಅಡ್ಡಿ ಅಲ್ಲವೆ ?"

ಎಂದು ನನ್ನ ಬೆನ್ನನ್ನು ಬೆರಳು ಹಸ್ತದಿಂದ ತೀಡಿ, ಗಾಢವಾಗಿ ಬಿಗಿದಪ್ಪಿ ಚುಂಬಿಸಿದಳು. ನನಗೆ ಕುತೂಹಲವಾಯಿತು. ಯಾವುದೋ ಆಲೋಚನೆ ಮನಸ್ಸಿನಲ್ಲಿ ಮಿಂಚಿತು. ನಗುತ್ತಾ,

" ಈಗ ನನ್ನಿಂದ ಮಗುವಾದರೆ !"

ಎಂದೆ. ಅವಳು ನನ್ನ ಕೆನ್ನೆಗೆ ಮೃದುವಾಗಿ ಹೊಡೆದಳು.

" ಆದರೆ !" ಎಂದು ಪುನಃ ಕೇಳಿದೆ. ಅವಳು ನಗುತ್ತಾ,

" ಆಗೋಲ್ಲ...." ಎಂದಳು.

" ಏಕೆ, ನೀನು ಬಂಜೆಯೋ ?"

ಪುನಃ ಕೆನ್ನೆಗೆ ಹೊಡೆದು, ಹೇಳಿದಳು " ಅದೆಲ್ಲಾ ಕೇಳಬೇಡ."

"ನೀನು ಬಂಜೆಯೇ? ಹೇಳು!" ಎಂದೆ ತುಂಬಾ ಕಾತುರನಾಗಿ.

ಅವಳು ನನ್ನನ್ನೇ ಗಟ್ಟಿಯಾಗಿ ಅಪ್ಪಿ ಏನನ್ನೋ ದೀರ್ಘಕಾಲ ಆಲೋಚಿಸಿ, ನಿಟ್ಟುಸಿರು ಬಿಡುತ್ತಾ ಉಸುರಿದಳು,

"ನಾನು ಬಂಜೆಯಾಗಿರಲಿಲ್ಲ ... ನಾನೇ ಬಂಜೆತನ ತಂದು ಕೊಂಡೆ."

"ಹೇಗೆ ?"

"ಅದು ನಿನಗೇಕೆ ? ಸುಮ್ಮನಿರು !"

"ಹೇಳು" ಎಂದು ಅವಳಿಗೆ ಕಚಕುಳಿ ಇಡಲಾರಂಭಿಸಿದೆ. ಅವಳು ನೆಲಕ್ಕೆಸೆದ ಮೀನಿನಂತೆ ಮಿಸುಗಾಡತೊಡಗಿದಳು. ನಂತರ,

"ಓ....ನನ್ನನ್ನು ಸಾಯಿಸಿಬಿಡ್ಬೇಡ....ಬಿಡು....ಬಿಡು !"

ಎಂದಳು. ನಾನು ಕಚಕುಳಿ ನಿಲ್ಲಿಸದೆ ಕೇಳಿದೆ.

"ಹಾಗಾದರೆ ಹೇಳ್ತೀಯಾ....ಹೇಳ್ತೀಯಾ ?"

"ಹು....ಹೇಳ್ತೀನೆ—"

ಎಂದಳು. ನಾನು ಕಾತುರನಾಗಿ ಅವಳ ತೋಳು ಹಿಡಿದು ಕಾಯ್ದೆ. ಅವಳು 'ಹತ್ತಿರಬಾ'....ಎಂದು ತಲೆ ಹಾಕಿದಳು. ನಾನು ಇನ್ನೂ ಹತ್ತಿರ ಹೋದೆ. ಅವಳು ನನ್ನ ಕಿವಿಗೆ ತುಟಿಗಳನ್ನಿರಿಸಿ ಉಸುರಿದಳು.

"ಒಂದು ಚಿಕ್ಕ ಆಪರೇಷನ್‌ನಿಂದ !"

ನಾನು ಅದನ್ನು ಕೇಳಿ ಬೆರಗಾಗಿ ಹೋದೆ. ಕೂಡಲೇ ಕೇಳಿದೆ,

"ನಿನ್ನ ಗಂಡನಿಗೆ ಇದು ಗೊತ್ತೇ ?"

"ಗೊತ್ತು."

"ಅವನಿಗೂ ಮಕ್ಕಳು ಬೇಡವೇ ?"

"ಅದೆಲ್ಲಾ ಅವನು ಯೋಚಿಸೋಲ್ಲ .... ಅವನು ಈಗೀಗ ನನ್ನನ್ನೂ ಯೋಚಿಸೋಲ್ಲ. ಅವನಿಗೆ ಅವನ ಹಾಳು ಕೆಲಸವೇ ಸಾಕು" ಎಂದು ಅತ್ಯಂತ ಬೇಸರ ವಿಷಾದದಿಂದ ನುಡಿದಳು. ನಾನೊಂದು ನಿಮಿಷ ಮೌನವಾದೆ....ನಂತರ ಅವಳು ಹೇಳಿದಳು.

ಅವಳ ಗಂಡನೊಬ್ಬ ಜೂಜುಗಾರ .... ಕುದುರೆ ಜೂಜೆಂದರೆ ಅವನಿಗೆ ಪಂಚಪ್ರಾಣ....ಎಲ್ಲೆಲ್ಲಿ ರೇಸಾದರೆ ಅಲ್ಲಲ್ಲಿ ಹಾಜರು....ಮೊದ

ಮೊದಲಿಗೆ ಅವಳನ್ನೂ ಕರೆದುಕೊಂಡು ಹೋಗುತ್ತಿದ್ದ....ಈಗ ಒಂದು ವರ್ಷದಿಂದ ತಾನೊಬ್ಬನೇ ಹೋಗ ಹತ್ತಿದಾನೆ .... ಈಗ ಕಲ್ಕತ್ತ ದಲ್ಲಿದ್ದಾನೆ....ಎಂದೆಲ್ಲ ತಿಳಿಸಿದಳು.

" ಎಂದು ಬರ್‍ತಾನೆ ?" ಎಂದೆ ನಾನು.

" ನಾಳೆಯೇ ಬರಬಹುದು .... ಇಲ್ಲ ಮುಂದಿನ ವರ್ಷ ಬರ ಬಹುದು"

" ಅಂದರೆ!"

" ಅಂದರೆ....ಜೂಜುಕೋರರ ಬುದ್ಧಿ ನಿನಗೆ ಗೊತ್ತಿಲ್ಲ ಅಂತ "

ಎಂದು ಒಂದು ಉನ್ಮತ್ತ ಚುಂಬನವಿತ್ತು, ನನ್ನನ್ನಪ್ಪಿದಳು. ನನಗೆ ತುಂಬಾ ಕುತೂಹಲವಾಯಿತು. ಅದಕ್ಕೇ ಕೇಳಿದೆ,

" ನೀನು ಅವನನ್ನು ಪ್ರೇಮಿಸುತ್ತೀಯಾ.... ?"

" ಅದನ್ನು ಕೇಳಬೇಡ " ಎಂದು ಅವಳು ನನ್ನನ್ನು ಅಪ್ಪಿದಳು.

" ಏಕೆ ? "

" ಬೇಡ—ದಯವಿಟ್ಟು"

ಎಂದು ಹಣೆ, ಮುಂಗುರುಳನ್ನು ತೀಡಿ, ಮೃದುವಾಗಿ ಚುಂಬನ ಗಳನ್ನಿಡಲು ಪ್ರಾರಂಭಿಸಿದಳು. ನಾನು ಒಂದೆರಡು ನಿಮಿಷ ಆಲೋ ಚಿಸಿದೆ. ನಂತರ ನಿರಾಸಕ್ತಭಾವದಿಂದ, ದೂರ ನೋಡುತ್ತಾ ಹೇಳಿದೆ,

" ಹಾಗಾದರೆ ನೀನವನನ್ನು ಪ್ರೇಮಿಸೋಲ್ಲ !"

" ಇಲ್ಲಾ...."ಎಂದು ಕ್ಷೀಣವಾಗಿ ಉಸುರಿ, ನನ್ನೆದೆಯಲ್ಲಿ ಮುಖ ಹುದುಗಿಸಿದಳು. ನನಗೆ ಅವಳನ್ನು ಕಂಡು ಕನಿಕರ ಬಂತು. ಖಿನ್ನ ಸ್ವರದಲ್ಲಿ ಕೇಳಿದೆ,

" ನೀನವನನ್ನು ಮೊದಲು ಪ್ರೇಮಿಸುತ್ತಿದ್ದೆಯಾ ?"

" ಇಲ್ಲ....!"

ಎಂದಳು. ಅದನ್ನು ಕೇಳಿ ನನಗೆ ಗಾಬರಿಯಾಯಿತು. ಅವಳ ಬಗೆಗೆ ಉಕ್ಕಿದ್ದ ಕನಿಕರ ಮಾಯವಾಯಿತು. ಸಂಶಯದಿಂದ ಕೇಳಿದೆ,

" ಯಾವಾಗಲೂ ಪ್ರೇಮಿಸುತ್ತಿರಲಿಲ್ಲವೇ ?"

" ಊಹು" ಎಂದಳು. ಆವಳ ಕ್ರೋಧದ ಬಿಸಿಯುಸಿರು ನನ್ನೆದೆಗೆ

ಬಡಿಯುತ್ತಿತ್ತು. ನಾನು ಬೆಕ್ಕಸಬೆರಗಾಗಿ ಅವಳನ್ನು ಕೇಳಿದೆ,

"ಹಾಗಾದರೆ....ಅವನನ್ನು ಏಕೆ ವಿವಾಹವಾದೆ?"

"ಅವನು ಆಗರ್ಭ ಶ್ರೀಮಂತ....ಪ್ರಿನ್ಸ್ಲೀ ಸ್ಟೇಟಸ್ ಇದೆ; ಕೋಟಿ ರೂ. ಆಸ್ತಿಯಿದೆ....ನನ್ನ ದೇಹಕ್ಕೆ ತುಂಬಾ ಆಸೆ ಬಿದ್ದ. ಅದಕ್ಕೇ ಮದುವೆಯಾದೆ."

ಎಂದಳು. ಅದನ್ನು ಕೇಳುತ್ತಾ ನನ್ನ ಮೈ ಅಸಮಾಧಾನ ತಿರಸ್ಕಾರಗಳಿಂದ ಸೆಟೆದುಕೊಂಡಿತು. ಅವಳ ಮೇಲಿದ್ದ ಸಹಾನು ಭೂತಿಯೆಲ್ಲಾ ಅಳಿಸಿ ಹೋಯಿತು. ಅವಳು ಹೃದಯಹೀನಳೇ ಎಂಬ ಸಂಶಯವೂ ಮೂಡಿತು. ಆಗ ಅನಿರೀಕ್ಷಿತವಾಗಿ ನನ್ನ ಬಾಯಿಂದ ಮತ್ತೊಂದು ಪ್ರಶ್ನೆ ಹೊರಟಿತು,

"ನೀನು ಯಾರನ್ನೂ ಪ್ರೇಮಿಸುವುದಿಲ್ಲವೇ?"

ಎಂದೆ. ಅವಳ ಉತ್ತರಕ್ಕಾಗಿ ಕಾತುರದಿಂದ ಕಾಯ್ದೆ. ಅವಳು ಒಂದು ನಿಮಿಷ ಯೋಚಿಸಿ, "ಇಲ್ಲ" ಎಂದಳು. ನನ್ನೆದೆ ಭೀತಿ ಯಿಂದ ಹಿಂಡಿತು. ಅಲ್ಲೋಲಕಲ್ಲೋಲವಾಗಿ ಬಡಿದುಕೊಳ್ಳತೊಡಗಿತು. ಉತ್ಕಂಠಿತನಾಗಿ,

"ನನ್ನನ್ನೂ!"... ಎಂದು ಕೇಳಿದೆ.

"ಅದು ಏಕೆ ಈಗ?"

ಎಂದು ಬರಸೆಳೆದು ಚುಂಬಿಸಲು ಬಂದಳು. ನನಗೇಕೋ ಆ ಶಂಕೆಯನ್ನು ಸಹಿಸಲಾಗಲಿಲ್ಲ. ಅವಳ ತುಟಿಯ ಮೇಲೆ ಕೈಯಿರಿಸಿ ತಡೆದು ಕೇಳಿದೆ,

"ನನ್ನನ್ನು ಪ್ರೇಮಿಸುವೆಯೋ....ಇಲ್ಲವೋ....ಹೇಳು!"

"ಹೇಳಲೇ ಬೇಕೇ!"

ಅವಳ ಧ್ವನಿಯಲ್ಲಿ ಅಸಮಾಧಾನ ಬೆರೆತಿತ್ತು. ನಾನು ಗಡಸು ಧ್ವನಿಯಲ್ಲಿ,

"ಹೌದು!"....ಎಂದೆ.

"ನೀನೊಬ್ಬ 'ಸಿಲ್ಲೀ....ಬೇಬಿ'!" ಎಂದು ಪುನಃ ನನ್ನನ್ನಪ್ಪಿ ಕೊಂಡಳು. ನನಗೆ ನಿಜವಾಗಿಯೂ ಅಸಮಾಧಾನವಾಯಿತು. ಕೋಪ

ಬಂತು. ಅವಳ ಹಿಡಿತದಿಂದ ಬಿಡಿಸಿಕೊಂಡೆ....ಸ್ವಲ್ಪ ಒರಟುತನ ದಿಂದಲೇ. ನಂತರ ಅವಳ ಬಾಹುಗಳನ್ನು ಹಿಡಿದು ಉಕ್ಕಿ ಬರುವ ಕಾತುರದಿಂದ ನಿಷ್ಠುರವಾಗಿಯೇ

"ನೀನು ನನ್ನನ್ನು ಪ್ರೇಮಿಸುವೆಯೋ .... ಇಲ್ಲವೋ .... ಹೇಳು !"

ಎಂದೆ. ಅವಳು ನನ್ನನ್ನೇ ಒಂದು ರೀತಿಯಲ್ಲಿ ನೋಡಿದಳು. ನಂತರ ನಿರಾಸಕ್ತಿಯಿಂದ, ಮೆಲ್ಲನೆ, "ಕೈಬಿಡು" ಎಂದಳು. ನಾನವಳ ಬಾಹುಗಳನ್ನು ಬಿಟ್ಟೆ. ಅವಳು ಕೊಠಡಿಯ ಛಾವಣಿಯನ್ನೇ ನೋಡುತ್ತಾ, ಹಗುರವಾದ ಧ್ವನಿಯಲ್ಲಿ,

"ಇಲ್ಲ ........ ನಿನ್ನನ್ನೂ ಪ್ರೇಮಿಸೋಲ್ಲ ........ ಯಾರನ್ನೂ ಪ್ರೇಮಿಸೋಲ್ಲ !"

ಎಂದು ಹೇಳಿಬಿಟ್ಟಳು.

ನನ್ನೆದೆಗೆ ಸಿಡಿಲೆರಗಿದಂತಾಯ್ತು. ಅದನ್ನು ನಂಬಲಾರದೆ, "ಸತ್ಯವಾಗಿಯೂ ?" ಎಂದೆ. ನನ್ನ ಧ್ವನಿ ದುಃಖದಿಂದ ನಡುಗು ತ್ತಿತ್ತು. ಅವಳು "ಸತ್ಯವಾಗಿಯೂ....ನಾನೆಂದೂ ಸುಳ್ಳು ಹೇಳಿಲ್ಲ ....ಸುಳ್ಳು ಹೇಳಲು ನಾನು ಯಾರಿಗೂ ಹೆದರಬೇಕಾಗಿಲ್ಲ" ಎಂದು ಪಕ್ಕಕ್ಕೆ ಸರಿದು ನಿಶ್ಚಲಳಾಗಿ ಬಿದ್ದುಕೊಂಡಳು.

ಅಹಂಭಾವ, ಹೃದಯಹೀನತೆಯ ನಗ್ನ-ಪ್ರತಿಮೆಯಂತೆ ಬಳಿಯ ಲ್ಲುರುಳಿದ್ದ ಅವಳನ್ನೇ ನಾನು ನೋಡಿದೆ. ನನ್ನ ತಲೆ ತಿರುಗಿ, ಕರುಳು ತೊಳೆಸುತ್ತಿತ್ತು. ದುಃಖದಿಂದ ಗಂಟಲು ಉಬ್ಬುಬ್ಬಿ ಬರುತ್ತಿತ್ತು.

"ಹಾಗಾದರೆ ನನ್ನ ಬಳಿಗೇಕೆ ಬಂದೆ ?" ಎಂದು ಉದ್ವೇಗದಿಂದ ಬಿಗಿದ ಗಂಟಲಿಂದ ಕೇಳಿದೆ. ಅವಳು ತಿರಸ್ಕಾರ ಮೊಳಗುವ ಧ್ವನಿಯಲ್ಲಿ, "ನೀನು ಅಂಗಲಾಚಿದ್ದಕ್ಕೆ !" ಎಂದಳು. ನನ್ನ ಸ್ವಾಭಿಮಾನಕ್ಕೆ ಕೊಡಲಿ ಪೆಟ್ಟು ಕೊಟ್ಟಂತಾಯ್ತು.

"ನಾನು ಅಂಗಲಾಚಿದೆನೇ....ಯ್ಯು, ಬಿಚ್ !" ಎಂದು ಅವಳ ಮುಖಕ್ಕೆ ಹೊಡೆದುಬಿಟ್ಟೆ.

ಅವಳೂ ಕೆಣಕಿದ ನಾಗಿಣಿ ಹೆಡೆಯೆತ್ತುವಂತೆ ಹಾಸಿಗೆಯಲ್ಲಿ

ಮೇಲೆದ್ದು ಮಂಡಿಯ ಮೇಲೆ ಕುಳಿತಳು. ಅವಮಾನ-ಕ್ರೋಧದ ಕಿಡಿಗಳನ್ನು ಕಣ್ಣಿಂದ ಕಾರುತ್ತಾ ಬುಸುಗುಟ್ಟಿ ಫೂತ್ಕರಿಸಿದಳು.

"ಏನು ಹೇಳಿದೆ!....ನಾನು!....ನಾನು 'ಬಿಚ್'! ಅಂದು ನನ್ನ ಹಿಂದೆ ನಾಯಿಯಂತೆ ಓಡಿ ಬರುತ್ತಿದ್ದಾಗ? ಪಪ್ಪೀ ಕೊಡು! ಪಪ್ಪೀ ಕೊಡು! ಎಂದು ಗೋಳಿಡುತ್ತಿದ್ದಾಗ? ನಾನು 'ಬಿಚ್' ಆಗಿರಲಿಲ್ಲ....ನಿನ್ನ ರಾಣಿಯಾಗಿದ್ದೆ! ಈಗಲಾದರೂ ಎಲ್ಲಾ ಹೇಳ್ತೀನಿ, ತಿಳಿದ್ಕೋ ನೀನು! ನನಗೆ ನಿನ್ನಂಥ ಪೋರರು ನೂರು ಜನ! ಒಂದು ಕಿರುಬೆರಳನ್ನೆತ್ತಿದರೆ ಸಾಕು ಸಾವಿರ ಸ್ಟೂಡೆಂಟ್ಸ್ ನನ್ನ ಹಿಂದೆ ನೊಣಗಳಂತೆ ಓಡಿ ಬರ್ತಾರೆ! ಹೋಗಲಿ ಪಾಪ, ಎಂದು ಕನಿಕರ ಇಟ್ಟು ಬಂದರೆ ಈಗ ನಾನು 'ಬಿಚ್ !'.. ಹು!

"ನಾನು ನಿನ್ನ ಬಳಿ ಏಕೆ ಬಂದೆ ಗೊತ್ತೇ ಬೇಬಿ! ನೀನು 'ಪಪ್ಪೀ ಕೊಡು' 'ಪಪ್ಪೀ ಕೊಡು' ಎಂದುಕೊಂಡು ನನ್ನ ಪಕ್ಕದಲ್ಲಿ ಓಡಿ ಬರುತ್ತಾ ಅಂಗಲಾಚುತ್ತಿದ್ದೆಯಲ್ಲಾ .... ಆಗ ನಿನ್ನ ಮುಖ ನೋಡಿದೆ. ನಿನ್ನ ತುಟಿ ನಡುಗುತ್ತಿತ್ತು....ನಿನ್ನ ತೊಡೆ ನಡುಗುತ್ತಿತ್ತು....ನಿನ್ನ ಕೈ ಕಾಲು ನಡುಗುತ್ತಿತ್ತು....ನಿನ್ನ ಧ್ವನಿ ನಡುಗುತ್ತಿತ್ತು....ನಿನ್ನ ಇಡೀ ಗಂಡಸುತನವೇ ತರಗೆಲೆಯಂತೆ ನಡುಗುತ್ತಿತ್ತು. ಅದನ್ನು ಕಂಡು ನನ್ನ ಹೆಣ್ಣು ಜೀವಕ್ಕೆ ಕನಿಕರ ಬಂತು. ಅಯ್ಯೋ ಪಾಪ! ಎನಿಸಿತು. ಒಬ್ಬ ಸುಂದರ ಸ್ಟೂಡೆಂಟ್ ಇಷ್ಟು 'ಕ್ರೇಜಿ' ಆಗಿದಾನೆ, ತಲೆ ಕೆಡಿಸಿಕೊಂಡಿದಾನೆ .... ಅವನಿಗೆ ಕ್ರೂರವಾಗಿರ ಕೂಡದು, ಅವಮಾನ ಮಾಡಬಾರದು, ಬೀದಿಯ ನಾಲ್ಕು ಜನರಿಂದ ಹೊಡೆಸಬಾರದು, ಎಂದು ಸಿನಿಮಾಗೆ ಕರೆದುಕೊಂಡು ಹೋದೆ, ನಿನ್ನ ರೂಮಿಗೆ ಬಂದೆ, ನಿನ್ನ ಜೊತೆ ಮಲಗಿದೆ. ನಿನ್ನ ಐಶ್ವರ್ಯ, ಸೋಷಿಯಲ್ ಸ್ಟೇಟಸ್, ನಿನ್ನ ಎರಡು ಜೊತೆ ಷೂಸ್, ನಾಲ್ಕು ಗ್ಯಾಬರ್ಡೀನ್ ಪ್ಯಾಂಟ್ ಇವನ್ನು ನೋಡಲ್ಲ! ಅಷ್ಟು ದಯೆ ತೋರಿ ನನ್ನ ದೇಹವನ್ನು ಉಣ ಬಡಿಸಿದರೆ....ಈಗ ನಾನು 'ಬಿಚ್ !' ನನ್ನ ಮುಖಕ್ಕೊಂದು ಸ್ಲಾಪ್! ಓ, ವಾಟ್-ಸ್ಲಾಪ್ಸ್—ಯು—ಟು-ಸ್ಪಿಟ್-ಆನ್-ಮೈ-ಫೇಸ್! ಯು....ಅನ್‌ಗ್ರೇಟ್‌ಫುಲ್ ಬೀಸ್ಟ್!"

ಎಂದು ಉನ್ಮತ್ತಳಂತೆ ನನ್ನ ಭುಜ ಹಿಡಿದು ಕುಲುಕಿ, ನನ್ನನ್ನೇ ಕ್ರೋಧಭರಿತ ನೇತ್ರಗಳಿಂದ ನೋಡತೊಡಗಿದಳು.

ಅವಳ ಉಗ್ರನೋಟವನ್ನು ನನ್ನಿಂದ ಎದುರಿಸಲಾಗಲಿಲ್ಲ, ನನ್ನ ಜಂಘಾಬಲವೇ ಉಡುಗಿಹೋಯಿತು! ನನ್ನ ಹೃದಯವನ್ನೇ ಕಿತ್ತು ಬೀದಿಗೆಸೆದು, ಸಹಸ್ರಾರು ಜನರ ಸಂತೆ ತುಳಿದಾಡಿದಂತೆ ಆಯ್ತು!

ಅವಳ ಮಾತುಗಳನ್ನು ಕೇಳಲಾರದೆ ಕಿವಿ ಮುಚ್ಚಿಕೊಂಡೆ. ನನ್ನ ನೈತಿಕ ದುರ್ಬಲತೆಯನ್ನೇ ಅಣಕಿಸುವ ಅವಳ ಉರಿ ನೇತ್ರಗಳನ್ನು ನೋಡಲಾರದೆ ಕಣ್ಣು ಮುಚ್ಚಿಕೊಂಡೆ. ಹಾಸಿಗೆಯಲ್ಲಿ ಮುಖ ಹುದುಗಿಸಿ ಮಗುವಿನಂತೆ ಬಿಕ್ಕಿಬಿಕ್ಕಿ ಗಟ್ಟಿಯಾಗಿ ಅಳತೊಡಗಿದೆ. ಕಣ್ಣೀರಿನಿಂದ ಹಾಸಿಗೆಯೆಲ್ಲಾ ತೋಯ್ದು, ನನ್ನ ಮುಖವೆಲ್ಲಾ ಒದ್ದೆಯಾಯಿತು.

ಅವಳು ನನ್ನನ್ನು ಮುಟ್ಟದೆ, ಹಾಸಿಗೆಯಿಂದ ಕೆಳಗಿಳಿದು, ಉಡುಪು ಧರಿಸಿಕೊಂಡಳು. ನಂತರ ನನ್ನ ಬಳಿ ನಿಂತು, ವಿಷಾದ, ಕೋಪ, ತಿರಸ್ಕಾರದ ಧ್ವನಿಯಲ್ಲಿ,

"ಹ್ಞೋ! ಏಕೆ ಅಳುತ್ತೀಯ? ಹಳ್ಳಿಗೆ ಹೋಗು. ಗುಮಾಸ್ತೆ ಕೆಲಸಕ್ಕೆ ಸೇರು .... ಒಬ್ಬ ಗೊಣ್ಣೆಸುರುಕಿ, ಪತಿವ್ರತೆಯನ್ನು ಮದುವೆಯಾಗು, ಒಂದು ಡಜ಼ನ್ ನಾಯಿ ಕುನ್ನಿಗಳನ್ನು ಹುಟ್ಟಿಸು... ಅಂಡ್ ....ಅಂಡ್ ಡೈ–ಲೈಕ್-ಎ-ವರ್ಮ್!!"

ಎಂದು ಉಗುಳಿ ಹೊರಟೇ ಹೋದಳು. ನಾನು ಹಾಸಿಗೆಯಿಂದ ತಲೆಯೆತ್ತಲಿಲ್ಲ. ಮೇಲೆದ್ದರೆ ಅವಳನ್ನಲ್ಲಿ ಕೊಂದುಬಿಡುವೆನೋ .... ಎಂದು ಅಂಜಿಕೆಯಾಯ್ತು ........ ಅಸಹನೀಯ ಯಾತನೆ, ಅಪಮಾನ, ಎದೆಯುರಿಯಿಂದ ಕಟ್ಟಿಹಾಕಿದ ಕ್ರೂರಜಂತುವಿನಂತೆ, ಹಲ್ಲಿನಿಂದ ಹಾಸಿಗೆಯನ್ನೆಲ್ಲಾ ಜಗಿದುಹಾಕುತ್ತಾ ಹೊರಳಾಡಿದೆ.

ಕೊಠಡಿಯಲ್ಲಿ ನಾನೊಬ್ಬನೇ ಉಳಿದಾಗ, 'ನಿನ್ನ ಗಂಡಸುತನವೇ ನಡುಗುತ್ತಿತ್ತು!........ನಿನ್ನ ಗಂಡಸುತನವೇ ತರಗೆಲೆಯಂತೆ ನಡುಗುತ್ತಿತ್ತು!!' —ಎಂಬ ಕ್ರೂರ ಅಸಹ್ಯಕರ ವಾಣಿ, ನನ್ನ ಕಿವಿಯಲ್ಲಿ ಗುಡುಗು ಸಿಡಿಲುಗಳ ವಿಕಟಾಟ್ಟಹಾಸದಿಂದ ಮೊಳಗಿ,

ಪ್ರತಿಧ್ವನಿಗೈಯುತ್ತಿದ್ದುವು. ಆಗ ನನ್ನ ಗಲ್ಲ ಕಂಪಿಸತೊಡಗಿ, ಕಣ್ಣಿನಿಂದ ಬಳಬಳನೆ ನೀರುಕ್ಕಿ ಹರಿಯುತ್ತಿತ್ತು.

ಮೂರನೆಯ ದಿನವೆಲ್ಲಾ ನಾನು ಹಾಸಿಗೆಯಿಂದ ಮೇಲೇಳಲಿಲ್ಲ. ಮುಂದಿನ ದಿನವೂ ಹಸಿವಿಗಿಂತ ಹೊಟ್ಟೆಯುರಿಯೇ ನನ್ನ ಹೊಟ್ಟೆಯು ತುಂಬಾ ದಹಿಸುತ್ತಿತ್ತು. ಮನಸ್ಸನ್ನು ಸ್ವಲ್ಪ ಸ್ಥಿಮಿತಕ್ಕೆ ತಂದುಕೊಂಡೆ....ಆಗ ನಾನು ಮಲಗಿದ್ದ ಹಾಸಿಗೆ ಅವಳ ದೇಹದ ಸುಗಂಧ ನನ್ನಲ್ಲದೆ, ಬೆವರಿನ ದುರ್ಗಂಧವನ್ನೂ ಕಾರುತ್ತಿತ್ತು. ಅಸಹ್ಯದಿಂದ ತಲ್ಲಣಿಸಿ, ಹಾಸಿಗೆಯನ್ನು ಮಂಚದ ಮೇಲಿಂದ ಎತ್ತಿ ರೂಮಿನ ಮೂಲೆಗೆಸೆದೆ. ಅದು ಮೇಜಿನ ಕಾಲಿಗೆ ತಗುಲಿ, ಅಂಚಿನಲ್ಲಿದ್ದ ಕನ್ನಡಿ ಕೆಳಗುರುಳಿತು. ಅದನ್ನು ಕೈಯಲ್ಲೆತ್ತಿ ಮುಖ ನೋಡಿಕೊಂಡೆ. ಒಂದು ತಿಂಗಳ ಹಿಂದೆ ಇದ್ದ ನನ್ನ ಮುಖಕ್ಕೂ, ಈಗಿನ ನನ್ನ ಮುಖಕ್ಕೂ ಅಪಾರ ವ್ಯತ್ಯಾಸವಿತ್ತು. ನನ್ನ ಎಳೆಜೀವನದ ಆತ್ಮ ಸೌಂದರ್ಯ.... ಆ ಒಡೆದ ಕನ್ನಡಿಯ ಪ್ರತಿಬಿಂಬದಂತೆಯೇ ಚೂರು ಚೂರಾಗಿತ್ತು. ಅಸಹ್ಯದಿಂದ ತಲೆತಿರುಗಿದಂತಾಯ್ತು....ವಾಂತಿ ಬರುವಂತಾಯ್ತು....ನಡುಗುವ ಕೈ ಎತ್ತಿ ಆ ಕನ್ನಡಿಯನ್ನು ನೆಲಕ್ಕಪ್ಪಳಿಸಿದೆ. ಅದು ಸಹಸ್ರಾರು ಚೂರುಗಳಾಗಿ ರೂಮಿನಲ್ಲೆಲ್ಲಾ ಹರಡಿಕೊಂಡಿತು. ಆ ರೂಮಿನಲ್ಲೇ ಇನ್ನು ಕೆಲವು ಕಾಲ ಇದ್ದಿದ್ದರೆ, ನನ್ನನ್ನು ನಾನೇ ಏನು ಮಾಡಿಕೊಳ್ಳುತ್ತಿದ್ದನೋ.. .ನನ್ನನ್ನು ಕಂಡು ನನಗೇ ಹೆದರಿಕೆಯಾಯಿತು.

ಆ ರೂಮನ್ನು ಹಾಗೇ ಬಿಟ್ಟು, ಒಂದು ಹೊಟೇಲಿಗೆ ಬಂದೆ. ಅಲ್ಲಿ ಒಂದೆರಡು ದಿನವಿದ್ದು, ಸ್ವಲ್ಪ ಚೇತರಿಸಿಕೊಂಡ ನಂತರ ಊರಿಗೆ ಹೊರಡಲು ನಿರ್ಧರಿಸಿದೆ. ನನ್ನ ಹಾಸಿಗೆ, ಸೂಟ್‌ಕೇಸ್ ಎಲ್ಲವನ್ನೂ ಪ್ಯಾಕ್ ಮಾಡಿ, ಹೊರಿಸಿಕೊಂಡು ಹೋಗಲು ಹೊಟೇಲಿನ ಹುಡುಗನೊಡನೆ ರೂಮಿಗೆ ಬಂದೆ.

ಎದುರು ಬಂಗಲೆಯ ವೃದ್ಧ ಸೇವಕ ಬಂದು ಸೆಲ್ಯೂಟ್ ಮಾಡಿದ. ಏಕೆ ಮಾಡಿದನೆಂಬುದು ಅರ್ಥವಾಯಿತು. ಅವನ ಮುಖಕ್ಕೆ ಮುಖ ಕೊಡದೆ, ಜೇಬಿನಿಂದ ಎರಡು ರೂಪಾಯಿ ತೆಗೆದುಕೊಟ್ಟೆ. ಅದನ್ನು

'ಥ್ಯಾಂಕ್-ಯು-ಸರ್ !' ಎಂದು ಸ್ವೀಕರಿಸುತ್ತಾ, ಅತ್ತಿತ್ತ ನೋಡಿ ಹತ್ತಿರ ಬಂದು ಪಿಸುಗುಟ್ಟಿದ : " ನೀವು ಇಲ್ಲಿಂದ ಹೊರಟ ದಿನ ರಾತ್ರಿ ಅಮ್ಮಾವರು ಇಲ್ಲಿಗೆ ಬಂದು ಅಳುತ್ತಾ ಕುಳಿತಿದ್ದರು !"

ನಾನವನ ಮಾತನ್ನು ನಂಬಲಿಲ್ಲ. ಶ್ರೀಮಂತ ಗೃಹಗಳ ಸೇವಕರು ತಮ್ಮ ಒಡೆಗಳನ್ನು ಹೊಗಳಿ, ಅವರ ಇಂಗಿತವನ್ನರಿತು ಮಾತಾಡಿ, 'ಬಕ್ಷೀಸ್' ಗಿಟ್ಟಿಸುವುದು ವಾಡಿಕೆ—ಅವನಿಗೆ " ಒಳ್ಳೆಯ ದಾಯಿತು ; ಹೊರಟು ಹೋಗು " ಎಂದೆ.

ಅವನು, " ಮರೀಬೇಡಿ ಸಾರ್....ಬಡವನ ಮೇಲೆ ದಯೆ ಇರಲಿ " ಎನ್ನುತ್ತಾ ಅಲ್ಲೇ ನಿಂತ.

ಕೂಲಿಯವನು ಸಾಮಾನು ಹೊತ್ತು ಮೆಟ್ಟಲಿಳಿದು ಹೋದ. ನಾನು ಕೈ ಒದರಿಕೊಳ್ಳುತ್ತಾ ಅಲ್ಲೇ ನಿಂತೆ. ಸುಂದರಿಯ ಮನೆಯ ಕಡೆ ಒಮ್ಮೆ ಕ್ರೋಧದಿಂದ ನೋಡಿ ಬುಸುಗುಟ್ಟಿದೆ....ಅವಳು ಗೇಟಿನ ಬಳಿ ಬಂದು ನಿಂತಿದ್ದಳು !

ಅವಳನ್ನು ಕಂಡು ನನ್ನ ಕ್ರೋಧ ಮಸೆದು ಮೇಲೆದ್ದಿತು. ಅವಳ ಕಡೆಗೆ ಕಣ್ಣೆತ್ತಿ ನೋಡಕೂಡದೆಂದು ಪ್ರತಿಜ್ಞೆ ಮಾಡಿ, ಸೆಣಸಿನ ಠೀವಿಯಿಂದ ಕೆಳಗಿಳಿದು ಹೊರಟೆ. ಗೇಟಿನ ಬಳಿಗೆ ಬಂದೆ. ರಸ್ತೆಗೆ ಕಾಲಿರಿಸಿದೆ. ಕಣ್ಣು ಹೊರಳಿಸದಿದ್ದರೂ, ಏಕೋ ನನ್ನ ಹೆಜ್ಜೆ ನಿಧಾನವಾಯಿತು. ಎದೆ ವಿಚಿತ್ರ ಭೀತಿಯಿಂದ ಬಡಿದುಕೊಳ್ಳ ತೊಡಗಿತು. ಉಸಿರು ಕಟ್ಟಿಕೊಂಡಿತು. ಕೂಡಲೇ ಉಂಗುರ ದಲ್ಲಿರಿಸಿದ್ದ ಒಂದು ಅನಿರೀಕ್ಷಿತ ಪತ್ರ ಅವಳಿದ್ದ ಕಡೆಯಿಂದ ನನ್ನ ಪಾದದ ಮುಂದೆಯೇ ಬಂದು ಬಿತ್ತು !

ನಾನು ಚಕಿತನಾಗಿ ನಿಂತೆ. ಅವಳೆಡೆಗೆ ನೋಡಲಿಲ್ಲ. ಪತ್ರ ವನ್ನೂ ನೆಲದಿಂದ ತೆಗೆದುಕೊಳ್ಳಲಿಲ್ಲ. ಒಂದು ಕ್ಷಣ ಅವಮಾನ ಕ್ರೋಧ ಮರುಕಳಿಸಿ—ಉಮ್ಮಳಿಸಿ ಬಂದುವು. ನಾನು ಅವುಡು ಗಚ್ಚಿದೆ. ಆ ಪತ್ರವನ್ನು ಬೂಟುಗಾಲಿಂದ ಒದೆದು, ಅವಳೆಡೆಗೆ ನೋಟ ಬೀರದೆ, ಅಲ್ಲಿಂದ ಹೊರಟು ಹೋಗಬೇಕೆನಿಸಿತು. ಆದರೆ ಅದೇನೋ ಮರುಕ್ಷಣವೇ ಅವಳೆಡೆಗೆ ನೋಟ ಹೊರಳಿಸಿದ್ದೆ.

ಅವಳ ತುಂಬು ಕಣ್ಣುಗಳು ಅಶ್ರುಪೂರಿತವಾಗಿದ್ದುವು. ಅವಳ ವದನದ ಮೇಲೆ ಪರಿತಾಪ ಅಚ್ಚೊತ್ತಿದಂತಿತ್ತು. ನನಗರಿವಿಲ್ಲದಂತೆಯೇ ಆ ಪತ್ರವನ್ನೆತ್ತಿಕೊಂಡು, ಅವಳ ಉಂಗುರವನ್ನು ಮತ್ತೆ ಬಿಸಾಡಿದ್ದೆ. ಅನಂತರ ಪತ್ರ ತೆಗೆದುಕೊಂಡಿದ್ದನ್ನು ಅರಿತು ಬೆಚ್ಚಿದೆ. ಕಡೆಗೆ ಅಲ್ಲಿಂದ ವಿಪ್ರಪ್ರಯತ್ನದಿಂದ ಕಾಲು ಕಿತ್ತೆ. ಎರಡು ಅಡಿ ಮುಂದಿರಿಸಿದಾಗ, ಉಂಗುರ ಬಿದ್ದಿದ್ದ ಕಡೆಗೆ ಧಾವಿಸಿ ಬಂದಿದ್ದ ಅವಳ, "ಮಿ. ರಾಜ್ !" ಎಂಬ ಉತ್ಕಂಠಿತ ಕರೆ ಕಿವಿಗೆ ಬಡಿಯಿತು. ನನ್ನ ಅಡಿ ಎಡವಿತು. ತಲೆ ತಿರುಗಿತು. ಕಣ್ಣು ಮಂಕಾದುವು. ಕಲ್ಲಾದ ಎದೆ ಹೂವಾಗುವುದರಲ್ಲಿತ್ತು. ಕಠೋರವಾಗಿ ಅವುಡುಗಚ್ಚಿ, ತಲೆ ಒದರುತ್ತಾ, ವೇಗ ವೇಗವಾಗಿ ಮುಂದೆ ನಡೆದುಬಿಟ್ಟೆ....ಬಹುಶಃ ಅಲ್ಲಿಂದ ನಾನು ಓಡಿಯೇ ಬಂದಿರಬೇಕು

ರೈಲಿನಲ್ಲಿ ಕುಳಿತಾಗ ನಿಧಾನವಾಗಿ ಆ ಪತ್ರ ತೆರೆದು ನೋಡಿದೆ.

" ಮಿ. ರಾಜ್,

ನಾವಿಬ್ಬರೂ ಆ ಅಸಹ್ಯ ಪ್ರಕರಣವನ್ನು ಮರೆತು, ಒಬ್ಬರು ಇನ್ನೊಬ್ಬರನ್ನು ಕ್ಷಮಿಸಿಕೊಳ್ಳೋಣ. ನಮ್ಮ ಸುಖ–ಸ್ನೇಹ ಈ ರೀತಿ ಕೊನೆಗಾಣಬೇಕೇ ?

—ಪ್ರಭಾವತಿದೇವಿ."

ಎಂಬ ಪತ್ರ ಮತ್ತು ಅವಳ ಪುಟ್ಟ ಭಾವಚಿತ್ರವಿತ್ತು.

ನಿಟ್ಟುಸಿರು ಬಿಡುತ್ತಾ ಸೀಟಿನಲ್ಲಿ ಕುಸಿದು ಪತ್ರವನ್ನು ಕೈಯಲ್ಲಿ ಉಂಡೆ ಮಾಡಿ ಮಾಡಿ ಕಟ್ಟಕಡೆಯ ರೈಲ್ವೆ ನಿಲ್ದಾಣದವರೆಗೂ ಯೋಚಿಸಿದೆ. ಕೊನೆಗೆ ರೈಲುಗಾಡಿಯಲ್ಲೆಲ್ಲಾ ಕಣ್ಣು ಹೊರಳಿಸಿದೆ. ಆಗ, 'ನೋಡು....ಇಲ್ಲಿರುವ ಒಬ್ಬರೂ ನಿನ್ನವರಲ್ಲ .... ಅವಳೊಬ್ಬಳೇ ನಿನ್ನವಳು. ಬೇಗ ಹೋಗಿ ಅವಳನ್ನಪ್ಪು' ಎನ್ನುತ್ತಿತ್ತು ನನ್ನ ದುರ್ಬಲ ಮನಸ್ಸು ! ಮರುಕ್ಷಣವೇ, ಅವಳು ನನಗೆ ಮಾಡಿದ ಅಪಮಾನಕ್ಕಿಂತಲೂ, 'ಹೋಗು....ಗುಮಾಸ್ತೆಯಾಗು ..... ಒಬ್ಬ

ಗೊಣ್ಣೆಸುರುಕಿ ಪತಿವ್ರತೆಯನ್ನು ಮದುವೆ ಆಗು ... ಒಂದು ಡಜ಼ನ್ ನಾಯಿಕುನ್ನಿಗಳನ್ನು ಹುಟ್ಟಿಸು — ಕ್ರಿಮಿಯಂತೆ ಸಾಯಿ!' ಎಂಬ ಅಮಾನುಷ ಮನೋಭಾವ, ವಿಕೃತ ಮನಸ್ಸು, ಪಾಷಾಣ ಹೃದಯ ನನಗೆ ನೆನಪಾಯಿತು. ಆಗ, 'ಛೀ!....ಇನ್ನವಳ ಸಂಬಂಧ ಮಾಡಿದರೆ ನಾನು ಮನುಷ್ಯನಲ್ಲ!' ಎಂದುಕೊಂಡೆ. ಆ ಪತ್ರವನ್ನು ಹರಿದು ಕಿಟಕಿ ಯಿಂದ ಹೊರಗೆ ತೂರಿದೆ. ಅವಳ ಭಾವಚಿತ್ರವನ್ನೂ ಹರಿಯಲು ಹೊರಟೆ. ಅದು ಏಕೋ ಮೊದಲು ಮೊದಲು ಮನಸ್ಸಾಗಲಿಲ್ಲ. ಅವಳ ಭಾವಚಿತ್ರದ ಸವಿನಗೆಯ ಕಣ್ಣುಗಳನ್ನು ಕಂಡೊಡನೆಯೇ ಮಂತ್ರಮುಗ್ಧನಾಗುತ್ತಿದ್ದೆ. ನನ್ನ ದ್ವೇಷವೆಲ್ಲ ಇಳಿದುಹೋಗುತ್ತಿತ್ತು. ಆದರೂ ಆ ಚಿತ್ರ ಬಳಿಯಲ್ಲಿರುವಷ್ಟು ಕಾಲವೂ ದೌರ್ಬಲ್ಯ ನನಗೆ ತಪ್ಪಿದ್ದಲ್ಲ ಎಂದು ಅದನ್ನು ಹರಿಯದೆ, ಹಾಗೇ ಕಿಟಕಿಯಿಂದ ಹೊರ ಗೆಸೆದೆ. 'ಇಲ್ಲಿಗೆ ನನ್ನ-ಅವಳ ಸಂಬಂಧ ಜೀವನಪರ್ಯಂತ ಕಡಿದು ಹೋಯಿತು'—ಎಂದು ತೃಪ್ತಿಯ ನಿಟ್ಟುಸಿರುಬಿಟ್ಟು ಮತ್ತೆ ನಿತ್ರಾಣ ನಾಗಿ ಸೀಟಿಗೆ ಒರಗಿ ಹೊರಗೆ ನೋಡತೊಡಗಿದೆ. ನನ್ನ ಕಣ್ಣುಗಳಲ್ಲಿ ನಿಸ್ತೇಜತೆ, ನಿರಾಸಕ್ತಿ, ಶೂನ್ಯತೆ ತುಂಬಿತುಳುಕುತ್ತಿತ್ತು.

ಹಳ್ಳಿಯಲ್ಲಿ ನೆಲೆಸಿ, ಗೆಳೆಯ ರಾಜಶೇಖರನ ಒಡನಾಟ ಪ್ರಾರಂಭಿ ಸಿದೆ. ಒಡನೆಯೇ ನನ್ನ ಬಾಳಿಗೆ ಹೊಸ ಬೆಳಕು, ಹೃದಯಕ್ಕೆ ಹೊಸ ಹುರುಪು, ಆತ್ಮಕ್ಕೆ ಪವಿತ್ರವಾದ ನವೋದ್ದೀಪನೆ ಬಂದಂತಾಯಿತು.

ಕಾಲೇಜಿನ ಜೀವನದಲ್ಲಿ ಅಂಗಸಾಧನೆಯನ್ನು ನಿರ್ಲಕ್ಷಿಸದೆ ದೇಹವನ್ನು ದೃಢವಾಗಿಟ್ಟುಕೊಂಡಿದ್ದೆ. ಹಳ್ಳಿಯಲ್ಲಿ ಅದರ ಜೊತೆಗೇ ಹೃದಯವನ್ನೂ ಬಲಗೊಳಿಸಿ, ನನ್ನ ನೈತಿಕ ನಿಲುವನ್ನು ಸ್ಥಿರಪಡಿಸಿ, ಮನೋಚಾಂಚಲ್ಯವನ್ನು ಜಯಿಸುವ ಪ್ರಯತ್ನಕ್ಕೆ ಧುಮುಕಿದೆ.... ಆ ಸೌಭಾಗ್ಯದಾಯಕ ಗೆಳೆತನದ ದೆಸೆಯಿಂದ ನನ್ನ ಯತ್ನದಲ್ಲಿ ಸಫಲನಾದೆ. ಒಬ್ಬ ಪ್ರೌಢಜೀವಿಯಾದೆ. ಈಗ ಆ ಗುಣ ಗಳೇ ನಿಮ್ಮ ಪವಿತ್ರ ಪ್ರೇಮದ ಪ್ರಭಾವದಿಂದ ಪೋಷಣೆಪಡೆಯುತ್ತಿವೆ, ಸುದೃಢವಾಗುತ್ತಿವೆ.

ಶಾಂತಾ, ನಿಮ್ಮ ಪ್ರೇಮದ ಪಾವಿತ್ರ್ಯತೆ, ಪ್ರೇರೇಪಕ ಶಕ್ತಿಗೆ

ನಾನು ಕೊಟ್ಟಿರುವ ಗೌರವ, ಮಹತ್ವ ಅಲ್ಪವಲ್ಲ .... ಅದಕ್ಕಾಗಿಯೇ ನಾನು ಈ ದೀರ್ಘ ದುರಂತವನ್ನು ನಿಮಗೆ ಕೂಲಂಕಷವಾಗಿ ತಿಳಿಸ ಬೇಕಾಯಿತು. ನಿಮ್ಮ ಅಪೇಕ್ಷೆ ಮತ್ತು ಅಪ್ಪಣೆಯಂತೆ ಆ ಕಹಿ ಪ್ರಸಂಗದ ಪ್ರತಿಯೊಂದು ಘಟ್ಟ, ಮನೋಸ್ಥಿತಿ, ಭಾವ, ಮಾತು, ಕೃತಿ ಯನ್ನೂ ತಪ್ಪದಂತೆ ತಿಳಿಸಿರುವೆ.

ಆಗ ನಾನು ಅಷ್ಟು ನೈತಿಕ ದೌರ್ಬಲ್ಯದಿಂದ ನರಳುತ್ತಿದ್ದುದಕ್ಕೆ ಕೆಲವು ಆಳವಾದ ಕಾರಣಗಳಿವೆ. ನಾಲ್ಕು ವರ್ಷಗಳ ಅನಂತರ ಆ ಕಾರಣಗಳ ಪ್ರಬಲತೆ ನನಗೆ ಅರಿವಾಗಿದೆ .... ಆ ಕಾರಣಗಳು ನನ್ನ ಅರೂಪಿತ ವ್ಯಕ್ತಿತ್ವದಲ್ಲೇ ಅಲ್ಲದೆ, ನನ್ನ ವ್ಯಕ್ತಿತ್ವವನ್ನು ರೂಪಿಸುತ್ತಿದ್ದ ಆಗಿನ ಸನ್ನಿವೇಶ ವಾತಾವರಣಗಳಲ್ಲೂ ಅಡಗಿದ್ದುವು.

ನನ್ನ ಹಾಸ್ಟೆಲು ಜೀವನ ಹೇಗಿತ್ತೆಂದು ಆಗಲೇ ತಿಳಿಸಿರುವೆ.... ಇನ್ನು ಕಾಲೇಜು ಜೀವನ !....ಅದು ಮತ್ತೂ ಘೋರ !

ಪಾಠ ಪ್ರವಚನಗಳ ಮಾತಿಲ್ಲಿ ಬೇಡ ... ಅಲ್ಲಿನ ಸಾಮೂಹಿಕ ಜೀವನವನ್ನು ಕುರಿತ ಒಂದೆರಡು ಮಾತುಗಳೇ ಸಾಕು.

ನಾನು ಓದುವ ಕಾಲೇಜು ಭವನವನ್ನು ನೀವು ನೋಡಿರ ಬಹುದು....ತುಂಬಾ ಅಂದವಾಗಿದೆ ! .... ಆದರೆ ಪ್ರಮಾಣವಾಗಿಯೂ ಅದೊಂದು ಕುರಿದೊಡ್ಡಿ !

ನೂರಾರು ಮಂದಿ ವಿದ್ಯಾರ್ಥಿಗಳನ್ನು ಹೊರಲಾರದೆ ತಿಣಕುವ ತರಗತಿಗಳು. ಅವರನ್ನು ಹತೋಟಿಯಲ್ಲಿಡಲು ಅಸಮರ್ಥರಾಗಿ ಸೋತ ಬೋಧಕರು, ಸ್ಥಳಾಭಾವ, ಪೀರಿಯಡ್ ಪೀರಿಯಡ್‌ಗೂ ಅಲ್ಲಿಂದಿಲ್ಲಿಗೆ ಒಬ್ಬರನ್ನೊಬ್ಬರು ತೀಡಿಕೊಂಡು ಓಡಾಟ .... ಇಂಥ ಜೀವನದಲ್ಲಿ ಸಿಕ್ಕಿಬಿದ್ದಿದ್ದ ಯುವಕರಲ್ಲಿ ಬಹುಮಂದಿ ಪರಸ್ಥಳದವರು. ಮನೆಯಲ್ಲಿ ತಾಯಿ, ತಂಗಿ, ಅಕ್ಕ, ಅತ್ತಿಗೆ ಮೊದಲಾದವರನ್ನು ಹೊಂದಿದ್ದವರು. ಈಗ ಮಹಾನಗರವೊಂದಕ್ಕೆ ಬಂದು, ಅಲ್ಲಿನ ಬಣ್ಣ ಬಣ್ಣದ ಆಕರ್ಷಣೆಗಳ ನಡುವೆ ಹೇಗೋ ಪರದಾಟದಲ್ಲಿ ಜೀವನ ಸಾಗಿಸುತ್ತಿದ್ದವರು. ಹುಟ್ಟಿನಿಂದಲೂ ಒಂದಲ್ಲ ಮತ್ತೊಂದು ಮನೆ ಹೆಣ್ಣಿನ ಪ್ರೇರಕಶಕ್ತಿಯ ಸಾನ್ನಿಧ್ಯದಲ್ಲಿ ಜೀವಿಸಿದ್ದ ಅವರು ಈಗ

ಉತ್ಕಟ ತಾರುಣ್ಯಾವಸ್ಥೆಯ, ಆಸ್ಫೋಟಕಾರಿ ವಿಕಾಸ ದಿನಗಳಲ್ಲಿ ಅಂಥ ಸುಭಗ ಸನ್ನಿವೇಶದಿಂದ ಬುಡಕಿತ್ತು ಬಂದಿದ್ದವರು.

ಒಬ್ಬ ಹೆಣ್ಣಿನ ಪರಿಶುದ್ಧ ಒಲುಮೆಯನ್ನಾದರೂ ಅನುಭವಿಸಲು ಅವರಿಗೆ ವರ್ಷಗಟ್ಟಳೆ ಅವಕಾಶವಾಗುತ್ತಿರಲಿಲ್ಲ. ಸುಸಂಸ್ಕೃತ ತರುಣ ತರುಣಿಯರು ಅನುದಿನವೂ ಸೇರುತ್ತಿದ್ದ ವಿಶ್ವವಿದ್ಯಾನಿಲಯಗಳಲ್ಲೂ ಆ ಅವಕಾಶ ಸಿಗುತ್ತಿರಲಿಲ್ಲ....ಅವಕಾಶ ಸಿಗುತ್ತಿರಲಿಲ್ಲ ಎನ್ನುವುದ ಕ್ಕಿಂತಲೂ ಹೆಣ್ಣು-ಗಂಡುಗಳ ನಡುವೆ ಪರಿಚಯ, ತಿಳಿಸ್ನೇಹ ಮೊದ ಲಾದುವು ಬೆಳೆಯುವಂಥ ವಿಮುಕ್ತ-ವಾತಾವರಣವೇ ಇರಲಿಲ್ಲ ಎಂದರೆ ಹೆಚ್ಚು ಸಮಂಜಸ. ವಿದ್ಯಾರ್ಥಿ-ವಿದ್ಯಾರ್ಥಿನಿಯರೇನಾದರೂ ಜೊತೆ ಸೇರಿದರೆ ಆಕಾಶವೇ ಕಳಚಿ ತಲೆಯ ಮೇಲೆ ಬೀಳುವುದೇನೋ ಎನ್ನುವ ಬೀಭತ್ಸ, ಕುತ್ಸಿತ ಮನೋಭಾವ ಕವಿದ ವಿಕೃತ ವಾತಾ ವರಣವಿತ್ತು. ಇದರಿಂದ ಅವರಿಬ್ಬರೂ ಒಬ್ಬರ ಮುಖ ಮತ್ತೊಬ್ಬರಿಗೆ ಕಂಡಾಗ ಗಂಡು-ಹೆಣ್ಣು ಬೆಕ್ಕುಗಳಂತೆ ವಿಲಕ್ಷಣವಾಗಿ ವರ್ತಿಸು ತ್ತಿದ್ದರು. ಹುಡುಗರು ಹುಡುಗಿಯರನ್ನು ಗೇಲಿ ಮಾಡಿ, ಏನಾದರೂ ಚುಚ್ಚುಮಾತಿನಿಂದ ಅವರ ಮನನೋಯಿಸಿ ತಮ್ಮ 'ಪೀಡನ-ರತಿ'ಯ ಚಟ ತೀರಿಸಿಕೊಳ್ಳುತ್ತಿದ್ದರು.

ಅಂಥ ವಿಕೃತ ವರ್ತನೆ, ಅನಾಗರೀಕ ಸಂಪರ್ಕವನ್ನು ಕಂಡು ನನಗೆ ಅಸಹ್ಯವಾಗುತ್ತಿತ್ತು. ಆಗ ಅಂಥ ಗೆಳೆಯರನ್ನು ಪಶುಗಳು ಎಂದು ಕರೆಯುತ್ತಿದ್ದೆ. ನಿಜವಾಗಿಯೂ ಅವರು ಆಗ ಪಶುಗಳಿಗಿಂತಲೂ ನೀಚರಾಗಿ ಕಾಣುತ್ತಿದ್ದರು !

ಇದಕ್ಕೆ ಬದಲು ವಿದ್ಯಾರ್ಥಿ-ವಿದ್ಯಾರ್ಥಿನಿಯರ ನಡುವೆ ಸಹಜ ವಾದ. ಸಭ್ಯತೆಯಿಂದ ಕೂಡಿದ ಸ್ನೇಹ.... ಗೆಳೆತನಗಳನ್ನು ನಾನು ಅಪೇಕ್ಷಿಸುತ್ತಿದ್ದೆ. ನಾಲ್ಕಾರು ಹೆಂಗೆಳೆಯರ ಕಣ್ಣುಗಳಲ್ಲೂ ಅಂಥ ಗೆಳೆತನದ ಕರೆಯನ್ನು ಕಂಡಿದ್ದೆ

ಆದರೆ ಸಮಾಜದ ಅಸಮ್ಮತಿಯ ಭೂತ ಬೆನ್ನು ಹಿಂದೆಯೇ ಬೆದರಿಕೆಯ ಮುಳ್ಳುಗದೆಯೆತ್ತಿ ನಿಂತಿತ್ತು....ಇಂದಿನ ನಮ್ಮ ಪಾಷಾಣ ಸಮಾಜದಲ್ಲಿ ಅಂಥ ಅಮೃತ ಸಹವಾಸಕ್ಕೂ ವಿಕೃತಾರ್ಥ, ವಿರೋಧ

ತಪ್ಪಿದ್ದಲ್ಲವೆಂದು ತೆಪ್ಪಗಾಗಿದ್ದೆ.

ಅದಕ್ಕೆ ಬದಲು ನಾನು ಧೈರ್ಯವಾಗಿ ಮುಂದುವರೆದ್ದು, ನಿಮ್ಮಂಥ ಗೆಳತಿಯೊಬ್ಬಳು ನನ್ನ ಜೀವನಕ್ಕೆ ಆಗಲೇ ನಡೆದು ಬಂದಿದ್ದರೆ, ಆ ನನ್ನ ನವಯೌವನದ ತಿಳಿಬದುಕು ಪರಸ್ತ್ರೀ-ಗಮನದಲ್ಲಿ ಪರ್ಯವಸಾನವಾಗುತ್ತಿರಲಿಲ್ಲ. ನಾನು ಅಶುದ್ಧನಾಗುತ್ತಿರಲಿಲ್ಲ., ಎಂದೆನಿಸುತ್ತೆ.

ಮೇಲೆ ಹೇಳಿದ ಆ ಕಾಮಿನಿ ಯಾವ ಪುರುಷನ ಬಾಳಿಗಾಗಲೀ ಪ್ರೇರಕ ಶಕ್ತಿಯನ್ನು ಬೀರುವ ಹೆಣ್ಣಲ್ಲ, ಮಾರಕ ಶಕ್ತಿಯನ್ನು ಬೀರುವವಳು. ಆದರೆ ಹೆಣ್ಣಿನ ಒಲುಮೆ ಕಾಣದ ನನಗೆ ಆ ವಿಷಕನ್ಯೆಯೇ ಅಮೃತ ಕನ್ಯೆಯಂತೆ ಕಂಡಿದ್ದಳು....... ನನ್ನ ಪಾಲಿಗೆ ಅವಳಾಯಿತು. ಇನ್ನುಳಿದ ಸಹಸ್ರಾರು ವಿದ್ಯಾರ್ಥಿ-ವಿದ್ಯಾರ್ಥಿನಿಯರ ಬಾಳಿಗೆ ಇನ್ನೇನೇನು ಘೋರ ದೈಹಿಕ-ಮಾನಸಿಕ-ಲೈಂಗಿಕ ಪಿಡುಗುಗಳು ಸಂಭವಿಸಿವೆಯೋ, ಸಂಭವಿಸುತ್ತಿವೆಯೋ ! ಅದನ್ನು ನೆನೆದರೆ ಎದೆ ನಡುಗುತ್ತದೆ ! ಇಷ್ಟೆಲ್ಲ ವಿಕೃತ ಜೀವನದ ಅಸಹಜ ಪ್ರೇಮ ವಿಕಾರ, ಗೋಳು, ದುರ್ಗತಿ, ಅನೀತಿಗಳು ಈಗ ಜನ ಜನಿತವಾಗಿರುವ ನಮ್ಮ ಅಸ್ವಾಭಾವಿಕ ಲೈಂಗಿಕ-ನಿಲುವು ನಡವಳಿಕೆಗಳಿಂದಲ್ಲವೆ ? ಈ ಕುಂಠಿತ ನೈತಿಕ ನಿಲುವನ್ನು ನಿರ್ನಾಮಮಾಡಿ, ಹಸನಾದ, ಸಹಜವಾದ, ಸುಂದರವಾದ ನವ-ಚೈತನ್ಯಮಯ ನೈತಿಕ-ನಿಲುವೊಂದರ ಸ್ಥಾಪನೆಗೆ ಎದೆಯಾಳದಿಂದ ಹಂಬಲಿಸುತ್ತಿರುವೆ.

ಅವಳು 'ನಿನ್ನ ಗಂಡಸುತನವೇ ತರಗೆಲೆಯಂತೆ ನಡುಗುತ್ತಿತ್ತು' ಎಂದಾಗ ನನಗೆ ಪ್ರಾಣ ಕಳೆದುಕೊಳ್ಳುವಷ್ಟು ಅವಮಾನವಾಗಿತ್ತು. ಅವಳು ಸುಳ್ಳನ್ನೂ ಹೇಳಿರಲಿಲ್ಲ. ಆಗತಾನೇ ಕುಡಿಯಿಡುತ್ತಿದ್ದ ನನ್ನ ಗಂಡಸುತನ ಅವಳ ಕಾಮೋದ್ದೀಪಕ ಸೌಂದರ್ಯವನ್ನು ಕಂಡು ಉತ್ಕಟ ಬಯಕೆ-ಭಾವೋದ್ರೇಕಗಳಿಂದ ಪ್ರಮಾಣವಾಗಿ ನಡುಗುತ್ತಿತ್ತು. ಅವಳ ಕೃಪೆಗೀಡಾಗುವೆನೋ, ಕ್ರೋಧಕ್ಕೀಡಾಗುವೆನೋ, ಎಲ್ಲಿ ಸಾರ್ವಜನಿಕ ಅವಮಾನಕ್ಕೆ ಗುರಿಯಾಗುವೆನೋ ಎಂಬ ಪ್ರಬಲ ಶಂಕೆ, ಕಾತುರತೆ ನನ್ನನ್ನು ಆವರಿಸಿತ್ತು. ನನ್ನನ್ನು ಅವಳು ಒಪ್ಪಿ

ಆಹ್ವಾನವೀಯುತ್ತಿರುವ ಸೂಚನೆಗಳು ಸಾಕಷ್ಟಿದ್ದರೂ, ಅನನುಭವ, ಮುಗ್ಧತೆಗಳೇ ನನ್ನನ್ನು ಆ ಕರುಣಾಜನಕ ಸ್ಥಿತಿಗೆ ದೂಡಿದ್ದುವು. ಆಗ ನಾನವಳ ದೇಹಕ್ಕಾಗಿ ಅಂಗಲಾಚಿದ್ದುದೂ ನಿಜವೇ... ಏಕೆಂದರೆ ನಾನಿದ್ದುದು ಅವಳನ್ನು ಅಂಗಲಾಚುವ ಸ್ಥಿತಿಯಲ್ಲೇ !

ಈ ಅಂಶಗಳೆಲ್ಲವೂ ಆ ಕಾತುರಮಯ ಕ್ಷಣಕ್ಷಣಗಳನ್ನು ಉತ್ಕಟ ಭಾವೋದ್ರೇಕದಿಂದ ಜೀವಿಸುತ್ತಿದ್ದ ನನ್ನ ಮನಕ್ಕೆ ಅಷ್ಟು ಮಹತ್ವಪೂರಿತವಾಗಿ ಕಂಡಿರಲಿಲ್ಲ. ಆ ಕ್ಷಣದಲ್ಲಿ ನನ್ನ ಮನದ, ದೇಹದ, ಹೃದಯದ, ಇಡೀ ಜೀವನ ಸರ್ವಸ್ವದ ಗುರಿ .... ಅವಳ ದೇಹದ ಸವಿಯನ್ನನುಭವಿಸುವುದು ಮಾತ್ರವಾಗಿತ್ತು .... ಅದಕ್ಕಾಗಿ ನಾನು ಅಂಗಲಾಚಿರಬಹುದು.

ಆದರೆ ಅವಳ ದೇಹದ ಸ್ವಾಮಿತ್ವ ನನಗೆ ದೊರಕಿದಾಗ .... ನನ್ನ ಪುರುಷತ್ವದ ಅರಿವು ಪ್ರಬಲಗೊಂಡಿತ್ತು. ನಾನು ಅವಳನ್ನು ಅಂಗಲಾಚುವ ಸ್ಥಿತಿ ಕಳೆದುಹೋಗಿತ್ತು. ಅವಳೇ ಪ್ರತಿರಾತ್ರಿಯೂ ನನ್ನನ್ನು ಹಲವಾರು ರೀತಿಯಲ್ಲಿ ಬೇಡುತ್ತಿದ್ದಳು....ನನ್ನನ್ನು 'ಸ್ವಾಮಿ, ದೊರೆ, ರಾಜ' ಎಂದೆಲ್ಲಾ ತೃಪ್ತಿಯ ಧನ್ಯತೆಯಲ್ಲಿ ಕೂಗುಟ್ಟುತ್ತಿದ್ದಳು. ಅವುಗಳ ನಾದ ಪುಳಕದ ಪ್ರಬಲ ತರಂಗಗಳೇ ಹಿಂದೊಮ್ಮೆ ನಾನವಳನ್ನು ಅಂಗಲಾಚಿದ್ದೆನೆಂಬ ನೆನಪಿನ ರೂಪರೇಖೆಯನ್ನು ಮನಸ್ಸಿನ ಮರಳಿನಲ್ಲಿ ಅಳಿಸಿ ಹಾಕಿದ್ದುವು. ಆತ್ಮವಿಶ್ವಾಸದ ಶಿಖರ ನಿರ್ಮಿಸಿದ್ದುವು. ಅದರ ಅಮಲಿನಲ್ಲಿ ಅವಳ ದೇಹದ ಸ್ವಾಮಿತ್ವದ ಹೆಮ್ಮೆ ಅಹಂಕಾರವಾಗಿ ಅವಳ ವ್ಯಕ್ತಿತ್ವವನ್ನೇ ಕಡೆಗಣಿಸಿದ್ದೆ. ಅವಳು ನನ್ನ ಕೈಯಿನ ಗೊಂಬೆ, ನನ್ನ ಪ್ರೌಢ ಪುರುಷತ್ವದ ಅಡಿಯಾಳು ಎಂದೇ ಭಾವಿಸಿದ್ದೆ. ಅಂಥ ಭಾವನೆ ನೈಸರ್ಗಿಕವಾಗಿ ಬೆಳೆದುಬಂದಿತ್ತು.

ನಾನು ಅವಳ ಸ್ವಾಮಿತ್ವದ ಬಗೆಗೇ ಅಷ್ಟು ಗರ್ವದಿಂದ ಮೆರೆಯುತ್ತಿದ್ದಾಗ, 'ನಾನು ಬಂದಿದ್ದು...ನೀನು ಅಂಗಲಾಚಿದ್ದಕ್ಕಾಗಿ ! ಎಂಬ ಮಾತು ಕೇಳಿ ನನ್ನ ತಲೆ ಕೆಟ್ಟಿತ್ತು. ನನ್ನ ಬಗೆಗೆ ಅವಳ ಅಷ್ಟು ತುಚ್ಛಭಾವನೆ ಹೊಂದಿದ್ದುದನ್ನು ಕಂಡು ನನ್ನ ಕೋಪ ಕೆರಳಿತ್ತು. ಒಂದು ಕ್ಷಣದಲ್ಲಿ ಅವಳ ಮುಖಕ್ಕೆ ಹೊಡೆದುಬಿಟ್ಟಿದ್ದೆ

....ಪಶುವಿನಂತೆ ವರ್ತಿಸಿದ್ದೆ....ಆ ಭೋಗದ ಹೆಣ್ಣಿನ ಪಾಶವೀಪ್ರಭಾವ ನನ್ನನ್ನು ಒಬ್ಬ ಪಶುವನ್ನಾಗಿ ಮಾಡಿತ್ತು.

ಆದರೆ ಮರುಕ್ಷಣವೇ ನಾನು ಅಂಗಲಾಚಿದುದನ್ನು ಕಣ್ಣಿಗೆ ಕಟ್ಟುವಂತೆ, ಎದೆಗೆ ಚುಚ್ಚುವಂತೆ ಅವಳು ವರ್ಣಿಸಿದ್ದಳು.

'ಅಯ್ಯೋ! ನಾನು ನಿಜವಾಗಿಯೂ ಅಂಗಲಾಚಿದ್ದೆನಲ್ಲಾ !' ಎಂಬ ಅರಿವುಂಟಾದ ಕೂಡಲೇ, 'ಥೂ ! .. ನೀನೆಂಥ ಗಂಡಸು !! ' ಎಂಬ ಕಹಿ, ಅವಿವೇಕ, ಸತ್ಯ ನನ್ನ ಮನವನ್ನು ಬೆಳಗಿತ್ತು. ಆ ಸತ್ಯವನ್ನು ಕಾಣಲಾರದೆ ಕಣ್ಣುಮುಚ್ಚಿಕೊಂಡಿದ್ದೆ. ಅಂಥ ಅವಮಾನದಲ್ಲಿ ಬಾಳಲಾರದೆ ಪ್ರಾಣಬಿಡಲೇ ಎಂದು ಯೋಚಿಸಿದ್ದೆ.

ಹಲವಾರು ದಿನಗಳ ನಂತರ ನನಗೆ ಅರಿವಾಯಿತು—

ಹೆಣ್ಣಿನ ದೇಹದ ಸ್ವಾಮಿತ್ವ ಪಡೆಯುವುದರಿಂದಲೇ ಒಬ್ಬ ಯುವಕ ಪ್ರೌಢ ಗಂಡನಾಗುವುದಿಲ್ಲ. ಅವಳ ಮೇಲೆ ದಬ್ಬಾಳಿಕೆಯ ಅಧಿಕಾರ ನಡೆಸುವುದರಿಂದಲೂ ಅವನು ಪ್ರೌಢ ಗಂಡನಾಗುವುದಿಲ್ಲ. ತನ್ನ ಬಗೆಗೆ ಹೆಣ್ಣಿನ ಎದೆಯಲ್ಲಿ ಮೆಚ್ಚಿಗೆ, ಹೆಮ್ಮೆ, ಅಭಿಮಾನಗಳ ತೆರೆ ಬಡಿಯುವಂತೆ ಬಾಳಿ, ಅಂಥ ಬಾಳಿನಲ್ಲಿ ತಾನವಳ ಚಿರಂತನ ಪ್ರೇಮಿಯಾಗಿ ಉಳಿದಿರುವುದೇ ನಿಜವಾದ ಗಂಡಸುತನ.. .....ಅಂಥ ಗಂಡಸುತನ ಹೆಣ್ಣನ್ನು ಸುತ್ತಿಗೆ ಏಟಿನಿಂದ ಬಡಿವ ಕಾವಲಿಯೆಂದು ತಿಳಿಯುವುದಿಲ್ಲ, ಕಾಮದ ಕೈಗೊಂಬೆಯೆಂದು ತಿಳಿಯುವುದಿಲ್ಲ.... ತಿಳಿಯಾದ ಕುಸುರು ಕುಸುರಾದ ಮೃದುಭಾವಗಳಿಂದ ಮಿಡಿಸುವ ವೀಣೆಯೆಂದು ಪರಿಗಣಿಸುತ್ತದೆ .... ಆ ವಾದನದಿಂದುಕ್ಕಿ ಹರಿಯುವ ಮಧುರ, ನರಸ, ಗಂಭೀರ, ದಿವ್ಯರಾಗ ಸುಧೆಯಲ್ಲಿ ಮಿಂದು, ಅವನ ಬದುಕು ಪಾವನತೆಯ ಮಹಾಜೀವನಕ್ಕೇರುತ್ತದೆ. ಅಂಥ ಸುಮಂಗಲಿಯೊಡನೆ ಮಾಡುವ ದೇಹ ಸಂಬಂಧ ಕಾಮದ ಕೆಸರಿನಲ್ಲಿ ಹೊರಳಾಡಿದಂತಲ್ಲ ; ಆ ಕೆಸರಿನಲ್ಲೇ ಬೆಳೆದ ಒಂದು ಶುಭ್ರ ತಾವರೆಯ ಸೌರಭ ಗರ್ಭದಲ್ಲಿ ಕ್ರೀಡಿಸಿದಂತೆ .... ಆಗ ದೇಹ, ಇನ್ನೊಂದು ದೇಹವನ್ನಪ್ಪಿ ಉದ್ವೇಗಗೊಳ್ಳುವುದಲ್ಲದೆ, ಆತ್ಮ ಮತ್ತೊಂದು ಆತ್ಮವನ್ನಪ್ಪಿ, ಉದ್ದೀಪನೆಗೊಳ್ಳುತ್ತದೆ, ಉಜ್ವಲಗೊಳ್ಳುತ್ತದೆ.

ಈಗ ನನ್ನ ಆತ್ಮ, ನೈತಿಕ ಪರಿಶುದ್ಧತೆಯಿಂದ ಕೆಂಡದಂತೆ ನಿ ನಿಗಿಸುತ್ತಿಲ್ಲ; ಇದ್ದಿಲು ಚೂರಿನಂತೆ ಕಪ್ಪಾಗಿದೆ, ಕೊಳಕಾಗಿದೆ.

ದೇಹ ಕೊಳಕಾದರೆ ಅದನ್ನು ನೀರಿನಿಂದ ತೊಳೆಯಬಹುದು. ಮನ ಕೊಳಕಾದರೆ ಸದ್ವಿಚಾರಗಳಿಂದ ತೊಳೆಯಬಹುದು. ಹೃದಯ ಕೊಳಕಾದರೆ ಸದ್ಭಾವನೆಗಳಿಂದ ತೊಳೆಯಬಹುದು. .... ಆದರೆ ಒಬ್ಬನ ಆತ್ಮವೇ ಕೊಳೆಯಾದರೆ, ಅವನ ಬಾಳಿನ ಹೊಳೆಯು ಉಗಮವೇ ಕೊಳಕಾದಂತೆ. ಅಲ್ಲಿ ಉದಿಸುವ ಕೊಳೆ, ಅವನ ಜೀವನಪರ್ಯಂತವೂ ಎಡೆಬಿಡದೆ ಹರಿಯುತ್ತಿರುತ್ತದೆ. ಅವನೆಷ್ಟು ಶ್ರಮಿಸಿದರೂ ಆ ಕೊಳೆ ಯನ್ನು ಅವನೇ ತೊಳೆಯಲಾರ, ಪರಿಶುದ್ಧನಾಗಲಾರ. ಅವನು ಸಂಪೂರ್ಣನಾಗಿ ಪರಿಶುದ್ಧನಾಗಲು ಅವನ ಆತ್ಮದೊಡನೆ ಮತ್ತೊಂದು ಪರಿಶುದ್ಧ, ತ್ಯಾಗಮಯ ಆತ್ಮದ ಸಂಗಮವಾಗಬೇಕು, ಬೆಸುಗೆಯಾಗ ಬೇಕು. ಅದು ತನ್ನ ಉಜ್ವಲ ತೇಜಸ್ಸಿನಿಂದ ಅವನ ಆತ್ಮದ ಕೊಳೆ ಯನ್ನು ಸುಡಬೇಕು, ಶುಚಿಗೊಳಿಸಬೇಕು .... ಅವನ ಜೀವನವನ್ನೇ ಪಾವನಗೊಳಿಸಬೇಕು.

ಅದಕ್ಕಾಗಿ ನಿಮ್ಮ ಪಾದ ಕಮಲಗಳ ಮೇಲೆ ಶಿರವಿರಿಸಿ, ಮೊರೆ ಯಿಡುತ್ತಿರುವೆ. ತಿರಸ್ಕರಿಸ ಬೇಡಿ.

ನಿಮ್ಮ ಪ್ರೇಮಭಿಕ್ಷು,
ರಾಜು."

ಎಂದು ಓದಿ ಮುಗಿಸಿದ ಶಾಂತ, ಚಕಿತಳಾಗಿ ಆಶ್ಚರ್ಯ ಆನಂದದ ಪ್ರತಿಮೆಯಂತೆ ನಿಶ್ಚಲಳಾಗಿ ಕುಳಿತಳು. ಅವಳ ನಯನಗಳು ಬಿರಿದರಳಿ ದುಃಖದ, ಆನಂದದ ಭಾಷ್ಪಗಳಿಂದ ತುಳುಕುತ್ತಿದ್ದುವು. ಅವಳ ಗಲ್ಲ-ತುಟಿಗಳು ಉದ್ವೇಗದಿಂದ ಕಂಪಿಸಿ-ಕಂಪಿಸಿ ಕುಣಿಯು ತ್ತಿದ್ದುವು.

ಕೆಲವು ನಿಮಿಷ ಅವಳು ಮಂತ್ರಮುಗ್ಧೆಯಂತೆ ಕುಳಿತಳು. ಅನಂತರ ಕಂಪಿಸುವ ಕೈಗಳಿಂದ ತನ್ನ ಸೆರಗಿನ ತುದಿಯಿಂದ ಕಣ್ಣೀರೊರೆಸಿಕೊಂಡಳು.

ರಾಜಣ್ಣನ ಪ್ರೇಮ ಇಷ್ಟು ಪ್ರಬಲ, ಇಷ್ಟು ಉಗ್ರ, ಇಷ್ಟು ಅಖಂಡವೆಂದು ಅವಳು ಎಂದೂ ಭಾವಿಸಿರಲಿಲ್ಲ. ಎಲ್ಲರಂತೆ ಅವನೂ ಒಬ್ಬ ಸಾಮಾನ್ಯ, ಸರಳ, ಸುಂದರ ಪ್ರೇಮಿಯೆಂದು ಇದುವರೆಗೂ ಭಾವಿಸಿದ್ದಳು ; ಆ ಪ್ರಕರಣದಿಂದ ಸಂಶಯದ ಕಾರ್ಮೋಡ, ಭಯದ ಬಿರುಗಾಳಿ ಅವಳ ಮನೋಗಗನವನ್ನಾವರಿಸಿ, ಅವನು ದೂರ ದೂರ ವಾಗುವನೆಂದೂ ಅಂಜಿದ್ದಳು. ಅವನು ಮತ್ತೊಮ್ಮೆ ತನ್ನ ತೋಳ ತೆಕ್ಕೆಯಲ್ಲಿ ಬಂದು ಬಿದ್ದು, ಆ ಮತ್ತೊಬ್ಬಳನ್ನು ಕನಸು-ಮನಸಿ ನಿಂದಲೂ ಓಡಿಸಿ ಬಿಟ್ಟರೆ ಎದೆ ಎಷ್ಟು ಹಗುರವಾಗುವುದು, ಬಾಳಿನ ಬಾನು ಮತ್ತೊಮ್ಮೆ ಎಷ್ಟು ಉಜ್ವಲ, ಸುಂದರ, ಸುಖಕರವಾಗುವುದು ಎಂದು ಆಶಿಸಿದ್ದಳು. ಪ್ರೇಮದ ಆ ಶ್ವೇತಪಾರಿವಾಳ ತನ್ನ ಬಳಿಗೆ ಮರಳಿ ಬರುವುದನ್ನೇ ಆಸೆಯಿಂದ, ತವಕದಿಂದ, ಹಗಲಿರುಳೂ ಅನ್ನ ನಿದ್ರೆಗಳಿಲ್ಲದೆ ಕಾಯ್ದಿದ್ದಳು.

ಈಗ ಅದು ತಪ್ಪದಂತೆ ತನ್ನ ಕೈಗಳಿಗೆ ಹಿಂತಿರುಗಿತ್ತು. ಹಠಾತ್ತನೆ ಸುಳಿದ ಆ ಕ್ರೂರ-ಗಿಡುಗನೊಡನೆ ಕಾದಾಡಿ ಬಂದು ತನ್ನ ಬೊಗಸೆಯಲ್ಲಿ ಬಿದ್ದು ಸಂರಕ್ಷಣೆ, ಪೋಷಣೆಗಳಿಗಾಗಿ ಮೊರೆ ಯಿಡುತ್ತಿತ್ತು. ಶಾಂತ, ಆನಂದದಿಂದ ಉಬ್ಬಿ ಬಿರಿಯುವ ಹೃದಯ ದಿಂದ ಆ ನೆಚ್ಚಿನ ಹಕ್ಕಿಯನ್ನು ತನ್ನ ಕೆನ್ನೆಗಳಿಗೆ ಒತ್ತಿಕೊಂಡಳು. ಅದಕ್ಕೆ ಅನಂತ ಚುಂಬನಗಳನ್ನಿತ್ತು, ದುಃಖದ ಆನಂದದ ಕಣ್ಣೀರೊರೆಸಿಕೊಂಡಳು.

ವಿಚಾರಗಳ ಸೇನೆ-ಪ್ರತಿಸೇನೆಗಳೇ ಅವಳ ಮನದ ಮೈದಾನದಲ್ಲಿ ದಿಕ್ಕು ದಿಕ್ಕಿನಿಂದಲೂ ಬಂದು ನೆರೆಯಲಾರಂಭಿಸಿದುವು, ಒಂದರ ಮೇಲೊಂದು ಬಿದ್ದು ಹೋರಾಡಲಾರಂಭಿಸಿದುವು....ಎಷ್ಟು ಹೊತ್ತು ಹೋರಾಟ ಸಾಗಿದರೂ ಯಾರೂ ಗೆಲ್ಲಲಿಲ್ಲ, ಯಾರೂ ಸೋಲಲಿಲ್ಲ. ಆ ರಣಾಂಗಣದ ಕೋಲಾಹಲದಲ್ಲಿ ಶಾಂತಳ ಮನವೂ ಭಾವ ಪರ ವಶವಾಗಿ, ತನ್ನ ವಿಚಾರತೆ ನಿರ್ಲಿಪ್ತತೆಯ ಶಿಖರದಿಂದ ಕೆಳಗೆ ಜಾರಿ, ಮೈದಾನಕ್ಕೆ ಧುಮುಕಿ, ಕಣ್ಣಿಗೆ ಸ್ಪಷ್ಟವಾಗಿ ಕಾಣುತ್ತಿದ್ದ ತನ್ನ ಏಕೈಕ ಎದುರಾಳಿಯನ್ನಟ್ಟಿಸಿಕೊಂಡು ಓಡಿತು.

ಆ ಗತಿಗೆಟ್ಟ ಪ್ರೇಮದ ಲಂಪಟೆಯ ಮೂದಲಿಕೆಯ, ಅರ್ಥ ಹೀನತೆಯನ್ನೂ, ಅವಳ ತುಚ್ಛ ಮನೋಭಾವದ ಹಿನ್ನೆಲೆಯಲ್ಲಿದ್ದ ಹೀನ ಉದ್ದೇಶವನ್ನೂ ರಾಜಣ್ಣನಿಗೆ ಬೇಗನೆ ತಿಳಿಸಬೇಕೆಂದು ಮನಸ್ಸಾಯ್ತು. ಅವಳ ಮೂದಲಿಕೆಯ ಕೊರಗಿದ ಕುಲುಮೆಯಲ್ಲಿ ಅವನೆಷ್ಟು ನೊಂದಿರುವನೋ, ಬೆಂದಿರುವನೋ, ಎಂದು ಅತ್ಯಂತ ಕನಿಕರವಾಯ್ತು. ಅವನ ಸಪ್ಪೆ ಮುಖವನ್ನು ನೋಡಿ ಹಾಸ್ಯ ಮಾಡಿ ನಗಬೇಕು, ಅವನನ್ನು ಎದೆಗವಚಿ ಸಂತೈಸುತ್ತಾ, ಅವನ ನಗುವಿನೊಡನೆ ನಕ್ಕು, ಅಳುವಿನೊಡನೆ ಅತ್ತು, ಪರಸ್ಪರ ಆಲಿಂಗನ ದಲ್ಲಿ ತೆಕ್ಕೆ ಬಿದ್ದು ಹೊರಳಾಡಬೇಕು ಎಂಬ ಉತ್ಕಟ ಬಯಕೆ ಮನ, ಮೈಯಿನಲ್ಲೆಲ್ಲಾ ಉತ್ತುಂಗ ಅಲೆಯೊಂದರಂತೆ ನುಗ್ಗಿ ಬಂತು.

* * *

ಆ ದಿನ ಮಧ್ಯಾಹ್ನವೇ ಸೆಂಟ್ರಲ್ ಕಾಲೇಜ್ ಲೈಬ್ರರಿಗೆ ಬರುವ ನೆವದಲ್ಲಿ ರಾಜಣ್ಣನನ್ನು ಸಂಧಿಸಲು ಬಂದಳು. ಅವನು ಹೊರಗೆ ಎಲ್ಲೂ ಕಂಡುಬರಲಿಲ್ಲ.....' ಸರಿ, ಇನ್ನು ಮನೆಯೇ ಗಟ್ಟಿ....ಸಂಜೆಯ ವರೆಗೂ ಕಾಯುವುದು ' ಎಂದು ಒಂದು ರೆಫರೆನ್ಸ್ ಪುಸ್ತಕವನ್ನಾ ದರೂ ನೋಡಿಹೋದ ಶಾಸ್ತ್ರ ಮುಗಿಸಲು ಲೈಬ್ರರಿಯೊಳಗೆ ಅಡಿಯಿರಿ ಸಿದಳು. ಬೀರುಗಳ ಹಿಂದಿದ್ದ ಹತ್ತಾರು ಕುರ್ಚಿಗಳೆಲ್ಲ ಖಾಲಿಯಾಗಿ ದ್ದುವು. ಒಂದು ಮೂಲೆಯ ಕುರ್ಚಿಯಲ್ಲಿ, ಗೋಡೆಯ ಕಡೆಗೆ ಮುಖ ಮಾಡಿ, ಒಂದೇ ಒಂದು ಒಂಟಿ ವ್ಯಕ್ತಿ ಏನನ್ನೋ ಮೈಮರೆತು ಓದುತ್ತಾ ಕುಳಿತಿತ್ತು....ಅವನೇ ರಾಜಣ್ಣ!

ಶಾಂತಳ ಮನ ಹೂವಿನಂತೆ ಅರಳಿತು. ಹೃದಯ ರೆಕ್ಕೆ ಬಂದು ಹಕ್ಕಿಯಂತೆಲ್ಲಿ ಹಾರಿಹೋಗುವುದೋ ಎಂಬಂತೆ ಉಬ್ಬಿತು. ಅವಳು ಮೆಲ್ಲಮೆಲ್ಲನೆ ಬೀರುವಿನ ಪುಸ್ತಕಗಳನ್ನು ನೋಡಿಕೊಂಡೇ ಅವನು ಕುಳಿತೆಡೆಗೆ ಸರಿದಳು. ಅವನಿಗೆ ಹೊರ ಜಗತ್ತಿನ ಲಕ್ಷ್ಯವೇ ಇದ್ದಂತೆ ಕಾಣಲಿಲ್ಲ. ಶಾಂತ, ತನ್ನ ಕೈಲಿದ್ದ ಒಂದು ಪುಸ್ತಕವನ್ನು ನೆಲಕ್ಕೆ ಎತ್ತಿಹಾಕಿದಳು.

ಅವನು ಬೆಚ್ಚಿಬಿದ್ದು ಪಕ್ಕಕ್ಕೆ ತಲೆ ಹೊರಳಿಸಿ ನೋಡಿದ.

ಶಾಂತ ಅವನನ್ನು ನೋಡಿ ನಸುನಕ್ಕಳು. ಅವನು ಮುಗುಳ್ನಗೆ ಹಿಂತಿರುಗಿಸಲು ಯತ್ನಿಸಿದ. ಆದರೆ ಅದೇಕೋ ಅವನ ತುಟಿಗಳು ಮಾತ್ರ ನಕ್ಕುವು, ಕಣ್ಣುಗಳು ಅಸಹನೀಯ ವೇದನೆಯನ್ನು ಸೂಸುತ್ತಿದ್ದುವು. ಅಪರಾಧದ ಹೊರೆ ಹೊತ್ತು ನಿಂತಿದ್ದುವು.

ಅದನ್ನು ಗಮನಿಸಿದ ಶಾಂತಳ ಹೆಣ್ಣೆದೆಯ ಮಮತೆ ಅನುಕಂಪದ ಒರತೆಯಲ್ಲಿ ಕಾವ ಕಬ್ಬಿಣದ ಗುಳವಿಟ್ಟಂತಾಯ್ತು. ಒಂದು ಕ್ಷಣ ಅವನ ನೋಟದೊಡನೆ ನೋಟ ಬೆರೆಸುವ ಗಟ್ಟಿಮನಸ್ಸಾಗಲಿಲ್ಲ. ಆದರೆ ಮರುಕ್ಷಣವೇ ಮನಸ್ಸು, ಭಾವನೆಗಳನ್ನು ಸಮತೂಕಕ್ಕೆ ತಂದುಕೊಂಡು, ಮೆಲುದನಿಯಲ್ಲಿ ಕೇಳಿದಳು.

"ಏಕೆ,....ಕ್ಲಾಸಿಲ್ಲವೇ ?"

"ಇದೆ....ನಾನೇ ಹೋಗಲಿಲ್ಲ."

ಶಾಂತಳಿಗೆ ಏಕೆ ಎಂದು ಕೇಳುವ ಮನಸ್ಸಾಗಲಿಲ್ಲ ಅವನ ಕೈಯಲ್ಲಿದ್ದ ಪುಸ್ತಕ ನೋಡುತ್ತಾ,

"ಇಲ್ಲಿ ಏನು ಓದುತ್ತಿದ್ದಿರಿ ?"

ಎಂದು ಕೇಳಿದಳು. ಅವನು ನಸುನಗಲು ಯತ್ನಿಸುತ್ತಾ, ಕೈಯಲ್ಲಿದ್ದ ಪುಸ್ತಕದ ಹೆಸರು ತೋರಿಸಿದ. ಶಾಂತ ಅದನ್ನು ನೋಡಿ, ಆಶ್ಚರ್ಯದಿಂದ ಕಣ್ಣರಳಿಸಿ, ವಿನೋದದಿಂದ,

"ಓ,....'ಫ್ರಂ ಕೊಲಂಬೋ ಟು ಅಲ್ಮೋರಾ'....!"

ಎಂದು ಉದ್ಗಾರ ಮಾಡಿದಳು. ರಾಜಣ್ಣ ನಾಚಿಕೆಯಿಂದ ತುಟಿ ಅದುಮಿ ನಗುತ್ತಾ 'ಹು'....ಎಂದು ತಲೆಹಾಕಿದ.

"ಎಚ್ಚರಿಕೆ!....ಆಮೇಲೆ ಸನ್ಯಾಸಿಗಳಾಗಿಬಿಟ್ಟೀರಿ !"

ಎಂದು ನಗೆಯಾಡಿದಳು ಶಾಂತ. ರಾಜಣ್ಣ ಅವಳನ್ನೇ ಸ್ಥಂಬಿತ ಉದ್ವೇಗದಿಂದ ನೋಡುತ್ತಾ,

"ಅದಕ್ಕೇನು, ಆಗಬಹುದು....ಆದರೆ ಅದು ನನ್ನ ಕೈಯಲ್ಲಿಲ್ಲ."

ಎಂದ. ಶಾಂತ, ಅನುಮಾನ, ಸಂತಸ, ವಿನೋದದಿಂದ ಕೇಳಿದಳು,

"ಇನ್ನಾರ ಕೈಯಲ್ಲಿದೆ?"

"....ನಿಮ್ಮ ಕೈಯಲ್ಲಿ !"

ಶಾಂತ ತುಂಬು ಒಲುಮೆ, ಕ್ಷಮೆ, ಮಮತೆಗಳಿಂದ ಅವನನ್ನೇ ದಿಟ್ಟಿಸಿ ನೋಡಿದಳು. ಅವಳ ನಯನಗಳಲ್ಲಿ ಉಕ್ಕುಕ್ಕಿ ಬರುವ ಪ್ರೀತಿ ರಸವನ್ನೆಲ್ಲಾ ಅವನ ತೀಕ್ಷ್ಣ ನೋಟ ಹಸಿದು-ಬಾಯಾರಿದ ಹೆಸುಳೆ ಯಂತೆ ಹೀರಿ ಹೀರಿ ಕುಡಿಯಿತು. ಅವನ ಕಳಾಹೀನ ನಯನ, ವದನಗಳು ಹಿಂದಿನ ಕಾಂತಿ, ತೇಜಸ್ಸುಗಳನ್ನು ಮತ್ತೆ ಪಡೆದುವು. ಅದರಿಂದ ತೃಪ್ತಿಪಟ್ಟ ಶಾಂತ, ಮಧುರವಾಣಿಯಲ್ಲಿ, "ಸಂಜೆ ಸಿಗುತ್ತೀರಾ....?" ಎಂದು ಕೇಳಿದಳು. ಅವನು 'ಆಗಲಿ' ಎಂದು ತಲೆಹಾಕಿ ಕೇಳಿದ,

"ಎಲ್ಲಿ....?"

"ಹೈಸ್ಕೂಲಿನ ಬಳಿ...."

"ಎಷ್ಟು ಗಂಟೆಗೆ ?"

"ನಾಲ್ಕೂವರೆಗೆ"

ಇಬ್ಬರೂ ಒಪ್ಪಿಗೆ ಸೂಚಿಸುವ ಮುಗುಳುನಗೆ ನಕ್ಕು ಬೇರ್ಪಟ್ಟರು.

ಸಂಜೆಯಾದಾಗ ಅವರಿಬ್ಬರೂ ನಗರದ ಆಚೆ ಬಹುದೂರ ಹೋಗಿ ಪ್ರಕೃತಿಯ ಚೆಲುವನ್ನು ಸವಿಯುತ್ತಾ ಕುಳಿತರು.

ಅಷ್ಟುಹೊತ್ತೂ ಮೌನದಹೊರೆ ಹೊತ್ತಿದ್ದ ರಾಜಣ್ಣ, ತಲೆ ತಗ್ಗಿಸಿಕೊಂಡು, ಮಂಡಿಗಳ ಮೇಲೆ ಕೈಕಟ್ಟಿ, ಏನನ್ನೋ ಆಳವಾಗಿ ಆಲೋಚಿಸುತ್ತಿದ್ದ ಶಾಂತಳನ್ನೇ ಉದ್ವೇಗ, ಬೇಡಿಕೆ, ಕ್ಷಮಾ ಯಾಚನೆಯ ನೋಟದಿಂದ ದಿಟ್ಟಿಸುತ್ತಾ, ಯಾತನೆಯಿಂದ ಬಿರಿಯುವ ಕಂಠದಲ್ಲಿ,

"ಶಾಂತಾ....ನಿಮಗೆ ನಾನು .... ನಾನು ಯೋಗ್ಯನೇ....ನಿಮ್ಮ ಪ್ರೇಮಕ್ಕೆ ಅರ್ಹನೇ....?"

ಎಂದು ಕೇಳಿದ. ಅರೆ ನಿಮಿಷ ಕುಳಿತಂತೆಯೇ ನಿಶ್ಚಲಳಾಗಿ ಕುಳಿತಿದ್ದ ಶಾಂತ ನಿಧಾನವಾಗಿ ಅವನೆಡೆಗೆ ಕೊರಳು ಹೊರಳಿಸಿದಳು. ಅವಳ ನಯನಗಳಲ್ಲಿ ನಿರ್ಧಾರದ ಹೊಳಪು ಮಿನುಗಿತು, ದುಃಖದ

ಕಂಬನಿಗಳುಕ್ಕಿತು. ಅವನ ಕೈ ಹಿಡಿಯುತ್ತಾ, ನಿಶ್ಚಯದ ಧ್ವನಿಯಲ್ಲಿ,

"ಹೌದು....ನೀವು ಅರ್ಹರು. ನನ್ನ ಪ್ರೇಮಕ್ಕೆ ನಿಮಗಿಂತಲೂ ಅರ್ಹರು ಸಿಗಲಾರರು!"

ಎಂದುಸುರಿದಳು. ರಾಜಣ್ಣನ ಕಣ್ಣುಗಳಲ್ಲಿ ಆನಂದಾಶ್ರುಗಳುರುಳಿದುವು. ಅವನೆದೆಯಲ್ಲಿ ಪಶ್ಚಾತ್ತಾಪದ ಅಲೆಯೆದ್ದು ಬಂತು. ಅವಳ ಕೈಹಿಡಿದು, ಆ ಕೈಯಿಂದಲೇ ಕಪೋಲಗಳ ಮೇಲಿಳಿದ ಕಂಬನಿಗಳನ್ನೊರೆಸಿಕೊಳ್ಳುತ್ತಾ, ಪರಿತಾಪದ ಸ್ವರದಲ್ಲಿ,

"ಹೇಗೆ ಅರ್ಹ ನಾನು? ಅಂಥ ಪಾಪ ಕೆಲಸಗಳನ್ನೆಲ್ಲಾ ಮಾಡಿದ ನಾನು ಹೇಗೆ ಅರ್ಹ ಶಾಂತಾ?"

ಎಂದು ಅವಳ ಹೆಗಲಿನ ಮೇಲೆ ತಲೆಯಿರಿಸಿದ. ಶಾಂತ ಅವನ ಕಿವಿ, ತಲೆಗೂದಲನ್ನು ಪ್ರೇಮದಿಂದ ಸವರುತ್ತಾ, ದೂರದಲ್ಲಿ ನೋಟ ನೆಟ್ಟು ಹೇಳಿದಳು,

"ಇಲ್ಲ, ನೀವು ಪಾಪ ಮಾಡಲಿಲ್ಲ. ನೀವು ತಪ್ಪು ಮಾಡಿದಿರಿ. ಮನುಷ್ಯ ತಪ್ಪು ಮಾಡುವುದು ಸಹಜ. ತಪ್ಪು ದಾರಿಗೆ ಎಳೆಯುವವರು ಬಳಿ ಇದ್ದಾಗ ಒಬ್ಬ ತಪ್ಪನ್ನು ಸಾಮಾನ್ಯವಾಗಿ ಮಾಡುತ್ತಾನೆ."

"ಹಾಗಾದರೆ ನನ್ನನ್ನು ಕ್ಷಮಿಸಿರುವಿರಾ?"

"ಕ್ಷಮಿಸುವ ಅಗತ್ಯವಿಲ್ಲ. ನಿಮ್ಮ ತಪ್ಪಿಗೆ ನೀವಲ್ಲ ಕಾರಣ. ಆ 'ಬಿಚ್' ಕಾರಣ!"

ಎಂದು ಘೂತ್ಕರಿಸಿದಳು. ರಾಜಣ್ಣ ಆಶ್ಚರ್ಯದಿಂದ ತಲೆಯೆತ್ತಿ ಕೇಳಿದ.

"ಹಾಗಾದರೆ ಅವಳು ನಿಜವಾಗಿಯೂ 'ಬಿಚ್' ಏ....?

"ಹೌದು, ಅದಕ್ಕೂ ಕಡೆ."

"ಅದು ಹೇಗೆ ಹೇಳುತ್ತೀರಿ?"

"ಅಂಥವಳು ಒಬ್ಬಳಿಂದ ನಿಮಗೆ ಸಾಕಾಯಿತು. ಆದರೆ ನಿಮ್ಮಂಥವರು ಅವಳಿಗೆ ನೂರು ಜನ. ಅದನ್ನು ಆ ನಾಚಿಕೆಗೆಟ್ಟವಳೇ ನಿಮಗೆ ಹೇಳಲಿಲ್ಲವೇ?"

ಎಂದು ಅವನನ್ನೇ ನೋಡಿದಳು. ರಾಜಣ್ಣ ಆಲೋಚನಾ

ಭರಿತನಾಗಿ ತಲೆ ತಗ್ಗಿಸಿದ. ಒಂದು ನಿಮಿಷದ ಬಳಿಕ ಅಚ್ಚರಿಯಿಂದ "ಹೌದು!" ಎಂದುಸುರಿ, ಬೆರಳು ಕಚ್ಚಿಕೊಂಡ.

ಅವನ ಎದೆಯ ಭಾರ ಅರ್ಧ ಇಳಿಯಿತು. ಅವನು ಪುನಃ ಆಲೋಚನಾಭರಿತನಾಗಿ ಮೌನನಾದ, ಶಾಂತ ಕೆಲವು ನಿಮಿಷ ಅವನ ನೆಮ್ಮದಿಯ ವದನವನ್ನೇ ಸಂತೃಪ್ತಿ ಸಂತಸಗಳಿಂದ ನೋಡಿದಳು. ಈಗಲಂತೂ ಅವನು ಒಬ್ಬ ಮುಗ್ಧ ಬಾಲಕನಂತೆಯೇ ಅವಳಿಗೆ ಕಂಡುಬಂದ. ಅವನಿಗೆ ಹೆಣ್ಣಿನ ದೇಹ ಪರಿಚಯವಾಗಿದ್ದರೂ ಅವಳ ಹೃದಯ, ಮನಸ್ಸಿನ ಚಂಚಲ ಸಾಮ್ರಾಜ್ಯದ ವಿವರಗಳೊಂದೂ ತಿಳಿದಿರುವಂತೆ ತೋರಲಿಲ್ಲ. ಹೆಣ್ಣು ತನ್ನನ್ನು ತಾನೇ ಹೇಗೆ ಆತ್ಮವಂಚನೆ ಮಾಡಿಕೊಳ್ಳುತ್ತಾಳೆ, ಅಸಹಾಯ ಸ್ಥಿತಿಯಲ್ಲಿ ಮಾಡಿದ ತಪ್ಪುಗಳನ್ನೇ ಹೇಗೆ ಬೇರೊಂದು ಬಣ್ಣ ಕಟ್ಟಿ ಸಮರ್ಥಿಸಿಕೊಳ್ಳುತ್ತಾಳೆ, ದೇಹಶಕ್ತಿಯಿಂದ ಆಗದ ಕೆಲಸವನ್ನು ಯುಕ್ತಿಯಿಂದ, ವಕ್ರಮಾರ್ಗಗಳಿಂದ, ಹರಿತ ನಾಲಿಗೆಯಿಂದ ಸಾಧಿಸಿಕೊಳ್ಳುತ್ತಾಳೆ, ಎಂಬುದು ಒಂದೂ ಅವನಿಗೆ ತಿಳಿದಿಲ್ಲ ಎಂದು ಸ್ಪಷ್ಟವಾಗಿ ತೋರಿಬಂತು. ಅದಕ್ಕೇ ಶಾಂತ ತನ್ನಲ್ಲಿ ತಾನು ನಸುನಗುತ್ತಾ, ಅವನನ್ನೇ ವಿನೋದದಿಂದ ನೋಡಿ, ಮೆಲು ದನಿಯಲ್ಲಿ ಉಸುರಿದಳು.

"ರಾಜೂ,"

"ಏನು....?"

ಎಂದು ಅವನೂ, ನಸುನಗುತ್ತಾ ಅವಳ ನೋಟದೊಡನೆ ನೋಟ ಬೆರೆಸಿದ. ಶಾಂತ ಅವನ ಕೈಯನ್ನು ಮತ್ತೆ ಹಿಡಿಯುತ್ತಾ, ಕೇಳಿದಳು,

"ನಾನೊಂದು ಮಾತು ಹೇಳ್ತೀನಿ....ನಡೆಸಿಕೊಡ್ತೀರಾ....?"

"ಹೇಳಿ."

"ಖಂಡಿತ ನಡೆಸಿಕೊಡ್ತೀರಾ?"

"ಅನುಮಾನವೇ? ಹೇಳಿ; ಖಂಡಿತ ನಡೆಸಿಕೊಡ್ತೇನೆ."

"ಇನ್ನು ಮುಂದೆ ನೀವು ನನ್ನನ್ನು ಏಕವಚನದಲ್ಲಿಯೇ ಮಾತನಾಡಿಸಬೇಕು."

" ಇಷ್ಟೇನೆ ? ಆಗಬಹುದು"

" ಅಷ್ಟೇ ಅಲ್ಲ. ಇನ್ನೂ ಇದೆ."

" ಏನದು ?....ಹೇಳು."

" ನಿಜವಾಗಿಯೂ ನಡೆಸಿಕೊಡ್ತೀರಾ....?"

" ಹು, ನನ್ನಾಣೆಗೂ ನಡೆಸಿಕೊಡ್ತೇನೆ."

" ಹಾಗಾದರೆ ನನ್ನನ್ನು, ಅದೇ....ಹಿಂದೆ ...ಹಿಂದೆ ನಿಮ್ಮ, ಅದೇನೋ ಆಗಿದ್ದಳಲ್ಲ....ಆ ಪ್ರಭಾವತಿಯ ಬಳಿ ನನ್ನನ್ನು ಕರೆದು ಕೊಂಡು ಹೋಗಿ " ಎಂದಳು.

ರಾಜಣ್ಣ ಅವಳ ವಿನೋದ ನೇತ್ರಗಳನ್ನೇ ಕೌತುಕದಿಂದ ನೋಡುತ್ತಾ ಕೇಳಿದ—

" ಏಕೆ....?"

" ನಾನವಳಿಗೊಂದು ಮಾತು ಹೇಳಬೇಕಾಗಿದೆ"

" ಏನು ಹೇಳ್ತೀಯ...."

" ಏನೋ....ಒಂದು ಮಾತು ಹೇಳ್ತೇನೆ!"

" ಏನು ಹೇಳ್ತೀಯ....ನನಗೊಂದು ಚೂರು ಹೇಳು."

" ಊಹು...." ಎಂದು ತಲೆಯಾಡಿಸಿ, ತುಟಿ ಅದುಮಿ ನಕ್ಕಳು ಶಾಂತ.

ರಾಜಣ್ಣ ತನ್ನ ಬೆರಳಿನಿಂದ ಅವಳ ಗಲ್ಲಕ್ಕೆ ಮೃದುವಾಗಿ ಹೊಡೆದು,

" ಅವಳಿಗೆ ಏನು ಹೇಳ್ತೀಯಾ ಶಾಂತಾ ?"

ಎಂದು ಕೇಳಿದ. ಶಾಂತ ಕೂಡಲೇ ಸೆಟೆದು ಕುಳಿತಳು. ಅವಳ ನಯನಗಳಲ್ಲಿ ಕ್ರೋಧ ಪ್ರಜ್ವಲಿಸಿತು. ಹಗೆತನ ತುಂಬಿದ ವಾಣಿಯಲ್ಲಿ,

" ನೀವು ನನಗೆ ಅವಳನ್ನು ಒಂದು ಸಲ ತೋರಿಸಿ .... ನಿಮ್ಮನ್ನು 'ಗುಮಾಸ್ತೆ ಕೆಲಸಕ್ಕೆ ಸೇರು, ಗೊಣ್ಣೆಸುರುಕಿ ಪತಿವ್ರತೆಯನ್ನು ಮದುವೆ ಯಾಗು, ಒಂದು ಡಜನ್ ನಾಯಿಕುನ್ನಿಗಳನ್ನು ಹುಟ್ಟಿಸು' ಎಂದಳಲ್ಲ: ....ಆ ಮೂದೇವಿಗೆ....ಒಂದು ಧರ್ಮಛತ್ರ ಇಡು ಎಂದು ಹೇಳ್ತೀನಿ.

ಅದರ ಮುಂದೆ ಒಂದು ಬೋರ್ಡ್–ಹಾಕಿಸು. ಅದರ ಮೇಲೆ 'ಇದು ಇಂಥವಳ ಧರ್ಮಛತ್ರ. ಅವಳ ದೇಹ ಬೇಕಾದವರೆಲ್ಲಾ ಒಳಗೆ ದಯಮಾಡಿಸಿ, ಅವಳ ಕಾಲಮೇಲೆ ಬಿದ್ದು ಅಂಗಲಾಚಿ. ಆಗ ಆ ದಯಾಮಯಿ ನಿಮ್ಮೊಂದಿಗೆ ಮಲಗುತ್ತಾಳೆ. ನಿಮ್ಮ ಹಸಿವು ನೀಗಿಸುತ್ತಾಳೆ'....ಎಂದು ಬರೆಸು ಎಂದು ಹೇಳ್ತೀನೆ. ಅದನ್ನೇ ಪೇಪರ್‌ಗಳಲ್ಲಿ, ರೇಡಿಯೋದಲ್ಲಿ ಜಾಹಿರಾತು ಮಾಡಿಸು ಎಂದು ಹೇಳ್ತೀನೆ.... ಆ ರಂಭೆಗೆ—ನೀವು ಅಂಗಲಾಚಿದಿರಂತೆ... ಅವಳು ಬಂದುಬಿಟ್ಟಳಂತೆ! ತೆರೆಕೊಂಡು....ಡರ್ಟಿ....ಬಿಚ್!!" ಎನ್ನುತ್ತಿರುವಾಗಲೇ ರಾಜಣ್ಣ ಅವಳ ಬಾಯಿ ಬಿಗಿಹಿಡಿದು ಮುಚ್ಚಿ....

"ಓಹೋ....ಸಾಕು ಸಾಕು. ಆಮೇಲೆ ಕೋಪದಿಂದ ಮತಾಪಿನಂತೆ ಹತ್ತಿಕೊಂಡು ಉರಿದುಹೋದೀಯೆ!"

ಎಂದ. ಶಾಂತ ಅವನ ಭುಜವನ್ನಪ್ಪಿ, ತೋಳಿನಲ್ಲಿ ಮುಖ ಹುದುಗಿಸಿದಳು. ಒಂದು ಕ್ಷಣದ ಬಳಿಕ ಅವಳು ಸೆರಗಿನಿಂದ ಕಣ್ಣೀರೊರೆಸಿಕೊಂಡುದು ರಾಜಣ್ಣನಿಗೆ ಕಾಣಿಸಿತು. ಅವನು ಕಾತುರದಿಂದ ಅವಳ ಬೆನ್ನಿನ ಮೇಲೆ ಕೈಯಿರಿಸಿ,

"ಏಕೆ ಶಾಂತ....ಇಷ್ಟು ಕೋಪ, ಈ ಅಳು ಇದೆಲ್ಲಾ ಏಕೆ? ಅವಳನ್ನು ನಾನು ಮರೆತುಬಿಟ್ಟಿದೇನೆ. ನೀನೂ ಮರೆತುಬಿಡಬಾರದೇ? ಅವಳ ನೆನಪಿನಿಂದ ನಮ್ಮ ಸುಖವನ್ನೇಕೆ ಕಳೆದುಕೊಳ್ಳಬೇಕು?"

ಎಂದ. ಶಾಂತ ತಲೆಯೆತ್ತಿ ಕಣ್ಣೀರೊರೆಸಿಕೊಳ್ಳುತ್ತಾ ದ್ವೇಷಪೂರಿತ ವಾಣಿಯಲ್ಲಿ ಹೇಳಿದಳು,

"ನಮ್ಮ ಸುಖವನ್ನು ಅವಳು ಆಗಲೇ ಕೆಡಿಸಿಬಿಟ್ಟಿದಾಳೆ. ನಿಮ್ಮ ಎದೆಯಮೇಲೆ ಅಳಿಸಲಾರದಂಥ ಬರೆ ಎಳೆದಿದಾಳೆ. ನೀವು ಇಷ್ಟು ದಿನವೂ ದುಃಖದ ಕುಲುಮೆಯಲ್ಲಿ ಬೆಂದಿದ್ದೀರಿ. ಅವಳು ನಿಮ್ಮ ಮುಖಕ್ಕೇ ಸುಳ್ಳು ಹೇಳಿದ್ದಳು. ನೀವು ಅವಳನ್ನು ತುಂಬಾ ದೊಡ್ಡ ಮನುಷ್ಯೆ, ಎಂದು ನಂಬಿ ದುಃಖಪಟ್ಟಿರಿ. ಈ ಮಧ್ಯಾಹ್ನ ನಿಮ್ಮ ಕಣ್ಣುಗಳನ್ನು ನೋಡಲು ಸಾಧ್ಯವಾಗಲಿಲ್ಲ ನನ್ನಿಂದ."

ಎಂದಳು. ರಾಜಣ್ಣನಿಗೆ ಯಾವುದೋ ನೋವು ಮರುಕಳಿಸಿ

ಬಂತು. ಅವಳ ಕೈ ಹಿಡಿದು, ಅವಳ ತಂಪು ಬೊಗಸೆಯಲ್ಲಿ ಕಂಪಿಸುವ ಕಪೋಲ. ಮುಖವನ್ನು ಹುದುಗಿಸುತ್ತಾ, ಉಮ್ಮಳಿಸಿ ಬರುತ್ತಿದ್ದ ಕಣ್ಣೀರನ್ನು ತಡೆದು, ಬಿಗಿದ ಕಂಠದಲ್ಲಿ,

"ಶಾಂತಾ, ನಾನು ಅವಳನ್ನು ಅಂಗಲಾಚಿದ್ದು ನಿಜ"

ಎಂದುಸುರಿದ ಅವಳು ಅವನ ಕೆನ್ನೆ ಅದುಮಿ ಹಿಡಿದು ಎದೆಯ ಬಳಿಗೆಳೆದುಕೊಳ್ಳುತ್ತಾ ಹೇಳಿದಳು,

"ನೀವು ಅಂಗಲಾಚಿದ್ದು ನಿಜವಿರಬಹುದು ರಾಜು. ಅದರಲ್ಲಿ ತಪ್ಪೇನಿಲ್ಲ ಆದರೆ ನೀವು ಅಂಗಲಾಚಿದ್ದಕ್ಕೇ ಅವಳು ನಿಮ್ಮ ಬಳಿಗೆ ಬಂದೆ ಎಂದಳಲ್ಲ, ಅದು ಒಂದು ಬ್ಲಾಟೆಂಟ್ ಲೈ .... ಒಂದು ನೀಚ ಸುಳ್ಳು! ರಾಜೂ, ಯಾವ ಹೆಣ್ಣೂ ತನ್ನ ದೇಹಕ್ಕೆ ಮಾತ್ರ ಅಂಗಲಾಚುವ ಗಂಡಿನ ಬಳಿಗೆ ಬರೋಲ್ಲ. ಅವಳೂ ಅವನ ದೇಹಕ್ಕಾಗಿ ಅಂಗಲಾಚುವ ಸ್ಥಿತಿಯಲ್ಲಿದ್ದರೆ ಮಾತ್ರ ಹಾಗೆ ಬರುತ್ತಾಳೆ. ಇಲ್ಲದಿದ್ದರೆ ಹೆಣ್ಣು ತನ್ನ ಮುಂದೆ ಅಂಗಲಾಚುವ ಗಂಡನ್ನು ಕಣ್ಣೆತ್ತಿ ಸಹ ನೋಡೋಲ್ಲ. ಅವನ ಮುಖಕ್ಕೆ ಉಗಿದು ಹಿಂದಕ್ಕೆ ಅಟ್ಟುತ್ತಾಳೆ. ಕೈಗೆ ಚಪ್ಪಲಿ ತೆಗೆದುಕೊಳ್ತಾಳೆ

"ಹೆಣ್ಣನ್ನು ನೀವಿನ್ನೂ ಅರ್ಥಮಾಡಿಕೊಂಡಿಲ್ಲ ರಾಜೂ. ಅವಳು ಗಂಡಿನಲ್ಲಿ ಮೊದಲು ಮೆಚ್ಚುವುದು ದೇಹಶಕ್ತಿ, ದೇಹ ಸೌಂದರ್ಯ, ಹಣ, ಅಧಿಕಾರ, ತನಗೆ ಸುಖ, ಸಾಮಾಜಿಕ ಸ್ಥಾನ ಮಾನ ಇವನ್ನು ಕೊಡುವ ಸಾಮರ್ಥ್ಯ, ಇವುಗಳನ್ನು ಮಾತ್ರ. ಇದೊಂದನ್ನೂ ತೃಪ್ತಿಕರವಾಗಿ ನೀಡಲಾರದ ಗಂಡು ಅವಳ ಮುಂದೆ ಅಂಗಲಾಚುವುದು ಏಕೆ? ತನ್ನ ಪ್ರಾಣವನ್ನೇ ತೆಗೆದುಕೊಂಡರೂ ಅವಳು ಕಣ್ಣೆತ್ತಿ ನೋಡೋಲ್ಲ. ಕನಿಕರಪಡೋಲ್ಲ. ಇದು ನಿಮಗೆ ಗೊತ್ತಿಲ್ಲ ರಾಜು. ನಿಮಗೆ ಒಂದು ಚೂರೂ ಗೊತ್ತಿಲ್ಲ. ಅವಳಿಗೆ ಸುಖ ಕೊಡುವ, ಪೋಲಾಗದ ನವಶಕ್ತಿ, ಕಾಡು ಕುದುರೆಯ ಉಗ್ರ ಶಕ್ತಿ ನಿಮಗಿತ್ತು ನಿಮ್ಮ ರೂಪು, ಯೌವನ, ದೇಹದಾರ್ಢ್ಯ, ಸರಸ ಸ್ವಭಾವ, ಮುಗ್ಧತೆ, ಇವನ್ನೆಲ್ಲಾ ಅವಳು ಕಂಡುಕೊಂಡಳು. ನಂತರ ನಿಮಗೆ ಐಸ್ ಕೋಲ್ಡ್ ವಾಟರ್ ಕಳಿಸಿದಳು, ಬಾದಾಮಿ ಹಾಲು,

ಸಿಹಿ ತಿಂಡಿ ಕಳಿಸಿದಳು, ತನ್ನ ಕುಡಿನೋಟದ, ಕಳ್ಳಸನ್ನೆಯ, ಗಾಳದಿಂದ ನಿಮ್ಮನ್ನು ಹಿಂದೆಯೇ ಎಳೆದುಕೊಂಡು ಹೋದಳು ನಿಮ್ಮನ್ನು ಸ್ವಲ್ಪ ಹೊತ್ತು ಹೆದರಿಸಿ, ಬೆದರಿಸಿ, ಗೋಳಾಡಿಸಿದಳು. ಆದರಿಂದ ತನ್ನ ಪತಿವ್ರತೆಯ ಮನಕ್ಕೆ ಕಚಕುಳಿಯಿಟ್ಟುಕೊಂಡಳು. ನಂತರ ನಿಮ್ಮನ್ನು ಸಿನಿಮಾಗೆ ಕರೆದೊಯ್ದಳು. ರಾತ್ರಿ ಬಂದು ತನ್ನ ಕೊಬ್ಬಿದ ದೇಹದ ಬಯಕೆಗಳನ್ನೆಲ್ಲಾ ತೃಪ್ತಿಪಡಿಸಿಕೊಂಡು ಹೋದಳು. ಹಾಗೇ ತೃಪ್ತಿಪಡಿಸಲು 'ಇರು', 'ಇರು' ಎಂದು ನಿಮ್ಮನ್ನು ಬೇಡಿಕೊಂಡಳು ಅದನ್ನೆಲ್ಲಾ ನೀವು ಅರ್ಥಮಾಡಿಕೊಳ್ಳಿ. ಅವಳು ಮಾಡಿದ ಅಪಮಾನವನ್ನು ಮರೆಯಿರಿ. ಅವಳನ್ನು ಮೊದಲಬಾರಿಗೆ ಭೇಟಿ ಮಾಡಿದಾಗ ಯಾವ ನವಯುವಕನ ಗಂಡಸುತನವಾದರೂ ಉತ್ಕಟ ಬಯಕೆಯಿಂದ ಕಂಪಿಸುತ್ತಿತ್ತು. ಅದು ನಿಮ್ಮ ಗಂಡುತನದ ದೌರ್ಬಲ್ಯದ ಲಕ್ಷಣವಲ್ಲ. ನಿಮ್ಮ ಹೊಸ ಗಂಡುತನದ ಉಗ್ರಕಾಮದ ಲಕ್ಷಣ. ನಿಸರ್ಗದ ಲಕ್ಷಣ. ಇದೆಲ್ಲಾ ನನ್ನ ಹಾಗೆ ಸೈಕಾಲಜಿ ತೆಗೆದುಕೊಂಡಿದ್ದರೆ ನಿಮಗೆ ಆಗಲೇ ಗೊತ್ತಾಗಿರುತ್ತಿತ್ತು. ನೀವು ಸುಮ್ಮನೆ ಗೋಳಾಡಿದಿರಿ. ನಿಮ್ಮ ತಲೆಯಲ್ಲಿ ಕೊಂಚವೂ ಬುದ್ಧಿಯಿಲ್ಲ. ಹೋದ್ದು !"

ಇಷ್ಟು ಹೊತ್ತಿಗಾಗಲೇ ಅವಳ ತೊಡೆಯ ಮೇಲೆ ತಲೆಯಿರಿಸಿ, ಹುಲ್ಲಿನ ಮೇಲೆ ವೈಚಾಚಿ ಮಲಗಿ, ಎರಡು ಬಾಹುಗಳಿಂದಲೂ ಅವಳ ಸೊಂಟವನ್ನಪ್ಪಿ, ಸೂರ್ಯ ಮುಳುಗಿ, ಆಗಲೇ ಕತ್ತಲಾದ ನಭದಲ್ಲಿ ಮೂಡಿದ್ದ ಹೊಳೆಯುವ ಸುಂದರ ತಾರೆಗಳನ್ನೇ ನೋಡುತ್ತಿದ್ದ ರಾಜಣ್ಣ. ಅವನಿಗೆ ಮಿನುಮಿನುಗುವ ತಾರೆಗಳು ಕಾಣುತ್ತಿರಲಿಲ್ಲ. ತನ್ನ ಆ ಪ್ರಸಂಗವನ್ನೇ ವಿವರ-ವಿವರವಾಗಿ ಅವನ ಮನಸ್ಸೋ ನಯನ ಪುನರಾವಲೋಕನ ಮಾಡುತ್ತಿತ್ತು. ಆಗ ನಡೆದ ಸೂಕ್ಷ್ಮ ಘಟನೆಗಳ, ಕ್ರಿಯೆಗಳ, ಭಾವ ವಿಪ್ಲವದ ವಿಮರ್ಶೆ ಮಾಡುತ್ತಿತ್ತು. ಶಾಂತಳ ಮಾತುಗಳೆಲ್ಲವೂ ಅವನ ಮನಕ್ಕೆ ಪ್ರಶಾಂತತೆಯ ಹೊಳೆಯಂತೆ ಹರಿದು ಬಂತು. ಅವಳ ಸಹಾನುಭೂತಿ, ವಿವೇಕ, ಮಮತೆಗಳೇ ಅಲ್ಲಿ ತುಂಬಿ ತುಳುಕಾಡಿದುವು. ಅವನೆದೆಯಾಳದಲ್ಲಿ ನಾಟಿ ನಿಂತು, ಅತಿಯಾಗಿ ಬಾಧಿಸುತ್ತಿದ್ದ ಒಂದು ಕ್ರೂರ ಮುಳ್ಳನ್ನು

ಹೊರಗೆಳೆದು, ಅವರ ಗಾಯದಲ್ಲಿ ಅಮೃತಮಯ ನವಜೀವನ, ನವಶಕ್ತಿ ತುಂಬಿದ್ದಳು ಶಾಂತ.

ಅವಳ ಬಗೆಗೆ ಅವನೆದೆಯಲ್ಲಿ ಅನಂತ ಧನ್ಯವಾದ ಉಕ್ಕುಕ್ಕಿ, ಪುಟಿದು ಪುಟಿದೆದ್ದು ಬಂತು. ಪಕ್ಕಕ್ಕೆ ಹೊರಳಿ, ಅವಳ ಸೊಂಟವನ್ನು ಉತ್ಕಟ ಉದ್ವೇಗದಿಂದ ಬಾಚಿ ತಬ್ಬಿ, ಅವಳ ತೊಡೆಗಳಲ್ಲಿ ಮುಖ ಅದುಮಿ ಕಣ್ಣೀರಿಟ್ಟ ರಾಜಣ್ಣ. ಶಾಂತ ಅವನ ಕಾಲರನ್ನು ಕೆಡಿಸಿ ಕೆಡಿಸಿ ಸರಿಮಾಡುತ್ತಾ, ಅವನ ತಲೆಕೂದಲಲ್ಲಿ ಬೆರಳಾಡಿಸಿ, ಅದರ ಮೇಲೆ ತನ್ನ ಕಪೋಲವನ್ನೊತ್ತಿದಳು. ಎಷ್ಟು ಹೊತ್ತಾದರೂ ಅವಳು ತಲೆ ಎತ್ತಲಿಲ್ಲ. ಒಂದು ಮಾತನ್ನೂ ಆಡಲಿಲ್ಲ. ಅವನ ಮುಖವನ್ನು ಎದೆಗವಚಿಕೊಳ್ಳುತ್ತಾ ಮೌನವಾಗಿದ್ದಳು. ಅದನ್ನೇ ಬಹಳ ಹೊತ್ತು ಗಮನಿಸಿದ ರಾಜಣ್ಣನಿಗೆ ಕುತೂಹಲವಾಯಿತು. ಮತ್ತೆ ಅವಳ ಕೈಗಳಿಂದ ಮೃದುವಾಗಿ ಹೊರಬಂದು ಅವಳ ತೊಡೆಯ ಮೇಲೆ ತಲೆಯಿರಿಸಿ,

'ಏನು ಶಾಂತ, ಏನೋ ತುಂಬಾ ಯೋಚಿಸುತ್ತೀಯಲ್ಲಾ !" ಎಂದು ಕೇಳಿದ. ಶಾಂತ ಅವನ ಎರಡು ಕೈಗಳನ್ನೂ ಹಿಡಿದುಕೊಂಡು ದೂರದಲ್ಲಿ ನೋಟ ನೆಟ್ಟು,

"ರಾಜೂ, ಈಗ ನಾನು ಜ್ಞಾಪಿಸಿಕೊಂಡೆ. ನೀವು ಬಿದ್ದಂಥ ಕಮರಿಗೆ ನಾನೂ ಒಂದು ಬಾರಿ ಬಿದ್ದುಬಿಡುತ್ತಿದ್ದೆ. ಅದೇನೋ ನನ್ನ ಅದೃಷ್ಟ! ದೇವರು ನನಗೆ ಕೊನೆಯ ಕ್ಷಣದಲ್ಲಿ ಎಲ್ಲಿಲ್ಲದ ಬುದ್ಧಿ, ಶಕ್ತಿ ಕೊಟ್ಟ. ನಾನು ಆ ಕುತ್ತಿನಿಂದ ಪಾರಾದೆ"

ಎಂದಳು. ರಾಜಣ್ಣ ಹೊಡೆದೆಬ್ಬಿಸಿದವನಂತೆ ಕೆರಳಿದ ಆಸಕ್ತಿಯಿಂದ ಎದ್ದು ಕುಳಿತು,

'ಹೇಗೆ ಬೀಳುತ್ತಿದ್ದೆ....ಎಲ್ಲಿ ? ಯಾವಾಗ ?"

ಎಂದು ಕೇಳಿದ. ಶಾಂತ ಅವನ ಕೈಯನ್ನು ಹಿಡಿದುಕೊಂಡೇ ಯೋಚಿಸತೊಡಗಿದಳು. ಐದಾರು ನಿಮಿಷವಾದರೂ ಬಾಯಿಬಿಡಲಿಲ್ಲ. ರಾಜಣ್ಣ ಅವಳ ಗಂಭೀರ ಮುಖದ ಮೇಲೆ ಜಡೆ ಕೊನೆಯನ್ನು ಹಾರಿಸುತ್ತಾ, " ಬೇಗ ಹೇಳು " ಎಂದ. ಶಾಂತ ಅವನೆಡೆಗೆ

ಕುಸಿದೊರಗಿ, ಅವನ ಷರಟು ಗುಂಡಿಯೊಡನೆ ಆಟವಾಡುತ್ತಾ ಹೇಳಲಾರಂಭಿಸಿದಳು.

"ನೋಡಿ, ನಾನು ಜೂನಿಯರ್ ಬಿ.ಎ.ನಲ್ಲಿ ಓದುತ್ತಿದ್ದಾಗ ನನ್ನನ್ನು ಮದುವೆ ಆಗಲು ಒಬ್ಬ ಗಂಡು ಬಂದಿದ್ದ. ಬೆಳಗೋಳದವನು M.Sc. ಪಾಸ್ ಮಾಡಿದ್ದ ಉಸ್ಮಾನಿಯಾ ಯೂನಿವರ್ಸಿಟಿಯಲ್ಲಿ ಲೆಕ್ಚರರ್ ಆಗಿದ್ದನಂತೆ. ಅವನು ನಮ್ಮ ಮನೆಗೆ ಬಂದ ದಿನ, ನಾನು ಅವನನ್ನು ಕಂಡು ಮೆಚ್ಚಿದೆ. ಲಕ್ಷಣವಾಗಿಯೇ ಇದ್ದ. ಡ್ರೆಸ್, ನಡೆ, ನುಡಿ, ಎಲ್ಲಾ ಠಾಕೋಠೀಕ್! ನನ್ನ ಜೊತೆಗೆ ತುಂಬಾ ಸರಸವಾಗಿ ಮಾತಾಡಿದ. ಮಾತಿನಿಂದ ನನ್ನನ್ನು ಮರುಳು-ಶಿಪ್ಮ ಮಾಡಿಬಿಟ್ಟ. ಎರಡು ಮೂರು ದಿನ ನಮ್ಮ ಮನೆಯಲ್ಲೇ ಇದ್ದ. ಶೇಕಡ ತೊಂಭತ್ತೊಂಭತ್ತು ಪಾಯಿಂಟ್ ಒಂಭತ್ತು ಭಾಗ ನನ್ನನ್ನೇ ಮದುವೆಯಾಗುವೆನೆಂದು ನಮ್ಮ ತಂದೆಗೆ ಭರವಸೆ ಕೊಟ್ಟ. ಶೇಕಡ ನೂರು ಭಾಗವೂ ಮದುವೆಯಾಗುತ್ತೇನೆಂದು ನನ್ನ ಕೈ ಹಿಡಿದು ಪ್ರಮಾಣ ಮಾಡಿದ. ನಮ್ಮ ತಂದೆಗೆ ಮಾತ್ರ, ಇನ್ನುಳಿದ ಪಾಯಿಂಟ್ ಒಂದು ಭಾಗಕ್ಕೆ ತನ್ನ ತಂದೆ, ತಾತಂದಿರ ಒಪ್ಪಿಗೆ ಪಡೆಯಬೇಕು ಎಂದು ಹೇಳಿದ.

"ಅವನು ಹೊರಟುಹೋಗುವ ಹಿಂದಿನ ದಿನ ನನ್ನನ್ನು ಜೊತೆಗೆ 'ನಾಕ್'ಗೆ ಕರೆದ. ನಾನು ಅವನ ಜೊತೆಗೆ ಹೋಗಲು ಒಪ್ಪಲಿಲ್ಲ. ಅವನಲ್ಲಿ ಏನೋ ಒಂದು ತರ ಸುಯ ಬುದ್ಧಿಯಿತ್ತು. ಅದು ಅವನ ನೀಳ ಕಣ್ಣುಗಳಲ್ಲಿ ಚೆನ್ನಾಗಿ ಕಾಣುತ್ತಿತ್ತು. ನಿಮ್ಮ ಕಣ್ಣುಗಳಂತೆ ಅವು ತಿಳಿಯಾಗಿ, ನಿರ್ಮಲವಾಗಿ, ನಿಷ್ಕಪಟವಾಗಿರಲಿಲ್ಲ. ಏನೋ ಒಂದು ಕುಯುಕ್ತಿ ಬುದ್ಧಿ ಅವುಗಳಲ್ಲಿ ಯಾವಾಗಲೂ ಮಿನುಗುತ್ತಿತ್ತು. ಇದನ್ನು ಕಂಡು ನಾನು ಅನುಮಾನಿಸಿದೆ... ಆದರೆ ನಮ್ಮ ತಾಯಿ, ಅವನ ಜೊತೆ ಹೋಗುವಂತೆ ನನ್ನನ್ನು ಒತ್ತಾಯಮಾಡಿದರು.

"ಸರಿ, ... ನಾನು ಹೊರಟೆ. ಮೊದಲು ನಾವಳ್ಳಿ ಟಿಫಿನ್ ರೂಮಿನ್ನಿಗೆ ಹೋದೆವು. ನಂತರ ಲಾಲ್‌ಬಾಗಿಗೆ ಹೋದೆವು. ಅವನು ನನ್ನ ಕೈ-ಹಿಡಿದುಕೊಂಡ. ಅವನ ಕೈಗಳು ನಿಮ್ಮಂತೆ ಪುಷ್ಟವಾದ

ಕೈಗಳಲ್ಲ, ಬಿಸಿಯಾದ ಕೈಗಳಲ್ಲ, ಸೀಮೆಸುಣ್ಣ ಹಿಡಿದು ಹಿಡಿದು ಸತ್ತ ಕೈಬೆರಳುಗಳು, ಶಸ್ತ್ರಚಿಕಿತ್ಸೆ ಮಾಡುವವನ ಕೈಬೆರಳುಗಳು... ತಣ್ಣಗೆ, ಮೂಳೆಮೂಳೆಯಾದ ಕೈಬೆರಳುಗಳು.... ಇಂಥ ಕೈಗಳನ್ನು ಏಕಾದರೂ ಹಿಡಿದುಕೊಳ್ಳಬೇಕೋ ಎನಿಸಿತು ನನಗೆ.

'ಕತ್ತಲೆಯಾಯ್ತು. ಅವನು ನನ್ನನ್ನೊಂದು ಟ್ಯಾಕ್ಸೀಲಿ ಕೂರಿಸಿಕೊಂಡ ಎಲ್ಲಿಗೆ? ಎಂದರೆ 'ಮನೆಗೆ' ಎಂದು ಹೇಳಿದ. ದಾರಿಯುದ್ದಕ್ಕೂ ಅವನ ಹಾಳು ಕೈಗಳ ಧರ್ಮ! .... ಎಲ್ಲೆಲ್ಲೋ ಮುಟ್ಟಲು ಬಂದ ನಾನು ಅವನ ಕೈಯನ್ನು ಬಲವಾಗಿ ಹಿಡಿದುಕೊಂಡೆ, ನನಗೆ ದೇವರು ಅದೆಷ್ಟು ಶಕ್ತಿ ಕೊಟ್ಟನೋ.. .ಅಷ್ಟಿದೆ ನಾನು ಅಡಿಗೆ ಮನೆ, ಮನೆಕೆಲಸ ಮಾಡಿ ಸ್ವಲ್ಪ ಬಲವಾಗಿ ಇದ್ದೀನಿ. ..ಅವನ ಕೈ ಹಿಡಿದು. ಬೆರಳುಗಳನ್ನೆಲ್ಲಾ ಮುರಿದು ಹಾಕ್ದೆ. ಅವನು ಕುಯ್ಯೋ ಮರ್ರೋ . ಎಂದರೂ ಬಿಡಲಿಲ್ಲ ಅವನು ಆಗ ತರಗೆಲೆಯಂತೆ ನಡುಗುತ್ತಿದ್ದ, ಪ್ರಾಣ ಬಿಡುವವನಂತೆ ಉಸಿರಾಡ್ತಿದ್ದ. ಅವನನ್ನು ಒಂದು ಮೂಲೆಗೆ ತಳ್ಳಿ, ನಾನು ಇನ್ನೊಂದು ಮೂಲೆಗೆ ಜರುಗಿ ಕುಳಿತೆ...ಎಲ್ಲಾ ನಗು ನಗುತ್ತಲೇ....! ಆದರೆ ಅವನು ಪುನಃ ನನ್ನ ಪಕ್ಕಕ್ಕೆ ಬಂದ. ..ಪುನ ಪೀಡಿಸೋಕೆ ಶುರು ಮಾಡಿದ. ..ಅಷ್ಟರಲ್ಲಿ ಆ ಮಹರಾಯ ಟ್ಯಾಕ್ಸಿಡ್ರೈವರ್ ನಮ್ಮ ಕಡೆ ತಿರುಗಿ ನೋಡಲು ಪ್ರಾರಂಭಿಸಿದ್ದ. ಆಗ ಅವನ ಕಾಟ ತಪ್ಪಿತು.

'ಟ್ಯಾಕ್ಸಿ ಮನೆಯ ಮುಂದೆ ಎಂದೂ ನಿಲ್ಲಲಿಲ್ಲ. .West End ಹೋಟೇಲಿ ಮುಂದೆ ನಿಂತಿತು! ನಾನು, 'ಇಲ್ಲೇಕೆ ಇಳಿಯುವುದು?' ಎಂದು ಕೇಳಿದೆ. ಅವನು, 'ಸುಮ್ಮನೆ, ಕಾಫಿ ತಗೊಂಡು ಹೋಗೋಣ ಬಾ.... ಎಂದು ಇಳಿದ. ಇರಬಹುದೇನೋ .ಎಂದು ನಾನು ಇಳಿದೆ. ಇಬ್ಬರೂ ಆ ಹೋಟೇಲಿಗೆ ಹೋದ್ವಿ. ಅವನು ಕೌಂಟರ್ ಹತ್ತಿರ ಹೋಗಿ ಒಂದು ರೂಮ್ ಕೇಳಿದ. ನಾನು 'ಏಕೆ? .ರೂಮೇಕೆ?' ಎಂದು ಕೇಳಿದೆ. ಅದಕ್ಕವನು .... ಇಲ್ಲಿ ರೂಮು ತೆಗೆದುಕೊಂಡು ಟಿಫಿನ್ ಮಾಡಿದರೇ ಸರಿ. ತುಂಬಾ ಚೆನ್ನಾಗಿರುತ್ತೆ!' ಎಂದ.

'ಸುಪ್ಪತ್ತಿಗೆ, ಸೋಫಾಗಳಿದ್ದ ಆ ರೂಮಿಗೆ ಕಾಲಿಟ್ಟ ಕೂಡಲೇ ನನಗೆ ಅವನ ಉದ್ದೇಶ ಅರ್ಥವಾಯ್ತು. 'ಕೊನೆಗೂ ಕೆಟ್ಟ ಬುದ್ಧಿ ಬಿಡಲಿಲ್ಲವಲ್ಲ' ಎಂದು ನಾನು ಕೋಪಿಸಿಕೊಂಡು ಹೊರಕ್ಕೆ ಬಂದು ಬಿಟ್ಟೆ.

"ನಾವು ಬಂದಿದ್ದ ಟ್ಯಾಕ್ಸಿಗೆ ದುಡ್ಡು ಕೊಟ್ಟು ಹಿಂದಕ್ಕೆ ಕಳಿಸಿ ಬಿಟ್ಟಿದ್ದ....ಹೊರಗೆ ಬಂದು ನಿಂತ ನನ್ನನ್ನೇ ಎಲ್ಲರೂ ನೋಡಲು ಪ್ರಾರಂಭಿಸಿದರು....ನನಗೆ ಅಳು ಬಂದು ಬಿಟ್ಟಿತು. ಅಷ್ಟರಲ್ಲಿ ಅವನು ನನ್ನ ಹಿಂದೆ ಬಂದ. 'ಈಗ ಎಲ್ಲರ ಮುಂದೆ ನನ್ನ ಮಾನ ಮರ್ಯಾದೆ ಹಾಳಾಗುತ್ತೆ, ಬಾ....' ಎಂದು ಒತ್ತಾಯ ಮಾಡಿದ ನಾನು ಅಳು ಜಾಸ್ತಿ ಮಾಡಿದೆ. ಆಗವನು ಮತ್ತೊಂದು ಟ್ಯಾಕ್ಸಿ ಮಾಡಿ ನನ್ನನ್ನು ಮನೆಗೆ ಕರೆದುಕೊಂಡು ಬಂದ ...ನೋಡಿ, ಆಗ ಸ್ವಲ್ಪ ನಡಿಲ ಕೊಟ್ಟಿದ್ದಿದ್ದರೆ....ಈಗ ನಾನು ಇಲ್ಲಿ ಇರೋಕೆ ಆಗ್ತಿರಲಿಲ್ಲ. . ಬಾಂಬೇಲೋ... ಕಲ್ಕತ್ತಲೋ .... ಇರಬೇಕಾಗ್ತಿತ್ತು." ಎಂದು ರಾಜಣ್ಣನನ್ನಪ್ಪಿದಳು. ರಾಜಣ್ಣ ಅವಳನ್ನು ಮತ್ತಷ್ಟು ಬಿಗಿಯಾಗಿ ಅಪ್ಪಿ, ಅವಳ ಗಲ್ಲ ಹಿಡಿದು ಮೇಲೆತ್ತಿ "ಏಕೆ?....ಅಂಥಾದ್ದೇನಾಯ್ತು?....ಆ ಗಂಡು ಏನಾದ?" ಎಂದು ಕಾತುರದಿಂದ ಕೇಳಿದ. ಶಾಂತ ಒಂದೆರಡು ಬಾರಿ ಮೌನವಾಗಿ ಕಣ್ಣೊರೆಸಿಕೊಂಡು, ಉದ್ವೇಗದಿಂದುಬ್ಬುಬ್ಬಿ ಅರಳುತ್ತಿದ್ದ ಗಂಟಲನ್ನು ಸ್ಥಿರಪಡಿಸಿಕೊಂಡು, ಕಂಪಿಸುವ ಧ್ವನಿಯಲ್ಲಿ "ಏನೂ ಆಗಲಿಲ್ಲ, ಸ್ವಲ್ಪ ದಿನಗಳ ನಂತರ, ನಮ್ಮ ಮನೆಯವರು ಮತ್ತು ಕೆಲವು ನೆಂಟರು ಬೆಳಗೊಳಕ್ಕೆ ಹೋದ್ವಿ. ಅಲ್ಲಿ ಗಂಡಿನದು ಭಾರಿ ಮನೆ. ನಮ್ಮ ತಂದೆ ಆನಂದದಿಂದ ಹಿಗ್ಗಿ ಹೋದರು, ಅಂಥ ಮನೇಗೆ ನನ್ನನ್ನು ಕೊಡೋಕೆ. ಆದರೆ ಅವರ ಆನಂದ ಒಂದು ಕ್ಷಣ ಮಾತ್ರ. ಗಂಡಿನ ತಾತ, ತಂದೆ, ತಾಯಿ, ಇವರೆಲ್ಲಾ ನಾಲ್ಕು ಸಾವಿರ ರೂಪಾಯಿ ವರದಕ್ಷಿಣೆ ಕೇಳಿದರು. ಗಂಡನ್ನು ಅಮೆರಿಕಾಕ್ಕೆ ಕಳಿಸಿ ಓದಿಸಬೇಕೆಂದರು....ನಮ್ಮ ತಂದೆಗೆ ತಲೇ ಮೇಲೆ ಆಕಾಶವೇ ಕಳಚಿಬಿದ್ದಂತಾಯ್ತು. ಅಷ್ಟೊಂದು ಭರವಸೆ ಕೊಟ್ಟಿದ್ದ ಗಂಡಿನ ಕಡೆಗೆ ತಿರುಗಿದರು. ಇಲ್ಲಿ ಹುಲಿಯಂತೆ ಆರ್ಭಟಿಸಿ ಹೋಗಿದ್ದ ಗಂಡು, ಅಲ್ಲಿ ಇಲಿಯ ಹಾಗೆ ಬಿಲದಲ್ಲಿ ಅವಿತು

ಕೊಂಡ. ಒಂದು ಮಾತನ್ನೂ ಆಡಲಿಲ್ಲ....ನಮ್ಮ ತಂದೆಗೆ ಹೇಳ ಲಾರದಷ್ಟು ನಿರಾಸೆ, ವ್ಯಸನವಾಯ್ತು. ನಾನು ಅಪಮಾನದಿಂದ ನೆಲಕ್ಕೆ ಕುಸಿದೆ. ಯಾರಿಗೆ ಮುಖ ತೋರಿಸೋಕೂ ನಾಚಿಕೆಯಾಯ್ತು. ಭೂಮಿಯಾದರೂ ಬಾಯ್ತೆರದು ನನ್ನನ್ನು ನುಂಗಬಾರದೇ ಎನಿಸಿತು. ಇಲ್ಲಿಂದ ನಗು ನಗುತ್ತಾ ಹೋಗಿದ್ವು: ಅಲ್ಲಿಂದ ಅಳುತ್ತಾ ಹಿಂದಕ್ಕೆ ಬಂದ್ವು" ಎನ್ನುವಾಗಲೇ ಅವಳ ಧ್ವನಿ ಕುಸಿಯಿತು. ಉಕ್ಕುಕ್ಕಿ ಬರುವ ದುಃಖ ಅವಳನ್ನು ಕುಲುಕಿಸಿತು. ರಾಜಣ್ಣ ಅವಳನ್ನು ಮಮತೆ ಸಹಾನುಭೂತಿಗಳಿಂದ ಗಾಢವಾಗಿ ಅಪ್ಪಿದ.. ಅವಳು ಅವನೆದೆಯಲ್ಲಿ ಮುಖ ಹುದುಗಿಸಿ ಮನಃಪೂರ್ತಿಯಾಗಿ ಅಳಲಾರಂಭಿಸಿದಳು. ಅವನ ಷರಟೆಲ್ಲಾ ಒದ್ದೆಯಾಯಿತು.

ರಾಜಣ್ಣ ಕಲ್ಲಾಗಿ ಕುಳಿತ. ಅವನು ಶಾಂತಳಿಗೆ ಏನನ್ನೂ ಹೇಳಲಿಲ್ಲ. ಅವನಿಗೆ, ಅಲ್ಲಿಂದೆದ್ದು ಹೋಗಿ ವರದಕ್ಷಿಣೆಗೆ ಪಟ್ಟುಹಾಕಿ ಕುಳಿತುಕೊಳ್ಳುವ, ಹೆಣ್ಣು ಹೆತ್ತವರಿಗೆ ಆಸೆ ತೋರಿಸಿ ಗೋಳಾಡಿಸುವ ಗಂಡುಗಳನ್ನೆಲ್ಲಾ ತನ್ನ ಎಡಗಾಲಿನ ಬೂಟಿನಿಂದ ಹೊಡೆದು ಬರಬೇಕು ಎನಿಸಿತು. ಅವರ ಗಂಡಸುತನಕ್ಕೆ ಪೆಟ್ರೋಲ್ ಹಾಕಿ ಬೆಂಕಿಯಿಡಬೇಕು ಎನಿಸಿತು. ಅವನಿಗೆ ತನ್ನ ತೋಳ ತೆಕ್ಕೆಯಲ್ಲಿ ಬಿದ್ದು ಅಳುತ್ತಿರುವ ಶಾಂತಳಂತೆಯೇ, ದೇಶದ ಉದ್ದಗಲದಲ್ಲೂ, ಬೀದಿಬೀದಿಯ ಮನೆ ಗಳಲ್ಲೂ, ಎಷ್ಟುಮಂದಿ ಬೆಳೆದ ಅಭಾಗ್ಯ ಯುವತಿಯರು ಕಗ್ಗತ್ತಲ ರಾತ್ರಿಯಲ್ಲಿ ತಮ್ಮ ತಲೆದಿಂಬುಗಳಲ್ಲಿ ಮುಖ ಹುದುಗಿಸಿ ಅಳುತ್ತಿರು ವರೋ ಎನಿಸಿತು. ಅವನ ಎದೆ ಆ ದುಃಖಸಾಗರದ ಅಪಾರತೆಯನ್ನು ಕಂಡು 'ಝಲ್!' ಎಂದಿತು.

ಶಾಂತ ತನ್ನ ದುಃಖವನ್ನು ಹತೋಟಿಗೆ ತಂದುಕೊಂಡಳು. ಅನಂತರ ತಲೆಯೆತ್ತಿ ಕಣ್ಣೀರೊರೆಸಿಕೊಂಡು, ಅವನನ್ನು ಬಿಟ್ಟು ಪಕ್ಕ ದಲ್ಲಿ ಕುಳಿತಳು ಈಗ ಅವಳ ವದನ ನಿರ್ಧಾರದ ಭಾವ ತಾಳಿತ್ತು. ಅವಳ ಕಣ್ಣುಗಳಲ್ಲಿ ಯಾವುದೋ ಉಜ್ವಲ ಪ್ರಭೆ ಮಿಂಚಿತು. ಕಣ್ಣಿನ ಅಳಿದುಳಿದ ಕಂಬನಿಯನ್ನು ಆಗಾಗ ಒರೆಸಿಕೊಳ್ಳುತ್ತಾ ಹೇಳಲು ಆರಂಭಿಸಿದಳು—

"……ನೋಡಿ ರಾಜು …. ಅಂದಿನಿಂದ ನನಗೆ ಈಗಿನ ಹಳ್ಳಿ ಯುವಕರ ಮೇಲೆ, ಅದರಲ್ಲೂ ನಮ್ಮ ಜಾತಿಯ ಯುವಕರ ಮೇಲೆ ತುಂಬಾ ದ್ವೇಷ ಬಂದಿದೆ. ಅಷ್ಟು ಹೇಡಿಗಳು ಅವರು. ಅವರ ಜತೆಗೆ ಅಹಂಕಾರ ಬೇರೆ … ಹೆಣ್ಣಿನ ತಂದೆ ಹಣ ಕೊಟ್ಟರೆ ಮಾತ್ರ ತಮ್ಮ ಮನೇಗೆ ಎತ್ತಿ ಹಾಕ್ಕೊಳ್ಳೋಂಥ ತಿಪ್ಪೇಗುಂಡಿ ಎಂದು ತಿಳಿದಿದಾರೆ ಮದುವೆಗೆ ಬರೋ ಹೆಣ್ಣನ್ನು! ಅದನ್ನು ನಾನು ಚೆನ್ನಾಗಿ ತಿಳಿದು ಕೊಂಡುಬಿಟ್ಟೆ .. … ಆಮೇಲೆ ಯಾರನ್ನೂ ಮದುವೆಯಾಗಬಾರದು ಎಂದು ದೃಢನಿಶ್ಚಯ ಮಾಡ್ದೆ. ನನ್ನ ಗಮನ ಎಲ್ಲಾ ವಿದ್ಯೆ ಕಡೆಗೆ ತಿರುಗಿಸ್ದೆ ಅಲ್ಲಿಯವರೆಗೂ ನಾನು ವಿದ್ಯೆಗೆ ಅಷ್ಟು ಪ್ರಾಮುಖ್ಯತ ಕೊಡ್ತಿರಲಿಲ್ಲ….ಆ ಅಪಮಾನವಾದ ನಂತರ ಒಂದು ಹಠ ತೊಟ್ಟೆ… 'ಸ್ವತಂತ್ರ ಜೀವನ ನಡೆಸಬೇಕು! ಎಲ್ಲಿ ಕ್ಷೇತ್ರದಲ್ಲೂ ಗಂಡಿನೊಡನೆ ಸಮ-ಸಮನೆ ಜೀವಿಸಬೇಕು. ಎಂದಿಗೂ ಅವನ ತೊತ್ತಾಗಬಾರದು. ಅವನ ಅಡಿಯಾಳಾಗಿ ಬದುಕಬೇಕೆಂದೇ ಮನೇ ಮೂಲೇಲಿ ಅಲಂಕಾರ ಮಾಡಿಕೊಂಡು, ಆರತಿ ಹಿಡ್ಕೊಂಡು, ಆಸೆಯಿಂದ, ಹೆದರಿಕೆ ಯಿಂದ, ಭಕ್ತಿಯಿಂದ ನಗುನಗುತ್ತಾ ಕೂತುಕೋಬಾರದು. ನನ್ನ ದೇಹ ಇದೆ, ನನ್ನ ಆತ್ಮ ಇದೆ, ನನ್ನ ಆತ್ಮಾಭಿಮಾನ ಇದೆ; ಅದ ನ್ನೆಲ್ಲಾ ತಗೋ! . . ಬೇಕಾದರೆ ನಿನ್ನ ಬೂಟುಗಾಲಿನ ಕೆಳಗೆ ಹಾಕ್ಕೊಂಡು ತುಳಿ….ಪತಿದೇವಾ! ನಾಥಾ!' ಎಂದು ಅಂಗಲಾಚಲು ಕಾಯ್ದು ಕುಳಿತುಕೋಬಾರದು. ಅಂಥ ಹೆಣ್ಣು ಜನ್ಮವನ್ನು ಸುಡ ಬೇಕು – ಎಂದುಕೊಂಡೆ. ಆ ನನ್ನ ಹಳೇ ಹೆಣ್ಣುತನವನ್ನು ಸುಟ್ಟು ಹಾಕಿಬಿಟ್ಟೆ ಒಬ್ಬ ಹೊಸ ಹೆಣ್ಣಾದೆ ಆಗ ನನ್ನ ಬಯಕೆಯ ಪತಿಯೇ ಬೇರೆ ರೂಪದಲ್ಲಿ ಕಾಣಿಸುತ್ತಿದ್ದ

" . ಅಂದು ನೀವು ಮೊದಲ ಬಾರಿ ಹಳ್ಳಿಯಿಂದ ಬಂದ್ರಿ. ನಿಮ್ಮನ್ನು ಕಂಡಕೂಡ್ಲೇ ನನ್ನ ದೇಹದಲ್ಲಿ ಹೆಣ್ಣುತನ ತಲೆ ಎತ್ತಿ ನಿಂತಿತು. ಮೊದಲು ನಿಮ್ಮ ರೂಪು, ದೇಹವನ್ನು ನೋಡಿ ಮೆಚ್ಚಿದೆ. ಆಮೇಲೆ ದಿನ ದಿನವೂ ನಿಮ್ಮ ನಡೆ, ನುಡಿ, ಸ್ವಭಾವ, ಅಭಿರುಚಿ, ಆದರ್ಶಗಳನ್ನು ನೋಡಿ ಮೆಚ್ಚಿದೆ. ನನಗೆ ನರಕದಿಂದ ಸ್ವರ್ಗ ಕಂಡಂತೆ

ಆಯ್ತು. ಬೇರೆ ಜಾತಿಯವರಾದರೂ ಚಿಂತೆಯಿಲ್ಲ, ಯೋಗ್ಯರನ್ನು ಮದುವೆಯಾಗಬೇಕು. ನನ್ನನ್ನು ಪ್ರೀತಿಸಿ, — ನನ್ನ ಪ್ರೇಮಕ್ಕೆ, ಅಭಿಲಾಷೆಗೆ, ವ್ಯಕ್ತಿತ್ವಕ್ಕೆ, ಹೆಣ್ಣುತನಕ್ಕೆ ಸೂಕ್ತ ಗೌರವ ಕೊಡೋರ್ನ್ನ ಮದುವೆಯಾಗಬೇಕು. ನನ್ನ ತಂದೆ ಹಣಕ್ಕೆ ಬಾಯಿಬಿಡ್ತೋ ಹೆಣಗಳನ್ನು ಮದುವೆಯಾಗಬಾರದು ಎಂದು ಆಗಲೇ ನಿರ್ಧರಿಸಿದೆ. ನಿಮ್ಮನ್ನೇ ಮದುವೆ ಆಗ್ತೀನೆಂದು ತಿಳಿದೆ.

"ಮಧ್ಯೆ ಈ ಪ್ರಸಂಗ ಜರುಗಿ ಬಂತು. ಮನಸ್ಸಿಗೆ ಸ್ವಲ್ಪ ಸಂಶಯ ಆಯ್ತು. ಕಟ್ಟಿದ್ದ ಕನಸೆಲ್ಲ ಎಲ್ಲಿ ಚೂರು ಚೂರಾಗುತ್ತೊ ಎಂದು ಹೆದರಿಕೆ ಆಯ್ತು. ಎಲ್ಲವನ್ನೂ ವಿವರವಾಗಿ, ಸ್ಪಷ್ಟವಾಗಿ ತಿಳಿಸಿ ಎಂದು ನಿಮ್ಮನ್ನು ಕೇಳಿಕೊಂಡೆ. ನೀವೂ ಯಾವುದನ್ನೂ ಮುಚ್ಚುಮರೆ ಮಾಡದೆ ತಿಳಿಸಿದಿರಿ. ನಿಮ್ಮ ಪ್ರೇಮವನ್ನೇ ತೋಡಿಕೊಂಡಿರಿ, ಬೇಡಿಕೊಂಡಿರಿ. ಈಗ ನಾನು ನಿಮ್ಮನ್ನು ಬೇಡಿಕೊಳ್ತಿದೇನೆ ರಾಜೂ ನೀವೇ ನನ್ನ ಇಹ-ಪರದ ಪತಿ ... ನನ್ನ ಕೈ ಬಿಡಬೇಡಿ!" ಎಂದು ಉತ್ಕಂಠಿತಳಾಗಿ ನುಡಿದಳು. ಕಣ್ಣೀರೊರಸಿಕೊಳ್ಳುತ್ತಿದ್ದ ಅವಳನ್ನು ರಾಜಣ್ಣ ಮೈಮರೆತು ಅಪ್ಪಿದ. ಅವಳೂ ಅವನನ್ನಪ್ಪಿದಳು. ಅವನ ಎದೆಯಲ್ಲಿ ಮುಖ ಹುದುಗಿಸಿದಳು. ರಾಜಣ್ಣ ಅವಳ ಕೆನ್ನೆ, ಮುಂಗುರುಳನ್ನು ಸವರಿ, ಉದ್ವೇಗದಿಂದ ಅವಳ ತಲೆಯನ್ನು ಎದೆಗೊತ್ತಿಕೊಂಡ. ಅದರ ಮೇಲೆ ತನ್ನ ಕುದಿಯುವ ಕೆನ್ನೆಯೊತ್ತಿ ಹಿಡಿದ

ಹಲವಾರು ನಿಮಿಷ ಅವರಿಬ್ಬರೂ ಆ ಉತ್ಕಟಾಲಿಂಗನದಲ್ಲಿ ಕರಗಿ ಕುಳಿತಿದ್ದರು. ಆಪ್ತತೆ, ವಿಶ್ವಾಸ, ಮಾಧುರ್ಯ, ಪ್ರೇಮ, ನವಿಗನಸು, ಹಠ, ದೀಕ್ಷೆ, ಸಾರ್ಥಕ್ಯಗಳ ರಾಗರಂಜಿತ ದೀಪಮಾಲೆಯೇ ಅವರ ಅರೆತೆರೆದ ಭಾವ ಸಂತಪ್ತ ನಯನಗಳಲ್ಲಿ ಮೆರೆದಾಡುತ್ತಿದ್ದುವು. ಕುಣಿಕುಣಿದು ಕಂಗೊಳಿಸುತ್ತಿದ್ದುವು.

ಕೆಲವು ಕಾಲವಾದ ಬಳಿಕ ಅವರಿಬ್ಬರೂ ಬೇರ್ಪಟ್ಟು, ಒಬ್ಬರನ್ನೊಬ್ಬರು ಅನುಪಮ ಅಚ್ಚರಿ-ಆನಂದಗಳಿಂದ ಬೆಕ್ಕಸ ಬೆರಗಾಗಿ ನೋಡಿಕೊಂಡರು ರಾಜಣ್ಣನ ಎದೆಯಲ್ಲಿ ಯಾವುದೋ ಸುಮಧುರ ಭಾವ ಚಿಮ್ಮಿತು ತನ್ನ ಬೊಗಸೆಯಲ್ಲಿ ಶಾಂತಳ ಮುಖಕಮಲ

ವನ್ನೆತ್ತಿಕೊಂಡು, ಹತ್ತಿರ ಹತ್ತಿರ ಬಾಗಿ ಅವಳ ನೋಟದೊಡನೆ ನೋಟ ಬೆರೆಸಿ ಕ್ಷಣಕಾಲ ಈಕ್ಷಿಸಿದ. ಆನಂದಭಾಷ್ಪಗಳೊಸರಿದ್ದ ಶಾಂತಳ ನಯನಗಳು ಒಲುಮೆಯ ಎರಡು ತುಂಬು ಸರಸ್ಸುಗಳಂತಿದ್ದುವು. ಅವನು ಅವೆರಡಕ್ಕೂ ಒಂದೊಂದು ಮೃದು ಚುಂಬನವಿತ್ತ ಅವನ ನಾಲಿಗೆ ಉಪ್ಪುಂಡಿತು. ಆದರೆ ಹೃದಯ ಅಮೃತ ಸವಿಯಿತು! ಮರುಕ್ಷಣವೇ ರಾಜಣ್ಣ ಅವಳನ್ನು ಬರಸೆಳೆದು ತಬ್ಬಿದ. ಅವರಿಬ್ಬರ ತುಟಿಗಳೂ ರಸದೂಟದಲ್ಲಿ ಒಂದಾದುವು. ಅವರ ಪ್ರೇಮದ ಪ್ರತಿಜ್ಞೆ ಒಂದನ್ನೊಂದಪ್ಪಿ ಮತ್ತರಾಗಿ ಗಗನ ಶಿಖರಕ್ಕೇರುವ ಜೋಡಿಭೃಂಗಗಳಂತೆ ಮುಗಿಲೆತ್ತರ ಹಾರಿ ನಿಂತಿತು

ತುಟಿಗಳು ಬೇರ್ಪಟ್ಟಾಗ ಅವರಿಬ್ಬರ ಉಸಿರೂ ಉದ್ವೇಗಗೊಂಡು, ಎದೆ ವೇಗವಾಗಿ ಬಡಿ-ಬಡಿದು, ಬಗೆ ಕದಡಿ, ಅಂಗಾಂಗಗಳೆಲ್ಲಾ ಸುಮಧುರ ಯಾತನೆಯಿಂದ ಬಿಗಿದು, ನವುರಾಗಿ ಕಂಪಿಸುತ್ತಿದ್ದುವು. ರಾಜಣ್ಣ ಶಾಂತಳನ್ನೇ ಅರಸಿಬರುವ ಹೊಯ್ದಾಡುವ ಮನಸ್ಸಿನಿಂದ, ಬಯಕೆಯ ಬಿಸಿಯುಸಿರಿನಿಂದ ಎವೆಯಿಕ್ಕದೆ ನೋಡಿ ಮುಗುಳ್ನಕ್ಕ. ಅವಳು ಅವನೊಡನೆ ನೋಟ ಬೆರೆಸದೆ, ತನ್ನಲ್ಲಿ ತಾನೇ ನಸುನಕ್ಕು ಅವನನ್ನು ಪಕ್ಕಕ್ಕೆ ತಳ್ಳಿದಳು. ಕಾಲುಗಳನ್ನು ಜೋಡಿಸಿ, ಮೇಲೆಳೆದುಕೊಂಡು, ಬಾಹುಗಳಿಂದ ಮಂಡಿಯನ್ನಪ್ಪಿ, ಅದರ ಮೇಲೆ ತಲೆಯಿರಿಸಿ, ನಾಚಿಕೆಯಿಂದ ಮುಖ ಮುಚ್ಚಿಕೊಂಡಳು ರಾಜಣ್ಣನೂ ನಸುನಗುತ್ತ, ಅವಳನ್ನೇ ಒಂದೆರಡು ಕ್ಷಣ ದಿಟ್ಟಿಸಿ ನೋಡಿದ. ಅನಂತರ ಉಗುಳು ನುಂಗಿ, ಆಳವಾಗಿ ನಿಟ್ಟುಸಿರು ಬಿಟ್ಟು, ಹುಲ್ಲಿನ ಮೇಲೊರಗಿದ. ಬಯಕೆಯಿಂದ ಬಿಗಿದುಕೊಂಡ ಬೆರಳುಗಳಿಂದ ಒಂದು ಹುಲ್ಲುಗರಿಕೆ ಕಿತ್ತು, ಅದನ್ನು ಬಾಯಲ್ಲಿ ಕಚ್ಚಿ, ತಲೆಯ ಕೆಳಗೆ ಕೈ ಕಟ್ಟಿ, ನೀಲನಭವನ್ನೇ ದಿಟ್ಟಿಸಿ ನೋಡತೊಡಗಿದ ಅವನ ತುಟಿಗಳ ಮೇಲೆ ಸಂಯಮ ಸಂತೃಪ್ತಿಗಳ ಕಿರುನಗೆ ಮೂಡಿತ್ತು.

ಸ್ವಲ್ಪ ಹೊತ್ತಿನ ಬಳಿಕ ಮನಸ್ಸನ್ನು ಬೇರೆ ಆಲೋಚನೆಗೆ ತಿರುಗಿಸಲು, ಮಲಗಿರುವಂತೆಯೇ ಸ್ವಲ್ಪ ತಲೆಯೆತ್ತಿ ಸುತ್ತಲೂ ನೋಟ ಹೊರಳಿಸಿದ. ಆಗಲೇ ದೂರದ ಬೆಟ್ಟದ ಅಂಚಿನಲ್ಲಿ ಚಂದ್ರ

ಮೂಡಿ ಮೇಲೇರಿದ್ದ. ಕಾಲಬಳಿಯ ಪುಟ್ಟ ತೊರೆ, ಅವರ ಅಂತರಂಗದ ಗುಪ್ತ ಬಯಕೆಗಳನ್ನರಿತ ತುಂಟ ಬಾಲೆಯಂತೆ ನಾಚಿ, ಕಿಲಕಿಲನೆ ನಗುತ್ತಾ ಮುಂದೋಡುತ್ತಿತ್ತು. ತಂಗಾಳಿ ಸುಳಿದಾಗ ಸುತ್ತಲ ಹೊಲದ ಪೈರುಗಳು ಅವರ ಮನದ ಹೊಯ್ದಾಟದಂತೆಯೇ ಸರ-ಸರ ಸಾದ ಗೈಯುತ್ತಾ ಅತ್ತಿತ್ತ ತೊನೆಯುತ್ತಿದ್ದುವು. ಅವುಗಳನ್ನು ಬಿಟ್ಟರೆ ಇನ್ನುಳಿದ ಜಗವೆಲ್ಲಾ ನೀಲಗಗನದ ಶುಭ್ರತಾರೆಗಳಂತೆ ನೀರವ, ಸುಂದರ !

ರಾಜಣ್ಣ ಶಾಂತಳೆಡೆಗೆ ಒಂದು ಪುಟ್ಟ ಕಲ್ಲನ್ನು ಬೆರಳತುದಿ ಯಿಂದ ಚಿಮ್ಮಿದ. ಅವಳು ತನ್ನ ಮಂಡಿಗಳನ್ನು ಮತ್ತೂ ಗಾಢವಾಗಿ ಅಪ್ಪಿ ತನ್ನಲ್ಲಿ ತಾನು ನಸುನಗುತ್ತಾ ಕುಳಿತಂತೆಯೇ ಕುಳಿತಿದ್ದಳು. ರಾಜಣ್ಣ ಆತುರದಿಂದ, "ಏಯ್ ಶಾಂತ !" ಎಂದ.

ಅವಳು ಕುಳಿತಂತೆಯೇ ಅವನ ಕಡೆಗೆ ಸರಕ್ಕನೆ ತಲೆ ಹೊರಳಿಸಿ ಮುಸಿಕೋಪದಿಂದ ಅವನನ್ನೇ ನೋಡಿ, "ಏನು ?.. ಆಗಲೇ ಏಯ್ ! ಗೀಯ್ ! ಎನ್ನೋದು ?" ಎಂದು ಬುಸುಗುಟ್ಟಿದಳು.

ರಾಜಣ್ಣ ಅವಳ ಹುಸಿ ಮುನಿಸಿನ ಮುಖದೆಡೆಗೆ ಮತ್ತೊಂದು ಪುಟ್ಟಕಲ್ಲು ಚಿಮ್ಮುತ್ತಾ, "ಏಯ್! ಅನ್ನುವುದೇನು .... ನನ್ನ ಮನೆಗೆ ಬಾ....ಆಗ ತೋರಿಸುತ್ತೀನಿ!" ಎಂದ.

ಶಾಂತಳೂ ವಯ್ಯಾರದಿಂದ ಕೊರಳಾಡಿಸುತ್ತಾ, " ಆಗ ನಾನೂ ಒಂದು ಕೈ ನೋಡ್ಕೊಳ್ತೀನಿ" ಎಂದಳು.

ರಾಜಣ್ಣ ಏನೋ ಒಂದು ವಿಚಾರ ಹೇಳಬೇಕಾಗಿತ್ತು. ಆದಕ್ಕೇ ಈ ಸರಸಯುದ್ಧವಲ್ಲ ಬೇಗ ತಾನೇ ನಿಲಬೇಕೆಂದು,

" ಒಂದು ಕೈ ಅಲ್ಲದಿದ್ದರೆ, ಎರಡು ಕೈ, ಎರಡು ತೋಳು, ಎರಡು ಕಣ್ಣಲ್ಲೂ ನೋಡಿಕೋ ಮಹಾರಾಣಿ ! ........ ಈಗ ಒಂದು ವಿಚಾರ ಇದೆ....ಸ್ವಲ್ಪ ಕೇಳು " ಎಂದ.

ಶಾಂತ ಅವನನ್ನೇ ನೋಡುತ್ತಾ ತಲೆಯಾಡಿಸಿ ಹೇಳಿದಳು.

' ನಿಮ್ಮ ವಿಚಾರ ಏನೂ ನನಗೆ ಬೇಡಿ ನನಗೆಲ್ಲಾ ಗೊತ್ತು."

" ನಿನ್ನ ತಲೆಕಾಯಿ !........ಏನು ಗೊತ್ತು ? .... ಸ್ವಲ್ಪ ಹೇಳು

ನೋಡೋಣ ?"

"ಹೇಳಿಬಿಡಲಾ. ?"

"ಹು. . ಹೇಳು"

ಇಬ್ಬರೂ ಒಬ್ಬರನ್ನೊಬ್ಬರು ಕಳ್ಳತನದಲ್ಲಿ ನಗುತ್ತಾ ನೋಡಿ ಕೊಂಡರು. ಶಾಂತ ಆನೆ. ಆನಂದ, ನಾಚಿಕೆಗಳಿಂದ ಬಡಿದುಕೊಳ್ಳುವ ಎದೆ, ಕಂಠದಲ್ಲಿ—

"ನಾವಿಬ್ಬರೂ ಒಂದು ಮನೆ ಮಾಡಿಕೊಳ್ಳೋದು ಎಂದು ?.. ಅಂತ ... ಅಲ್ಲವೆ ?"

ಎಂದು ತಲೆದೂಗಿದಳು. ರಾಜಣ್ಣ ತುಟಿ ಅದುಮಿ ನಗುತ್ತಾ ತಲೆ ಅಲ್ಲಾಡಿಸಿ ಉಸುರಿದ.

"ಉಹು....!"

"ಪ್ರಮಾಣವಾಗಿಯೂ ಹೇಳಿ...."

"ಪ್ರಮಾಣವಾಗಿಯೂ.. ಉಹು !"

"ನನ್ನಾಣೆಗೂ ?"

ಈಗ ರಾಜಣ್ಣ ತನ್ನ ಅಂತರಂಗದಲ್ಲೇ ಸೋಲೊಪ್ಪಿಕೊಂಡ ಅವನ ಮುಖದಮೇಲೆ ಪೂರ್ಣ ಅಸಹಾಯತೆಯ ನಗು ಉಕ್ಕಿತು. ಅದನ್ನು ಕಂಡ ಶಾಂತ ಚಪ್ಪಾಳೆ ತಟ್ಟಿ, "ನೋಡಿದಿರಾ ನಾನು ಸರಿ !" ಎಂದಳು.

ರಾಜಣ್ಣ, "ಹೌದು, ನೀನೊಬ್ಬ ಪಕ್ಕಾ ಕಳ್ಳಿ ! ... ಅಲ್ಲಾ, ನನ್ನ ತಲೇಲ್ಲಿರೋ ಆಲೋಚನೇನ್ನೆಲ್ಲಾ ಅದು ಹೇಗೆ ಕದ್ದುಬಿಟ್ಟೆ . ಹೇಳು ?"

ಎಂದ. ಶಾಂತ ಪುನಃ ಮುಂಡಿಯ ಮೇಲೆ ಗಲ್ಲವೂರಿ ನಗುತ್ತಾ, ಎರಡು ಕೈಗಳನ್ನೂ ಮುಂದೆ ಚಾಚಿ, ಚಿಟಿಕೆ ಹಾಕಿ ಹೇಳಿದಳು,

"'ಛೂ-ಮಂತ್ರಃ ಗಾಳಿ !' ಎಂದುಕೊಳ್ತೀನಿ.. . ನಿಮ್ಮ ತಲೇಲ್ಲಿ ರೋದೆಲ್ಲಾ ನನ್ನ ತಲೇಗೆ ಬಂದ್ಬಿಡುತ್ತೆ "

"ಹಾಗೇನು ! .. ಆ ಮಂತ್ರ ಎಲ್ಲಿ ಕಲಿತೆ ? ..... ನಿನ್ನ ತ್ರೈಕಾಲಿಕ ಪುಸ್ತಕಗಳಲ್ಲಾ !"

"ಮಣ್ಣು!.. ಆ ಸೈಕಾಲಜಿ ಪುಸ್ತಕಗಳಲ್ಲೇನಿದೆ?.. ಆ ರಿಫ್ಲೆಕ್ಸ್ .... ಈ ಕಾಂಪ್ಲೆಂಕ್ಸ್ .... ಅಷ್ಟೇ! .... ಹೋಗಲಿ, ಆಗಲೇ ಏನೋ ಹಿಮಾಲಯದಂಥ ವಿಚಾರ ಹೇಳಬೇಕು ಎಂದ್ರಲ್ಲ.. ಈಗ ಹೇಳಿ" ಎಂದಳು.

ರಾಜಣ್ಣ ಕೃತಕ ಉದಾಸೀನದಿಂದ,

"ಹೇಳುವುದೇನಿದೆ?....ಎಲ್ಲಾ ನಿನ್ನ ಆ ಭೂ-ಮಂತ್ರಃಗಾಳಿಯೇ ಹೇಳಿಬಿಟ್ಟಲ್ಲವೇ?"

ಎಂದ. ಶಾಂತ ಕೋಮಲಕಂಠದಲ್ಲಿ ಕಿಲಕಿಲನೆ ನಕ್ಕು, ತಲೆ ಅಲ್ಲಾಡಿಸುತ್ತಾ,

"ಇಲ್ಲ....ಇನ್ನು ತಮಾಷೆ ಸಾಕು. ಏನು ಹೇಳಬೇಕೋ, ಹೇಳಿ"

ಎಂದಳು. ರಾಜಣ್ಣ ತನ್ನಲ್ಲಿ ತಾನೇ ನಸುನಗುತ್ತಾ, ಸ್ವಲ್ಪ ಹೊತ್ತು ಗಂಭೀರವಾಗಿ, ತಾನು ಹೇಳಬೇಕೆಂದಿದ್ದುದನ್ನೆಲ್ಲಾ ಜ್ಞಾಪಿಸಿ ಕೊಂಡು ನಿಧಾನವಾಗಿ ಕೇಳಿದ,

"ಶಾಂತ....ನಾವಿಬ್ಬರೂ ಎಂದು ಮದುವೆ ಆಗೋಣ?"

"ಪರೀಕ್ಷೆ ಮುಗಿಗ ಮೇಲೆ....ಪಾಸಾದ ನಂತರ."

"ಹೇಗೆ?"

"ಅದೇ ನನಗೂ ತೋರೊಲ್ಲ!" ಎಂದು ಸಪ್ಪೆ ತುಟಿ ಮಾಡಿ ಸುಮ್ಮನಾದಳು.

ರಾಜಣ್ಣನೂ ಮೌನವಾದ. ಇಬ್ಬರೂ ಸ್ವಲ್ಪ ಕಾಲ ಯೋಚಿಸಿದರು. ಬಳಿಕ ಅವನು ಕೇಳಿದ,

"ನನ್ನನ್ನೇ ಮದುವೆ ಆಗ್ತೇನೆ ಎಂದು ನಿಮ್ಮ ತಂದೆ-ತಾಯಿ ಮುಂದೆ ಹೇಳಬಲ್ಲೆಯಾ?"

"ಓ....ಅದಕ್ಕೇನು....ನೀವು?"

"ನಾನೂ ಹೇಳ್ತೀನಿ. ನಮ್ಮ ತಾಯಿಯನ್ನೇನೋ ಒಪ್ಪಿಸಿ ಬಿಡ್ತೀನಿ. ನಮ್ಮ ತಂದೆ ಅಷ್ಟು ಸುಲಭವಾಗಿ ಒಪ್ಪಿಕೊಳ್ಳೋಲ್ಲ."

"ನನ್ನ ತಾಯಿ ಅಂತೂ ಜಗತ್ತೇ ತಲೆಕೆಳಕಾದ್ರೂ ಒಪ್ಪಿ ಕೊಳ್ಳೋಲ್ಲ!"

"ಹಾಗಾದರೆ ಏನು ಮಾಡೋದು ನಾವು ?"

"ಏನು ಮಾಡೋದು ! ಅವರನ್ನು ಪ್ರಾರ್ಥಿಸೋದು. ಕಾಲು ಹಿಡಿದುಕೊಳ್ಳೋದು. ಅವರು ನಮ್ಮನ್ನು ಅರ್ಥಮಾಡಿಕೊಳ್ಳದಿದ್ದರೆ ಆಗ ಅವರನ್ನು ಆ ಕಡೆಗೆ ದೂಡಿ, ನಮ್ಮಿಷ್ಟಕ್ಕೆ ನಾವು ಮದುವೆಯಾಗೋದು" ಎಂದು ಅವನನ್ನೇ ಒಪ್ಪಿಗೆಗಾಗಿ ನೋಡಿದಳು. ಅವನು ಅವಳನ್ನು ಅಸಮ್ಮತಿಯಿಂದ ನೋಡಿ ಹೇಳಿದ,

"ಬೇಡ ಶಾಂತಾ. ನಾವು ಹಾಗೆ ಮಾಡಬಾರದು. ಅವರ ಪ್ರೀತಿ-ಸಂಬಂಧ ಕಳೆದ್ಕೋಬಾರದು. ಅವರ ಮುಂದೆ ಹಠ ಹಿಡಿದು ಕುಳಿತುಬಿಡಬೇಕು. ಸತ್ಯಾಗ್ರಹ ಮಾಡ್ಬೇಕು. ಸಾಧ್ಯವಾದರೆ ಅನ್ನ-ಸತ್ಯಾಗ್ರಹ !"

"ಏಕೆ, ಕಲ್ಲೆದೆಯುವರ ಮುಂದೆ ಪ್ರಾಣಬಿಡೋಕೇನು ?"

"ಅಲ್ಲ. ಅವರ ಕಲ್ಲೆದೆ ಕರಗಿಸೋಕೆ. ಅವರ ಪ್ರೇಮ ಉಳಿಸಿಕೊಳ್ಳೋಕೆ. ಮನೇಲಿ ಅನ್ನ ಸತ್ಯಾಗ್ರಹದ ಮಹತ್ವ ನಿನಗೆ ಗೊತ್ತಿಲ್ವೇನೋ ! ನಾನೊಂದು ಸಾರಿ ಮಾಡಿದ್ದೆ. ಜಯಭೇರಿ ಹೊಡೆದೆ !"

"ಏಕೆ ಮಾಡಿದ್ರಿ ?"

"ನಾನು 'ಕಾಲೇಜಿಗೆ ಹೋಗೋಲ್ಲ' ಎಂದು ರಾಜಶೇಖರನ ಜೊತೆ ಸೇರಿದ್ದೆನಲ್ಲ. ಆಗ ನಮ್ಮ ತಂದೆ, ಅಣ್ಣ ಎಲ್ಲ, 'ಅವನನ್ನು ಜೊತೆಗೆ ಸೇರಿಸಿಕೊಂಡು ಕೆಡಿಸಬೇಡ. ಅವನು ಪತ್ರಿಕೆ ಬಂದ್ರೆ ಕಾಲೇಜಿಗೆ ಹೋಗುವಂತೆ ಹೇಳು' ಎಂದು ರಾಜಶೇಖರನಿಗೆ ಹೇಳಿಬಿಟ್ಟರಂತೆ. ಪಾಪ, ಅವನು ಬಹಳ ಮನಸ್ಸು ನೊಂದುಕೊಂಡ ನನಗೆ, 'ಹೊರಟುಹೋಗು. ಈ ವರ್ಷ ಓದಿ, ಒಂದು ಡಿಗ್ರಿ ತಗೊಂಡು ಬಂದ್ಬಿಡು' ಎಂದು ಹೇಳಿಬಿಟ್ಟ. ನಾನು ಒಪ್ಪಲಿಲ್ಲ. ಅವನು ಬಿಡಲಿಲ್ಲ. ನಾನು ಹಟ ಹಿಡಿದು ಕುಳಿತೆ. ಅವನ ಮುಂದೆಯೇ ಎರಡು ದಿನ ಉಪವಾಸವಿದ್ದೆ. ಆಗ ನಮ್ಮ ತಾಯಿ-ತಂದೆ-ಅಣ್ಣ ಎಲ್ಲ ಬಂದರು. ನನ್ನ ನಗು ಮುಖ ನೋಡಿ, ಸುಮ್ಮನೆ ಹೊರಟು ಹೋದ್ರು ; ಹಸಿವು ತಡೀದೆ ಸಿಲ್ಲಿಸಿಬಿಡ್ತಾನೆ ಅಂತ. ಆದರೆ ನನಗೆ

ಮೃದು, ಮಧುರ. ಅವರನ್ನು ನಾನು ಹೇಗೆ ಬೇಕಾದ್ರೂ ತಿರುಗಿಸಿ ಕೊಳ್ಳಬಹುದು. ಆದರೆ ನಮ್ಮ ತಂದೆ!" ಎಂದು ಭೂತ ಕಂಡವನಂತೆ ಮಾತು ನಿಲ್ಲಿಸಿದ. ಶಾಂತ ಕಾತುರದಿಂದ,

"ಏನು ನಿಮ್ಮ ತಂದೆ! ..ಅವರು ಹೇಗೆ?" ಎಂದು ಕೇಳಿದಳು. ರಾಜಣ್ಣ ಶಾಂತಳ ಬಳಿಗೆ ಸರಿದ. ಅವಳ ತೊಡೆಯ ಮೇಲೆ ತಲೆ ಯಿರಿಸಿ, ಅವಳ ಎರಡು ಕೈಗಳನ್ನೂ ಹಿಡಿದು ಗಟ್ಟಿಯಾಗಿ ಅದುಮಿ. ಗಂಟಲನ್ನು ಸ್ಥಿರಪಡಿಸಿಕೊಂಡು, ಉಗುಳು ನುಂಗುತ್ತಾ,

"ಏನೂ ಇಲ್ಲ.... ನಮ್ಮ ತಂದೆಯನ್ನು ಕಂಡರೆ ನನಗೆ ಸ್ವಲ್ಪ ಸ್ವಲ್ಪ ಭಯವೇ ....! ನನಗೆ ಏಕೆ? ನಮ್ಮೂರಿನವರು, ನಮ್ಮ ತಾಯಿ, ಅಣ್ಣ, ಅತ್ತಿಗೆ, ಆಳು-ಕಾಳು ........ ಎಲ್ಲರಿಗೂ ಭಯವೆ! ಅಷ್ಟೇ ಅಲ್ಲ; ಹಳ್ಳಿಗೆ ಬರೋ ರೆವಿನ್ಯೂ ಇನ್ಸ್‌ಪೆಕ್ಟರ್, ಕಡೆಗೆ, ಅಮಲ್ದಾರನಿಗೂ ಸ್ವಲ್ಪಸ್ವಲ್ಪ ಅಳುಕೇ! ಅವರನ್ನು ನೀನೊಮ್ಮೆ ನೋಡಿದರೆ ಇದು ಗೊತ್ತಾಗುತ್ತೆ. ಒಳ್ಳೇ ಆರಡಿ ಎತ್ತರ ಇದ್ದಾರೆ. ಅರವತ್ತು ವರ್ಷ ಆದರೂ ಪೈಲ್ವಾನನ ಹಾಗೆ ಗಟ್ಟಿಮುಟ್ಟಾಗಿದಾರೆ, ಒಳ್ಳೇ ಹುಲಿಯಂಥ ಎದೆಗಾರಿಕೆ ಇದೆ. ಕಂಚಿನಂಥ ಕಂಠ ಇದೆ. ಒಂದು ಸಲ ಹುಬ್ಬೇರಿಸಿ ಕೋಪದಿಂದ ನೋಡಿಬಿಟ್ಟರೆ ಸಾಕು, ಎದುರಾಳಿ ಅಲ್ಲೇ ಭೂಮಿಗಿಳಿದು ಹೋಗಬೇಕು ... ಅಂಥ ತೇಜಸ್ಸಿನ ಕಣ್ಣುಗಳಿವೆ. ಹೀಗೆ.. ಅವರ ವ್ಯಕ್ತಿತ್ವ. ಆದರೆ ಅವರು ಏನೂ ಓದೇ ಇಲ್ಲ. ಅದೇ ಅವರ ವೀಕ್ ಪಾಯಿಂಟ್. ಅದರಿಂದ ಅವರಿಗೆ 'ಬೀಯೆ-ಎಮ್ಮೇ'ಗಳನ್ನು ಕಂಡರೆ ತುಂಬಾ ಭಯ, ಭಕ್ತಿ, ಗೌರವ. ನಾನು ಬಿ.ಎಸ್‌ಸಿ. ಓದ್ತಿದೀನಿ ನೋಡು, ಆದಕ್ಕೆ ನನ್ನಮೇಲೂ ಎಲ್ಲಿಲ್ಲದ ಗೌರವ, ಹೆಮ್ಮೆ. 'ನನ್ನ ಮಗಾನೂ ಒಬ್ಬ ಗ್ರಾಜುಯೇಟ್ ....ಯಾವ ಮಿನಿಸ್ಟರಿಗೆ ಕಮ್ಮಿ!' ಎನ್ನುವಂಥ ಹೆಮ್ಮೆ! ... ಅವರು ಚೆನ್ನಾಗಿ ಸಾಕಿ ಬೆಳೆಸಿಕೊಂಡಿರೋ ಬಲತೋಳಿನ ಮಾಂಸಖಂಡ, ಅಮೃತಮಹಲ್ ಗೂಳಿ, ಅದಕ್ಕಿಂತಲೂ ಹೆಚ್ಚಿನ ಅಭಿಮಾನ, ಪ್ರೀತಿ, ಹೆಮ್ಮೆ ನನ್ನ ಮೇಲೆ... ಅದಕ್ಕೇ ನಾನೀಗ ಅವರಿಗೆ ಅಷ್ಟು ಹೆದರೋಲ್ಲ ....ಅವರಿಗೆ ಸಲ್ಲಬೇಕಾದ ಗೌರವ, ಭಯ-ಭಕ್ತಿ ತಪ್ಪದೆ ಸಲ್ಲಿಸಿ

ಬಿಡ್ತೀನಿ....ಆದರೂ ಈಗ ನಿನ್ನನ್ನು ಪಕ್ಕದಲ್ಲಿ ನಿಲ್ಲಿಸಿಕೊಂಡು, ಅವರ ಮುಖಕ್ಕೆ ಬೇಕಾದ್ರೆ....'ನೋಡಿ ಅಪ್ಪಾಜಿ, ಇವಳೇ ನನ್ನ ಹೆಂಡತಿ ಆಗೋ ಹುಡುಗಿ. ತುಂಬಾ ಸುಂದರಿ, ತುಂಬಾ ವಿದ್ಯಾವಂತೆ, ತುಂಬಾ ಜಾಣೆ.... . ಜೊತೆಗೆ 'ಬೀಯೆ' ಬೇರೆ! ಬೇಕಾದ್ರೆ 'ಎಮ್ಮೇ'ನೂ ಆಗ್ತಾಳೆ... ಇವಳನ್ನು ಮದುವೆ ಆಗೋಕೆ ಒಪ್ಪಿಗೆ ಕೊಡಿ' ಎಂದು ಬಿಡ್ತೇನೆ" ಎನ್ನುವಾಗಲೇ, ಶಾಂತ ಅವನ ಕೆನ್ನೆ ಹಿಂಡಿ ಅಲುಗಿಸುತ್ತಾ ನಕ್ಕಳು. ರಾಜಣ್ಣ ಅವಳ ಬೆರಳಿನ ಚಿವುಟದಿಂದ ಕೆನ್ನೆ ಬಿಡಿಸಿ ಕೊಂಡು ಮುಂದುವರೆಸಿದ,

"ಆಗ ಅವರು ಏನು ಮಾಡ್ತಾರೆ ಗೊತ್ತೇ? ದಂಗುಬಡಿದ ವರಂತೆ ನನ್ನನ್ನೇ ಹುಬ್ಬೇರಿಸಿ, ಕಣ್ಣರಳಿಸಿ, 'ಎಲಾ ಇವನಾ!' ಎನ್ನ ಬಹುದು. ಆಗ ಸ್ವಲ್ಪ ಬಲವಾಗಿ ಬ್ರೇಕ್ ಹಾಕ್ಕೊಂಡು ಗಟ್ಟಿಯಾಗಿ, ಹೆದರದೆ ನಿಂತ್ಕೊಂಡುಬಿಟ್ಟರಾಯ್ತು" ಎಂದ

ಶಾಂತಳಿಗೂ ಹೆದರಿಕೆ ಆಗಲಾರಂಭಿಸಿತ್ತು. ಅವನ ಕೆನ್ನೆ ಹಿಂಡಿ ಅಲುಗಿಸುತ್ತಾ, "ನಿಮಗೆ ಅಷ್ಟು ಗಟ್ಟಿಗತನ ಇದೆಯೇನು?" ಎಂದು ಕೇಳಿದಳು.

ಅವಳ ಕೈಯಿಂದ ಕೆನ್ನೆ ಬಿಡಿಸಿಕೊಳ್ಳುತ್ತಾ 'ನೀನು ಗಟ್ಟಿ ಯಾಗಿ ನನ್ನ ಹತ್ತಿರ ನಿಂತರೆ .... ಆಗ ನನಗೂ ಎಂದಾ ಗಟ್ಟಿಗತನ ವಾದ್ರೂ ಬರಬಹುದು" ಎಂದ.

ಅವಳು ವಿನೋದದಿಂದ, "ಆಗಲಿ, ಗಟ್ಟಿಯಾಗಿ ನಿಲ್ತೀನೆ!" ಎಂದು ಗಟ್ಟಿಯಾಗಿ ಅವನ ಕೆನ್ನೆಯನ್ನು ಮತ್ತೊಮ್ಮೆ ಹಿಂಡಿದಳು. ರಾಜಣ್ಣ ನೋವಿನಿಂದ 'ಹಾ....!' ಎಂದು ಮೇಲಪ್ಪ ಕುಳಿತ. ಅವಳನ್ನೇ ಕೋಪದಿಂದ ನೋಡಿ - ಅವಳ ಎರಡು ಕೈಯನ್ನು ಹಿಡಿದು ಕಂಕುಳಲ್ಲಿ ಸಿಕ್ಕಿಸಿಕೊಂಡು, ಅವಳ ಪಕ್ಕೆಗೆ, ಕೊರಳಿಗೆ ಕಚಕುಳಿ ಇಡಲಾರಂಭಿಸಿದ. ಶಾಂತ ನಗುವಿನ ತರಂಗಗಳಿಂದ ಬಿಗಿದ ಕೊರಳಿ ನಿಂದ .... 'ಓ! ....ಹೋ!' ಎಂದು ಕೋಗಿಲೆಯಂತೆ ಕೂಗುಟ್ಟಿ, ಮೀನಿನಂತೆ ಮಿಸುಕಾಡಲಾರಂಭಿಸಿದಳು. ಅವಳು ಮಿಸುಕಾಡುವುದು ಕಡಮೆಯಾದ ಕೂಡಲೇ ಅವನು, "ಹಾಗೆ ಕೆನ್ನೆ ಹಿಂಡ್ತೀಯಾ... ?"

ಎಂದ.

ನಾಲ್ಕಾರು ನಿಮಿಷಗಳಾದನಂತರ, ಅವನ ಕೈ ಕಡಿಯಲು ಯತ್ನಿಸಿ ನಿಫಲಳಾದ ಶಾಂತ, ಪಕ್ಕನಕ್ಕು, ಹೊಟ್ಟೆ ಬಿರಿಯುವಂತಾಗಿ ಅತ್ತುಅತ್ತು ಕಣ್ಣೀರಿಡತೊಡಗಿ, "ಇಲ್ಲ....ಇಲ್ಲ. ಕೆನ್ನೆ ಹಿಂಡೋಲ್ಲ. ಬಿಡಿ! ಬಿಡಿ!" ಎಂದು ಕೂಗಿಕೂಗಿ ಶರಣಾದಳು.

ರಾಜಣ್ಣ ಅವಳ ಎರಡು ಕೈಗಳನ್ನೂ ಬಿಟ್ಟ. ಕೂಡಲೇ ಶಾಂತ, ಒಡೆದು ಹೋಗಿದ್ದ ತನ್ನ ಬಳೆ ನೋಡಿಕೊಂಡಳು. ಗಾಜಿನ ಚೂರು ಒತ್ತಿ ಕೆಂಪಗಾಗಿದ್ದ ಚರ್ಮವನ್ನು ಸವರಿಕೊಂಡಳು. ರಾಜಣ್ಣನನ್ನೇ ಅತ್ಯಂತ ದೂಷಣೆ, ಸಿಟ್ಟಿನಿಂದ ನೋಡಿ. ಹಠಾತ್ತನೆ ಬೇರೆ ಕಡೆಗೆ ಮುಖ ತಿರುಗಿಸಿ ಮುನಿಸಿ ಕುಳಿತಳು.

ರಾಜಣ್ಣ ಎಷ್ಟೆಷ್ಟೋ ಮಾತಾಡಿಸಿದ. ಬೇಡಿದ....ಕಾಡಿದ... ಆದರೆ ಅವಳು ಮಾತಾಡುವುದು ಮಾತ್ರ ನಹಿ! ಕಡೆಗೆ ಅವಳ ಮುಂದೆ ಮಂಡಿಯೂರಿ, ಅವಳ ಬಳಿಗೆ ಮುಖ ಒಡ್ಡಿ ಅತ್ಯಂತ ದೈನ್ಯ ದಿಂದ, "ತಪ್ಪಾಯ್ತು, ಬೇಕಾದರೆ ಹೊಡೆದುಬಿಡು" ಎಂದು ಕಣ್ಣು ಮುಚ್ಚಿಕೊಂಡ. ಅವಳು ಅವನನ್ನು ಓರೆ ನೋಟದಿಂದ ಕಂಡು, ಮಿಂಚಿನಂತೆ ಅವನ ಕಡೆಗೆ ತಿರುಗಿ, ತನ್ನ ಬಲವನ್ನೆಲ್ಲಾ ಬಿಟ್ಟು ಅವನ ಕೆನ್ನೆ ಹಿಂಡಿ, ಸಿಟ್ಟಿನಿಂದಲೇ. 'ನನ್ನ ಮಾತಾಡಿಸಬೇಡ!' ಎಂದು ಪುನಃ ಪಕ್ಕಕ್ಕೆ ತಲೆತಿರುಗಿಸಿ ಕುಳಿತುಬಿಟ್ಟಳು

ರಾಜಣ್ಣ ಕೆನ್ನೆ ಉಜ್ಜಿಕೊಳ್ಳುತ್ತಾ, ಅಣಕದ ದುಃಖ ವಿಷಾದ ದಿಂದ, "ಏಕೆ, ನನ್ನ ಜೊತೆ 'ಠೂ ಬಳೆ' ಎಂದು ಬಿಟ್ಯಾ!" ಎಂದ

ಅವಳು ಬಳೆ ಒಡೆದು ಹೋಗಿದ್ದ ಕೈಯನ್ನೇ ಸವರಿಕೊಂಡು, ತನ್ನಲ್ಲಿ ತಾನು ನಸುನಕ್ಕಳು. ರಾಜಣ್ಣ ಬಳಿಗೆ ಸರಿದು, ಅವಳ ಕಪೋಲಕ್ಕೊಂದು ಮುತ್ತಿಟ್ಟ. ಚಕಿತಗೊಂಡ ಶಾಂತ, "ಇದೇನಿದು ಥೂ!" ಎಂದು ಸಿಡುಕಿನಿಂದ ಕೇಳಿದಳು.

ಅವನು ನಿರಪರಾಧಿಯಂತೆ ನಗುತ್ತಾ, "ಇನ್ನೇನು?.. ಮಾತಿಲ್ಲ ಎಂದೇನೋ ಹೇಳಿದ್ದೆ... ಮುತ್ತು ಇಲ್ಲ ಎಂದಿದ್ದೆಯಾ?" ಎಂದು ಕೇಳಿದ. ಶಾಂತಳ ಸಿಡುಕು ಮಾಯವಾಯಿತು. ಅವಳ

ನಸುನಗುತ್ತಾ. ಅವನು ಮುತ್ತಿಟ್ಟ ಕಡೆ ಕೆನ್ನೆ ಒರೆಸಿಕೊಂಡು ಕುಳಿತಳು. ಸ್ವಲ್ಪ ಕಾಲದ ನಂತರ, 'ಶಾಂತಾ" ಎಂದ ರಾಜಣ್ಣ. ಅವಳು ಅವನೊಡನೆ ಸೊಟ್ಟೆ ಬಿರಿಸಿ ಮುಷ್ಟಲಿಸಿ ಕೇಳಿದಳು.

"ಏನು...?"

"ಮದುವೆ ಆದ್ಮೇಲೆ ನಾವೆಲ್ಲಿ ಮನೆ ಮಾಡೋಣ?"

"ಮೊದಲು ಮದುವೆ ಆಗ್ಲಿ!"

"ಅದು ಎಂದಾದರೂ ಆಗುತ್ತೆ. ಈಗ ನಾವು ಒಟ್ಟಿಗೇ ಇರೋ ಮನೆ ಎಲ್ಲಿರಬೇಕು?....ಹೇಗಿರಬೇಕು?. ಹೇಳು."

"ಏಕೆ?"

"ನಿನ್ನ ಇಷ್ಟ ಏನು ಎಂದು ತಿಳಿದುಕೊಳ್ಳೋಕೆ."

"ನನ್ನ ಇಷ್ಟಕ್ಕೆ ನೀವು ಬೆಲೆ ಕೊಟ್ಟೀರಾ?"

"ಕೊಡದೇ ಏನು? ..ತುಂಬಾ ಬೆಲೆ ಕೊಡ್ತೀನಿ. ನಮ್ಮ ಮನೆ ಹೇಗಿರಬೇಕು ಎನ್ನೋ ವಿಚಾರದಲ್ಲಿ ನೀನೇ ಸರ್ವಾಧಿಕಾರಿ ಎಲ್ಲ ಸರ್ವಾಧಿಕಾರವೂ ನಿನಗೆ!"

"ಓಹೋ! ತುಂಬಾ ಧಾರಾಳ ನಿಮ್ಮ ಬುದ್ಧಿ. ಇಲ್ಲದೇ ಇರೋ ಮನೇಗೆ ನಾನೇ ಸರ್ವಾಧಿಕಾರಿಣಿ ಎಂದು ಹೇಳ್ಟ ಇನ್ನೇನು!" ಎಂದಳು. ರಾಜಣ್ಣ ಅವಳ ಕೈ ಹಿಡಿದು ಗಂಭೀರವಾಗಿ ಹೇಳಿದ.

"ಸ್ವಲ್ಪ ಯೋಚನೆ ಮಾಡು ಶಾಂತ. ನೀನು ಪಟ್ಟಣದಲ್ಲಿರಬೇಕೋ? ಹಳ್ಳಿಯಲ್ಲಿರಬೇಕೋ....?"

"ಪಟ್ಟಣ."

"ಏಕೆ?"

"ಏಕೆಂದರೆ ನಾನು ಕೆಲಸಕ್ಕೆ ಸೇರಬೇಕು

"ಯಾವ ಕೆಲಸ?"

"ಯಾವುದಾದರೂ ಒಂದು ಕೆಲಸ."

"ಸೆಕ್ರೆಟೇರಿಯಟ್ ಗುಮಾಸ್ತೆ?"

"ಊಹೂ, ಯಾವುದಾದರೂ ಹೈಸ್ಕೂಲ್ ಮಿಸ್ಟ್ರೆಸ್ ಕೆಲಸ."

"ಓ, ಮೇಡಂಸಾಬ್ ಆಗ್ತೀಯೋ! ಒಳ್ಳೇ ಕೆಲಸವೇ

ಅರಿಸಿಕೊಂಡಿದೀಯ! ಹುಡುಗಿಯರ ಕೆನ್ನೆ ಎಲ್ಲಾ ಕಿತ್ತು ಕೈಗೆ ಕೊಟ್ಟು ಬಿಡ್ತೀಯೇನೋ!" ಎಂದ.

ಶಾಂತ ಅವನ ಕೆನ್ನೆ ಹಿಂಡಲು ಬಂದಳು. ಅವನು ಕೈಯಿಂದ ಕೆನ್ನೆಯನ್ನು ರಕ್ಷಿಸಿಕೊಂಡ. ಅವನ ವದನ ಗಂಭೀರವಾಯಿತು. ಕಣ್ಣುಗಳು ಆಲೋಚನಾಭರಿತವಾದುವು. ಅವನು ಮೌನವಾದ. ಶಾಂತ ಅವನನ್ನು ಅಲುಗಿಸುತ್ತಾ,

"ಏಕೆ, ಸುಮ್ಮನಾದ್ರಲ್ಲಾ....ನಾನು ಕೆಲಸಕ್ಕೆ ಸೇರಬಾರದೇ?" ಎಂದಳು. ರಾಜಣ್ಣ ಯಾಂತ್ರಿಕವಾಗಿ ಅವಳ ಕೈಹಿಡಿದು, ಬೆರಳುಗಳ ನಡುವೆ ಬೆರಳು ತೂರಿಸಿ, ಅವಳ ಮೃದು ಅಂಗೈಯನ್ನು ಮರ್ದಿಸುತ್ತಾ ಹೇಳಿದ.

"ಬೇಕಾದರೆ ಸೇರಿಕೊ....ಅದಕ್ಕೆ ನನ್ನ ಅಡ್ಡಿ-ಆಕ್ಷೇಪಣೆ ಏನೂ ಇಲ್ಲ. ಆದರೆ ನನಗೆ ಪಟ್ಟಣದಲ್ಲಿರಲು ಮನಸ್ಸಿಲ್ಲ."

"ನೀವು ಹಳ್ಳೀಲ್ಲೇ ಇರಬೇಕೇನು?"

"ಹು...."

"ಅಲ್ಲಿ ಏನು ಮಾಡ್ತೀರ....ಎಮ್ಮೆ ಕಾಯ್ತೀರಾ....!"

"ಕಾಯಬೇಕಾಗಬಹುದು....ನಿನ್ನಂಥ ಎಮ್ಮೆಗಳನ್ನ!"

ಎಂದ. ಶಾಂತ ಅವನ ತೋಳು ಹಿಂಡಿದಳು. ಅವನು ಅವಳ ಕೈಯನ್ನು ಮತ್ತೆ ಹಿಡಿದು ಗಂಭೀರನಾಗಿ, ನಿಟ್ಟುಸಿರುಬಿಟ್ಟು ಹೇಳಿದ,

"ಎಮ್ಮೆ ಕಾಯೋ ಕೆಲಸ ಅಲ್ಲ....ನನಗೆ ಅಲ್ಲಿ ಕೆಲವು ಮುಖ್ಯವಾದ ಕೆಲಸಗಳನ್ನು ಮಾಡೋ ಮನಸ್ಸಿದೆ."

"ಯಾವ ಕೆಲಸಗಳು?"

"ಹತ್ತಾರು ಕೆಲಸಗಳು....ನಮ್ಮ ತೋಟ ಈಗ ಸರಿಯಾಗಿಲ್ಲ ಅದನ್ನು ಚೆನ್ನಾಗಿ ಬೆಳೆಸಬೇಕು. ಗದ್ದೆ, ಹೊಲಗಳಲ್ಲಿ ಹೊಸ ವಿಧಾನದಿಂದ ಬೆಳೆ ಬೆಳೀಬೇಕು. ನಮ್ಮ ಹಳ್ಳಿಯ ಭೂಗುಣ, ವಾಯುಗುಣ, ದ್ರಾಕ್ಷಿ, ಆಲೂಗೆಡ್ಡೆಗೆ ಅನುಕೂಲವಾಗಿವೆ. ಸರಿ, ನಾನು ಅವನ್ನು ಬೆಳೆಯಲು ಪ್ರಾರಂಭಿಸಬೇಕು. ನಮ್ಮ ಹಳ್ಳಿ, ಅದರ ಸುತ್ತಮುತ್ತಲ ಹಳ್ಳಿಯ ಅರವತ್ತು ಹುಡುಗರು ಆರು ಮೈಲಿ ದೂರದಲ್ಲಿರೋ

ಹೈಸ್ಕೂಲಿಗೆ ದಿನವೂ ನಡೆದುಹೋಗಿ ಬರ್ತಾರೆ. ಹಾಗೇ ತಾಲ್ಲೂಕಿನ ಎಷ್ಟೋ ಹಳ್ಳಿ ಹುಡುಗರು ದಿನವೂ ಆ ಸ್ಕೂಲಿಗೆ ನಡೆದುಕೊಂಡು ಹೋಗ್ತಾರೆ. ಸಧ್ಯಕ್ಕೆ ಅಂಥ ನೂರಾರು ಹುಡುಗರಿಗೆಲ್ಲಾ ಹೈಸ್ಕೂಲಿರೋ ಊರಿನಲ್ಲೇ ಒಂದು ಹಾಸ್ಟೆಲ್ ಅಗತ್ಯ ಇದೆ. ದಿನವೂ ನಡೆದು ಹೋಗಿಬಂದ ನನಗೆ ಗೊತ್ತು - ಆ ಕಷ್ಟ. ಆದರೆ ಎಷ್ಟೋಜನ ದೊಡ್ಡದೊಡ್ಡವರಿದ್ದರೂ ಅವರಿಗೆ ಅದರಲ್ಲಿ ಆಸಕ್ತಿಯೇ ಇಲ್ಲ. ನಾನು ಅದೊಂದು ಹಾಸ್ಟೆಲನ್ನು ಜನರ ಸಹಕಾರದಿಂದ ಸ್ಥಾಪಿಸಬೇಕು. ಇದು ನನ್ನ ಬಹಳ ದಿನಗಳ ಉದ್ದೇಶ. ಆಮೇಲೆ ಆ ರಾಜಶೇಖರನ ಫಾರಂಗೆ ನೆರವಾಗಬೇಕು. ದೇಶವನ್ನೇ ಅಂಥ ದೊಡ್ಡ ಫಾರಂ ಮಾಡೋ ವಿಶಾಲ ಪ್ರಯತ್ನಗಳಿಗೂ ನೆರವಾಗಬೇಕು. ಹೀಗೇ ನೂರೆಂಟು ಕೆಲಸ ಗಳಿವೆ...." ಎಂದ. ಶಾಂತ ಅದೆಲ್ಲವನ್ನೂ ಆಸಕ್ತಿಯಿಂದ ಆಲಿಸಿ, ಕುತೂಹಲದಿಂದ ಕೇಳಿದಳು.

"ನಿಮಗೆ ರಾಜಕೀಯದಲ್ಲಿ ತುಂಬಾ ಆಸಕ್ತಿ ಅಲ್ಲವೆ ?"

"ಹೌದು, ತುಂಬಾ ಆಸಕ್ತಿಯೇ. ರಾಜಕೀಯದಲ್ಲಿ ಎಲ್ಲರಿಗೂ ಆಸಕ್ತಿ ಇರಬೇಕು. ಇಲ್ಲದಿದ್ದರೆ ನಾವು ಪ್ರಜಾಪ್ರಭುತ್ವ ಉಳಿಸಿ ಕೊಳ್ಳೋದು ಹೇಗೆ ? ರಾಜಕೀಯ ಎಂದರಾದರೂ ಏನು ? ನಾಲ್ಕು ಜನ ಪುಢಾರಿಗಳು ಎಬ್ಬಿಸೋ ಗಲಾಟೆಯೆ ? ಅಧಿಕಾರದ ಹೆಂಡ ಕುಡಿದವರ ಕಪಟ-ಭಾಷಣಗಳೇ ? ಅಲ್ಲ. ಅದು ದೇಶದ ಪ್ರತಿ ಪ್ರಜೆಯ ಹಿತ-ಅಭಿವೃದ್ಧಿಗೆ ಸಂಬಂಧಪಟ್ಟ ಒಂದು ಜೀವಂತ ವಿಚಾರ. ನಮ್ಮ ದೇವರು, ನಮ್ಮ ಆತ್ಮ, ನಮ್ಮ ಸ್ವಾತಂತ್ರ್ಯಗಳಂತೆಯೇ ಒಂದು ಪವಿತ್ರ ವಿಚಾರ. ಅದನ್ನು ಪ್ರತಿ ದಿನ ಐದು ನಿಮಿಷವಾದರೂ ಎಲ್ಲ ಜವಾಬ್ದಾರಿಯುತ ಪ್ರಜೆ ಆಳವಾಗಿ ಚಿಂತಿಸಬೇಕು."

"ಹಾಗಾದರೆ ರಾಜಕೀಯದ ಹುಚ್ಚು ನಿಮಗೆ ಪೂರಾ ?" ಎಂದಳು ಶಾಂತ. ರಾಜಣ್ಣ ಗಂಭೀರ ಮನಸ್ಕನಾಗಿ ಹೇಳಲಾರಂಭಿಸಿದ.

"ಅದು ಹುಚ್ಚಲ್ಲ ಶಾಂತ. ನನ್ನ ಹುಟ್ಟು-ಕರ್ತವ್ಯ. ನೋಡು, ನಾನು ಮನುಷ್ಯನಾಗಿ ಹುಟ್ಟಿದೀನಿ. ದೊಡ್ಡವನಾಗಿದೀನಿ. ವಿದ್ಯಾವಂತನಾಗಿದೀನಿ. ಸ್ವಲ್ಪ ಕಣ್ಣು ತೆರೆದು ಸುತ್ತುಮುತ್ತಲ ಜೀವನ

ನೋಡಿದೀನಿ. ಒಬ್ಬ ಸುಖದಿಂದ ಇದ್ದರೆ, ನೂರು ಜನ ಕಷ್ಟದಲ್ಲಿ ಇದಾರೆ. ಒಬ್ಬ ಬೆಳೆ ಬೆಳೀತಾನೆ; ಮತ್ತೊಬ್ಬ ಅದನ್ನು ನನ್ನದು ಎಂದು ಕಿತ್ಕೊಂಡು ಹೋಗ್ತಾನೆ. ಒಬ್ಬ ಸಣ್ಣಕ್ಕಿ ಅನ್ನ-ತುಪ್ಪ-ಹಾಲು ತಿನ್ತಾನೆ; ಇನ್ನೊಬ್ಬ ಕಸದ ಡಬ್ಬೀಲ್ಲಿ ಬಿಸಾಡಿದ್ದ ಎಂಜಲೆಲೆ ನೆಕ್ತಾನೆ. ಒಬ್ಬ ಹುಟ್ಟಿದಾಗಿನಿಂದ ಅತ್ತಿದ್ದ ಕಡ್ಡಿ ಇತ್ತ ಎತ್ತಿ ಹಾಕಿರೋಲ್ಲ; ಅವನಿಗೆ ಕಾರು, ಬಂಗಲೆ, ಒಡವೆ, ವಸ್ತ್ರ, ಬ್ಯಾಂಕ್ ಅಕೌಂಟ್, ಷೇರುಗಳು, ಹತ್ತಾರು ನೂಳಿಯರು. ಇನ್ನೊಬ್ಬ ಕೊಡಲಿ ಎತ್ತೋಕೆ ಶಕ್ತಿ ಬಂದಾಗಿನಿಂದ ಹರುಕು ಚಡ್ಡೀಲ್ಲಿ, ಬರೀ ಬೆನ್ನಿನಲ್ಲಿ ಹಗಲೆಲ್ಲಾ ಸಾಯೋವರೆಗೂ ಸೌದೇ ಕಡೀತಾನೆ; ಅವನಿಗೆ ಅವನ ಹೆಂಡಿರು, ಮಕ್ಕಳಿಗೆ ಸಿಗೋದು ಒಂದು ಗಡಿಗೆ ಗಂಜಿ. ಅವನೇನಾದರೂ ಜ್ವರ ಬಂದು ಮಲಗಿದರೆ ಅದೂ ಇಲ್ಲ. ಆಗ ಅವನ ಹೆಂಡತಿ ದುಡೀಬೇಕು – ತನ್ನ ಆತ್ಮಾನೇ ಚರಂಡಿಯಲ್ಲಿ ಎಳೆದಾಡಿ ಕೊಂಡು ಬೀದಿ ಸೂಳೆಯಾಗಿ! ಹೀಗೇ ಎಷ್ಟಿದೆ ಶಾಂತ....ಅದನ್ನೆಲ್ಲಾ ನೋಡಿ ನೋಡಿ ಹೃದಯ ಇದ್ದವರು, ಶಕ್ತಿ ಇದ್ದವರು ಹೇಗೆ ಸುಮ್ಮನಿರಲು ಸಾಧ್ಯ? ಮನಸ್ಸು ತಡೆಯುತ್ತದೆಯೇ?" ಎಂದ ಶಾಂತ ಅವನನ್ನೇ ನೋಡಿದಳು. ಅವನ ಕಣ್ಣುಗಳು ಮೂಕವೇದನೆ ಯಿಂದ, ಅನುಕಂಪದಿಂದ, ಯಾವುದೋ ದ್ವೇಷದಿಂದ, ಮತ್ತಾವುದೋ ಕನಸಿನಿಂದ ಉರಿಯುತ್ತಿದ್ದುವು. ಶಾಂತ ಅವನ ಭುಜಕ್ಕೊರಗಿ ಕುಳಿತು,

"ರಾಜು, ನೀವು ಹೇಳೋದು ಸರಿಯೇ. ಆದರೆ ರಾಜಕೀಯ, ದುಡ್ಡು-ಆಸ್ತಿ-ಇರೋ ಸಾಹುಕಾರರಿಗೆ ಸಾಧ್ಯ. ನಾವು ನಮ್ಮ ಮನೆ, ಮಕ್ಕಳು, ಹೊಟ್ಟೆ-ಬಟ್ಟೆ ಮೊದಲು ನೋಡಿಕೋಬೇಡವೆ? ಅದನ್ನು ಬಿಡೋಕೆ ಆಗುತ್ತೇನು?" ಎಂದು ಕೇಳಿದಳು. ರಾಜಣ್ಣ ಹೇಳಿದ,

"ಆಗೊಲ್ಲ ಶಾಂತ. ಆದರೆ ರಾಜಕೀಯವನ್ನೂ ಬಿಡೋಕೆ ಆಗೋಲ್ಲ. ನಿಜವಾದ ರಾಜಕೀಯಕ್ಕೂ – ಸಾಹುಕಾರರಿಗೂ ನಿಮ್ಮ ಗೋಕುಲಾಷ್ಟಮಿಗೂ - ಇಮಾಂಸಾಬಿಗೂ ಇರುವಷ್ಟು ಸಂಬಂಧವೆ?"

"ಅದು ಹೇಗೆ? ಈಗ ನಾಯಕರಾಗಿರೋರೆಲ್ಲ ಸಾಹುಕಾರರೇ

ಅಲ್ಲವೆ ?"

"ಇರಬಹುದು. ಅವರು ಹಳೆಯ ತಲೆಮಾರಿನವರು. ಅವರ ಪಾಲಿನ ಕೆಲಸ ಅವರು ಕಂಡ ರೀತೀಲ್ಲಿ ಮಾಡ್ತಿದಾರೆ. ಆಗಲೇ ಅವರಲ್ಲಿ ಎಷ್ಟೋ ಗಟ್ಟಿಗಳು ಉರುಳಿಹೋಗಿದಾರೆ. ಟೊಳ್ಳುಗಳು ತಮ್ಮ ಹಣದ ಪ್ರಭಾವದಿಂದ ತಲೆ ಎತ್ತಿಕೊಂಡಿದಾರೆ. ಅಂಥವರ ನಾಯಕತ್ವ ಎಷ್ಟು ದಿನದ್ದು. ಜನಗಳು ಮೂರ್ಖರಾಗೇ ಉಳಿದಿರೋ ವರೆಗೆ; ಅವರು ರಾಜಕೀಯ ಎಂದರೆ ಏನು ? ಎಂದು ಅರ್ಥಮಾಡಿ ಕೊಳ್ಳೋವರೆಗೆ. ಓಟು ಕೊಂಡುಕೊಳ್ಳಲು ಆ ಸ್ವಯಂ ನಾಯಕರ ಹತ್ತಿರ ದುಡ್ಡಿರುವವರೆಗೆ. ಆದರೆ ಆ ಎಲ್ಲ ಸ್ಥಿತಿಗಳೂ ಕಳೆದ ಮೇಲೆ ? ಆಗ ಜನಗಳ ಹಿತ ಚಿಂತನೆ - ಸಾಧನೆಗಳಿಗೆ ಕುಶಲತೆಯಿಂದ, ಜ್ಞಾನ, ವಿವೇಕದಿಂದ, ಪ್ರಾಮಾಣಿಕತೆ, ಉತ್ಸಾಹ, ಧೈರ್ಯ, ಸಾಹಸಗಳಿಂದ ದೇಹ - ಮನಸ್ಸು - ಜೀವ ತೇಯುವವರಿಗೇ ಎಚ್ಚೆತ್ತ ಜನರ ಗೌರವ, ವಿಶ್ವಾಸ, ಪ್ರೀತಿ ಸಿಗುತ್ತೆ. ಆದರೆ ಶಾಂತ, ನೀನು ತಪ್ಪು ತಿಳಿದು ಕೊಂಡಿರುವಂತೆ ಇದೀಯೆ. ನಾನು ಒಬ್ಬ ದೊಡ್ಡ ಪುಢಾರಿ ಆಗಬೇಕು, ಮಂತ್ರಿ ಆಗಬೇಕು, ನಾಯಕ ಆಗಬೇಕು ಎಂದು ಹುಚ್ಚೆಟ್ಟು ಕೊಂಡಿಲ್ಲ. ಅದೊಂದು ಆಸೆಯೂ ನನಗಿಲ್ಲ. ನನ್ನ ಸುತ್ತುಮುತ್ತಿನ ದಾರಿದ್ರ್ಯ, ದುರವಸ್ಥೆ, ನೋವು, ನರಳಾಟ, ಹಸಿವು, ಅಧಮತೆ ಇವನ್ನೆಲ್ಲಾ ಕೈಕಟ್ಟಿಕೊಂಡು ನೋಡಲಾರೆ. ಅವನ್ನು ಕೈಲಾದಷ್ಟು ಕಡಮೆ ಮಾಡಿ ಹೋಗಬೇಕು ಎನಿಸುತ್ತೆ. ಇಲ್ಲದಿದ್ದರೆ ಗಾಂಧೀ ಜಯಂತಿ, ಸ್ವಾತಂತ್ರ್ಯ ದಿನಾಚರಣೆ, ಆಗಸ್ಟ್ ಒಂಭತ್ತು ಈ ಸಂದರ್ಭಗಳಲ್ಲೆಲ್ಲಾ ಈ ಜನ, ಈ ದೇಶ ನನ್ನದು ಎನ್ನಲು ಬಾಯಾದರೂ ಹೇಗೆ ಬರುತ್ತೆ ? ನೀನೇ ಹೇಳು" ಎಂದ.

ಶಾಂತ ಅವನ ತೋಳಿಗೊರಗಿಕೊಂಡೇ ಆಕಾಶದೆಡೆಗೆ ತಲೆ ಹೊರಳಿಸಿ, ಯಾವುದೋ ತಾರೆಯನ್ನೇ ದಿಟ್ಟಿಸಿ ನೋಡುತ್ತಾ, ಕಾಲು ಕುಣಿಸುತ್ತಲೇ ಇದ್ದಳು. ಅವಳಿಗೆ ರಾಜಣ್ಣ ಹೇಳಿದುದೆಲ್ಲಾ ಒಪ್ಪಿಗೆಯಾಗಿತ್ತು. 'ಪಟ್ಟಣದಲ್ಲಿ ನಾನು, ಹಳ್ಳಿಯಲ್ಲಿ ಅವನು, ಹೇಗೆ ಒಂಟೊಂಟಿಯಾಗಿರುವುದು ?' ಎನಿಸಿತ್ತು. ಅದಕ್ಕೇ ...

ಕೇಳಿದಳು,

"ರಾಜು, ನಿಮ್ಮ ಹಳ್ಳೀ ಹತ್ತಿರದ ಊರಿನಲ್ಲಿ ಹೈಸ್ಕೂಲ್ ಇದೆ ಅಂದಿರಲ್ಲವೆ ?"

"ಹೌದು, ಇದೆ."

"ಅಲ್ಲಿ ಉಪಾಧ್ಯಾಯನಿಯ ಕೆಲಸ ಸಿಗಬಹುದೆ ?"

"ಏಕೆ, ಅಲ್ಲಿ ಕೆಲಸ ಮಾಡ್ತೀಯೇನು ?"

"ಹು, ಕೆಲಸ ಸಿಕ್ಕಿದರೆ."

"ಸಿಗುವುದಕ್ಕೇನು. ಅದು ಒಂದು ಪ್ರೈವೇಟ್ ಹೈಸ್ಕೂಲ್. ಅದರ ಸ್ಥಾಪಕರು ರಾಜಶೇಖರನ ಗೆಳೆಯರು. ನನಗೂ ಚೆನ್ನಾಗಿ ಪರಿಚಯ, ವಿಶ್ವಾಸ. ಬೇಕಾದರೆ ಪಾಸಾದ ಕೂಡಲೇ ಒಂದು ಕೆಲಸ ಕೊಡಿಸ್ತೇನೆ."

"ಓ, ನಿಮಗೆ ಅಷ್ಟು ಪ್ರಭಾವ ಇದೆಯೋ !"

"ನಮ್ಮ ಊರಿನ ಕಡೆ ಇದ್ದೇ ಇದೆ. ನಾನೇನು ಕಳೆದ ನಾಲ್ಕು ವರ್ಷಾನೂ ನೀನು ಹೇಳಿದ ಹಾಗೆ ಎಮ್ಮೆ ಕಾಯ್ತಿರಲಿಲ್ಲ. ಹತ್ತಾರು ಕೆಲಸ ಮಾಡ್ದೆ. ನೂರಾರು ಜನ ಪರಿಚಯ ಆದ್ರು.... ಅಭಿಮಾನ ಪಟ್ಟುಕೊಂಡರು .... ಆದರೆ ಶಾಂತಾ !....ಅದು ಗರ್ಲ್ಸ್ ಹೈಸ್ಕೂಲ್ ಅಲ್ಲವಲ್ಲಾ .... ಗಂಡು ಹುಡುಗರು ನಿನ್ನನ್ನು ಲೇವಡಿ ಎಬ್ಬಿಸಿದರೆ !"

"ಏಕೆ ಲೇವಡಿ ಎಬ್ಬಿಸ್ತಾರೆ. ಲೇವಡಿ ಎಬ್ಬಿಸೋ ಹಾಗೆ ವಯ್ಯಾರ ಥಳಕು ಬಳುಕು ಮಾಡಿದರೆ ! ಅದೆಲ್ಲಾ ನನ್ನ ಹತ್ರ ಇಲ್ಲ. ಸ್ವಲ್ಪ ಬಿಗಿಯಾಗಿದ್ದು ಬಿಟ್ರೆ ಆಯ್ತು. ಅಲ್ಲದೆ–ಹೆಂಗಸೇ ಉಪಾಧ್ಯಾಯ ವೃತ್ತಿಗೆ ಲಾಯಕ್ !" ಎಂದಳು. ರಾಜಣ್ಣ ಪರಿಹಾಸ್ಯದಿಂದ ನಗುತ್ತಾ,

"ಎಷ್ಟೇ, ಆಗಲಿ, ಅವಳು ಸರಸ್ವತೀ ಮುರುಕಲ್ಲವೇ !" ಎಂದ. ಶಾಂತ ಅವನ ತೋಳಿಗೆ ಬಲವಾಗಿ ತಲೆ ಗುದ್ದಿದಳು. ರಾಜಣ್ಣ ಕೇಳಿದ,

"ಹೋಗಲಿ, ನೀನಲ್ಲಿ ಕೆಲಸಕ್ಕೆ ಸೇರೋದು ಏಕೆ ?"

" ಏಕೆ ಅಂದರೆ! ಆ ಊರಿನಲ್ಲಿ ನಮ್ಮ ಮನೆ. ಬೆಳಗಾದ ಕೂಡಲೇ ನನಗೆ ನನ್ನ ಕೆಲಸ, ನಿಮಗೆ ನಿಮ್ಮ ಕೆಲಸ.

" ಕೆಲಸವಾದ ಮೇಲೆ !"

" ಸಂಜೆ ಇಬ್ಬರೂ ಗೂಡು ಸೇರಿಕೊಳ್ಳುವುದು."

" ಆಮೇಲೆ, ರಾತ್ರಿಯೆಲ್ಲಾ ಗುಟುರಿಕ್ಕುತ್ತಾ ಮೊಟ್ಟೆ ಇಡೋದಾ !"

ಶಾಂತ ಪುನಃ ಅವನ ಭುಜಕ್ಕೆ ತಲೆ ಗುದ್ದಿದಳು. ರಾಜಣ್ಣನಿಗೆ ಮತ್ತೊಂದು ಆಲೋಚನೆ ಮಿಂಚಿತು. ಆತುರ, ಉತ್ಸಾಹ, ಆಸೆಯಿಂದ, " ಶಾಂತಾ....ನಿನಗೆ ಮಕ್ಕಳು ಬೇಕೆ ?" ಎಂದು ಕೇಳಿದ. ಅವಳು ನಾಚಿಕೆಯಿಂದ ನಗುತ್ತಾ, ಕೆಂಪೇರಿ, ಕೇಳಿದಳು,

" ನಿಮಗೆ ?"

" ನನಗೆ ಬೇಕು....ಒಳ್ಳೇ ಟೊಮಾಟೋ ಹಾಗಿರೋ ಮಕ್ಕಳು ಬೇಕು !"

" ಗಂಡೋ !....ಹೆಣ್ಣೋ !"

" ಇಬ್ಬರೂ....ಎರಡು ಗಂಡು, ಎರಡು ಹೆಣ್ಣು."

" ಸಾಕೆ ?"

" ಸಾಕು ! ಅವರನ್ನೆಲ್ಲಾ ನೀನು ಕೆಲಸ ಮಾಡಿಕೊಂಡೇ ಬೆಳೆಸು .... ನೋಡೋಣ" ಎಂದ. ಶಾಂತ ಏನನ್ನೂ ಹೇಳಲಿಲ್ಲ. ಅವಳು ಹಿಂತಿರುಗಿ ರಾಜಣ್ಣನನ್ನೇ ಮೌನವಾಗಿ ನೋಡಿದಳು. ಅವನು ಅನುಮಾನ ಆಶ್ಚರ್ಯದಿಂದ " ಇದೇಕೆ! ನಿನಗೆ ಮಕ್ಕಳು ಬೇಡವೇ ?" ಎಂದ.

ಅವಳು ಪುನಃ ಆಕಾಶದ ಸುಂದರ ತಾರೆ, ತುಂಬುಚಂದ್ರರನ್ನು ನೋಡುತ್ತಾ, ಮತ್ತೆ ಕಾಲು ಕುಣಿಸಲಾರಂಭಿಸಿ, ಸ್ವಲ್ಪ ಹೊತ್ತು ಏನನ್ನೋ ಮುಗುಳ್ನಗೆಯಿಂದ ಆಲೋಚಿಸಿ,

" ಹು....ನನಗೂ ಮಕ್ಕಳು ಬೇಕು ಆದರೆ ನಾಲ್ಕಲ್ಲ....ಐದು!"

ಎಂದು ತಲೆಹಾಕಿದಳು. ರಾಜಣ್ಣ ಪೆಗುರವಾದ ಎದೆಯಿಂದ ನಿಟ್ಟುಸಿರುಬಿಟ್ಟು, ಅವಳ ತುಂಬುಕೊರಳನ್ನು ಚುಂಬಿಸಿದ.

ಶಾಂತ ಅವನ ಮುಂಗೈ ಹಿಡಿದು, ಹತ್ತಿರಕ್ಕೆಳೆದುಕೊಂಡು ವಾಚ್‌ನಲ್ಲಿ ಗಂಟೆ ನೋಡಿದಳು. ಆಗಲೇ ಎಂಟೂವರೆ ಗಂಟೆಯಾಗಿತ್ತು. ಅವಳಿಗೆ .... ತುಂಬಾ ವ್ಯಸನವಾಯಿತು. 'ಕಡೆಗೂ ಇಲ್ಲಿಂದ ಹೊರಟುಹೋಗಬೇಕೆ .... ಅಯ್ಯೋ!' ಎಂದು ಮರುಗಿತು ಮನಸ್ಸು. ಆದರೆ ಮನೆಯ ಯೋಚನೆ ಮರೆಯಲಾಗುತ್ತೇನು ?.... ಅದೊಂದು ಯೋಚನೆಯೂ ಲವಲೇಶವೂ ಇಲ್ಲದ ಪೋಲಿಯಂತೆ, ತನ್ನ ತೊಡೆಯಮೇಲೆ ತಲೆಯಿಟ್ಟು, ಕಣ್ಣುಮುಚ್ಚಿ, ಎದೆಯ ಮೇಲೆ ಕೈಕಟ್ಟಿ ಮಲಗಿದ್ದ ರಾಜಣ್ಣನನ್ನು ನೋಡಿ ಅವಳಿಗೆ ಅಸೂಯೆಯಾಯಿತು. ಅವನ ಕಿವಿ ಹಿಂಡುತ್ತಾ, "ಹೊತ್ತಾಯ್ತು, ಮನೆಗೆ ಹೋಗೋಣ ಬನ್ನಿ" ಎಂದಳು.

ಅವನು ತುಟಿ ಅದುಮಿ ನಕ್ಕು, ಕಿವಿ ಬಿಡಿಸಿಕೊಂಡು, ಅವಳ ಕೈಗೆ ಮೃದು ಚುಂಬನಗಳನ್ನಿಡುತ್ತಾ, "ಬೇಡ, ಇಲ್ಲೇ ಇದ್ದು ಬಿಡೋಣ, ಒಂದು ಪುಟ್ಟ ಗುಡಿಸಲು ಕಟ್ಟಿಕೊಂಡು."

"ಥೂ ! .... ಈಗ ಮೇಲೇಳಿ. ಆಗಲೇ ಎಂಟೂವರೆ ಆಯ್ತು. ಒಂಭತ್ತೂ ಕಾಲು ಗಂಟೆಯೊಳಗೆ ಮನೆ ಸೇರಿಕೊಂಡರೆ ಗೆದ್ದುಕೊಂಡೆ. ಈವಿನಿಂಗ್ ಷೋಗೆ ಗೆಳತಿಯರ ಜೊತೆ ಹೋಗಿದ್ದೆ ಎನ್ನಬಹುದು. ಇಲ್ಲದಿದ್ದರೆ ಮನೆಯಲ್ಲಿ ಪೂರ್ತಿ ಗಲಾಟೆ ಆಗುತ್ತೆ " ಎಂದಳು.

ರಾಜಣ್ಣ ಅದನ್ನು ಲೆಕ್ಕಿಸಲಿಲ್ಲ. ಕಣ್ಣುಮುಚ್ಚಿಕೊಂಡೇ,

"ಆ ಮನೆಗೆ ಬೆಂಕಿ ಬೀಳಲಿ !"

"ಹು....ಆಮೇಲೆ ! "

"ಆಮೇಲೆ ನಾವಿಬ್ಬರೂ ಈ ತೊರೆಯಿಂದ ಎರಡು ಬೊಗಸೆ ನೀರೆತ್ತಿಕೊಂಡು ಓಡ್ಹೋಗಿ ಬೆಂಕಿ ಆರಿಸಿಬಿಡೋಣ !" ಎಂದ.

ಶಾಂತ ಕಿಲಕಿಲನೆ ನಕ್ಕು, ಅವನ ಹಣೆ, ಕೆನ್ನೆ, ತುಟಿಯನ್ನು ಹಕ್ಕಿಯಂತೆ ಮಿಂಚಿನ ವೇಗದಲ್ಲಿ ಚುಂಬಿಸಿ, ಮೇಲೆದ್ದು, ಅವನ ಕೋಳು ಹಿಡಿದು, "ಥೂ! .... ನಿಮ್ಮ ಹುಡುಗಾಟದಿಂದ ನನಗೆಷ್ಟು ಕೊಂದರೆ ಗೊತ್ತೇ ? .... ಈಗ ಏಳಿ...." ಎಂದು ಮೊರೆಯಿಡುತ್ತಾ ಅವನನ್ನು ಮೇಲೆಳೆದಳು. ರಾಜಣ್ಣ ಎದ್ದು ನಿಂತ. ಶಾಂತಳನ್ನೇ

ಉನ್ಮತ್ತನಂತೆ ಒಂದು ಕ್ಷಣ ಅರೆತೆರೆದ ಕಣ್ಣುಗಳಿಂದ ನೋಡಿ, ನಂತರ ಕಣ್ಣುಮುಚ್ಚಿ, ಎರಡು ಕೈಯಿಂದಲೂ ಕಿವಿ ಒತ್ತಿ ಹಿಡಿದು, ರಭಸ ದಿಂದ ಅತ್ತಿತ್ತ ತಲೆ ಒದರಿಕೊಂಡ. ಶಾಂತ ಅವನ ನಟನೆಯನ್ನು ವಿನೋದಗೊಂಡು ನೋಡಿ ಗಟ್ಟಿಯಾಗಿ ನಗುತ್ತಾ, ಅವನ ನೆತ್ತಿಗೊಮ್ಮೆ ಅಂಗೈಯಿಂದ ಬಲವಾಗಿ ಮುಟ್ಟಿದಳು. ಅವನು ಕಣ್ತೆರೆದು, ನೆಟ್ಟಗೆ ನಿಂತು, ಒಂದು ದೊಡ್ಡ ನಿಟ್ಟುಸಿರುಬಿಡುತ್ತಾ, "ಈಗ ನಡಿ .... ದಾರಿ ಯಲ್ಲಿ ನಾನೆಲ್ಲೂ ಕುಸಿದು ನೆಲಕ್ಕೆ ಬೀಳೋಲ್ಲ!" ಎಂದು ಅವಳ ಸೊಂಟವನ್ನಪ್ಪಿ ನಡೆಯತೊಡಗಿದ.

ಹತ್ತಾರು ಮಾರು ಬಂದ ನಂತರ ಶಾಂತ ಅವನ ಹೆಗಲ ಮೇಲೆ ಕೈಯಿರಿಸಿ ಕೇಳಿದಳು – "ಏನು ಈಗೀಗ ನೀವೇನಾದ್ರೂ ಓದ್ತಿದಿರೋ, ಇಲ್ಲಾ ಸುಮ್ಮನೆ ನನಗೆ ರೀಮುಗಟ್ಟಲೆ ಕಾಗದ ಬರೀತಾ ಕುಳ್ತಿದೀರೋ!"

"ಸತ್ಯವಾಗಿ ಹೇಳಿದೆ ನೀನು. ಈಗ ಸರಿಯಾಗಿ ಹದಿನೈದು ದಿನ ಆಯ್ತು ನಾನು ಪುಸ್ತಕ ಮುಟ್ಟಿ....ಈಗೀಗ ನಿನ್ನ ಯೋಚನೇನೇ ಆಯ್ತು. ಅದು ಬಿಟ್ಟರೆ.... ಬ್ರಾಂಟೆ, ಲಾರೆನ್ಸ್ ಕಾದಂಬರಿಗಳಾಯ್ತು ....ಇಷ್ಟೆ....ನೀನು ಹೇಗೆ?"

"ನಾನೂ ಹಾಗೆ. ನೀವು ಇಲ್ಲಿಗೆ ಬಂದಾಗಿನಿಂದಲೂ ನನಗೆ ಓದು ಸಾಗುತ್ತಿಲ್ಲ. ಒಂದು ಏಳೆಂಟು ದಿನಗಳಿಂದಲಂತೂ ಪುಸ್ತಕ ಹಿಡಿದು ಕುಳ್ತಿರತೀನಿ .... ಮನಸ್ಸೆಲ್ಲಾ ನಿಮ್ಮ ಮೇಲೇ! .... ಹೀಗೇ ಆದರೆ ಈ ಬಾರಿ ಪಾಸ್ ಆಗೋ ಗ್ಯಾರಂಟಿಯೂ ನಹಿ!"

"ಹಾಗೆಲ್ಲಾ ಇನ್ನುಮೇಲೆ ಇರಬಾರದು ಶಾಂತಾ .... ಈ ಬಾರಿ ಇಬ್ಬರೂ 'ಪಾಸ್' ಮಾಡಿಬಿಡಬೇಕು. ಫೇಲಾದರೆ ನಮಗೆ, ನಮ್ಮ ಪ್ರೇಮಕ್ಕೆ ದೊಡ್ಡ ಅವಮಾನ, ಕೆಟ್ಟಹೆಸರು!" ಎಂದು ಸ್ವಲ್ಪ ತಡೆದು ಕೇಳಿದ: "ಆಗಲೇ ಪರೀಕ್ಷೆಗೆ ದುಡ್ಡು ಕಟ್ಟಿದೆಯಾ?"

"ಇಲ್ಲ. ಇನ್ನೂ ಟೈಮಿದೆ. ನಮ್ಮ ತಂದೆ ಹಣ ಕೊಟ್ಟಕೂಡಲೇ ಕಟ್ಟುತ್ತೇನೆ....ನೀವು?"

"ನಾನು ಆಗಲೇ ಕಟ್ಟಿಬಿಟ್ಟೆ." ಎಂದ ರಾಜಣ್ಣ. ಅವನ ಧ್ವನಿ

ಏಕೋ ಸಪ್ಪೆಯಾಗಿತ್ತು. ಅವನ ಆಲೋಚನಾಭರಿತ ನಯನಗಳ ಮುಂದೆ ಶಾಂತಳ ತಂದೆಯ ಅಸಹಾಯ ಸ್ಥಿತಿ ಎದ್ದು ನಿಂತಿತು. ಅವನು ಅವಳನ್ನೊಮ್ಮೆ ಇನ್ನೂ ಆಪ್ತವಾಗಿ ಬಳಿಗೆಳೆದುಕೊಂಡು ಕೇಳಿದ,

"ಶಾಂತಾ, ನಾನೊಂದು ಮಾತು ಹೇಳ್ತೀನೆ ಕೇಳ್ತೀಯಾ ?"

"ಏನದು ?"

"ಈಗ ನೀನು ಅಪ್ಲಿಕೇಷನ್ ಫಾರಂ ಭರ್ತಿ ಮಾಡಿಕೊಡು. ನಾನು ಹೋಗಿ ನಿನ್ನ ಪರೀಕ್ಷೆಗೆ ದುಡ್ಡು ಕಟ್ಟಿ ಬರ್ತೀನೆ."

"ನಿಮ್ಮ ಹಣ ಇನ್ನೂ ಹಾಗೇ ಇದೆಯೇನು ?"

"ಇದೆ. ಇನ್ನೂರೈವತ್ತು ರೂಪಾಯಿಯೂ ಹಾಗೇ ಇದೆ."

"ಒಳ್ಳೆಯದು. ನಿಮ್ಮ ಹಣ ನೀವೇ ಇಟ್ಟುಕೊಳ್ಳಿ. ನಮ್ಮ ತಂದೆಯ ಹಣದಲ್ಲೇ ನಾನಿದುವರೆಗೂ ಓದಿದೆ. ಅವರ ಹಣದಲ್ಲೇ ಪದವೀಧರಳೂ ಆಗಬೇಕು" ಎಂದಳು.

ರಾಜಣ್ಣ ಮನನೊಂದು ನುಡಿದ: "ಆ ಮನೋಭಾವವನ್ನು ನಾನೂ ತುಂಬಾ ಮೆಚ್ಚುತ್ತೀನೆ ಶಾಂತಾ. ಆದರೆ ನೋಡು, ನಿಮ್ಮ ತಂದೆ ದಿನದಿನವೂ ಕೊರಗಿನಿಂದ ಕುಗ್ಗಿಹೋಗ್ತಿದಾರೆ. ಹಣದ ಯೋಚನೆಯಿಂದಲೇ ಇರಬಹುದು ಎನಿಸುತ್ತೆ. ನನ್ನ ಹತ್ತಿರ ಉಪಯೋಗಕ್ಕೆ ಬೇಕಾಗದ ಹಣ ಇರುವಾಗ ನನ್ನ ಜೀವಕ್ಕೇ ಹೊಂದಿಕೊಂಡಿರೋ ಒಬ್ಬ ವ್ಯಕ್ತಿ ಹಣವಿಲ್ಲದೆ ಕೊರಗಿ ಸೊರಗುವುದನ್ನು ಹೇಗೆ ಕೈಕಟ್ಟಿ ನೋಡಲು ಸಾಧ್ಯ ? ನಾನು ಅವರಿಗೆ ಹಣ ಕೊಡುವುದಂತೂ ಗೌರವವಲ್ಲ. ಅದನ್ನು ನೀನಾದರೂ ಏಕೆ ತೆಗೆದುಕೋಬಾರದು. ನಿನ್ನ ಪರೀಕ್ಷೆ ಮುಂತಾದ ಖರ್ಚಿನ ಭಾರ ಅವರ ಹೆಗಲ ಮೇಲಿಂದ ಇಳಿಸಬಾರದು ? ನೋಡು, ನೀನು ಸಿನಿಮಾಗೆ ಕರೆದುಕೊಂಡುಹೋಗಿದ್ದೆ. ಆಗ ನಾನು ಬೇಡ ಅಂದೆನೇ ? ನೀನು ಪ್ರೀತಿಯಿಂದ ಕೇಕ್ ಬಾಯಲ್ಲಿಟ್ಟಾಗ ತಿನ್ನೋಲ್ಲ ಅಂದೆನೇ ? ಹಾಗೇ ಈ ಹಣವನ್ನು ಪ್ರೀತಿಯಿಂದ ಕೊಡ್ತಿದೇನೆ. ಹಿಡಿ" ಎಂದು ತಾನು ಪ್ಯಾಂಟ್ ಜೇಬಿನಲ್ಲಿ ಜೊತೆಗೇ ತಂದಿದ್ದ ನೋಟಿನ ಸುರುಳಿಯನ್ನು ಹೊರತೆಗೆದು ಅವಳ ಕೈಹಿಡಿದು ಕೊಡಹೋದ. ಶಾಂತ

ಬಲವಂತವಾಗಿ ಕೈ ಬಿಡಿಸಿಕೊಂಡಳು. ಅವನ ಹಣವನ್ನು ಮುಟ್ಟಲಿಲ್ಲ.

ಅವಳಿಗೆ ತನ್ನ ಮನೆಯ ಈಚೀಚಿನ ಆರ್ಥಿಕ ಬಿಕ್ಕಟ್ಟೆಲ್ಲಾ ಅಂಗೈಯಿನಂತೆ ಪರಿಚಯವಿತ್ತು. ಎಷ್ಟೋ ಬಾರಿ ಅದರ ಕಾವು ಅವಳ ಹೊಟ್ಟೆಗೆ ತಾಕಿತ್ತು, ನಾಲಿಗೆಗಿಳಿದಿತ್ತು, ಹೆಣ್ಣಿನ ನವ ತಾರುಣ್ಯದ ನೂರಾರು ಚಿಕ್ಕ ಪುಟ್ಟ ಆಸೆಗಳ ಮೇಲೆ ಕಠೋರವಾಗಿ ಬರೆ ಎಳೆದಿತ್ತು. ಆದರೆ ಅವಳು ಆ ಹಿಂಸೆಯಿಂದ ಕೊಂಚವಾದರೂ ಅಳುಕಿರಲಿಲ್ಲ. ಅಂಜಿರಲಿಲ್ಲ. ಸುಖದ ಮರೀಚಿಕೆಯ ಬೆನ್ನು ಹತ್ತಿ ಅಲೆದಾಡಿರಲಿಲ್ಲ. ಚಿತ್ತಸ್ಥೈರ್ಯ, ತ್ಯಾಗ ಮನೋವೃತ್ತಿಯಿಂದ ಆ ಕಷ್ಟದ ಕುಲುಮೆಯಲ್ಲೇ ತಾಳ್ಮೆಯಿಂದ ಬೆಂದು ಒಂದು ನವೀನ ವ್ಯಕ್ತಿತ್ವ ಪಡೆದಿದ್ದಳು. ತನ್ನದೇ ಆದ ಒಂದು ಜೀವನತತ್ವ ರೂಪಿಸಿ ಕೊಂಡಿದ್ದಳು. ಆ ತತ್ವವೃಕ್ಷದ ಬೇರು–ಕಾಂಡಗಳೇ ನನ್ನ ವಿದ್ಯೆ ಉದ್ಯೋಗ. ಅದರ ಕವಲು–ಹಸುರೆಲೆಗಳೇ ನನ್ನ ಈಡೇರುವ ಆಸೆಗಳು. ಅದರ ತುಟ್ಟತುದಿಯಲ್ಲಿ, ಕಟ್ಟಕಡೆಗೆ ಅರಳುವ ಅತ್ಯಂತ ಸುಂದರ ಒಂಟಿ ಪುಷ್ಪವೇ ನನ್ನ ಪತಿ! ಎಂದವಳು ತನ್ನ ಭವಿಷ್ಯ ಜೀವನದ ಕನಸಿನ ರೂಪರೇಖೆ ಹಾಕಿಕೊಂಡಿದ್ದಳು.

ಆದರೆ ಈಗಾದುದೇ ಬೇರೆಯಾಗಿತ್ತು. ಅವಳ ಕಲ್ಪನೆಯ ಆದರ್ಶ ಜೀವನ ವೃಕ್ಷ, ಬೀಜಾವಸ್ಥೆಯಲ್ಲಿಯೇ ಭೂಗರ್ಭದಲ್ಲಡಗಿತ್ತು. ಆದರೆ ಅದರ ಕಟ್ಟಕಡೆಯ, ತುಟ್ಟತುದಿಯ ಒಂಟಿ ಪುಷ್ಪ ಮಾತ್ರ, ಆಗಲೇ ಭೋಗದಲ್ಲಿ ಮೈ ತುಂಬಿ ಬೆಳೆದು ನಿಂತಿತ್ತು.

ಈ ಅನಿರೀಕ್ಷಿತ ವೈಚಿತ್ರ್ಯದಿಂದ ಇದುವರೆಗೂ ಅವಳ ಕಠಿಣ ದಿನಗಳ ರಕ್ಷಾಕವಚದಂತಿದ್ದ ಆ ಜೀವನತತ್ವವೇ ತಲೆಕೆಳಕಾಗಿತ್ತು, ಅಪ್ರಾಯೋಗಿಕವಾಗಿತ್ತು. ಅವಳಿಗೆ ಸುತ್ತುಮುತ್ತಿನ ವ್ಯಕ್ತಿ ಶಕ್ತಿ ಸಂದರ್ಭಗಳ ನಡುವೆ ತನ್ನ ಸ್ಥಾನ ಮಾನವೇನು ? ಧೋರಣೆಯೇನು? ಎಂಬುದೇ ಈಗ ಯೋಚಿಸಲಾಗಲಿಲ್ಲ.

ಎಲ್ಲಕ್ಕಿಂತ ಮುಖ್ಯವಾಗಿ ರಾಜಣ್ಣನ ಆಶ್ರಿತಳಾಗಿ ತಾನು ಬಾಳ ಬೇಕೋ ? ಬಾಳಬಾರದೋ ? ಎಂಬುದು ಸ್ಪಷ್ಟವಾಗಿ ನಿರ್ಧರವಾಗ ಲಿಲ್ಲ, ಬಗೆ ಹರಿಯಲಿಲ್ಲ. 'ಇದು ನನ್ನ ಜೀವನದ ಅತಿ ದೊಡ್ಡ

ಸಮಸ್ಯೆ' ಎಂದುಕೊಂಡು 'ಇನ್ನು ಕೆಲವು ದಿನ ತಡೆಯುವಂತೆ' ರಾಜಣ್ಣನಿಗೆ ತಿಳಿಸಿದಳು.

ರಾಜಣ್ಣ ಅವಳ ಬಳಿಯಲ್ಲಿ ಮೌನವಾಗಿ ನಡೆದು ಬರುತ್ತಿದ್ದ. ಶಾಂತ ಇಷ್ಟು ಕಟ್ಟುನಿಟ್ಟಾಗಿರುವಳೆಂದು ಅವನು ಭಾವಿಸಿರಲಿಲ್ಲ. ಎಲ್ಲ ರೀತಿಯಲ್ಲೂ ಸ್ವತಂತ್ರ ಜೀವನ ನಡೆಸಬೇಕು – ಎಂದವಳು ಮನಸ್ಸು ಮಾಡಿರುವುದನ್ನು ನೋಡಿ ಅವನಿಗೆ ಸಂತೋಷವೇ ಆಯ್ತು. ಹಾಗೇ ಬದುಕಿನ ಹಣ ಪ್ರಪಂಚದಲ್ಲಿ ಅವಳ ಅನನುಭವವನ್ನು ಕಂಡು ವಿನೋದದ ನಗೆಯೂ ಉಕ್ಕಿತು.

ಎದೆಯ ಮೇಲೆ ಕೈಕಟ್ಟಿ, ಆಲೋಚನಾಭರಿತಳಾಗಿ, ಗಂಭೀರವಾಗಿ ಅಡಿಯಿರಿಸುತ್ತಿದ್ದ ಅವಳ ಭುಜವನ್ನು ತೋಳಿಂದ ಬಳಸಿ, ರಾಜಣ್ಣ ಹೇಳಿದ, "ಶಾಂತ, ನಿನಗೆ ಸ್ವತಂತ್ರ ಜೀವನದ ಹಂಬಲ ಇಷ್ಟಿದೆ ಎಂದು ತಿಳಿದಿರಲಿಲ್ಲ. ಆದರೆ, ನಿನಗೆ ಎಷ್ಟು ಹಂಬಲ ಇದೆಯೋ ಅಷ್ಟು ವ್ಯವಹಾರಿಕ ತಿಳುವಳಿಕೆ ಇಲ್ಲ, ಅನುಸರಿಸಿಕೊಂಡು ಹೋಗುವ ಬುದ್ಧಿ ಇಲ್ಲ. ಈ ವಿಚಾರದಲ್ಲಿ ಕೇವಲ ಆಪ್ತರೊಡನೆ ಬಿಟ್ಟು ಉಳಿದೆಲ್ಲ ಪರಿಚಯಸ್ಥರೊಡನೆಯೂ ನಿನ್ನ ಹಾಗೆ ಕಟ್ಟುನಿಟ್ಟಾಗಿರುವುದೇ ಒಳ್ಳೆಯದು. ಆದರೆ ನೋಡು, ಈಗೊಂದು ಮಾತು ಹೇಳ್ತೀನೆ. ಈಗಾಗಲೇ ನೀನು ಪಾಸಾಗಿ, ನಿನ್ನ ಕಾಲಿನ ಮೇಲೇ ನಿಂತುಕೊಂಡಿದೀಯೆ ಅಂದುಕೋ, ತಿಂಗಳು ತಿಂಗಳೂ ಸಂಬಳ ಪಡೆದು ಖರ್ಚು ಮಾಡ್ತಿದೀಯೆ ಅಂದುಕೋ; ಒಂದು ತಿಂಗಳು ಏನೋ ಅನಿರೀಕ್ಷಿತ ಆಕಸ್ಮಿಕ ಕಾರಣದಿಂದ ಹಣವೆಲ್ಲಾ ಬೇಗ ಖರ್ಚಾಗಿಹೋಗಿ ಬರಿಗೈ ಆಯ್ತು ಅಂದುಕೋ .... ಆಗ ನೀನೇನು ಮಾಡ್ತೀಯ ?....ಯಾರಾದರೂ ಗೆಳತಿಯರು .... ಅದೇ ಊರಿನ ಲೇಡಿ ಡಾಕ್ಟರೋ, ನಿನ್ನ ಹೆಡ್ ಮಿಸ್ಟ್ರೆಸ್ಸೋ ... ಅಥವಾ ಇನ್ಯಾವ ಆಪ್ತಳಿಂದಲೋ ಸಾಲ ಪಡೆಯುತ್ತೀಯ. 'ಮುಂದಿನ ತಿಂಗಳು' ಕೊಡ್ತೀನೆ' ಅಂತೀಯ. ಸಂಬಳ ಬಂದಮೇಲೆ ಕೊಟ್ಟುಬಿಡ್ತೀಯ. ಅಲ್ಲವೆ ?" ಎಂದು ಕೇಳಿದ.

ಶಾಂತ ಯಾವ ಉತ್ತರವನ್ನೂ ಕೊಡಲಿಲ್ಲ. ರಾಜಣ್ಣ ಅವಳ

ಭುಜ ಅಲುಗಿಸುತ್ತಾ ಸುತ್ತೊತ್ತು "ಹೌದೋ? ಅಲ್ಲವೋ? ಹೇಳು" ಎಂದ. ಶಾಂತ ಗಂಭೀರವಾಗಿ ಎದುರಿಗೇ ನೋಡುತ್ತಾ, ಉಸುರಿದಳು,

"ಹೌದು."

"ಹಾಗಾದರೆ.. ನಿನ್ನ ಅಂಥ ಗೆಳತಿಯರಿಗಿಂತಲೂ ನಾನು ದೂರದವನಾದೆನೇ....ಶಾಂತ? ನನ್ನ ಬಳಿಯೂ ಏಕೆ ಹಾಗೇ ಹಣ ತೆಗೆದ್ಕೋಬಾರದು? ನನ್ನ ನಿನ್ನ ಜೀವನವೇ ಬೇರೆ ಬೇರೆ ಆಗಿಲ್ಲದಿರು ವಾಗ, ಇಬ್ಬರ ಹಣ ಬೇರೆ ಬೇರೆಯಾಗಿರಲು ಸಾಧ್ಯವೇ? ಹೇಳು?"

ಶಾಂತ ಸ್ವಲ್ಪ ಕಾಲ ಹಾಗೇ ಯೋಚಿಸಿದಳು. ಅವರ ಎರಡು ಮನೋಜಗತ್ತುಗಳನ್ನೂ-ಮನೋಸ್ಥಿತಿಗಳನ್ನೂ ರಾಜಣ್ಣನ ಮಾತು ಒಂದುಗೂಡಿಸಿತ್ತು. ಅವಳು ನಿಟ್ಟುಸಿರಿಡುತ್ತಾ, ಪರ್ಸು ಸಡಿಲಬಿಟ್ಟಳು. ಅದನ್ನು ಅರಿತು ರಾಜಣ್ಣನ ವದನ ಸಂತಸದಿಂದ ಅರಳಿತು. ಅವಳು,

"ಹಾಗಾದರೆ ಕೊಡಿ ಆ ದುಡ್ಡನ್ನು" ಎಂದು ಹಸ್ತ ಅರಳಿಸಿದಳು. ರಾಜಣ್ಣ ಅವಳನ್ನು ಮಿಂಚಿನಂತೆ ಚುಂಬಿಸಿ ದೂರ ಹೋಗಿ ನಗುತ್ತಾ, "ನನ್ನ ಹತ್ತಿರ ಯಾವ ದುಡ್ಡೂ ಇಲ್ಲಾ!" ಎಂದ.

ಶಾಂತಳ ಮುಖ ಪೆಚ್ಚಾಯಿತು. ಅವಳು ಅವನನ್ನೇ ಅತ್ಯಂತ ವಿಷಾದದಿಂದ ಈಕ್ಷಿಸತೊಡಗಿದಳು. ಆಗ ಅವನು ನಗುತ್ತಾ, "ಎಲ್ಲಾ ದುಡ್ಡೂ ನಿನ್ನ ಸೆರಗಿನಲ್ಲಿದೆ. ಮುಟ್ಟಿನೋಡಿಕೋ!" ಎಂದ. ಶಾಂತ ಅದನ್ನು ನಂಬಲಾರದವಳಂತೆ ಅವನನ್ನೇ ಒಂದು ಕ್ಷಣ ನೋಡಿ, ಸೆರಗು ಮುಟ್ಟಿನೋಡಿಕೊಂಡಳು.

ಅಷ್ಟುಹೊತ್ತಿಗೆ ಹೊಲಗಳ ದಾರಿ ಕಳೆದು, ಟಾರು ರಸ್ತೆಗೆ ಅಡಿಯಿರಿಸಿದ್ದರು. ಈಗ ಪಯಣದಲ್ಲಿ ಇಬ್ಬರೂ ದೇಹ ಸಾಮೀಪ್ಯ ಪೊಂದಲಾಗುತ್ತಿರಲಿಲ್ಲ. ಆದರೂ ಕೈ ಕೈ ಹಿಡಿದುಕೊಳ್ಳಲು ಯಾವ ಭಯವೂ ಇರಲಿಲ್ಲ. ಮನೆಯ ಕಡೆಯ ಆ ಪಯಣದಲ್ಲಿ ಅವರಿಬ್ಬರ ಹಸ್ತಗಳು ಮಾತ್ರ ಜೊತೆಯಾಗಿರಲಿಲ್ಲ. ಅವರ ಆತ್ಮ, ಹೃದಯಗಳೂ ಒಂದನ್ನೊಂದು ಅಪ್ಪಿ, ಸುಖದ ಸವಿಯುಣ್ಣುತ್ತಾ, ಮತ್ತರಾಗಿ ನಡೆದು ಬರುತ್ತಿದ್ದರು.

ಇಬ್ಬರೂ ನಗರದ ಹೊರವಲಯದಲ್ಲಿ ನಿವೇಶನಗಳನ್ನು ವಿಂಗಡಿಸಿದ್ದ ಪ್ರದೇಶಕ್ಕೆ ಬಂದರು. ಪಾಯ ಹಾಕಿಬಿಟ್ಟ ಹೆತ್ತಾರು ಕಟ್ಟಡಗಳು, ವಿಶಾಲ ಬಯಲು, ನಿರ್ಜನ ರಸ್ತೆ, ಅಸಾಧರಂತೆ ಉರಿಯುವ ದೀಪಗಳು.

ಅಲ್ಲಿಂದ ಮನೆ ಮೂರು ನಾಲ್ಕು ಫರ್ಲಾಂಗ್ ಮಾತ್ರ. ಸ್ವಲ್ಪ ದೂರದ ದೀಪದ ಕಂಬದ ಬಳಿ ನಾಲ್ಕಾರು ವ್ಯಕ್ತಿಗಳು ನಿಂತಿರುವುದು ಕಂಡುಬಂತು. ಅವರೆಲ್ಲರೂ ಏನನ್ನೋ ಗೌಪ್ಯವಾಗಿ ಮಾತಾಡಿಕೊಳ್ಳುತ್ತಿರುವಂತೆ ತೋರಿತು. ಹತ್ತಿರ ಹತ್ತಿರ ಹೋದಂತೆಲ್ಲಾ ಅವರು ಆರ್.ಎಸ್.ಎಸ್. ತರುಣರೆಂದು ಕಂಡು ಬಂತು. ಕರೀ ಟೋಪಿಗಳು, ಖಾಕಿ ನಿಕ್ಕರ್, ದೊಣ್ಣೆಗಳನ್ನು ಹಿಡಿದು ನಿಂತಿದ್ದರು.

ರಾಜಣ್ಣ–ಶಾಂತ ಸಮೀಪಿಸಿದಾಗ ಅವರೆಲ್ಲರೂ ದುರುಗುಟ್ಟಿ ನೋಡಲಾರಂಭಿಸಿದರು. ಅವರಲ್ಲಿ ಶಾಂತಳ ಅಣ್ಣನೂ ಇದ್ದುದು ಕಾಣಿಸಿತು. ರಾಜಣ್ಣ ಶಾಂತ ಅವರನ್ನು ಲಕ್ಷಿಸದೆ ತಮ್ಮಷ್ಟಕ್ಕೆ ತಾವು ಮುಂದೆ ಮುಂದೆ ಸಾಗಿದರು. ಹಿಂದಿನಿಂದ, "ರೀ....ಮಿ. ರಾಜಣ್ಣ ....ನಿಲ್ಲಿ ಸ್ವಲ್ಪ !" ಎಂದು ಯಾರೋ ಗತ್ತಿನಿಂದ ಕರೆದಂತಾಯ್ತು.

ರಾಜಣ್ಣ ನಿಂತು ಹಿಂತಿರುಗಿದ. ಶಾಂತಳೂ ಅವನ ಪಕ್ಕದಲ್ಲಿ ನಿಂತಳು. ಶಾಂತಳ ಅಣ್ಣ ಅವನ ಬಳಿಗೆ ಬರುತ್ತಾ, ಶಾಂತಳೆಡೆಗೆ ಕೈ ತೋರಿಸಿ, ದರ್ಪದಿಂದ, "ನಿಮ್ಮ ಪಕ್ಕದಲ್ಲಿರುವವರು ಯಾರು ?" ಎಂದು ಕೇಳಿದ.

ರಾಜಣ್ಣ ಅವನ ಬೆದರಿಕೆಯ ಪ್ರಶ್ನೆಗೆ ಮುಗುಳು ನಗುತ್ತಾ ಹೇಳಿದ — "ಏಕೆ....ನಿಮಗೆ ಗೊತ್ತಾಗಲಿಲ್ಲವೇ ? ನನ್ನ ಸ್ನೇಹಿತೆ.... ನಿಮ್ಮ ತಂಗಿ !"

"ನಿಮ್ಮ ಸ್ನೇಹಿತೆ....!"

"ಹೌದು, ಅದರಲ್ಲೇನು ಆಶ್ಚರ್ಯ ?"

"ಆಶ್ಚರ್ಯ, ನಿಮಗೆ ಕಾದಿದೆ....ಅವಳನ್ನು ಈಗೆಲ್ಲಿಗೆ ಕರೆದುಕೊಂಡು ಹೋಗಿದ್ರಿ....ಹೇಳಿ."

"ಹೀಗೇ.. ತಿರುಗಾಡಿ ಬರಲು ಹೋಗಿದ್ದೆವು."

"ಅವಳ ಜೊತೆ ತಿರುಗಾಡಿ ಬರಲು ಯಾರು ನೀವು ?"

"ಅವಳ ಸ್ನೇಹಿತ! . ನಿಮಗೆ ಆಗಲೇ ಹೇಳಲಿಲ್ಲವೇ ?" ಎಂದು ನಗುತ್ತಾ ಹೇಳಿದ.

ಒಬ್ಬ ಕುಳ್ಳು ಠೊಣೆಯು ರಾಜಣ್ಣನ ತೋಳು ಹಿಡಿದು ಒರಟಾಗಿ ಪಕ್ಕಕ್ಕೆ ಎಳೆದುಕೊಂಡು, ಅವನ ಮುಖಕ್ಕೆ ಮುಖವಿತ್ತು, ಹೊಲಸು ಗಂಟಲಲ್ಲಿ, "ನೀನೆಷ್ಟು ಜನಕ್ಕೆ ಹುಟ್ಟಿದ್ದೆ....!" ಎಂದು ಅಬ್ಬರಿಸಿದ.

ರಾಜಣ್ಣನಿಗೆ ಕೋಪ ಹಿಡಿದು, ರಕ್ತ ಮುಖಕ್ಕೆ ಚಿಮ್ಮಿ, ಮೈಯೆಲ್ಲಾ ಸ್ಫುರಣಗೊಂಡಿತು. ಅವುಡುಗಚ್ಚಿ, ಆ ಠೊಣೆಯನ ಕೈಗೆ ಕೈ-ಹಾಕಿ, ತೋಳುಬಿಡಿಸಿಕೊಂಡ. ಅವನ ಎರಡು ಕೈಗಳನ್ನೂ ಭದ್ರವಾಗಿ ಹಿಡಿದು ಮುಂದೆ ಎಳೆದುಕೊಂಡು, ಅವನ ಕಣ್ಣುಗಳಲ್ಲೇ ಹಗೆತನದಲ್ಲುರಿಯುವ ಕಣ್ಣುಗಳಿಟ್ಟು. "ನೀನೆಷ್ಟು ಮಂದಿಗೆ ಹುಟ್ಟಿರುವೆಯೋ ! ... ಆದರೆ ನಾನು ಹುಟ್ಟಿರುವುದು ಒಬ್ಬನಿಗೆ ಮಾತ್ರ !" ಎಂದು ಫೂತ್ಕರಿಸಿ ಅವನ ಕೈಗಳನ್ನು ಝಾಡಿಸಿ ದೂರ ತಳ್ಳಿದ.

ಆ ಠೊಣೆಯು ಹಿಂದಕ್ಕೆ ತತ್ತರಿಸಿ ಸರಿದು ನಿಂತು, ರಾಜಣ್ಣನ ಕೆರಳಿದ ಆಜಾನುಬಾಹು ದೇಹವನ್ನೇ ಒಂದು ಬಾರಿ ತೂಗಿ ನೋಡಿ, ನಿಂತಲ್ಲೇ ನಿಂತ. ರಾಜಣ್ಣ ಅವುಡುಗಚ್ಚಿ, ಮುಷ್ಟಿ ಬಿಗಿಯುತ್ತಾ, ಅವನೆಡೆಗೊಮ್ಮೆ ಹಗೆತನ-ತಿರಸ್ಕಾರ ನೋಟ ಕಾರಿ, ಶಾಂತಳೆಡೆಗೆ ತಿರುಗಿದ.

ಅವಳ ಅಣ್ಣ ಶಾಂತಳ ಮುಂದೆ ನಿಂತು, ತಮಿಳಿನಲ್ಲಿ 'ಎನ್ನಾಡಿ-ಸನ್ನಾಡಿ' ಎಂದು ಬೈದೇ-ಬೈಯುತ್ತಿದ್ದ. ಶಾಂತಳೂ ತಮಿಳಿನಲ್ಲೇ ಅವನಿಗೆ ಸ್ಫೂರ್ತಿಯುತಳಾಗಿ ಉತ್ತರ ಕೊಡುತ್ತಿದ್ದಳು. 'ಹಾಗಿರಬೇಕು ಧೀರೆ!' ಎಂದು ರಾಜಣ್ಣ ಯೋಚಿಸುತ್ತಿರುವಾಗ, ಆ ಠೊಣೆಯನೇ ಮತ್ತೊಮ್ಮೆ ಅವನ ಮುಂದೆ ಈಗ ಸಭ್ಯನಂತೆ ಬಂದು, 'ನೀನು ಇಂಥ ಕೆಲಸ ಮಾಡಬಹುದೋ ?" ಎಂದು ಕೇಳಿದ.

ರಾಜಣ್ಣ ಅವನ ಮಾತಿಗೆ ಬೆಲೆ ಕೊಡದವನಂತೆ, ಹೇಳಿದ, 'ನಾನು ಎಂಥ ಕೆಲಸವಾದ್ರೂ ಮಾಡ್ತೀನಯ್ಯ. ಅದನ್ನು ಕೇಳಲು ನೀನು ಯಾರು ?"

"ನೀನು ಹೀಗೆ ಮಾಡಿದರೆ ಅವಳನ್ನು ಇನ್ನಾರು ಮದುವೆ ಯಾಗ್ತಾರೆ ?"

"ಆ ಯೋಚನೆ ನಿನಗೇಕೆ ? ಅವಳ ತಂದೆಗೆ ನಾಲ್ಕು ಸಾವಿರ ಕೊಡು, ಹತ್ತು ಸಾವಿರ ಕೊಡು ಎಂದು ತಿರುಪೆ ಬೇಡದಿರುವ ಒಬ್ಬ ನಿಜವಾದ ಗಂಡಸು ಮದುವೆಯಾಗ್ತಾನೆ ಏಕೆ, ತಾವೇನಾದರೂ ಆಗಬೇಕು ಎಂದಿದ್ದಿರೇನು ?"

"ಹು !"

"ಓ, ಹಾಗಾದರೆ ಇಷ್ಟು ದಿನ ಏಕೆ ತಡ ಮಾಡಿದಿರಿ ? ಅವಳ ತಂದೆ ಇನ್ನೊಂದು ಸಾವಿರ ಹೆಚ್ಚಿಗೆ ಕೊಡಿಡಲು ಗಡುವುಕೊಟ್ಟಿದ್ದೀರೇನೋ ಪಾಪ !"

"ನಮ್ಮ ಜಾತಿ ವಿಷಯ ನಿನಗೇಕೆ ?"

"ಯಾವ ಜಾತಿ ವಿಷಯವೂ ನನಗೆ ಬೇಡ. ನನಗೆ ಬೇಕಾಗಿ ರುವುದು ನನ್ನ-ನನ್ನ ಗೆಳತಿಯ ವಿಚಾರ ಅಷ್ಟೆ."

"ಏಕೆ, ನೀನವಳನ್ನು ಮದುವೆಯಾಗುವಂತೆ ಇದ್ದೀಯಾ ?"

"ಇರಬಹುದು."

"ನೀನಾವ ಜಾತಿ ? ಅವಳಾವ ಜಾತಿ ?" ಎಂದು ಅವನು ಹೇಳಿ ಮುಗಿಸುವುದರಲ್ಲೇ, ಎಡಪಕ್ಕದಲ್ಲಿ ನಿಂತ ಇನ್ನೊಬ್ಬ, "ಅವಳ ಜಾತಿ ಯವರ ಎಂಜಲೆಲೆ ತಿನ್ನಲೂ ನಿನಗೆ ಯೋಗ್ಯತೆ ಇಲ್ಲ" ಎಂದು ಕಿರುಚಿದ.

ರಾಜಣ್ಣ ನಿಧಾನವಾಗಿ ಅವನ ಕಡೆ ತಿರುಗಿ ನೋಡಿದ. ಕೊಳಕು ಪಂಚೆ, ಉಜ್ಜದ ಹಲ್ಲು, ಸೋರುವ ಕಿವಿಯ ಹೊಲಸು ವಾಸನೆ, ಪಿಳ್ಳೆಜುಟ್ಟಿನ ಆ ನಾಮಧಾರಿಗೆ ಒಂದು ಮೂತಿಗೆ ಬಿಗಿದು ಆಂಜನೇಯಸ್ವಾಮಿ ಬಳಿಗೆ ಕಳಿಸುವ ಚಪಲವಾಯ್ತು. ಆದರೆ ನಾಲ್ಕಾರು ಪತ್ರಗಳು ಒಟ್ಟಿಗಿರುವಾಗ ತಲೆ ಕೆಡಿಸಿಕೊಳ್ಳಬಾರದೆಂದು, ಅವನೆಡೆಗೆ ತಿರುಗುತ್ತಾ, ಸೌಮ್ಯ ಧ್ವನಿಯಲ್ಲಿ, "ರೀ, ಮಿಸ್ಟರ್, ನಿಮ್ಮದು ಉತ್ತಮ ಜಾತಿ, ಅಲ್ಲವೇ ?" ಎಂದು ಕೇಳಿದ.

ಅವನು ತನ್ನ ಕೋಳಿ ಕತ್ತನ್ನು ಮುಂದೆ ಬಾಗಿಸುತ್ತಾ, 'ಹೌದು, ನಮ್ಮದು ಓಂದೂಗಳಲ್ಲೆಲ್ಲಾ ಅತ್ಯಂತ ಶ್ರೇಷ್ಠ ಜಾತಿ !"

ಎಂದು ಕೂಗಿದ.

ರಾಜಣ್ಣ ಅವನನ್ನೇ ವಿಷಾದ-ತಿರಸ್ಕಾರದಿಂದ ನೋಡುತ್ತಾ, "ಬಹುಶಃ ನಿಮ್ಮ ಶ್ರೇಷ್ಠತೆ ಹೊಲಸು ಮಾತಾಡುವುದರಲ್ಲಿರಬೇಕು." ಎಂದ. ಆ ಸಣಕಲು ಯುವಕ ರಾಜಣ್ಣನನ್ನೇ ಚೇಳು ಕುಟುಕಿದ ಕಪಿಯಂತೆ ಆಶ್ಚರ್ಯದಿಂದ ಬಾಯಿ ತೆರೆದು ನೋಡತೊಡಗಿದ. ರಾಜಣ್ಣ ಅವನನ್ನೇ ಕಸಿಕರದಿಂದ ನೋಡುತ್ತಾ, "ಶ್ರೇಷ್ಠತನದ ಒಣ ಹೆಮ್ಮೆ ಬಿಟ್ಟು, ಸ್ವಲ್ಪ ಸಭ್ಯತೆ ಕಲಿತುಕೊಳ್ಳಿ" ಎಂದ. ಅವನು ಕೋಪೋದ್ರೇಕದಿಂದ, ಕುಣಿಯುತ್ತಾ, "ಸಭ್ಯತನ ನಿನ್ನಿಂದ ಕಲಿಯ ಬೇಕೇನೋ ಶೂದ್ರ !" ಎಂದ. ರಾಜಣ್ಣ ಅವನ ಹೀನ ಹೆಮ್ಮೆಯನ್ನು ಕಂಡು ನಗುತ್ತಾ, "ನಾನು ಶೂದ್ರನೇ ಆಗಿರಲಿ.... ಸ್ವಾಮೀ.... ಮೊದಲು ಸಧ್ಯ ನೀವು ನಿಮ್ಮ ನಾಲಿಗೆ ಶೂದ್ರತನ ತೊಳೆದುಕೊಳ್ಳಿ.... ನಿಮ್ಮ ಶ್ರೇಷ್ಠತೆ ಹೊಲಸು ಕಂಡು ನನಗೇ ಅಸಹ್ಯವಾಗುತ್ತೆ !" ಎಂದ.

ಎಲ್ಲರೂ ಅವನನ್ನೇ ಹಗೆತನದಿಂದ ನೋಡತೊಡಗಿದರು. ಪರಿಸ್ಥಿತಿ ಕ್ಷಣಕ್ಷಣಕ್ಕೂ ಪ್ರಕ್ಷುಬ್ಧ ಆಸ್ಫೋಟಕಕಾರಿಯಾಗುತ್ತಿತ್ತು. ರಾಜಣ್ಣ ತನ್ನ ಸುತ್ತ ನಿಂತಿರುವವರನ್ನೆಲ್ಲಾ ಒಮ್ಮೆ ತೂಗಿ ನೋಡಿದ. ಇದು ಮೈಮೇಲೆ ಬೀಳಲು ಹೇಸದಿರುವ ಗುಂಪು. ಎಲ್ಲಕ್ಕೂ ಸಿದ್ಧವಾಗಿರಬೇಕು, ಎಂದು ರಾಜಶೇಖರನ ಕೈ ಕೆಳಗೆ ಗರಡಿ ಮನೆ ಯಲ್ಲಿ ಕಲಿತ ಕೆಲವು ವರಸೆಗಳನ್ನು ಜ್ಞಾಪಿಸಿಕೊಂಡು, ಪ್ರಸ್ತುತ ಸನ್ನಿವೇಶಕ್ಕೆ ಅವುಗಳನ್ನು ಮನಸ್ಸಿನಲ್ಲೇ ಅನುಗೊಳಿಸಿಕೊಳ್ಳುತ್ತಿದ್ದ. ಅವನ ಅವುಡು ದೃಢವಾಗಿ ಕಚ್ಚಿದುವು. ಅವನ ದೇಹ ತುಟ್ಟ ತುದಿಯುವರೆಗೂ ಎಳೆದ ಬಿಲ್ಲಿನ ಕೋಲಿನಂತೆ, ಯಾವ ಹೋರಾಟ ಕ್ಕಾದರೂ ಸಿದ್ಧವಾಗಿತ್ತು.

ಶಾಂತಳೊಡನೆ ವರದ ಚೆನ್ನಾಗಿ ಪೂಜೆಮಾಡಿಸಿಕೊಳ್ಳುತ್ತಿದ್ದ. ಆಗ ರಾಜಣ್ಣ ಅವನನ್ನು ಕುರಿತು ಕೇಳಿದ. "ರೀ....ವರದ, ನೀವೇ ಹೇಳಿರಲಿಲ್ಲವೆ ? .... ನಮ್ಮ ಹಿಂದೂಗಳಲ್ಲಿರುವ ಜಾತಿ ವೈಷಮ್ಯಗಳ ನ್ನೆಲ್ಲಾ ಹೋಗಲಾಡಿಸಬೇಕು. ಹಿಂದೂಗಳೆಲ್ಲ ಏಕ ಜಾತಿಯಾಗ ಬೇಕು ಎಂದು ?"

"ಹೊ....ಹೇಳಿದ್ದೆ !" ಎಂದು ಅವನು ಹೂಂಕರಿಸಿದ.

"ಹಾಗೆ ನಿಜವಾಗಿಯೂ ಮನಸ್ಸಿದ್ದರೆ ಅದನ್ನು ನೀವು ಹೇಗೆ ಸಾಧಿಸುತ್ತೀರ....?"

"ಅದನ್ನು ನಾವೇನು ಸಾಧಿಸುವುದು....ನಮ್ಮ ಪವಿತ್ರ ಸಂಘ ಸಾಧಿಸುತ್ತೆ !"

"ಅದನ್ನು ನಿಜವಾಗಿಯೂ ಸಾಧಿಸುವ ಮಾರ್ಗ ಅಂತ ರ್ಜಾತೀಯ ವಿವಾಹಗಳಿಂದಲ್ಲವೇ....?" ಎಂದು ಕೇಳಿದ.

ಈ ಮಾತನ್ನು ಕೇಳಿದೊಡನೆಯೇ ಅಲ್ಲಿದ್ದವರೆಲ್ಲರೂ ಅಣಕ ವಾಡಿದರು. ಒಬ್ಬ "ಎಲ್ಲಾ ಕುಣಿಬಿ ಹೈಕಳಾ !" ಎಂದ. ಇನ್ನೊಬ್ಬ "ನೋಡ್ರೋ....ಹಿಟ್ಟು ಕಡಿದು, ಸಗಣೀಲಿ ಹೊರಳೋ ಶೂದ್ರನಿಗೂ ನಮ್ಮ ಬಿಳೀ ಹುಡುಗಿಯರು ಬೇಕು" ಎಂದ. ರಾಜಣ್ಣ, ಅವರ ಅಸಹ್ಯ, ವಿಕೃತ ಸ್ವಾಭಿಮಾನವನ್ನು ಕಂಡು ತಲ್ಲಣಿಸಿದ. ಅವರನ್ನೇ ಅತ್ಯಂತ ವಿಷಾದ ಕನಿಕರದಿಂದ ನೋಡಿದ. ಬಳಿಯಲ್ಲೇ ಯುವತಿ ಯೊಬ್ಬಳು ಇರುವಾಗಲೂ ಇಂಥ ಮಾತೇ ಎಂದು ಅವನಿಗೆ ತುಂಬಾ ವ್ಯಸನ, ಅವಮಾನ, ಕೋಪ ಉಕ್ಕಿತು. ಆಗ ಶಾಂತಳ ಅಣ್ಣ ಅವನ ಕಡೆಗೆ ತಿರುಗಿ, ಏಕವಚನದಲ್ಲಿ, "ಇಲ್ಲಿ ನೋಡು ರಾಜಣ್ಣ, ನೀನು ಈದಿನ ಇವಳ ಸಂಗಡ ತಿರುಗಾಡಲು ಹೋಗಿದ್ದೇ ಕಡೆ. ಇನ್ನೊಂದು ದಿನ ಇದೇ ರೀತಿ ಮಾಡುವುದಲ್ಲಿ, ಅವಳ ಮುಖ ನೋಡಿದರೂ ಸಹ....ಚೆನ್ನಾಗಿರೋಲ್ಲ....ನೋಡು !" ಎಂದು ಬೆದರಿಕೆ ಹಾಕಿದ.

ರಾಜಣ್ಣನಿಗೆ ಆ ರೀತಿಯ ಟೊಳ್ಳು ಅಧಿಕಾರವಾಣಿ, ಬೆದರಿಕೆ, ದಬ್ಬಾಳಿಕೆಗೆ ತಲೆಬಾಗುವ ಮನಸ್ಸಿರಲಿಲ್ಲ. ಅದಕ್ಕೇ ನಿರ್ಧಾರದಿಂದ ಮೊಳಗುವ ಧ್ವನಿಯಲ್ಲಿ ಹೇಳಿದ, "ಇದನ್ನು ನೀವು ಒಬ್ಬರಲ್ಲ ! ಇನ್ನು ನೂರು ಜನ ಜೊತೆಗೆ ಕರೆದುಕೊಂಡು ಬಂದು ಹೇಳಿದರೂ ನಾನು ನಿಮಗೆ ಬೆದರೋಲ್ಲ ಮಿ. ವರದ !....ನೀವು ನಮ್ಮನ್ನು ಏನೆಂದು ತಿಳಿದುಕೊಂಡಿದೀರಿ ? ... ನಾವೇನು ಪ್ರೈಮರಿಸ್ಕೂಲ್ ಹುಡುಗ ಹುಡುಗಿಯರೇ.. ?.. .ನಾವು ಬೆಳೆದ, ವಿದ್ಯಾವಂತರಾದ, ಇನ್ನೇನು

ಪದವೀಧರರಾಗುವ ಜವಾಬ್ದಾರಿಯುತ ಯುವಕ ಯುವತಿಯರು! ಒಪ್ಪಿಗೆಯಾದಂತೆ ವರ್ತಿಸಲು ನಮಗೂ ಸಂಪೂರ್ಣ ಹಕ್ಕು ಅಧಿಕಾರ, ಇದೆ. ನಿಮ್ಮ ತಂದೆಯ ಮನೆಯಲ್ಲಿ ನಿಮಗಿರುವ ಸ್ವಾತಂತ್ರ್ಯ ಸ್ಥಾನ ಮಾನ ಹಕ್ಕುಬಾಧ್ಯತೆ ನಿಮ್ಮ ತಂಗಿಗೂ ಇದೆ. ನೀವು ಅವಳ ಅಣ್ಣ ಆದ ಮಾತ್ರಕ್ಕೆ ಅವಳ ಮೇಲೆ ದಬ್ಬಾಳಿಕೆ ನಡೆಸಲು ಸಾಧ್ಯವಿಲ್ಲ. ಅವಳು ನನ್ನನ್ನು ಮೆಚ್ಚಿದಾಳೆ...ನಾನೂ ಅವಳನ್ನು ಮೆಚ್ಚಿದ್ದೇನೆ. ಮುಂದೆ ನಾವಿಬ್ಬರೂ ಕೂಡಿಯೇ ಬಾಳುತ್ತೇವೆ. ಅದಕ್ಕೋಸ್ಕರವೇ ನಾವಿಂದು ಜೊತೆಗೆ ಬರುತ್ತಿದ್ದುದು. ಅದು ನಿಮಗೆ ಇಷ್ಟವಿಲ್ಲದಿದ್ದರೆ ನಮ್ಮ ಮೇಲೆ ದರ್ಪ ದಬ್ಬಾಳಿಕೆ ನಡೆಸಲು ಬಿಟ್ಟುಕೊಡೋಲ್ಲ. ನಾವೇನು ನಿಮ್ಮ ಅಧೀನರಲ್ಲ. ಆಜ್ಞಾವರ್ತಿಗಳಲ್ಲ. ನೀವು ನನಗಾಗಲೀ, ಅವಳಿಗಾಗಲೀ ಪೋಷಕರಲ್ಲ, ಹಿತಚಿಂತಕರಲ್ಲ....ಇದನ್ನು ಚೆನ್ನಾಗಿ ತಿಳಿಯಿರಿ ... ನಿಮ್ಮ ಬೆದರಿಕೆಯನ್ನು ನಿಮ್ಮ ಬಾಯಲ್ಲೇ ಇಟ್ಟುಕೊಳ್ಳಿ" ಎಂದು ಶಾಂತಳ ಕಡೆಗೆ ತಿರುಗಿದ.

ಕೂಡಲೇ ವರದ, "ಏಯ್! ರಾಜಣ್ಣ!!" ಎಂದು ಅವನ ಷರಟನ್ನು ಹಿಡಿದು ಎಳೆದ. ರಾಜಣ್ಣ ಮಿಂಚಿನಂತೆ ಹಿಂತಿರುಗಿ ನಿಂತು, ಅವನ ಕೈಯನ್ನೊದರಿ, "ಏನ್ರೀ....ಅದು?" ಎಂದು ಕೆರಳಿ ಪ್ರಶ್ನಿಸಿದ. ವರದ ದ್ವೇಷದಿಂದ ಭಾರವಾದ ಧ್ವನಿಯಲ್ಲಿ, "ನೀನು ನನ್ನ ತಂಗಿಯನ್ನು ಮದುವೆ ಆಗ್ತೀಯಾ!" ಎಂದು ಹೊಡೆದಾಟಕ್ಕೆ ಕಾಲ್ಕೆರೆದು, ಕೊರಳ ಪಟ್ಟಿಗೆ ಕೈಯಿಟ್ಟ. ರಾಜಣ್ಣ ಅವುಡುಗಚ್ಚಿ, ಅವನನ್ನೇ ನೋಡುತ್ತಾ ಸ್ಥಿರ ಕಂಠದಲ್ಲಿ, "ಮಿ. ವರದ....ನಿಮಗೆ ಆಗಲೇ ನಾಗರೀಕನಂತೆ ಉತ್ತರ ಕೊಟ್ಟಿದ್ದೇನೆ. ಅನಾಗರೀಕನಂತೆ ಹೋರಾಡಬೇಕೆಂದಿದ್ದರೆ ಅದಕ್ಕೂ ನಾನು ಸಿದ್ಧ. ನೀವು ನಾಲ್ಕಾರು ಜನರಿರಬಹುದು. ಆದರೆ ನನಗೆ ನನ್ನ ಬಲ, ದೈವ ಬಲ ಇವೆರಡೂ ಇವೆ? ನಿಮ್ಮೆಲ್ಲರಿಂದ ಹತ್ತು ಏಟು ತಿಂದರೂ, ನಾನು ಬಲವಾದ ನಾಲ್ಕಲ್ಲ, ನಿಮ್ಮ ಹತ್ತು ಏಟುಗಳನ್ನೂ ಹಿಂತಿರುಗಿಸಬಲ್ಲೆ. ಆದರೆ ನಾನೊಬ್ಬ ಸುಸಂಸ್ಕೃತ, ವಿದ್ಯಾವಂತ. ನೀವು ಸಹ ಅಷ್ಟೆ. ನನಗಿಂತ ಹೆಚ್ಚಿನ ವಿದ್ಯಾವಂತರು. ನಾನು ನಿಮ್ಮ ತಂಗಿಯನ್ನು ವಿವಾಹ

ವಾಗುವುದು ನಿಜ. ನನ್ನಾಣೆಗೂ ಸತ್ಯ....ನಿಮಗೆ ಈ ವಿಚಾರದಲ್ಲಿ ನಿಮ್ಮ ತಂದೆಯವರಿಂದಲೇ ಸ್ಪಷ್ಟ ಉತ್ತರ, ಸಮಾಧಾನ ಕೊಡಿಸು ತ್ತೇನೆ. ಅದಕ್ಕೆ ನಿಮಗೆ ತಾಳ್ಮೆಯಿಲ್ಲದಿದ್ದರೆ....ನೀವೇ ಮೊದಲ ಏಟನ್ನು ಹೊಡೆಯಿರಿ. ನಾನು ಸುಸಂಸ್ಕೃತನಾಗಿದ್ದೂ ಪಶುವಿನಂತೆ ವರ್ತಿಸಲು ಮೊದಲು ಪ್ರಾರಂಭಿಸುವುದಿಲ್ಲ....ನನ್ನ ಬಳಿ ಇರುವುದು ಒಂದೇ ಒಂದು ಗುಣ. ಪಶುವಿಗೆ ಪಶು, ನಾಗರೀಕನಿಗೆ ನಾಗರೀಕ, ಹೂವಿಗೆ ಹೂವು, ಕಲ್ಲಿಗೆ ಕಲ್ಲು!" ಎಂದು ಫೂತ್ಕರಿಸಿ ಅವನ ಕೈಯನ್ನು ಝಾಡಿಸಿ ಕಿತ್ತೆಸೆದ. ವರದ ಎರಡು ಹೆಜ್ಜೆ ತತ್ತರಿಸಿ ನಿಂತ.

ಆಗ ಶಾಂತ, ರಾಜಣ್ಣನ ಕೈಹಿಡಿದು, ವರದನ ಕಡೆಗೊಮ್ಮೆ ಬುಸುಗುಟ್ಟಿ ನೋಡಿ, ಠೀವಿಯಿಂದ, "ಬನ್ನಿ ರಾಜು ....ಇಲ್ಲೇ ಎಷ್ಟು ಹೊತ್ತು ಈ ಜನಗಳಿಗೆ ಉತ್ತರ ಕೊಡುತ್ತಿರುವುದು........ ಮನೆಗೆ ಹೋಗೋಣ ನಡೆಯಿರಿ ...." ಎಂದಳು. ವರದ ಅವಳನ್ನೇ ನುಂಗಿ ಬಿಡುವವನಂತೆ ನೋಡಿದ. ರಾಜಣ್ಣ ಮತ್ತು ಶಾಂತ ಅವನನ್ನೊಮ್ಮೆ ಸೆಣಸಿನಿಂದ ನೋಡಿ, ಮನೆಯ ಕಡೆಗೆ ತಿರುಗಿ ಅಡಿಯಿಟ್ಟರು.

ವರದ ಅವರ ಹಿಂದೆಯೇ ಎರಡು ಹೆಜ್ಜೆ ಬಂದ.

"ಏಯ್! ಶಾಂತಿ.... ನಿಲ್ಲೇ! ಅವನ ಕೈ ಬಿಡೇ! .... ಇಲ್ಲ ದಿದ್ದರೆ ನೋಡು!!" ಎಂದು ಗರ್ಜಿಸಿದ. ಶಾಂತ, ತುಳಿಸಿಕೊಂಡ ನಾಗಿಣಿ ಹೆಡೆಯೆತ್ತುವಂತೆ ನಿಂತು ಫೂತ್ಕರಿಸಿದಳು.

"ಕೈ ಬಿಡೋಲ್ಲ!....ಏನು ಮಾಡುವ ಹಾಗಿದ್ದೀಯ?"

"ನಿನ್ನ....ನಿನ್ನ ಚರ್ಮ ಸುಲಿದುಬಿಡ್ತೇನೆ!"

ಎಂದು ವರದ ಹಲ್ಲುಕಡಿದ. ಶಾಂತ, "ನಾನೇನು ಕಿತ್ತಲೆ ಹಣ್ಣಲ್ಲ....!" ಎಂದು ಗುಡುಗಿದಳು.

ವರದ ಅವಳ ಮೇಲೆ ಕೈ ಎತ್ತಿದ್ದ. ಅವಳ ಮುಖದ ಮೇಲೆ ಬೀಳುವ ಏಟನ್ನು ರಾಜಣ್ಣ ತಡೆದು, ವರದನ ಬಲಗೈಯನ್ನು ಭದ್ರ ವಾಗಿ ಕೆಳಗೆಳೆದು ಹಿಡಿದ. "ಬಿಡೋ.... ಸೂ....ಮಗನೆ!" ಎಂದು ವರದ ತನ್ನ ಎಡಗೈಯಲ್ಲಿ ರಾಜಣ್ಣನ ಮುಖಕ್ಕೆ ಹೊಡೆಯಲು ಕೈ

ಬೀರಿದ. ರಾಜಣ್ಣ ಆ ಕೈಯನ್ನೂ ಹಿಡಿದು, ಕೆಳಗೆಳೆದು ಭದ್ರವಾಗಿ ಹಿಡಿದುಕೊಂಡ. ಈಗ ವರದನ ಎರಡು ಕೈಗಳೂ ರಾಜಣ್ಣನ ವಜ್ರ ಮುಷ್ಟಿಯಲ್ಲಿ ಸಿಕ್ಕಿಬಿದ್ದಿದ್ದುವು. ರಾಜಣ್ಣ ಅವನಿಗೊಂದು ಏಟನ್ನೂ ಬಿಗಿಯಲಿಲ್ಲ. ಅವನು ತನಗೊಂದು ಏಟನ್ನು ಬಿಗಿಯಲೂ ಅವಕಾಶ ಕೊಡಲಿಲ್ಲ. ಅವನನ್ನೇ ಹಲ್ಲುಕಚ್ಚಿ ನೋಡುತ್ತಾ, ಕ್ಷಣಕ್ಷಣಕ್ಕೂ ತನ್ನ ಮುಷ್ಟಿಯನ್ನು ಬಿಗಿಗೊಳಿಸುತ್ತಾ ಹೋದ. ನೋವಿನಿಂದ ವರದನ ಎರಡು ಕೈಗಳೂ ನಿಶ್ಚೇಷ್ಟಿತವಾದುವು. ಅವನು ಅಪಾಯ ಸ್ಥಳಗಳಿಗೆ ಮುಂಡಿ ಹಣೆಯಿಂದ ಹೊಡೆಯಬಹುದು ಎಂದು ಆ ಕಡೆಗೂ ಗಮನಕೊಡುತ್ತಿದ್ದ. ಕಟ್ಟಕಡೆಯ ಈ ಅಹಿಂಸಾತ್ಮಕ ಪಟ್ಟಿನ ಪ್ರಭುತ್ವದಿಂದ ಆ ದುರ್ಬಲ ಹಿಂಸಾಪಿಪಾಸಿಗೆ ತನ್ನ ದೌರ್ಬಲ್ಯದ ಅರಿವುಂಟುಮಾಡಿ, ವಿಕಾರ ಪಶುವರ್ತನೆಯನ್ನು ತಡೆಗಟ್ಟಲು ಸಂಕಲ್ಪ ಮಾಡಿದ. ವರದನ ಮುಖ ಜಜ್ಜಿಹೋಗುವಂತೆ ಒಂದು ಗುದ್ದು ಇಕ್ಕಬೇಕೆಂದು ಚಪಲವಾದರೂ ಶಕ್ತಿಸಂಯಮದಿಂದ ಬಲವಾಗಿನಿಂತ.

ಆಗ ವರದನ ಇಬ್ಬರು ಸಂಗಾತಿಗಳು ತೂರಾಡಿಕೊಂಡು, ರಾಜಣ್ಣನ ಮೇಲೆ ಬೀಳಲು ಬಂದರು. ಅದನ್ನು ಕಂಡ ಶಾಂತ ಮಿಂಚಿನಂತೆ ಒಬ್ಬನ ಬಳಿಗೆ ಹಾರಿ, ಅವನ ಕಪಾಳಕ್ಕೆ ಛಟೀರನೆ ಒಂದು ಏಟು ಬಿಗಿದು, ಅವನನ್ನೇ ಸುಟ್ಟುಬಿಡುವವಳಂತೆ ನೋಡಿ, "ಏಯ್!.... ಯಾರು ನೀನು ನನ್ನ ಸ್ವಂತ ವಿಚಾರದಲ್ಲಿ ತಲೆ ಇರಿಸೋಕೆ ?........ ತೊಲಗು ಇಲ್ಲಿಂದ....ಹೇಡಿ !" ಎಂದು ಫೂತ್ಕರಿಸಿದಳು.

ಅವನ ಜಂಘಾಬಲವೇ ಉಡುಗಿಹೋಯಿತು. ಅವನ ಜೊತೆಗಾರರೆಲ್ಲರೂ ಸಿಡಿಲೊಡೆದವರಂತೆ ನಿಂತು ಶಾಂತಳನ್ನೇ ಬೆಕ್ಕಸಬೆರಗಾಗಿ ನೋಡುತ್ತಾ ಮಾನಕ್ಕೆ ಅಂಜಿ ನಿಂತಲ್ಲೇ ನಿಂತರು.

ರಾಜಣ್ಣ ವರದನಿಗೆ ತನ್ನ ತೋಳಿನ, ಮುಷ್ಟಿಯ ಬಲದ ಅರಿವುಂಟುಮಾಡಿಕೊಟ್ಟಿದ್ದ. ವರದ ಆಗಾಗ ತಲೆ ಎತ್ತಿ ನೋವು ಹಗೆತನಗಳಿಂದ ರಾಜಣ್ಣನ ಮುಖ ನೋಡುತ್ತಿದ್ದ. ರಾಜಣ್ಣ ಅವುಡುಗಚ್ಚಿದ್ದರೂ ದ್ವೇಷದ ನೋಟವನ್ನು ಕಣ್ಣಿನಲ್ಲಿ ಕಾರುತ್ತಿರಲಿಲ್ಲ. ಕನಿಕರ ಬುದ್ಧಿವಾದದ ನೋಟ ಬೀರುತ್ತಿದ್ದ. ಆದರೆ ಕೈಯನ್ನು

ಮಾತ್ರ ಅತ್ತಿತ್ತ ಅಲುಗಾಡಿಸಲೂ ಆಸ್ಪದವೀಯುತ್ತಿರಲಿಲ್ಲ. ಅದನ್ನು ಕಂಡು ವರದ ಅವನ ನೋಟದೊಡನೆ ನೋಟ ಬೆರೆಸುವುದನ್ನು ನಿಲ್ಲಿಸಿದ. ಆಗ ರಾಜಣ್ಣ, "ರೀ, ಮಿ. ವರದರಾಜನ್, ನಿಮಗೂ ಬುದ್ಧಿ ಇಲ್ಲವೆ? ನಿಮ್ಮ ಕುಟುಂಬದ ಗೌರವ ಹೀಗೆ ಸಾರ್ವಜನಿಕ ರಸ್ತೆಯಲ್ಲಿ ಹಾಳಾಗಬೇಕೆ? ಮನೆಗೆ ಬನ್ನಿ. ನಿಮ್ಮ ತಂದೆ ತಾಯಿ ಗಳೊಡನೆ ಕುಳಿತು ಈ ವಿಚಾರ ಚರ್ಚಿಸೋಣ. ಒಂದು ತೀರ್ಮಾನಕ್ಕೆ ಬರೋಣ. ಈ ಅನಾಗರೀಕ ವರ್ತನೆ ದಯವಿಟ್ಟು ನಿಲ್ಲಿಸಿ. ಈಗ ನನ್ನೊಡನೆ ಮನೆಗೆ ಬನ್ನಿ" ಎಂದು ಅವನನ್ನೇ ಗಂಭೀರ, ಸ್ನೇಹಪರ, ಬಂಧುತ್ವದ ನೋಟದಿಂದ ನೋಡಿ, ಅವನು ಕೈಬಿಟ್ಟ.

ವರದ ತನ್ನ ಕೈಗಳನ್ನು ಆಗಾಗ ಮುಟ್ಟಿನೋಡಿಕೊಳ್ಳುತ್ತಾ, ಅಲ್ಲೇ ಅನಿಶ್ಚಿತ ಮನೋಭಾವದಲ್ಲಿ ನಿಂತ. ಆಗ ರಾಜಣ್ಣ, ಅವನ ಭುಜದ ಮೇಲೆ ಗೆಳೆತನದಿಂದ ಕೈ ಇಟ್ಟು, "ಈಗ ಮನೆಗೆ ಬರುವಿರಿ, ಅಲ್ಲವೇ? ಬನ್ನಿ ಹೋಗೋಣ. ಗೌರವ ಕುಲಗಳಲ್ಲಿ ಹುಟ್ಟಿ, ಬೆಳೆದು, ವಿದ್ಯೆ ಬುದ್ಧಿ ಕಲಿತದ್ದಕ್ಕಾದರೂ ಹಾಗೆ ಸಭ್ಯರಂತೆ ವರ್ತಿಸೋಣ, ಬನ್ನಿ!" ಎಂದು ಅವನ ತೋಳು ಹಿಡಿದು ಆಹ್ವಾನಿಸಿದ.

ವರದ, ರಾಜಣ್ಣನನ್ನೊಮ್ಮೆ ತಲೆಯೆತ್ತಿ ನೋಡುತ್ತಾ ಮನಸ್ಸಿಲ್ಲದ ಮನಸ್ಸಿನಿಂದ ಅವನೊಡನೆ ಬಂದ. ಶಾಂತಳೂ ರಾಜಣ್ಣನ ಪಕ್ಕದಲ್ಲಿ ಆಗಾಗ ಹಿಂದೆ ತಿರುಗಿ ನೋಡುತ್ತಾ, ಬರುತ್ತಿದ್ದಳು.

ವರದನ ಸಂಗಾತಿಗಳು ರಾಜಣ್ಣನನ್ನೇ ಹಗೆತನದಿಂದ ನೋಡುತ್ತಾ, ರಸ್ತೆಯ ಅಂಚಿಗೆ ಬಂದು ನಿಂತರು. ಒಬ್ಬ "ಸೂಳೇಮಗ ನರಿ ಮುಖ ನೋಡಿ ಬಂದಿದ್ದ" ಎಂದ. ಮತ್ತೊಬ್ಬ "ಈ 'ಎ. ಬಿ.' ಗಳ ತಲೆ ಒಡೀಬೇಕು" ಎಂದ. ಮೂರನೆಯವನು "ಕಳ್ಳಸೂಳೇಮಕ್ಕಳು ಬ್ರಾಹ್ಮಣರು ಭೂಮಿ ಮೇಲೂ ಇಲ್ಲದಂತೆ ಮಾಡ್ತಾರಂತೆ ನೋಡ್ತೀವಿ" ಎಂದ. ನಾಲ್ಕನೆಯವನು "ನಮ್ಮ ಭಗವಾ ಝಂಡ ದೆಹಲಿ ಮೇಲೆ ಹಾರಾಡುತ್ತೆ. ಅಲ್ಲೀವರೆಗೂ ಈ ನನ್ನ ಮಕ್ಕಳ ದರ್ಬಾರ್" ಎಂದ. ಕೊನೆಯವನು "ಸ್ವಲ್ಪ ತಡಿಯೋ, ಪಾಕಿಸ್ತಾನ

ಯುದ್ಧಕ್ಕೆ ಬೀಳಲಿ. ಆಗ ನಮಗೆ ಶುಕ್ರದೆಸೆ" ಎಂದ.

ರಾಜಣ್ಣ ಆ ಮಾತುಗಳನ್ನು ಕೇಳುತ್ತಾ, ತನ್ನಲ್ಲಿ ತಾನು ನಗುತ್ತಿದ್ದ. ಆದರೆ ಅವನ ಗಮನವೆಲ್ಲಾ ಮುಂದೆ ಕೇಶವಯ್ಯಂಗಾರರ ಸಮ್ಮುಖದಲ್ಲಿ ನಡೆಯುವ ಮಾತುಕತೆಗಳ ಕಡೆಗೇ ಕೇಂದ್ರೀಕೃತ ವಾಗಿತ್ತು.

ಮನೆ ಸಮೀಪಿಸಿದ ಕೂಡಲೇ ಶಾಂತ ಮೊದಲು ವೇಗ ವೇಗವಾಗಿ ಮನೆಗೆ ಧಾವಿಸಿ ಹೋದಳು. ಅವಳು ಮನೆಗೆ ಹೋದಾಗ ಕೇಶವಯ್ಯಂಗಾರರು ಆರಾಮಕುರ್ಚಿಯ ಮೇಲೂ, ಅವರ ಪತ್ನಿ ನೆಲದ ಮೇಲೂ ಮನೆಯ ಹೊರಗಡೆಯೇ ಕುಳಿತಿದ್ದರು. ಶಾಂತ ಅವರೊಡನೆ ಮಾತಾಡದೆ ನೇರವಾಗಿ ತನ್ನ ರೂಮಿಗೆ ಹೋಗಿ ಹಾಸಿಗೆಯಮೇಲುರುಳಿದಳು. ಅವಳಿಗೆ ಎಲ್ಲಿಲ್ಲದ ದುಃಖ-ಅವಮಾನ ಎದೆಯಲ್ಲೊತ್ತಿ ಬಂತು. ಒಡೆದ ಅಣೆಕಟ್ಟೆಯಂತೆ ಅವಳ ಕಣ್ಣು ಗಳಿಂದ ಕಂಬನಿ ನೆಗೆದು ಬಂದುವು. ಅವಳು ಬಾಯಿಗೆ ಸೆರಗು ತುರುಕಿಕೊಂಡು ರೋಧಿಸತೊಡಗಿದಳು. ಶ್ಯಾಮಲ ಅವಳ ಮುಂದೆ ಬಂದು ದಿಙ್ಮೂಢಳಾಗಿ ಕುಳಿತಳು.

ಅವಳ ಬಿಕ್ಕುವಿಕೆಯನ್ನು ಕೇಳಿ, ಮನೆಯೊಳಕ್ಕೆ ಹೋಗಲು ಮೇಲೆದ್ದ ಶಾಂತಳ ತಾಯಿ, ಬೀದಿಯಲ್ಲಿ ತಮ್ಮ ಮನೆಯ ಕಡೆಗೇ ಬರುತ್ತಿದ್ದ ಜನರ ಗುಂಪನ್ನು ಕಂಡು ಗಾಬರಿಯಾಗಿ ನಿಂತು, ಪತಿಗೆ ತಿಳಿಸಿದರು. 'ಏನೋ ಪ್ರಮಾದ ಸಂಭವಿಸಿದೆ' ಎಂದು ಇಬ್ಬರಿಗೂ ಸ್ಪಷ್ಟವಾಯಿತು.

ಗುಂಪು ಮನೆಯ ಮುಂದೆ ಬಂತು. ವರದ ಗೇಟಿನ ಬಳಿ ಯಿಂದಲೇ ಓಡಿ, ಮನೆಯೊಳಕ್ಕೆ ಹಾರಿ ಬಂದ. ಉದ್ಯಾನದಲ್ಲಿ ಒಂಟಿಯಾಗಿ ಬರುತ್ತಿದ್ದ ರಾಜಣ್ಣನನ್ನು ಕಳ್ಳನಂತೆ ಕರೆತರಲು ವರದನ ಇಬ್ಬರು ಸಂಗಾತಿಗಳು ಮುಂದೆ ಬಂದು ಅವನ ಎರಡು ಕೈಗಳನ್ನೂ ಹಿಡಿದರು. ದೇಹ ಸೆಟೆಸಿ, ಅವುಡು ಕಚ್ಚಿದ ರಾಜಣ್ಣ ಎರಡು ಮುಷ್ಟಿಗಳನ್ನೂ ಬಿಗಿಮಾಡಿ ಮೇಲೆತ್ತಿ ಝಾಡಿಸಿದ. ಕೈಹಿಡಿ ದವರು ಕೈಬಿಟ್ಟು, ಪಕ್ಕಕ್ಕೆ ಸರಿದರು. ತನ್ನೆರಡು ಮುಷ್ಟಿಗಳನ್ನೂ

ಅವರಿಗೆ ತೋರಿಸುತ್ತಾ "ನನ್ನ ಮೈ....ಇನ್ನೊಮ್ಮೆ ಮುಟ್ಟಿ... .... ಒಬ್ಬೊಬ್ಬನ ಹಲ್ಲು ಉದುರಿಸಿಬಿಡ್ತೀನೆ! .... ಯಾರ ಮನೆ ಎಂದು ಒಳಗೆ ಬರುತ್ತಿದೀರಿ?....ನಡೀರಿ.... ಕಾಂಪೌಂಡಿನ ಹೊರಗೆ!" ಎಂದು ಘರ್ಜಿಸಿ, ಒಂದು ಕ್ಷಣ ಅವರನ್ನೇ ದುರುಗುಟ್ಟಿನೋಡಿದ.

ಅವರು ನಿಂತಲ್ಲೇ ನಿಂತರು. ರಾಜಣ್ಣ ಹಿಂತಿರುಗಿ ನೋಡ ದಂತೆ ಗಂಭೀರನಾಗಿ ಶಾಂತಳ ಮನೆಯ ಮೆಟ್ಟಿಲುಗಳನ್ನೇರಿ ಬಂದ. ಅಷ್ಟರಲ್ಲಿ ವರದನನ್ನು ಹಿಡಿದ ಕೇಶವಯ್ಯಂಗಾರರು, ದೈನ್ಯ ಕಾತುರತೆ ಯಿಂದ, "ಏನೋ ಇದು!....ಏನೋ ಇದೆಲ್ಲಾ....?" ಎಂದು ಕೇಳು ತ್ತಿದ್ದರು. ಅವನು ಅದನ್ನು ಲೆಕ್ಕಿಸದೆ ಹುಲಿಯಂತೆ, "ಶಾಂತಾ.... ಎಲ್ಲಿ! .... ಎಲ್ಲಿದಾಳೆ ಅವಳು! ........ ನನ್ನ ಕೈಬಿಡು" ಎಂದು ಆರ್ಭಟಿಸುತ್ತಿದ್ದ.

ರಾಜಣ್ಣ ಬಂದೊಡನೆಯೇ ಅವರು ವರದನ ಕೈಯನ್ನು ಬಲ ವಾಗಿ ಜಗ್ಗಿ "ಏನೋ....ಇದು!....ಹೇಳು" ಎಂದು ಕೂಗಿದರು. ಆಗ ಅವನು ರಾಜಣ್ಣನ ಕಡೆಗೆ ಕೈ ತೋರಿಸುತ್ತಾ, ಅವನಿಗೆ ಅವಾಚ್ಯ ಶಬ್ದಗಳನ್ನು ಬಳಸುತ್ತಾ, ಶಾಂತಳೊಡನೆ ರಾಜಣ್ಣ ಬರುತ್ತಿದ್ದು ದನ್ನೂ ಅವರು ಒಬ್ಬರೊಬ್ಬರ ಕೈ-ಹಿಡಿದುಕೊಂಡಿದ್ದುದನ್ನೂ ಒಂದಕ್ಕೆ ಹತ್ತುಮಾಡಿ ಹೇಳಿದ. ರಾಜಣ್ಣ ಅವುಡುಗಚ್ಚಿ ವರದನನ್ನೇ ನೋಡುತ್ತಿದ್ದ.

ಕೇಶವಯ್ಯಂಗಾರರು ಒಂದು ಕ್ಷಣ ಯೋಚಿಸಿ ತಲೆಹೊರಳಿಸಿ ದರು. ಮನೆಯಲ್ಲೆಲ್ಲಾ ನಿಂತಿದ್ದ ವರದನ ಸಂಗಾತಿಗಳನ್ನು ಕುರಿತು, "ದಯವಿಟ್ಟು ಹೊರಟುಹೋಗಿ.... ಮನೆಯಿಂದ ಮಾತ್ರವಲ್ಲ ....... ಕಾಂಪೌಂಡಿನಿಂದ ಆಚೆಗೆ ಹೋಗಿ....ದಯವಿಟ್ಟು ಅಲ್ಲೂ ನಿಲ್ಲಬೇಡಿ ....ನಿಮ್ಮ ನಿಮ್ಮ ಮನೆಗಳಿಗೆ ಹೋಗಿ" ಎಂದು ಅವರ ಭುಜಗಳನ್ನು ಹಿಡಿದು ತಳ್ಳಿದರು, ಅವರೆಲ್ಲರೂ ರಾಜಣ್ಣನನ್ನು ತಮ್ಮ ದೃಷ್ಟಿ ಯಿಂದಲೇ ಬೆದರಿಸುತ್ತಾ ಬಾಗಿಲಬಳಿ ದೊಣ್ಣೆಗಳನ್ನು ನೆಲಕ್ಕೆ ಕುಟ್ಟಿ ಹೊರಕ್ಕೆ ಹೊರಟರು.

ಕೇಶವಯ್ಯಂಗಾರರು ರಾಜಣ್ಣನ ಎದುರಿಗೆ ಬಂದು ನಿಂತು,

ವಿಷಾದ ಕಂಠದಲ್ಲಿ, "ಹೀಗಾದದ್ದು ನಿಜವೇ ರಾಜು....?" ಎಂದರು.

ಅವರ ಗಂಟಲಿನ ದುಃಖ ರಾಜಣ್ಣನ ಎದೆಯನ್ನು ಕಲಕಿತು. ವಿನಯಪರ, ಹಾಗೂ ಸ್ಥಿರ ಕಂಠದಲ್ಲಿ, "ಹೌದು ಸರ್, ನಿಮ್ಮ ಮಗಳ ಜೊತೆ ತಿರುಗಾಡಲು ಹೋದದ್ದು ನಿಜ" ಎಂದ. ಅದನ್ನು ಕೇಳಿ, ಶಾಂತಳ ತಾಯಿಯ ಕಣ್ಣಿನಲ್ಲಿ ನೀರು ಹನಿದುವು. ಗಂಭೀರ ವಾಗಿ ನಿಂತು ಒಂದು ಹಸ್ತದಲ್ಲಿ ಇನ್ನೊಂದು ಹಸ್ತವಿಟ್ಟು ಮರ್ದಿಸಿ ಕೊಳ್ಳುತ್ತಾ ಆಲೋಚಿಸುತ್ತಿದ್ದ ಪತಿಯನ್ನು ನೋಡಿ, ಗದ್ಗದ ಕಂಠದಲ್ಲಿ, "ನಾನು ಹೇಳುತ್ತಾ ಇರಲಿಲ್ಲವೆ ನಿಮಗೆ .... ಈಗ ಅನುಭವಿಸಿ!" ಎಂದು ಅಳುವುದಕ್ಕೆ ಪ್ರಾರಂಭಿಸಿದರು.

ರಾಜಣ್ಣನಿಗೆ ಅವರನ್ನು ಕಂಡು ಕನಿಕರ ಉಕ್ಕಿ ಬಂತು. ದುಃಖ ಒತ್ತರಿಸಿ ಬಂದು ಗಂಟಲು ಉಬ್ಬಿತು. ತೋರಲಾರದ ಸಂಕಟ ಹೊತ್ತು ನಿಂತಿದ್ದ.

"ಕೊನೆಗೂ ನಮ್ಮ ಹುಡುಗಿಯನ್ನು ಹಾಳು ಮಾಡಿ ಬಿಟ್ಟೆಯಪ್ಪ....ನೀನು!" ಎಂದು ಶಾಂತಳ ತಾಯಿ ಅಳುತ್ತಿದ್ದರು.

"ಇಲ್ಲ....ನೀವು ತಪ್ಪು ತಿಳಿದಿರುವಿರಿ....ನಾನು ಶಾಂತಳನ್ನು ಹಾಳು ಮಾಡಿಲ್ಲ. ಹಾಳು ಮಾಡುವುದಿಲ್ಲ. ನಿಮ್ಮ ಮೇಲೆ ಆಣೆಯಿಟ್ಟು ಹೇಳುತ್ತೇನೆ" ಎಂದು ಹೇಳುವಷ್ಟರಲ್ಲಿ ಅವನಿಗೆ ಸಾಕು ಸಾಕಾಗಿ ಹೋಯಿತು.

"ನಿನಗೇನಪ್ಪಾ ಈಗ? ಏನು ಬೇಕಾದರೂ ಹೇಳಬಹುದು. ನಮ್ಮ ಜಾತಿಯ ಹುಡುಗರಿಗೆಲ್ಲಾ ಗೊತ್ತಾಗಿ ಹೋಯ್ತು. ಇನ್ನು ಜಾತಿಯವರ್ಯಾರೂ ನಮ್ಮ ಮನೆಗೆ ಕಾಲಿಡೋಲ್ಲ....ನಮ್ಮ ಹುಡುಗಿ ಕೈ ಹಿಡಿಯುವವರು ಇನ್ಯಾರು?" ಎಂದು ರೋದಿಸಿದರು.

ರಾಜಣ್ಣ ತನ್ನಲ್ಲಿ ತಾನೇ 'ನಾನೇ ಆಗುತ್ತೇನೆ' ಎಂದು ಕೊಳ್ಳಬೇಕಾಯಿತು. ಅವನಿಗೆ ಆ ಉತ್ತರ ಹೇಳಲು ಬಾಯೇ ಬರಲಿಲ್ಲ. ಅವನ ಇಡೀ ವ್ಯಕ್ತಿತ್ವವೇ ಆ ತೀರ್ಮಾನದಲ್ಲಿ ಮಿಂದಿದ್ದರೂ, ಆ ಮಾತನ್ನು ಶಾಂತಳ ಮಾತೆಯೆದುರು ಉಚ್ಚರಿಸಲಾಗಲಿಲ್ಲ. ಎಷ್ಟೇ ಆಗಲಿ, ಅವರು ಸಂಪ್ರದಾಯ ಜೀವಿ. ಯಥಾಸ್ಥಿತಿಯ ಕುರುಡು

ಉಪಾಸಕಿ ನನ್ನ ನವೀನ ಭಾವನೆಯ ಉತ್ತರ, ಅವರ ಎದೆಯ ಮೇಲೆ ಬರೆಯೆಳೆದಂತಾಗಬಹುದು ಅದರಿಂದ ನನ್ನ ಶಾಂತಳ ಇಡೀ ಯೋಜನೆಗೇ ಧಕ್ಕೆ ಬರಬಹುದು ಇವರಿಗೆ ನನ್ನ ತೀರ್ಮಾನವನ್ನು ಇಂಥ ಸ್ಥಿತಿಯಲ್ಲಿ ತಿಳಿಸುವುದು ಒಂದು ತಪ್ಪು ಹೆಜ್ಜೆ. ಮೊದಲು ಕೇಶವಯ್ಯಂಗಾರರಿಗೆ ಆ ನಿರ್ಧಾರವನ್ನು ತಿಳಿಸಬೇಕು. ಅವರ ಒಪ್ಪಿಗೆ ಪಡೆದ ನಂತರ ಶಾಂತಳ ತಾಯಿಯ ಒಪ್ಪಿಗೆಗೆ ಅವರ ನೆರವಿನಿಂದ ಪ್ರಯತ್ನಿಸಬೇಕು ಎಂದುಕೊಂಡು, ಶಾಂತಳ ತಾಯಿಯ ಕಡೆ ನೋಡುತ್ತಾ "ನೀವು ದಯವಿಟ್ಟು ಅಳಬೇಡಿ ಯಾವ ಪ್ರಮಾದವೂ ನಡೆದಿಲ್ಲ. ವರದ ಧೂಳಿನಷ್ಟು ಪುಟ್ಟ ವಿಷಯವನ್ನು ಬೆಟ್ಟದಷ್ಟು ದೊಡ್ಡದು ಮಾಡಿ ಹೇಳಿದ್ದಾರೆ ನೀವು ನನ್ನನ್ನು ನಂಬಿ" ಎಂದು ಮೊರೆಯಿಟ್ಟ.

ಕೇಶವಯ್ಯಂಗಾರರು ಅಳುತ್ತಿದ್ದ ಪತ್ನಿಯ ಕಡೆಗೆ ಅಸಮಾಧಾನದಿಂದ ತಿರುಗಿ, ಕೋಪದಿಂದ, "ಆಕಾಶ ತಲೆಯ ಮೇಲೆ ಕಳಚಿ ಬಿದ್ದಂತೆ ಮಾಡುತ್ತೀಯಲ್ಲೇ ಸುಮ್ಮನೆ ಇರು!" ಎಂದು ಕೂಗಿದರು. ಶಾಂತಳ ತಾಯಿ, ಒಳಮನೆಗೆ ಎದ್ದು ಹೋದರು. ಅವರ ಮುಖ ಯೋಚನೆ, ಅವಮಾನ, ದುಃಖದಿಂದ ವಿಕಾರವಾಗಿತ್ತು.

ಕೇಶವಯ್ಯಂಗಾರರು ಒಂದು ನಿಟ್ಟುಸಿರುಬಿಟ್ಟು, ರಾಜಣ್ಣನ ಭುಜ ಮುಟ್ಟಿ, "ಕುಳಿತುಕೋ ರಾಜು" ಎಂದು ಒಂದು ಕುರ್ಚಿ ತೋರಿದರು. ಅವರೂ ವಿರಾಮ ಕುರ್ಚಿಯನ್ನು ಹೊರಗಿನಿಂದ ಒಳಕ್ಕೆ ತರಲು ಹೊರಟರು. ರಾಜಣ್ಣನೇ ಅದನ್ನು ತಂದು ಒಳಗಿಟ್ಟ.

ಇಬ್ಬರೂ ಕುಳಿತುಕೊಂಡರು. ಶಾಂತಳ ಕೊಠಡಿಯಿಂದ ವರದನ ಹೀನಾಮಾನ ಬೈಗಳು, ಹೊಲಸು ಮಾತಿನ ಸುರಿಮಳೆಯಾಯಿತು. ಕೇಶವಯ್ಯಂಗಾರರು ಕುರ್ಚಿಯಲ್ಲಿ ಸೆಟೆದು ಕುಳಿತರು. ಶಾಂತಳ ರೂಮಿನಿಂದ ನಾಲ್ಕಾರು ಏಟುಗಳ ಶಬ್ದ ಕೇಳಿಬಂತು. ರಾಜಣ್ಣ ನಿರ್ಬಂಧಿತ ಪುರುಷತ್ವದಿಂದ ಅವುಡುಕಚ್ಚಿದ. ಕೇಶವಯ್ಯಂಗಾರರು 'ವರದಾ' ಎಂದು ಕೂಗುತ್ತಾ ಒಳಗೆ ಓಡಿ ಅವನನ್ನು ಎಳೆದು ತಂದರು. ಅವರಿಗೆ ಮಿತಿಮೀರಿದ ಕೋಪ ಬಂದಿತ್ತು. ಉದ್ರೇಕ

ದಿಂದ ಬಿರಿಯುವ ಗಂಟಲಲ್ಲಿ,

"ಅವಳೇನು ಮಾಡಿದ್ದಳೋ ನಿನಗೆ! ಅವಳ ಮೇಲೇನಾದರೂ ನಿನ್ನ ಹೊಲಸು ಕೈ ಇಡು.... ನಿನ್ನನ್ನು.... !" ಎಂದು ಹಲ್ಲು ಕಡಿದು ಮಹತ್ಪ್ರಯತ್ನದಿಂದ ಸ್ತಬ್ಧರಾದರು. ಮಗನನ್ನು ಹೊಡೆಯಲು ಮೇಲೇರಿದ್ದ ಅವರ ಕೈ ನಡುಗುತ್ತಾ, ನಿಧಾನವಾಗಿ ಕೆಳಗಿಳಿಯಿತು. ಅವರ ಇಡೀ ದೇಹವೇ ಉದ್ವೇಗದಿಂದ ಕಂಪಿಸುತ್ತಿತ್ತು.

ಆಗ ವರದ ಅನಿರೀಕ್ಷಿತವಾಗಿ ತಂದೆಯ ಮುಖಕ್ಕೆ ಮುಖ ಇಟ್ಟು ಹೊಲಸು ಧ್ವನಿಯಲ್ಲಿ,

"'ನನ್ನನ್ನು' ಎಂದು ಬಾಯಿ ಮುಚ್ಚಿಕೊಂಡ್ಯಲ್ಲೋ! ನನ್ನನ್ನು ನೀನು ಏನು ಮಾಡುವಹಾಗಿದ್ದೀಯ ಮುದಿಯ! ಚಂಡಾಲ! ನೀನೊಬ್ಬ ಬ್ರಾಹ್ಮಣನೇ! ನಿನ್ನ ಮಗಳನ್ನು ಕೆಡಿಸಿದ ಶೂದ್ರಸೂಳೇ ಮಗನಿಗೆ ಕುರ್ಚಿ ಹಾಕಿ ಸಮ-ಸಮಾನವಾಗಿ ಕುಳಿತಿರುವೆಯಲ್ಲಾ! ನಿನ್ನ ಹಿಂದುತ್ವನನ್ನು ಸುಡಬೇಕು. ನಿನ್ನ ತಲೆ ಕಡಿದು ಚೆಂಡಾಡ ಬೇಕು! ಮತ್ತೆ 'ನನ್ನನ್ನು' ಎಂದು ಗದರಿಸ್ತೀಯಾ?" ಎಂದು ತಂದೆಯ ಕಪಾಳಕ್ಕೆ ಹೊಡೆದುಬಿಟ್ಟ!

ಚಕಿತನಾದ ರಾಜಣ್ಣ ಎದ್ದು ನಿಂತ. ಶಾಂತಳ ತಾಯಿ ಒಳ ಮನೆಯಿಂದ ಮಿಂಚಿನಂತೆ ಓಡಿಬಂದರು. "ಅಯ್ಯೋ ಪಾಪಿ!" ಎಂದು ಚೀತ್ಕರಿಸಿ, ಅವನ ಕೈಹಿಡಿದು ದೂರ ಎಳೆದುಕೊಂಡರು! ಅವನ ಕಪಾಳಕ್ಕೊಂದು ಬಿಗಿಯುತ್ತಾ, "ಯಾವ ಶಾಪ ತಿಂದು ನಿನ್ನನ್ನು ಹೆತ್ತೆನೋ ನಾನು! ಅವರ ಮೇಲೇ ನಿನ್ನ ಕೈ! ಅಂಥ ಅಪರಾಧ ಏನು ಮಾಡಿದ್ದರು ಅವರು? ಒಳ್ಳೇ ಕತ್ತೆಯಾದರೂ ಅವರ ಅನ್ನ ತಿನ್ನುತ್ತಿದ್ದೆ, ಬಟ್ಟೆ ಉಡುತ್ತಿದ್ದೆ, ದುಡ್ಡು ಕದೀತಿದ್ದೆ, ನನ್ನ ಒಡವೆ ಗಳನ್ನು ಕದ್ದೆ, ಮನೆ ಅಕ್ಕಿ-ಬೇಳೆಯನ್ನು ಕದ್ದೆಯಲ್ಲೋ ನಿನ್ನ ಆ ಸುಡುಗಾಡು ಸಂಘಕ್ಕೆ ಕೊಡೋಕೆ! ನಿನ್ನ ಮುಖ ಸುಡ! ನಿನಗೆ ಮೀಸೆ ಹೊತ್ತು ಜೀವಿಸೋಕೆ ನಾಚಿಕೆಯಾಗೊಲ್ಲವೆ? ನಡೀ, ನನ್ನ ಮನೆಯಲ್ಲಿರಬೇಡ. ನಡೀ ಹೊರಗೆ! ನಾಯಿ!!" ಎಂದು ಅವನನ್ನು ಬಾಗಿಲಬಳಿಗೆ ದೂಡಿದರು. ವರದ ತಾಯಿಯನ್ನೇ ಕೊಂದುಬಿಡು

ನವನಂತೆ ಒಮ್ಮೆ ನೋಡಿ, ಹೊಸಲಿನಿಂದ ಹೊರಕ್ಕೆ ಹೋಗಿ, ಮಿಂಚಿನಂತೆ ಹಿಂತಿರುಗಿ ನಿಂತ. ಅವನ ನೇತ್ರಗಳಲ್ಲಿ ದ್ವೇಷ ಪ್ರಜ್ವಲಿಸುತ್ತಿತ್ತು. ಅವನು ಒಂದೆರಡು ನಿಮಿಷ ರಾಜಣ್ಣನನ್ನೇ ಸುಟ್ಟು ಬೂದಿ ಮಾಡುವವನಂತೆ ನೋಡಿ, ದಢ-ದಢನೆ ಮೆಟ್ಟಿಲಿಳಿದು ಹೊರಗೆ ಧಾವಿಸಿದ.

ಅವನು ರಾತ್ರಿಯ ಕಗ್ಗತ್ತಲೆಯಲ್ಲಿ ಕರಗಿ ಕಣ್ಮರೆಯಾದುದನ್ನೇ ಅದುವರೆಗೂ ಎವೆಯಿಕ್ಕದೆ ನೋಡುತ್ತಿದ್ದ ಅವನ ತಾಯಿ, ನೆಲಕ್ಕೆ ಕುಸಿಯುತ್ತಾ ಮರುಕದ ಕ್ಷೀಣ ಸ್ವರದಲ್ಲಿ, ಕರುಳುಕಿತ್ತು ಬರುವಂತೆ, "ಅಯ್ಯೋ ವರದಾ!" ಎಂದು ತಮಗೆ ತಾವೇ ಕೂಗಿಕೊಂಡರು. ಕೈಯಲ್ಲಿ ಮುಖ ಮುಚ್ಚಿಕೊಂಡು ಬಿಕ್ಕಿ ಬಿಕ್ಕಿ ಅಳಲಾರಂಭಿಸಿದರು.

ಕೇಶವಯ್ಯಂಗಾರರು ದಿಙ್ಮೂಢರಾಗಿ ಕಲ್ಲಿನಂತೆ ನಿಂತಿದ್ದರು. ಐದಾರು ನಿಮಿಷಗಳಾದರೂ ನಿಂತಂತೆಯೇ ದಂಗುಬಡೆದು ನಿಂತಿದ್ದರು. ಅವರನ್ನು ಕಂಡು ರಾಜಣ್ಣನಿಗೆ ಗಾಬರಿಯಾಯಿತು. ಬಳಿಗೆ ಮೆಲ್ಲನೆ ಸರಿದು, ಅವರ ಕೈಹಿಡಿದು, ಅತ್ಯಂತ ಮೃದುವಾಗಿ, "ಸಾರ್!" ಎಂದ. ಅವರು ಎಚ್ಚೆತ್ತು ಅವನೆಡೆಗೆ ನೋಡಿದರು. ಅವರ ಕಣ್ಣುಗಳಲ್ಲಿ ಒಂದು ತೊಟ್ಟು ಕಂಬನಿಯಿರಲಿಲ್ಲ. ದೃಢವಾಗಿ ಅವುಡು ಕಚ್ಚಿ ಬಾಲಕನೊಬ್ಬನ ದುರ್ವರ್ತನೆಗೆ ಗುರಿಯಾದ ಯೋಧ ವೃದ್ಧನ ಶಿಲಾ ಪ್ರತಿಮೆಯಂತೆ ನಿಂತಿದ್ದರು. ಅವರ ಬಳಿಗೆ ವಿರಾಮ ಕುರ್ಚಿಯನ್ನು ಎತ್ತಿಡುತ್ತಾ, "ಕುಳಿತುಕೊಳ್ಳಿ...." ಎಂದ ರಾಜಣ್ಣ. ಅವರು ಅವನ ಕೈಹಿಡಿದು ನಿಧಾನವಾಗಿ ಕುಳಿತುಕೊಂಡರು. ನಂತರ ಅವನನ್ನೂ ಕೂರುವಂತೆ ಮೌನವಾಗಿ ಆಜ್ಞಾಪಿಸಿದರು. ರಾಜಣ್ಣನೂ ಸದ್ದಿಲ್ಲದೆ ಕುಳಿತ.

ಕೇಶವಯ್ಯಂಗಾರರು ಮಾತಾಡಲಿಲ್ಲ .... ರಾಜಣ್ಣ ಅವರನ್ನೇ ನೋಡಿದ. ಅವರು ತಮ್ಮ ಮುಷ್ಟಿಯನ್ನು ಬಿಗಿಬಿಗಿದು ಸಡಿಲಿಸುತ್ತಾ ಕುಳಿತಿದ್ದರು. ಅವರು ಉಸಿರಾಡುವುದು ಸಹ ಕೇಳುತ್ತಿರಲಿಲ್ಲ.

ಸ್ಮಶಾನ ಮೌನ ಮನೆಯನ್ನಾವರಿಸಿತ್ತು. ವರದನ ತಾಯಿ ನೆಲದಲ್ಲಿ ಕುಸಿದು ಮೌನವಾಗಿ ರೋದಿಸುತ್ತಿದ್ದರು. ಆಗಾಗ ಅವರ

ಎದೆಯ ಕುದಿತ ಬಿಕ್ಕುವಿಕೆಯ ಗುಳ್ಳೆಯಾಗಿ ಸಿಡಿದು ಮನೆಯ ಗಭೀರ ಮೌನವನ್ನು ಕಲಕುತ್ತಿತ್ತು.

ಒಳಮನೆಯ ಬಾಗಿಲ ಬಳಿ ಶಾಂತ ಶ್ಯಾಮಲಾ ಅನಾಥ ಶಿಶುಗಳಂತೆ ಗಾಬರಿಯಿಂದ ಕಣ್ಣೀರಿಡುತ್ತಾ ನಿಂತಿದ್ದರು.

ಕುರ್ಚಿಯಲ್ಲಿ ಕುಳಿತಿದ್ದ ರಾಜಣ್ಣ ಅವರೆಲ್ಲರೆಡೆಗೂ ನಿಧಾನವಾಗಿ ನೋಟ ಹೊರಳಿಸಿದ. ಅವನ ಕರುಳು 'ಚುರಕ್!' ಎಂದಿತು. ತನ್ನೆದೆಗೆ ತಾನೇ ಚೂರಿ ಚುಚ್ಚಿಕೊಳ್ಳುವಂತಾಯ್ತು. ' ಅಯ್ಯೋ!.... ನನ್ನೊಬ್ಬನ ಹಠಸಾಧನೆಗೆ ಅಷ್ಟೆಲ್ಲ ದುಃಖದ ಸೃಷ್ಟಿಯೇ ! ನಾನೆಂಥ ಕ್ರೂರಿ ! ನಾನೆಂಥ ಕಟುಕ !!' ಎಂದುಕೊಂಡ.

ಶಾಂತಳನ್ನೇ ಸೂಕ್ಷ್ಮವಾಗಿ, ಆಳವಾಗಿ ನೋಡಿದ. ಅವಳ ಕಣ್ಣುಗಳಲ್ಲಿ ಮೂಕ-ಶೋಕವಿರಲಿಲ್ಲ. ನಿರ್ಧಾರದ ಕೆಚ್ಚಿತ್ತು.

ಅವಳನ್ನು ನೋಡುತ್ತಾ ನೋಡುತ್ತಾ ರಾಜಣ್ಣ ತುಂಬಿಬಂದ ಎದೆಯಿಂದ ಆಳವಾಗಿ ನಿಟ್ಟುಸಿರುಬಿಟ್ಟ. ಕುಸಿದು ಕುರ್ಚಿಯಲ್ಲಿ ಒರಗಿದ. ಅವನಿಗೆ ಆ ಕುರ್ಚಿ ಕೆಂಡದಷ್ಟು ಹಿಂಸಾಕಾರಿಯಾಗಿ ತೋರಿತು. ಆದರೂ, ' ಈ ಹಿಂಸೆಯನ್ನು ತಾಳ್ಮೆಯಿಂದ ಸಹಿಸುವುದು ನನ್ನ ಕರ್ತವ್ಯ. ನನ್ನೊಬ್ಬನದೇ ಆದ ಕರ್ತವ್ಯ... ' ಎಂದು ನಿಶ್ಚಲನಾಗಿ ಕುಳಿತ.

ಅವನು ವರದನ ತಾಯಿಯ ಕರುಣಾಜನಕಮೂರ್ತಿಯನ್ನೇ ಎವೆಯಿಕ್ಕದೆ ನೋಡುತ್ತಿದ್ದ. ಕೊಠಡಿಯನ್ನಾವರಿಸಿದ್ದ ಗಭೀರತೆ ಭೀಮಾಕಾರದ ಬಂಡೆಯಂತೆ ಅವನೆದೆಯ ಮೇಲೊತ್ತುತ್ತಿತ್ತು. ರಾಜಣ್ಣ, ಕೇಶವಯ್ಯಂಗಾರರ ಕಡೆಗೆ ನೋಟವೇರಿಸಿದ. ಅವರೂ ಅವನನ್ನೊಮ್ಮೆ ನೋಡಿದರು. ಈಗವರ ಕಣ್ಣುಗಳಲ್ಲಿ ಅನಂತ ಪ್ರಶಾಂತತೆ ತುಂಬಿತ್ತು. ಅವರ ನೋಟ ಅವನೆಡೆಗೆ ಸಹಾನುಭೂತಿ ಸೂಸುತ್ತಿತ್ತು. ಅದನ್ನು ಕಂಡು ರಾಜಣ್ಣ ಚಕಿತಗೊಂಡ, ಉತ್ತೇಜನಗೊಂಡ, ಧೈರ್ಯಗೊಂಡ. ಅವನೆದೆಯಲ್ಲಿ ಆಸೆಯ ಲತೆ ಚಿಗುರಿತು.

ಅವರು ಕುರ್ಚಿಯಿಂದ ಮೇಲೆದ್ದು ಅವನ ಬಳಿಗೆ ಬಂದರು. ರಾಜಣ್ಣನೂ ಗೌರವದಿಂದ ಎದ್ದುನಿಂತ. ಅವರು ಅವನ ಭುಜ

ತಟ್ಟುತ್ತಾ, "ನಡೀ ರಾಜು... ಹೊರಗೆ ಹೋಗೋಣ" ಎಂದರು.

ಮನೆಯ ಸ್ತಬ್ಧ-ಶೋಕಭರಿತ ವಾತಾವರಣವನ್ನು ತ್ಯಜಿಸಿ ಬಂದ ಮೇಲೆ ರಾಜಣ್ಣ ತನಗರಿವಿಲ್ಲದಂತೆಯೇ ದೊಡ್ಡ ನಿಟ್ಟುಸಿರೊಂದನ್ನು ಬಿಟ್ಟ. ಕೇಶವಯ್ಯಂಗಾರರು ತಮ್ಮ ಬೆತ್ತವನ್ನು ಊರಿಕೊಂಡು, ನಿಧಾನವಾಗಿ, ನಿರ್ಭಯವಾಗಿ, ಗಂಭೀರವಾಗಿ ನಡೆಯುತ್ತಿದ್ದರು. ರಾಜಣ್ಣ ಅವರ ಪಕ್ಕದಲ್ಲೇ ನಡೆದ. ಅವನ ಬೂಟಿನ ಕಿರ್-ಕಿರ್ ನಾದ, ಅವರ ಮೃದು ಚಪ್ಪಲಿಗಳ ನೀರವ ನಡೆತ, ಇವುಗಳನ್ನು ಬಿಟ್ಟರೆ ಉಳಿದ ಜಗವೆಲ್ಲಾ ಅವನಿಗೆ ಶೂನ್ಯ, ನೀರವ!

ಕೇಶವಯ್ಯಂಗಾರರು ರಸ್ತೆಯ ಪಕ್ಕದ ಒಂದು ಅಂಗಡಿಗೆ ಹೋದರು. ಅಲ್ಲಿ ಸಿಗರೇಟು ಕೊಂಡು ಬಂದು ಎಂದಿನಂತೆ ರಾಜಣ್ಣನ ಮುಂದೆ ಹಿಡಿದರು. ಅವನೂ ಎಂದಿನಂತೆಯೇ ವಿನಯದಿಂದ ನಿರಾಕರಿಸಿದ. ಆಗ ಅವರೊಂದು ಸಿಗರೇಟು ಹೊತ್ತಿಸಿ ಹೊಗೆ ಬಿಡುತ್ತಾ, "ಏನು ಸಮಾಚಾರ ರಾಜು?" ಎಂದು ಸ್ನೇಹಪರ ಧ್ವನಿಯಲ್ಲಿ ಕೇಳಿದರು. ಅವರ ನೋಟ ಬಳಿಯ ತಾತಾ ವಿಜ್ಞಾನ ಮಂದಿರದ ಶಿಖರದ ಕಡೆಗೆ ಹೊರಳಿತ್ತು.

ರಾಜಣ್ಣ ಅವರ ಪ್ರಶ್ನೆಯನ್ನು ಕಂಡು ಚಕಿತಗೊಂಡ. ಕೆಲವೇ ನಿಮಿಷಗಳ ಹಿಂದೆ ಅವರ ಮನೆಯಲ್ಲಿ ನಡೆದ ಅಸಹ್ಯ ಪ್ರಸಂಗದ ವಿಷವನ್ನು ಅಷ್ಟು ಬೇಗ ದಕ್ಕಿಸಿಕೊಂಡು, ಈಗ ಈ ಅಮೃತಮಯ ವಾಣಿ ಬೀರುತ್ತಿದ್ದ ಅವರನ್ನೇ ವಿಸ್ಮಯದಿಂದ ನೋಡಿದ. ಅವರ ವದನ ಜೀವನದ ಕಹಿಯೆಲ್ಲವನ್ನೂ ಕುಡಿದು, ಪಲ್ಲವಿಸಿ ಬೆಳೆದ ಲತೆಯೊಂದರ ಸವಿ ಚಿಗುರಿನಂತಿತ್ತು. ಅವರ ಬಗೆಗೆ ರಾಜಣ್ಣನ ಎದೆಯಲ್ಲಿ ಅಪಾರ ಗೌರವ-ಭಕ್ತಿ ಉಕ್ಕೇರಿತು. ಅಂಥವರಿಗೆ ತನ್ನ ದೆಸೆಯಿಂದ ಅವರ ಮಗನಿಂದಲೇ ಅಪಮಾನವಾದದ್ದನ್ನು ನೆನೆದು ದುಃಖ ಒತ್ತರಿಸಿ ಬಂತು. ಉದ್ವೇಗ ತುಂಬಿ ಬಂದ ಗಂಟಲಲ್ಲಿ, "ನನಗೆ ಹೇಳಲು ಬಾಯೇ ಬರದು ಸಾರ್. ಈ ದಿನ ನಿಮ್ಮ ಮನೆಯಲ್ಲಿ ಇಂಥ ದುರ್ಘಟನೆ ನಡೆಯುವುದೆಂದು ತಿಳಿದಿರಲಿಲ್ಲ. ನನ್ನ ಭಾಗದ ತಪ್ಪನ್ನು ನೀವು ಕ್ಷಮಿಸಬೇಕು" ಎಂದು ಪ್ರಾರ್ಥಿಸಿ

ಕೊಂಡ. ಅದನ್ನು ಹೇಳುವಷ್ಟರಲ್ಲಿ ಅವನ ಧ್ವನಿ ಗದ್ಗದಿತವಾಗಿತ್ತು ಕಣ್ಣು ಹನಿಗೂಡಿದ್ದುವು.

ಕೇಶವಯ್ಯಂಗಾರರು ಅವನೆಡೆಗೆ ಶಿರವೆತ್ತಿ, ನೋಟ ಬೀರಿದರು. ಅವನ ತೋಳು ಹಿಡಿದು ಅಲುಗಿಸುತ್ತಾ. "ನೋ ನೋ ರಾಜು! ಅದು ನಿನ್ನ ತಪ್ಪಲ್ಲ. ನನ್ನ ತಪ್ಪು! ನೀನು ದುಃಖಪಡಬೇಡ. ಆ ದುರ್ಘಟನೆಗೂ ನಿನಗೂ ಸ್ವಲ್ಪವೂ ಸಂಬಂಧವಿಲ್ಲ. ನೀನು ಅಳಬೇಡ" ಎಂದು ಅವನ ಭುಜ ಸವರಿದರು. ಒಂದೆರಡು ನಿಮಿಷಗಳ ನಂತರ ಅವನ ಭುಜ ತಟ್ಟುತ್ತಾ, "ನೌ ಬಿ ಎ ಬ್ರೇವ್ ಬಾಯ್ !" ಎಂದರು.

ರಾಜಣ್ಣ ತನ್ನ ದುಃಖವನ್ನು ಹತೋಟಿಗೆ ತಂದುಕೊಂಡು ಕರವಸ್ತ್ರದಿಂದ ಕಣ್ಣೀರೊರೆಸಿಕೊಂಡ. ಕೇಶವಯ್ಯಂಗಾರರು ಪುನಃ ಗಂಭೀರ ಮೌನದಲ್ಲಿ ಮುಳುಗಿದರು. ಇದ್ದಕ್ಕಿದ್ದಂತೆಯೇ ತಾತಾ ವಿಜ್ಞಾನ ಮಂದಿರದ ಗಡಿಯಾರ ಹತ್ತು ಗಂಟೆಗಳನ್ನು ಒಂದಾದ ಮೇಲೊಂದು ಬಾರಿಸತೊಡಗಿತು. ಅದರ ದಿವ್ಯ ಮಂಜುಳ ನಿನಾದ ರಾಜಣ್ಣನ ಎದೆಗೆ ಪ್ರಶಾಂತತೆಯನ್ನು ತಂದಿತು.

ಅದು ನಿಂತ ಬಳಿಕ ಕೇಶವಯ್ಯಂಗಾರರು ನೆಲವನ್ನೇ ತಲೆ ತಗ್ಗಿಸಿ ನೋಡುತ್ತಾ, ನಿಧಾನವಾಗಿ, ಉದ್ವೇಗಭರಿತರಾಗಿ, ತಡೆದು ತಡೆದು ಹೇಳಲಾರಂಭಿಸಿದರು.

"ಈದಿನ ನಡೆದ ಟ್ರಾಜೆಡಿ....ಅದು ನಿನ್ನ ತಪ್ಪಲ್ಲ ರಾಜು, ಅದು ನನ್ನ ತಪ್ಪು....ಮೊದಲನೆಯ ದಿನ ಆರ್. ಎಸ್. ಎಸ್.ಗೆ ಹೋಗಿ ಬಂದ ವರದನನ್ನು ಶಿಕ್ಷಿಸದಿದ್ದ ನನ್ನ ಅತ್ಯಂತ ಘೋರ ತಪ್ಪು....ವರದ ಸಂಘಕ್ಕೆ ಸೇರಿದಾಗ ಹೇಗಿದ್ದ ಎಂದು ನನಗೆ ಚೆನ್ನಾಗಿ ನೆನಪಿದೆ.... ಎಲ್ಲರಂತೆ ಅವನೂ ಒಬ್ಬ ವಿಧೇಯ ಬಾಲಕನಾಗಿದ್ದ. ಆಗವನಿಗೆ ಹದಿನೈದು ಹದಿನಾರು ವರ್ಷ ವಯಸ್ಸು. ಒಬ್ಬ ಜೀವಿಯ ಭವಿಷ್ಯ ಜೀವನದ ಪ್ರಮುಖ ರೂಪರೇಖೆಗಳನ್ನು ಅಚ್ಚಳಿಯದಂತೆ ಮನದ ಮೇಲೆ ಮೂಡಿಸುವ ವಿಕಾಸ ಸಮಯ. ಆಗ ನಾನವನನ್ನು ಆ ಗುಂಪಿಗೆ ಸೇರಲು ಬಿಟ್ಟೆ. ಹುಡುಗ ಆಡಿಕೊಳ್ಳಲಿ, ದೃಢಕಾಯ ನಾಗಲಿ ಎಂದು ಆಶಿಸಿ ಹಾಗೆ ಮಾಡಿದೆ. ಒಂದು ಸುದೃಢ ದೇಹದಲ್ಲಿ

ಒಂದು ಸುಪುಷ್ಟ ಮನ ಉಂಟಾಗುತ್ತೆ ಎಂದು ತಿಳಿದಿದ್ದೆ....ಆದರೆ... ಅವನ ಸುಪುಷ್ಟ ದೇಹದಲ್ಲಿ ಒಂದು ಕುಪುಷ್ಟ ಮನ ಸೃಷ್ಟಿಯಾಯಿತು. ಅವನ ವಿನಯ, ಸಧ್ಭಾವನೆ, ತಿಳಿಮನ ನಿರ್ನಾಮವಾದುವು ಆ ಸ್ಥಾನದಲ್ಲಿ ಉದ್ಧಟತನ, ಕುತ್ಸಿತ ಭಾವನೆ, ಕುರುಡು ನಂಬಿಕೆ, ಕುರುಡು ದ್ವೇಷ ಮತ್ತು ಸಂಕುಚಿತ ಮನೋಭಾವ ವಟ್ಟವಾಗಿ ಕಾಡು ಪೊದೆಯಂತೆ ಹಬ್ಬಿದುವು. ಅವನ ವ್ಯಕ್ತಿತ್ವ ಎತ್ತರೆತ್ತರವಾಗಿ ಬೆಳೆದು, ದಿಗಂತ ದಿಗಂತದಾಚೆಗೂ ಹಬ್ಬಿ, ಮಾನವೀಯತೆಯ ವೈವಿಧ್ಯಪೂರ್ಣ ಜೀವನದತ್ತ, ಆ ಜೀವನದ ಸಹಸ್ರ-ಸಹಸ್ರ ಅದ್ಭುತ ಸೃಷ್ಟಿ ಸಾಧನೆ ಅನ್ವೇಷಣೆಗಳತ್ತ, ಸರ್ವಮುಖ ವಿಕಾಸ ಪಡೆಯುತ್ತಾ ಪಸರಿಸಲಿಲ್ಲ. ವಿಶ್ವ ಸಂಸ್ಕೃತಿಯ ಚೈತನ್ಯಪೂರ್ಣ ಮಹಾ ವೈತರಣಿ ಯಲ್ಲಿ ಮೀಯಲಿಲ್ಲ. ಅದಕ್ಕೆ ಬದಲು ತನ್ನನ್ನು ತಾನೇ ಒಂದು ಕುರುಡು ಪಂಥದ ಕಗ್ಗತ್ತಲಲ್ಲಿ ಬಂಧಿಸಿಕೊಂಡಿತು. ದ್ವೇಷ, ಅಸಹನೆ, ಸಂಕುಚಿತ ಮನೋಭಾವದ ಚರಂಡಿಯಲ್ಲಿ ಹೊರಳಾಡಿತು. ಇಷ್ಟು ದಿನಗಳ ಜೀವನ, ವಿದ್ಯಾರ್ಜನೆ, ಸಾಧನೆ ಅವನನ್ನು ಒಂದು ರಾಜ ಹಂಸವನ್ನಾಗಿ ಮಾಡಲಿಲ್ಲ, ಕೊಳಚೆಯಲ್ಲಿ ಉರುಳಾಡಿ ಬರುವ ಒಂದು ಹೆಗ್ಗಣವಾಗಿ ಮಾಡಿತು....ಈ ಜಗತ್ತಿನ ಕೋಟಿ ಕೋಟಿ ಮಾನವರಲ್ಲಿ ತನ್ನನ್ನೂ ಒಬ್ಬ ಮಾನವನನ್ನಾಗಿ ಸೃಷ್ಟಿಸಿದ ತನ್ನ ಏಕೈಕ ತಂದೆಯ ಮೇಲೂ ಹಿಂದೆ ಮುಂದೆ ನೋಡದೆ ಕೈ ಎತ್ತುವ ಕ್ರಿಮಿಯನ್ನಾಗಿ ಮಾಡಿತು" ಎಂದು ಗುಡುಗಿದರು.

ರಾಜಣ್ಣ ಅವರ ನಿರರ್ಗಳ ವಿಚಾರ ಧಾರೆಯಿಂದ ಪುಳಕಿತನಾಗಿ ಆಲಿಸುತ್ತಿದ್ದ. ಅವನು ಗಟ್ಟಿಯಾಗಿ ಉಸಿರಾಡಲೂ ಅಳುಕುತ್ತ ಅವರನ್ನೇ ಆಸಕ್ತಿಯಿಂದ ನೋಡಿದ. ಅವರ ವದನ ಸೌಮ್ಯಭಾವ ತಾಳಿತು. ಅವರು ವಿಷಾದನಗೆ ಬೀರುತ್ತಾ, ನೆಟ್ಟ ನೋಟವನ್ನು ಕದಲಿಸದೆ, ತಲೆಯನ್ನು ಮಾತ್ರ ಒಂದೆರಡು ಬಾರಿ ಅತ್ತಿತ್ತ ತೂಗಿಸಿ, ದೃಢ ಕಂಠದಲ್ಲಿ ಹೇಳಲಾರಂಭಿಸಿದರು. "ಆದರೆ ನಾನು ಆ ಕ್ರಿಮಿ ಯನ್ನು ದ್ವೇಷಿಸುವುದಿಲ್ಲ ರಾಜು....ಅದಕ್ಕೆ ಬದಲು ನನ್ನ ಎದೆಯಾಳ ದಿಂದ ಕನಿಕರಿಸುತ್ತೇನೆ. ಅವನನ್ನು ಮತ್ತೊಮ್ಮೆ ಒಬ್ಬ ಮಾನವನನ್ನಾಗಿ

ಪರಿವರ್ತಿಸಲು ನನ್ನ ಉಸುರಿರುವವರೆಗೂ ಶ್ರಮಿಸುತ್ತೇನೆ. ಅವ ನನ್ನು ನನ್ನ ಮನೆಯಿಂದಟ್ಟಿ ಮತ್ತೂ ಹೀನ ಕ್ರಿಮಿಯಾಗಲು ಬಿಡುವು ದಿಲ್ಲ. ಅವನನ್ನು ಬೇಡಿ, ಅಂಗಲಾಚಿಯಾದರೂ ಮನೆಗೆ ಕರೆ ತರುತ್ತೇನೆ. ಅವನ ವ್ಯಕ್ತಿತ್ವದ ಪುನಃಸೃಷ್ಟಿಗೆ ಪ್ರಾಣವನ್ನಾದರೂ ಬಿಡುತ್ತೇನೆ. ಏಕೆಂದರೆ ಅವನು ನನ್ನ ಮಗ! ಅವನನ್ನು ಈಲೋಕಕ್ಕೆ ಕರೆತಂದ ಹೊಣೆಗಾರಿಕೆ ನನ್ನದು....ಅವನನ್ನೊಬ್ಬ ಶಿಷ್ಟವ್ಯಕ್ತಿಯಾಗಿ ಮಾಡುವ ಹೊಣೆಗಾರಿಕೆಯೂ ನನ್ನದೇ ... ಅದನ್ನು ನಾನು ಕಡೆ ಗಣಿಸಲಾರೆ. ಹಾಗೆ ಕಡೆಗಣಿಸಿದರೆ ನನ್ನ ಈ ದೀರ್ಘ ಜೀವನ ಅಸಂಪೂರ್ಣ, ಮತ್ತೂ ನಿರರ್ಥಕ" ಎಂದು ಉದ್ವಿಗ್ನತೆಯ ಮೆಲು ದನಿಯಲ್ಲಿ ನುಡಿದು, ನಿಧಾನವಾಗಿ ತಲೆಯಾಡಿಸಿದರು.

ಅವರು ಆ ಮಾತುಗಳನ್ನಾಡುತ್ತಾ ಆಡುತ್ತಾ........ಆ ಸಂಕಲ್ಪ ಮಾಡಿಕೊಳ್ಳುತ್ತಿರುವಂತೆ ಕಂಡುಬಂತು.

ಇಬ್ಬರೂ ತುಂಬಿದ ಕೆರೆಯ ಡೊಂಕು ಏರಿಯಮೇಲೆ ನಡೆದು ಬರುತ್ತಿದ್ದರು. ತಂಗಾಳಿ ತೀಡಿ ಬೀಸುತ್ತಿತ್ತು. ಸಾಲುಮರಗಳು ಬಿಸುಸುಯ್ಯುತ್ತಿದ್ದುವು. ಸಹಸ್ರ ಸಹಸ್ರ ತಾರೆಗಳ ನಡುವೆ ಸೆರೆ ಸಿಕ್ಕಿದ ಪೂರ್ಣಚಂದ್ರ ಅಪ್ಸರ ನಾಟ್ಯದ ನಡುವೆ ಧ್ಯಾನಮುದ್ರೆಯಲ್ಲಿ ಅಂತರ್ಮುಖಿಯಾಗಿ ಕುಳಿತ ಬುದ್ಧದೇವನಂತೆ ಕಂಡುಬಂದ.

ನಾಲ್ಕಾರು ಅಡಿಗಳನ್ನಿರಿಸಿದ ನಂತರ ಕೇಶವಯ್ಯಂಗಾರರು ಬಳಿಯಲ್ಲೇ ಇದ್ದ ಕಲ್ಲುಬೆಂಚೊಂದರ ಮೇಲೆ ಕುಳಿತರು. ರಾಜಣ್ಣನೂ ಅವರ ಪಕ್ಕದಲ್ಲಿ ಕುಳಿತ.

ಅವರು ಆಲೋಚನೆಯಲ್ಲಿ ಮುಳುಗಿರುವಂತೆ ಕಂಡಿತು. ರಾಜಣ್ಣ ಮೌನವಾಗಿದ್ದ. ತೀಡಿ ಬೀಸುವ ತಂಗಾಳಿ ಅವನ ಮುಂಗುರುಳನ್ನು ಹಿಂದೆ ಹಾರಿಸುತ್ತಿತ್ತು. ಕೆರೆಯ ನೀರಿನ ಪುಟ್ಟ ಪುಟ್ಟ ಅಲೆಗಳು ಏರಿಯ ಕಲ್ಲುಗಳಿಗೆ 'ಲೊಚ್-ಲೊಚಕ್!' ಎಂದು ಸತತವಾಗಿ ಬಡಿಯುತ್ತಿದ್ದುವು. ತಮ್ಮ ಪ್ರಣಯದಲ್ಲಿ ಶಾಂತಳೂ ಹೀಗೆಯೇ ನನ್ನ ತೋಳಿಗೆ ತಲೆಬಡಿಯುತ್ತಾ ಕುಳಿತಿದ್ದಳಲ್ಲವೇ? ಎಂದು ಯೋಚಿಸಿ ರಾಜಣ್ಣ ಮುಗುಳ್ನಕ್ಕ. ನಂತರ ತಲೆ ಎತ್ತಿ ಮೇಲೆ

ನೋಡಿದ. ಪ್ರಜ್ವಲಿಸುವ ಒಂದು ತಾರೆ ಬಾಡಕಳಚಿ ಉರುಳುತ್ತಾ ಕ್ಷಣಮಾತ್ರದಲ್ಲಿ ತನ್ನ ಮನೋಹರ ಯಾತ್ರೆಯನ್ನು ಮುಗಿಸಿ, ತನ್ನ ಮಿತ ಸೌಂದರ್ಯವನ್ನು ವಿಶ್ವದ ಅಮಿತ ಸೌಂದರ್ಯದಲ್ಲಿ ಐಕ್ಯ ಗೊಳಿಸಿತು.

ಅದನ್ನು ಕಂಡು ರಾಜಣ್ಣನಿಗೆ, 'ಆ ತಾರೆಯಂತೆಯೇ ನಾನೂ ಉಗ್ರ ರಭಸದಿಂದ ಬದುಕಿ....ಮಿಂಚಿನಂತೆ ಮಾಯವಾಗುವುದು ಎಷ್ಟು ಸೊಗಸು!' ಎಂದು ತೋರಿತು.

ಕೂಡಲೇ ಅವನ ನೋಟ, ಕೆರೆಯ ದೂರದ ತೀರದಲ್ಲಿ ಸರ್ವೆ ಮರಗಳ ತುದಿಯ ಮೇಲೆ ತಲೆಯೆತ್ತಿ ಗೋಚರಿಸುತ್ತಿದ್ದ ತಾತಾ ವಿಜ್ಞಾನ ಮಂದಿರದ ಶಿಖರದತ್ತ ಹೊರಳಿತು. ಆಗ ಅವನಿಗೆ ತನ್ನ ಯೋಚನೆಯನ್ನು ಕಂಡು ತನಗೇ ನಗು ಬಂತು. 'ನಾನೊಬ್ಬ ಹಸುಳೆ ಯಂತೆ ಯೋಚಿಸುತ್ತಿರುವೆನಲ್ಲಾ! ಆ ವಿಜ್ಞಾನ ಮಂದಿರದಲ್ಲಿ ಕುಳಿ ತಿರುವ ವಿಜ್ಞಾನಿಗೆ ಆ ಬೀಳುವ ತಾರೆ ಒಂದು ಕೇವಲ ಉಲ್ಕೆ! ಕೆರೆಯ ನೀರಿನಲ್ಲಿ ಸಿಡಿದಾಡುವ ಲಕ್ಷೋಪಲಕ್ಷ ಕ್ರಿಮಿಗಳಂತೆ ಗಗನದ ವೈಶಾಲ್ಯತೆಯಲ್ಲಿ ಕ್ಷಣಕ್ಷಣಕ್ಕೂ ಕೋಟಿ ಕೋಟಿ ಸಂಖ್ಯೆಯಲ್ಲಿ ಪತನ ವಾಗುವ ಮಿಶ್ರಲೋಹದ ಒಂದು ಪುಟ್ಟ ಚೂರು! ಅವುಗಳ ಅಪಾರ ಅಳಿವಿನಿಂದ ಈ ವಿಶ್ವದ ಇರುವಿಕೆಗೆ ಧಕ್ಕೆಯಿಲ್ಲ. ಅಂತ್ಯವಿಲ್ಲ.. ಅಂಥ ಜೀವನವನ್ನು ನಾನು ಬಯಸಬೇಕೆ?' ಎನಿಸಿತು.

ಅವನು ತನ್ನಲ್ಲಿ ತಾನೇ ನಸುನಕ್ಕ. ಕೂಡಲೇ ಅವನಿಗೆ ಇನ್ನೊಂದು ಯೋಚನೆ ಮಿಂಚಿತು. 'ಕ್ಷಣಕ್ಷಣವೂ ಸಹಸ್ರ ಸಂಖ್ಯೆ ಯಲ್ಲಿ ಪತನವಾಗುವ ಜನನವಾಗುವ ಆ ಪುಟ್ಟ ಉಲ್ಕೆಗಳಂತೆಯೇ ಅಲ್ಲವೆ ಈ ಭುವಿಯ ಮಾನವರ ಜೀವನ! ಈ ಉಲ್ಕೆಗಳಂತೆ ಅವರೂ ಈ ಕ್ಷಣದಲ್ಲೇ ವಿಶ್ವದ ಎಲ್ಲೆಡೆಗಳಲ್ಲೂ ಸಹಸ್ರ ಸಹಸ್ರ ಸಂಖ್ಯೆಯಲ್ಲಿ ಅಳಿಯುತ್ತಿಲ್ಲವೇ? ಹುಟ್ಟುತ್ತಿಲ್ಲವೇ? ಎಂಥ ಸೋಜಿಗ ಈ ಸೃಷ್ಟಿ! ಎಂಥ ಮಹಾತ್ಮ ಆ ಸೋಜಿಗವನ್ನು ಪರಿಹರಿಸುವ ವಿಜ್ಞಾನಿ!' ಎಂದು ಆಲೋಚಿಸಿ, ಆ ಆಲೋಚನೆಯ ಮಾಧುರ್ಯ ವನ್ನೇ ಮೆಲುಕು ಹಾಕುತ್ತಿದ್ದ.

ಆಗ ಕೇಶವಯ್ಯಂಗಾರರು ಅವನೆಡೆಗೆ ತಿರುಗಿದರು. ಅವನನ್ನು ನೋಡಿ ಪ್ರೇಮದಿಂದ ಮುಗುಳುನಕ್ಕರು. ರಾಜಣ್ಣನ ವದನವೂ ವಿನಯಪರ ನಗುಪಿನಿಂದ ಹೂವಿನಂತೆ ಅರಳಿತು. ಅವರು ಅವನ ಭುಜದ ಮೇಲೆ ಕೈ ಇರಿಸಿ ಮಧುರವಾಗಿ, "ಏನು ಸಮಾಚಾರ ರಾಜು?" ಎಂದು ಪ್ರಶ್ನಿಸಿದರು. ಅವರ ಧ್ವನಿ ಉತ್ತೇಜಕವಾಗಿತ್ತು. ರಾಜಣ್ಣ ಒಂದು ಕ್ಷಣ ಆಲೋಚಿಸಿ ತಲೆಯೆತ್ತಿದ. ಮುಗುಳುನಗೆ ಸೂಸುತ್ತಿದ್ದ ಅವರ ತೇಜಸ್ವಿ ನೇತ್ರಗಳೊಡನೆ ದಿಟ್ಟತನದ, ಹೆಮ್ಮೆಯ ನೋಟ ಬೆರೆಸಿ, ಗಂಭೀರವಾಗಿ "ನಾನು ನಿಮ್ಮ ಶಾಂತಳನ್ನು ಪ್ರೇಮಿಸುತ್ತೇನೆ ಸರ್ !" ಎಂದ.

ಕೇಶವಯ್ಯಂಗಾರರ ನಗೆ ಅಳಿಯಲಿಲ್ಲ. ನೋಟ ಕದಲಲಿಲ್ಲ. ಒಮ್ಮೆ ಸೂಕ್ಷ್ಮವಾಗಿ ತಲೆದೂಗಿ, "ನನಗೆ ಅದು ಗೊತ್ತು ! ಈ ಸಂಜೆ ನಡೆದದ್ದೇನು, ಹೇಳು" ಎಂದು ಪ್ರೀತಿಯಿಂದ ನುಡಿದರು. ರಾಜಣ್ಣನ ಎದೆ ಆನಂದ-ಅಚ್ಚರಿಗಳಿಂದ ಅರಳಿತು. ಒಂದು ನಿಮಿಷ ಅವರನ್ನೇ ಧನ್ಯತೆಯ ಅರಳುಗಣ್ಣುಗಳಿಂದ ನಂಬಲಾರದವನಂತೆ ನೋಡಿದ. ಅವರು ತನ್ನನ್ನೇ ನೋಡಿ ಅರ್ಥಗರ್ಭಿತವಾಗಿ ನಗುತ್ತಿರುವುದನ್ನು ಕಂಡು ನಾಚಿದ. ನಂತರ ತಲೆ ತಗ್ಗಿಸಿ, ಸಂಜೆ ನಡೆದುದೆಲ್ಲವನ್ನು ಜ್ಞಾಪಿಸಿಕೊಂಡು, "ನಾನು-ಶಾಂತ ಈದಿನ ಒಂದು ಮುಖ್ಯ ಸಂಗತಿ ಕುರಿತು ಮಾತಾಡಲು ನಗರದಿಂದ ಬಹಳ ದೂರಕ್ಕೆ ಹೋಗಿದ್ವಿ. ಅಲ್ಲಿಂದ ಹಿಂತಿರುಗಿ ಬರುವಾಗ ವರದ ಸಿಕ್ಕಿದ..." ಎಂದು ನಡೆದುದೆಲ್ಲ ವನ್ನೂ ಕೂಲಂಕಷವಾಗಿ ತಿಳಿಸಿದ.

ಕೇಶವಯ್ಯಂಗಾರರಿಗೆ ವರದನ ಸಂಗಾತಿಗಳ ವರ್ತನೆ ಮತ್ತು ಅವರಾಡಿದ್ದ ಮಾತುಗಳು ತುಂಬಾ ಮನನೋಯಿಸಿದುವು. "ಇವೆಲ್ಲಾ ಅವರ ಹಿರಿಯರು ಬಿತ್ತಿರೋ ಬೀಜದ ಫಲ, ರಾಜು. ಅವರ ಹಿರಿಯರು ಬಿತ್ತಿರುವ ಬೀಜ ಮತ್ತು ಅವರು ಬೆಳೀತಿರೋ ಕಿರುಕುಳದ, ನಿರುತ್ತೇಜಕ ಸನ್ನಿವೇಶದ ವಿಷಫಲ. ಪಾಪ! ಆ ತಪ್ಪು ಏನೂ ಅರಿಯದ ಆ ಹುಡುಗರದ್ದಲ್ಲ" ಎಂದು ವಿಷಾದದಿಂದ ನಿಟ್ಟುಸಿರುಬಿಟ್ಟು, ತಲೆತಗ್ಗಿಸಿ ಮೌನವಾದರು. ರಾಜಣ್ಣನೂ ಅವರು

ಏನು ಹೇಳುವರೋ ಎಂದು ಕಾಯುತ್ತಾ ಮೌನವಾಗಿದ್ದ. ಒಂದೆರಡು ನಿಮಿಷಗಳ ತರುವಾಯ ಅವರು ತಲೆಯೆತ್ತಿ ಹೇಳಲಾರಂಭಿಸಿದರು : "ನೋಡು, ಈ ಕಾಲದಲ್ಲಿ ಒಬ್ಬ ಬ್ರಾಹ್ಮಣ ಬಾಲಕನ ಜೀವನದ ಮೇಲೆ ಬಹಿರಂಗ ಜಗತ್ತು ಎಲ್ಲ ಕ್ಷೇತ್ರಗಳಲ್ಲೂ ಅಡ್ಡಿಗಳನ್ನು ಹೇರುತ್ತಿದೆ. ಮಾಧ್ಯಮಿಕ ಶಾಲೆಯ ಘಟ್ಟದಿಂದ ಹಿಡಿದು, ಅವನು ಹೈಸ್ಕೂಲು, ಕಾಲೇಜು ವಿದ್ಯಾಭ್ಯಾಸ ಮುಗಿಸಿ, ಒಬ್ಬ ಸ್ವತಂತ್ರ ಉದ್ಯೋಗಿಯಾಗಿ ನಿಲ್ಲುವವರೆಗೂ ಒಂದಲ್ಲ ಒಂದು ಹೊರೆಯನ್ನು ಹೇರುತ್ತಿದೆ. ಶಾಲೆಗಳಿಗೆ ಪ್ರವೇಶವಿಲ್ಲ, ಪ್ರವೇಶವಿದ್ದರೂ ಇನ್ನಿತರ ಕೋಮುಗಳ ವಿದ್ಯಾರ್ಥಿಗಳಿಗಿರುವ ಸೌಲಭ್ಯಗಳಿಲ್ಲ. ಅವೆಲ್ಲವನ್ನೂ ಮೆಟ್ಟಿ ಮೇಲೆದ್ದರೂ ಉದ್ಯೋಗದ ಲಭ್ಯವಿಲ್ಲ. ಅದು ಲಭಿಸಿದರೂ ಅದರಲ್ಲಿ ಸಂರಕ್ಷಣೆಯಿಲ್ಲ, ಬಡ್ತಿಗಳಿಲ್ಲ.

"ತನ್ನ ಬಗೆಗೆ ಸಮಾಜ-ಸರ್ಕಾರಗಳಿರುವ ಈ ಮಲತಾಯಿ ಧೋರಣೆ ಕಂಡು ಅವನು ಕೆರಳುತ್ತಾನೆ. ಅವುಗಳಿಗೆ ವಿರೋಧವಾದ ಯಾವುದಾದರೂ ಒಂದು ಸಾಮೂಹಿಕ ಶಕ್ತಿಯೊಂದಿಗೆ ಬೆರೆಯಲು ಹಾತೊರೆಯುತ್ತಾನೆ. ಈ ಪರಿಸ್ಥಿತಿಯಲ್ಲಿ ಅವನು ಉಗ್ರ-ಕೋಮು ವಾರು ವಾದಿಗಳ ಜೆಂಕಿಯ ಬಲೆಗೆ ವಿಶೇಷವಾಗಿ ಸಿಕ್ಕಿಬೀಳುವುದು ಸಹಜ. ಹಾಗೆ ಸಿಕ್ಕಿಬಿದ್ದು ಅವನು ದ್ವೇಷ, ಕುತ್ಸಿತ ಭಾವ, ಮಾತ್ಸರ್ಯಗಳನ್ನು ಉಸಿರಾಡುವ ಒಬ್ಬ ಕುಂಠಿತ ಜೀವಿಯಾಗು ತ್ತಾನೆ, ಸಮಾಜಘಾತುಕನಾಗುತ್ತಾನೆ.

" ಈ ಪ್ರಭಾವಗಳ ಪಂಜರಕ್ಕೆ ಸಿಕ್ಕಿ ಬೀಳದೆ, ತಮ್ಮ ಪ್ರತಿಭೆಯ ಪ್ರಜ್ವಲತೆಯಿಂದಲೇ ತಮಗಿರುವ ಅಡ್ಡಿ ಆತಂಕಗಳನ್ನು ಸುಟ್ಟು ಮುಂಬರುವ ಯುವಕರು ಸಾವಿರದಲ್ಲೊಬ್ಬರು.

" ಅವರ ಕಡೆಗೆ ಕೈ ತೋರುತ್ತಾ, ಉಳಿದ ಅಪಾರ ತರುಣ ರನ್ನು ಈ ದುರಂತದ ದವಡೆಗೆ ಜವಾಬ್ದಾರಿಯುತ ವ್ಯಕ್ತಿ ಶಕ್ತಿಗಳು ದೂಡಬಾರದು. ಅದು ಒಂದು ಅನ್ಯಾಯ ಮಾತ್ರವೇ ಅಲ್ಲ, ನಮ್ಮ ರಾಷ್ಟ್ರೀಯ ಭಾವನೆಯ ಮಾಧುರ್ಯವನ್ನೇ ವಿನಾಶಗೊಳಿಸುವ ಒಂದು ಘೋರ ಅಪರಾಧ !

"ಅಲ್ಲದೆ, ನಮ್ಮ ಕೋಮಿನ ಪ್ರಾಚೀನ ಮತ್ತು ಪ್ರಸ್ತುತ ಮನೋಭಾವಗಳನ್ನು ನಾನು ಕ್ಷಮಿಸುವುದಿಲ್ಲ....ತಾವೊಬ್ಬರೇ ಶ್ರೇಷ್ಠ ರೆಂಬ ಒಣ ಹೆಮ್ಮೆಯನ್ನು ಅವರು ಬಿಡಬೇಕು. ತಮ್ಮ ಶ್ರೇಷ್ಠತೆಯ ರಕ್ಷಣೆಗಾದರೂ ಬಿಡಬೇಕು. ರೈತನೊಡನೆ ರೈತನಾಗಿ ನೇಗಿಲು ಹಿಡಿಯಲು ಸಿದ್ಧರಾಗಬೇಕು, ಕೂಲಿಯೊಡನೆ ಕಲ್ಲು ಹೊರಲು ಸಿದ್ಧ ರಾಗಬೇಕು. ಕಾರ್ಮಿಕನೊಡನೆ ಕಾರ್ಮಿಕ, ಯೋಧನೊಡನೆ ಯೋಧ, ವಿಜ್ಞಾನಿಯೊಡನೆ ವಿಜ್ಞಾನಿಯಾಗಲು ಮುಂದೆ ಬರಬೇಕು. ತಮ್ಮ ಇಂದಿನ ಶೋಷಕವೃತ್ತಿಯನ್ನು ತ್ಯಜಿಸಬೇಕು. ಶೋಷಕ ಶ್ರೀಮಂತ ರಾಜಶಕ್ತಿಗಳ ಬಾಲಬಡುಕತನ ನಿಲ್ಲಿಸಬೇಕು. ಜನತೆ ಯೊಡನೆ ಸಾಮಾನ್ಯ ಜನತೆಯಾಗಿ ಸ್ನೇಹ ಸಮತೆಯಿಂದ ಬೆರೆತು, ತಮ್ಮ ಉಚ್ಚಸಂಸ್ಕೃತಿ, ಹಿರಿಯ ಸಂಪ್ರದಾಯ, ಮತ್ತು ಗಹನವಾದ ಬೌದ್ಧಿಕ ಹಿನ್ನೆಲೆಯನ್ನು ಉಳಿದ ವರ್ಗಗಳಿಗೂ ಧಾರೆಯೆರೆಯಲು ಮುನ್ನುಗ್ಗಬೇಕು. ಅವರೊಡನೆ ರಾಷ್ಟ್ರೀಯ ಪುನರುಜ್ಜೀವನದ ಹಾದಿಯಲ್ಲಿ ಸಮಭುಜರಾಗಿ ಅಡಿಯಿರಿಸಬೇಕು. ಅದನ್ನು ಬಿಟ್ಟು ವಿಕೃತ ಮನಸ್ಕರಂತೆ, ತಮ್ಮ ಕೊಳೆತು ನಾರುವ ಗತ-ವೈಭವದ ಶುಷ್ಕ ವರ್ಣನೆಗಳಲ್ಲೇ ಜೊಲ್ಲು ಸುರಿಸುತ್ತಾ ಕೈಕಟ್ಟಿ ಕೂರಬಾರದು. ರಾಷ್ಟ್ರದ ಒಡಲಿನಲ್ಲೇ ಮತ್ತೊಂದು ಪ್ರತ್ಯೇಕ ರಾಷ್ಟ್ರದ ದುರ್ಮಾಂಸ ದಂತೆ ಬೆಳೆಯಬಾರದು!" ಎಂದು ಬಿಸಿರಕ್ತದ ಯುವಕನಂತೆ ಉದ್ವೇಗಪೂರಿತರಾಗಿ ನುಡಿದರು.

ಅದನ್ನು ಕೇಳುತ್ತಾ ಕೇಳುತ್ತಾ ರಾಜಣ್ಣ ವಿಚಾರ ಗಾಂಭೀರ್ಯ ಸಂತಪ್ತನಾಗಿ ತಲೆದೂಗಿದ. 'ಇಂಥ ಮೇಧಾವಿ ಪಿತನನ್ನು ಪಡೆದ ಶಾಂತ ಎಷ್ಟು ಧನ್ಯೆ!....ಅವಳ ಕೈಹಿಡಿಯುವ ನಾನು ಎಷ್ಟು ಧನ್ಯ!' ಎಂದುಕೊಂಡ.

ಅವನಿಗೆ ತಮ್ಮ ವಿಚಾರದಲ್ಲಿ ಅವರ ತೀರ್ಮಾನವನ್ನರಿಯಲು ತುಂಬಾ ಕಾತುರವಾಯಿತು. ಅವರು ಮೌನವಾಗಿ ಕುಳಿತಿರುವಾಗ, ಮೆಲ್ಲನೆ, "ಹಾಗಾದರೆ, ನನ್ನ–ಶಾಂತಳ ವಿವಾಹಕ್ಕೆ ನಿಮ್ಮ ಒಪ್ಪಿಗೆ ಇದೆಯೇ....?" ಎಂದು ಕೇಳಿದ. ಅವರು, "ಇದೆ......" ಎಂದು

ಸುಸ್ಪಷ್ಟವಾಗಿ ಹೇಳಿದರು. ಮರುಕ್ಷಣವೇ ವಿಷಾದ ಮತ್ತು ಅಸಹಾಯತೆಯ ಧ್ವನಿಯಲ್ಲಿ "ಆದರೆ...." ಎಂದು ಮೌನವಾದರು. ರಾಜಣ್ಣ ಉದ್ವೇಗದಿಂದ ಕೇಳಿದ, "ಜಾತಿಯವರು ಒಪ್ಪುವುದಿಲ್ಲ ಎಂದು ಶಂಕಿಸುತ್ತೀರಾ?"

"....ಇಲ್ಲ.... ನನ್ನ ಜಾತಿಯವರ ಅಸಮ್ಮತಿಗೆ ನಾನು ಅಷ್ಟು ಹೆದರೋಲ್ಲ, ಆದರೆ ನನ್ನ ಹೆಂಡತಿಯ ಅಸಮ್ಮತಿಗೆ ಹೆದರಬೇಕಾಗಿದೆ ....ನೋಡು ರಾಜು! ........ ನಾನೂ ಅವಳೂ ಇಬ್ಬರೂ ಶಾಂತಳ ಜೀವನಕ್ಕೆ ಹೊಣೆಗಾರರು. ನಾವಿಬ್ಬರೂ ಮೂವತ್ತೈದು ವರ್ಷದ ವೈವಾಹಿಕ ಜೀವನದಲ್ಲಿ ಹಾಲು-ಜೇನಿನ ನಡುವೆ, ಉರಿವ ಬೆಂಕಿಯು ನಡುವೆ ಜೊತೆ-ಜೊತೆಗೇ ಸಾಗಿ ಬಂದಿದ್ದೇವೆ. ಆದರೂ ಕೆಲವು ವಿಚಾರಗಳಲ್ಲಿ ನಮ್ಮ ಅಭಿಪ್ರಾಯಗಳು ಎರಡು ಧೃವಗಳಷ್ಟು ಪ್ರತ್ಯೇಕ ....ಅವಳ ಅಭಿಪ್ರಾಯವನ್ನು ಕಾಲಿನಿಂದ ತುಳಿದು ನಾನು ಎಂದೂ ಯಾವ ಕೆಲಸವನ್ನೂ ಮಾಡಿಲ್ಲ. ಅವಳು ನನ್ನ ತೀರ್ಮಾನವನ್ನು ಒಪ್ಪುವಂತೆ ತಿದ್ದಿಕೊಂಡಿದ್ದೇನೆ. ಇನ್ನು ಕೆಲವು ತೀರ್ಮಾನಗಳಲ್ಲಿ ನಾನೇ ಅವಳಿಗೆ ಸೋತಿದ್ದೇನೆ .... ಇಲ್ಲಿ ನೋಡು,........ಸಪ್ಪೆಮುಖ ಹಾಕಿಕೋಬೇಡ .... ನಾನು ನಿನಗಾಗಿ ಸರ್ವಯತ್ನವನ್ನೂ ಮಾಡು ತ್ತೇನೆ.....ನೀನು ಧೈರ್ಯವಾಗಿರು" ಎಂದು ಬೆನ್ನು ತಟ್ಟಿದರು-

ಅದರಿಂದ ರಾಜಣ್ಣನಿಗೆ ಎಷ್ಟೋ ಸಮಾಧಾನವಾಯಿತು. ಧನ್ಯತೆ ಯಿಂದ ತುಂಬಿ ಬಂದ ಕಂಠದಲ್ಲಿ, "ಅಷ್ಟು ಮಾಡಿ ಸಾರ್ .... ನಾನು ನಿಮ್ಮನ್ನೇ ನಂಬಿದೇನೆ. ನನ್ನನ್ನು ಮೇಲೆತ್ತುವ - ಕೈಬಿಡುವ ಭಾರ ನಿಮ್ಮದೇ .... ನಾನು ನಿಮ್ಮ ಮಗಳನ್ನು ಜೀವಕ್ಕಿಂತಲೂ ಹೆಚ್ಚಾಗಿ ಪ್ರೇಮಿಸುತ್ತೇನೆ" ಎಂದ. ಎಷ್ಟು ಯತ್ನಿಸಿದರೂ ಅವನ ಕಣ್ಣು ಗಳು ಹನಿಗೂಡಿದುವು. ಕೇಶವಯ್ಯಂಗಾರರು ಅವನನ್ನೇ ಪ್ರೀತಿ ವಾತ್ಸಲ್ಯಗಳಿಂದ ನೋಡಿ, ತಲೆಯಾಡಿಸುತ್ತಾ, "ಡೋಂಟ್-ವರೀ.... ಬಾಯ್!....ನೀನು ಅದನ್ನೇ ಚಿಂತಿಸಬೇಡ, ನಾನು ನನ್ನ ಕೈಲಾಗು ವುದನ್ನೆಲ್ಲಾ ಮಾಡ್ತೇನೆ...." ಎಂದು ರಾಜಣ್ಣನ ಬೆನ್ನುತಟ್ಟಿದರು.

ಅವನ ಎದೆಯಲ್ಲಿ ಎಲ್ಲಿಲ್ಲದ ಹುಮ್ಮಸ್ಸು ಉಕ್ಕಿತು.

ಕೇಶವಯ್ಯಂಗಾರರನ್ನೇ ಎವೆಯಿಕ್ಕದೆ ನೋಡಿದ. ಅವರ ಬಗೆಗೆ ಅವನಲ್ಲಿ ಭಕ್ತಿ ಗೌರವ, ಪೂಜ್ಯಭಾವಗಳು ಮುಗಿಲೆತ್ತರ ಹಬ್ಬಿ ನಿಂತುವು. ಅವನೆಡೆಗೆ ತಿರುಗುತ್ತಾ ಅವರು ಸಂಶಯದಿಂದ ಕೇಳಿದರು.

"ರಾಜು, ಇದರಿಂದ ನಿಮ್ಮ ತಂದೆ ಕೋಪಿಸಿಕೊಳ್ಳೋಲ್ಲವೇ ?"

"ನಾನು ಅವರನ್ನೆಲ್ಲಾ ಸಮಾಧಾನ ಪಡಿಸುತ್ತೇನೆ...."

"ನಿಮ್ಮ ತಂದೆ ಒಬ್ಬ ರೈತ,....ಒಬ್ಬ ಶ್ರೀಮಂತ ರೈತ ಅಲ್ಲವೇ?"

"ಹೌದು ಸರ್."

"ಒಬ್ಬ ರೈತನ ನಂಬಿಕೆ ಬದಲಾಯಿಸುವುದು ಬಹು ಕಠಿಣ ರಾಜ !"....ಎಂದರು. ರಾಜಣ್ಣ ಒಂದು ನಿಮಿಷ ಆಲೋಚಿಸಿ ನುಡಿದ,

"ನಾನು ನನ್ನ ಸರ್ವಪ್ರಯತ್ನವನ್ನೂ ಮಾಡ್ತೇನೆ ಸರ್.... ಅವರನ್ನು ಪರಿವರ್ತಿಸಬಲ್ಲೆ ಎಂಬ ನಂಬಿಕೆ ನನಗಿದೆ."

"ನಿಮ್ಮ ತಾಯಿ, ಮುಂತಾದ ಮನೆಯ ಹೆಂಗಸರು?....ಅವರೆಲ್ಲ ಶಾಂತಳನ್ನು ಚೆನ್ನಾಗಿ ನೋಡಿಕೊಳ್ಳುತ್ತಾರೆಯೋ ?"

"ಖಂಡಿತ!...ನಾನು ಎಂದರೆ ನಮ್ಮ ತಾಯಿಗೆ ಪ್ರಾಣ."

"....ಸರಿ....ನನಗೆ ಏನೂ ತೋರುವುದಿಲ್ಲ" ಎಂದು ಆಳವಾಗಿ ನಿಟ್ಟುಸಿರು ಬಿಡುತ್ತಾ, "ನೀನು ನಮ್ಮ ಜಾತಿಯಲ್ಲೇ ಏಕೆ ಹುಟ್ಟಲಿಲ್ಲ ರಾಜು .... !" ಎಂದು ಅವನನ್ನೇ ಅಸಹಾಯಕ ನೋಟದಿಂದ ನೋಡಿದರು.

ರಾಜಣ್ಣ ವಿಷಾದದ ನಗೆ ಬೀರುತ್ತಾ, "ಅದು ದೇವರ ಇಷ್ಟ... " ಎಂದ.

ಕೇಶವಯ್ಯಂಗಾರರು ಎಚ್ಚೆತ್ತು ತಲೆಯಲ್ಲಾಡಿಸುತ್ತಾ "ಅಹುದು ...ಅದೊಂದು ನನ್ನ ಮೂಢ ಆಸೆ" ಎಂದು ತಮ್ಮನ್ನು ತಾವೇ ಮೂಷಿಸಿಕೊಂಡರು. ನಂತರ ರಾಜಣ್ಣನೆಡೆಗೆ ನೋಡುತ್ತಾ ಕೇಳಿದರು: ಹಾಗಾದರೆ ಈಗ ಏನು ಮಾಡ್ತೀಯು .... ನಿನ್ನ ಮುಂದಿನ ಸ್ಟಡೀಸ್ ಗತಿ ಏನು ?"

"ನನಗೆ ಮುಂದಿನ ಸ್ಟಡೀಸ್ ಅಷ್ಟು ಮುಖ್ಯವಲ್ಲ. ಈ ಡಿಗ್ರಿ ಒಂದೇ ಸಾಕು. ಅದಾದನಂತರ ಓದು ನಿಲ್ಲಿಸಿಬಿಡ್ತೇನೆ. ನನಗೇನು

ಸರ್ಕಾರೀ ಕೆಲಸಕ್ಕೆ ಸೇರೋ ಇಷ್ಟವಿಲ್ಲ."

"ಇನ್ನೇನು ಮಾಡುತ್ತೀಯ ? ನಿನ್ನ ಹಿಂದಿನ ಚಟುವಟಿಕೆಗಳಿಗೇ ಹೊರಟುಹೋಗ್ತೀಯಾ ?"

"ಹೌದು, ತೋಟ ಗದ್ದೆಯಲ್ಲಿ ತುಂಬಾ ಕೆಲಸಗಳಿವೆ. ರಾಜಶೇಖರ ಬೇಗ ಬಂದುಬಿಡು ಎಂದು ಪತ್ರ ಬರೀತಿದಾನೆ. ಅವರೊಡನೆ ಸೇರಿ ಸಾರ್ವಜನಿಕ ಜೀವನಕ್ಕೆ ಧುಮುಕಬೇಕು. ಆ ಕೆಲಸಕ್ಕೇ ನನ್ನ ಜೀವನ ಮುಡಿಪು" ಎಂದ.

ಕೇಶವಯ್ಯಂಗಾರರು ಒಂದು ನಿಮಿಷ ಅವನನ್ನೇ ನೋಡಿದರು. ನಂತರ ಕಿರುನಗೆಯೊಂದು ಅವರ ತುಟಿಗಳ ಮೇಲೆ ಅರಳಿತು, "ಆ ಜೀವನವನ್ನು ಶಾಂತ ಮೆಚ್ಚುತ್ತಾಳೇನು ?" ಎಂದು ವಿನೋದದಲ್ಲಿ ಕೇಳಿದರು.

ರಾಜಣ್ಣನೂ ಮುಗುಳುನಗುತ್ತಾ, "ಹೌದು ಸಾರ್. ಅವಳೊಡನೆ ಮಾತಾಡಿಕೊಂಡೇ ನಾನು ಈ ತೀರ್ಮಾನಕ್ಕೆ ಅಂತಿಮವಾಗಿ ಬಂದದ್ದು" ಎಂದ.

ಕೇಶವಯ್ಯಂಗಾರರು ಸಂಪ್ರೀತಗೊಂಡವರಂತೆ ಮತ್ತೊಂದು ಸಿಗರೇಟು ಹೊತ್ತಿಸುತ್ತಾ, "ನನಗೆ ಗೊತ್ತು ! ಶಾಂತ ನಿನ್ನಂಥವನೊಬ್ಬನನ್ನು ಆರಿಸಿಕೊಳ್ಳುವಳೆಂದು ನನಗೆ ಮೊದಲಿಂದಲೂ ಅನಿಸಿತ್ತು. ಅವಳು ತುಂಬಾ ಒಳ್ಳೆಯ ಹುಡುಗಿ ರಾಜು" ಎಂದರು.

ರಾಜಣ್ಣನೂ ಸಂಕೋಚದಿಂದ ತಲೆಹಾಕಿ, ನಗುತ್ತಾ, "ಹೌದು ಸರ್" ಎಂದ.

ಆಗ ಅವನ ದೇಹಾದ್ಯಂತ ಆನಂದ-ಲಜ್ಜೆಯ ವಿದ್ಯುತ್‌ವಾಹಿನಿ ಹರಿದಂತಾಯ್ತು. ಅವನು ಶಾಂತಳ ತಂದೆಯನ್ನೇ ಎವೆಯಿಕ್ಕದೆ ನೋಡಲಾರಂಭಿಸಿದ

ಅವರು ಪುನಃ ಆಳವಾದ ಯೋಚನೆಗೆ ಬಿದ್ದಿದ್ದರು. ಐದಾರು ನಿಮಿಷಗಳ ತರುವಾಯ ಅವರೂ ತಲೆಯೆತ್ತಿ ರಾಜಣ್ಣನನ್ನೇ ಭಾವ ಸಂತಪ್ತ ನಯನಗಳಿಂದ ಈಕ್ಷಿಸಿದರು. ರಾಜಣ್ಣನಿಗೆ ಆಶ್ಚರ್ಯವಾಯಿತು. ಉಕ್ಕೇರಿದ ಕಾತುರದಿಂದ ಅವರನ್ನೇ ಮತ್ತೂ ನೋಡಿದ.

ಆಗ ಅವರು ರಾಜಣ್ಣನ ಕೈಹಿಡಿದುಕೊಂಡು, "ನಿನ್ನನ್ನು ನೋಡಿದರೆ ನನಗೆ ತುಂಬಾ ಸಂತೋಷವಾಗುತ್ತೆ ರಾಜು!" ಎಂದರು ಅವರ ಕಣ್ಣುಗಳಿಂದ ಒಂದೆರಡು ಕಂಬನಿಗಳು ಕೆಳಗುರುಳಿದುವು.

ರಾಜಣ್ಣ ಅವರನ್ನೇ ಗಂಭೀರವಾಗಿ ನೋಡುತ್ತಿದ್ದ. ಅವರು ಅವನ ಕೈಯನ್ನೊಮ್ಮೆ ತಟ್ಟಿ, ತೀಕ್ಷ್ಣವಾಗಿ ಹೇಳಲಾರಂಭಿಸಿದರು: "ನೋಡು ರಾಜು, ನಿನಗೆ ದೇವರು ಇಷ್ಟು ಚಿಕ್ಕವಯಸ್ಸಿನಲ್ಲೇ ಒಳ್ಳೇ ಬುದ್ಧಿ ಕೊಟ್ಟಿದಾನೆ. ನಾನೂ ಯುವಕನಾಗಿದ್ದಾಗ ಅದೇ ರೀತಿ ಇದ್ದೆ. ಈಗ ಅದೆಲ್ಲಾ ಹಾಳಾಗಿದೆ. ಆ ಕೆಚ್ಚೇ ಹೋಗಿಬಿಟ್ಟಿದೆ. ನಾನು ಈ ಜಗತ್ತಿನಲ್ಲಿ ನನ್ನದೇ ಆದ ಏನನ್ನೂ ಸಾಧಿಸಲಿಲ್ಲ. ಈಗ ಸಾಧಿಸಲು ಶಕ್ತಿಯಿಲ್ಲ, ಸಮಯವಿಲ್ಲ, ಅವಕಾಶವಿಲ್ಲ. ನಿನಗೆ ಆ ಶಕ್ತಿ, ಸಮಯ, ಅವಕಾಶ ಅಪಾರವಾಗಿದೆ ಅದನ್ನು ನೀನು ಉಪಯೋಗಿಸುತ್ತಿದೀಯ.

"ಆದರೆ ನಾನು ಹಾಗೆ ಮಾಡಲಿಲ್ಲ. ಹೊಟ್ಟೆ-ಬಟ್ಟೆ-ಹೆಣ್ಣು ಸಾಮಾಜಿಕ ಸ್ಥಾನ-ಗೌರವಗಳಿಗೆ ನನ್ನ ಅಂತರಾತ್ಮದೊಡನೆ ಒಪ್ಪಂದ ಮಾಡಿಕೊಂಡೆ. ಆದರ್ಶಜೀವನವನ್ನು ಸುಮ್ಮನೆ ಮೆಚ್ಚುವವರಲ್ಲಿ ಒಬ್ಬನಾದೆ, ಸಾಧಿಸುವವರಲ್ಲಿ ಒಬ್ಬನಾಗಲಿಲ್ಲ.

"ಇಂದು ಮಾನವ ಮಾನವನಾಗೇ ಉಳಿದಿರುವುದೂ, ನಾಗರೀಕನಾಗಿ, ಸುಸಂಸ್ಕೃತನಾಗಿ, ವಿಚಾರ ಜೀವಿಯಾಗಿ ಜೀವಿಸುತ್ತಿರುವುದೂ ಕೆಲವೇ ಕೆಲವು ಉದಾತ್ತ ವ್ಯಕ್ತಿಗಳ ಆದರ್ಶ ಜೀವನದಿಂದ, ಜಗತ್ತಿನ ಹೊಲಸಿನೊಡನೆ ಅವರು ನಡೆಸಿದ ಹೋರಾಟದಿಂದ, ಅವರು ಸಾಧಿಸಿದ ಫಲದ ದೆಸೆಯಿಂದ. ಅಂಥ ವ್ಯಕ್ತಿಗಳ ತಂಡ-ತಂಡವೇ ಇಂದು ನಮ್ಮ ನಾಡಿಗೆ ಬೇಕಾಗಿದೆ, ಇಡೀ ಲೋಕಕ್ಕೆ ಬೇಕಾಗಿದೆ. ರಾಜೂ, ಇಡೀ ಲೋಕಕ್ಕೆ ದುರ್ಭರವಾಗಿ ಬೇಕಾಗಿದೆ. ಅಂಥವರಲ್ಲಿ ಒಬ್ಬನಾಗಬೇಕೆಂದು ನನ್ನ ಎದೆ ಹಾತೊರೆಯುತ್ತಿದೆ. ಆದರೆ....ರಕ್ತ ತಣ್ಣಗಾಗಿದೆ, ಜೀವನ ಕಠಿಣವಾಗಿದೆ, ಸಂಕಟ, ನೋವು, ಜವಾಬ್ದಾರಿ, ಹೊರಲಾರದಷ್ಟು ಹೆಗಲ ಮೇಲೆ ಬಿದ್ದಿದೆ, ಹೊಟ್ಟೆ ಬಟ್ಟೆಯ ಹೋರಾಟವೇ ನನ್ನನ್ನು ನಿಶ್ಶಕ್ತಿ ಗೊಳಿಸುತ್ತಿದೆ ಏನೇ ಆಗಲಿ

ರಾಜು, ನೀನು ನಿನ್ನ ಆದರ್ಶಗಳನ್ನು ಬಿಡಬೇಡ! ಅವುಗಳ ಸಾಧನ ಮಾರ್ಗದಲ್ಲಿ ಶ್ರಮಪಟ್ಟು, ಕಡೆಗೆ ಅದಕ್ಕಾಗಿ ಪ್ರಾಣತ್ಯಾಗ ಮಾಡುವುದೇ ಲೇಸು. ಈ ಹುಳುಕು ಜೀವನ ಎಂದಿಗೂ ಬೇಡ! ಇದನ್ನು ನೀನು ನಂಬು. ನನ್ನ ಆದರ್ಶ-ಸೌಧಗಳೆಲ್ಲಾ ಆಗಲೇ ಉರುಳಿ ಪುಡಿಪುಡಿಯಾಗಿವೆ. ಈಗ ನಿನ್ನ ಆದರ್ಶ ಸೌಧ, ತಲೆ ಯೆತ್ತಲಿ. ನನ್ನಂತೆ ನೀನೆಂದಿಗೂ ಒಂದು 'ಫೆಯ್ಲ್ಯೂರ್' ಆಗಬೇಡ. ನನ್ನ ಈ ನಿರರ್ಥಕ ಬದುಕೇ ನಿನಗೊಂದು 'ವಾರ್ನಿಂಗ್' ಆಗಿರಲಿ! ನೀನು ಧೈರ್ಯದಿಂದ ಮುಂದೆ ನಡೆ. ಶ್ರೀಕೃಷ್ಣ ಒಳ್ಳೆಯದು ಮಾಡ್ತಾನೆ" ಎಂದರು. ಅವರ ಮಾತುಗಳು ಉದ್ವೇಗ ಪೂರಿತ ವಾಗಿದ್ದುವು. ಭಗ್ನಹೃದಯವೊಂದರಿಂದ. ಜ್ವಾಲಾ ಜಿಹ್ವೆಗಳಿಂದ ಪುಟಿದೆದ್ದು ಬಂದಿದ್ದುವು.

ರಾಜಣ್ಣನಿಗೆ ಅಪರಿಮಿತ ಆನಂದವಾಯಿತು. ಎಲ್ಲಿಲ್ಲದ ಹುಮ್ಮಸ್ಸು, ಅವನ ಹೃದಯ-ಸರಸ್ಸಿನಲ್ಲಿ ತುಂಬಿ ತುಳುಕಾಡಿತು ಕೇಶವಯ್ಯಂಗಾರರ ಬಗೆಗೆ ಭಕ್ತಿಯ ಒಂದು ಬೃಹದಾಕೃತಿಯ ಬುಗ್ಗೆ ಅವನೆದೆಯಲ್ಲಿ ಚಿಮ್ಮಿತು. ಉದ್ವೇಗದಿಂದ ಅವರ ಎರಡು ಹಸ್ತಗಳನ್ನೂ ಹಿಡಿದು,

"ಎಂದೆಂದಿಗೂ ನಿಮ್ಮ ಉಪದೇಶ ಮರೆಯೋಲ್ಲ. ಆಶೀರ್ವಾದ ಮಾಡಿ" ಎಂದು ತುಂಬಿ ಬಂದ ಎದೆಯಿಂದ ನುಡಿದು. ಅವರ ಹಸ್ತಗಳನ್ನು ಕಣ್ಣಿಗೊತ್ತಿಕೊಂಡ. ಅವುಗಳಿಂದ ಧನ್ಯತೆಯ ಕಂಬನಿ ಗಳು ಬಳಬಳನೆ ಉರುಳಿದುವು. ಕೇಶವಯ್ಯಂಗಾರರು ಅವನನ್ನು ಬರಸೆಳೆದು ಎದೆಗವಚಿಕೊಂಡರು.

ರಾಜಣ್ಣನ ಕೊರಳು ಮುಂಗುರುಳುಗಳ ಮೇಲೆ ಅವರ ಕಂಪಿಸುವ ಕೈ ಬೆರಳುಗಳು ಪೂಜ್ಯ ಪ್ರೇಮದ ಅಮೃತ ಲೇಪನ ಗೈಯುತ್ತಿದ್ದುವು. ಅವರು ರಾಜಣ್ಣನನ್ನು ಉದ್ವೇಗ ಭರಿತರಾಗಿ ಅಪ್ಪಿದ್ದರು. ಅವರಿಬ್ಬರನ್ನೂ ತಂಗಾಳಿ ತೀಡಿ ತೀಡಿ ಮುಂದೋಡು ತ್ತಿತ್ತು. ನೀರಿನ ಪುಟ್ಟ ಪುಟ್ಟ ಅಲೆಗಳು ಕೆರೆಯ ಏರಿಗೆ 'ಲೊಚ್-ಲೊಚಕ್!' ಎಂದು ಬಡಿಯುತ್ತಿದ್ದುವು. ನೀಲನಭದಲ್ಲಿ ತಾರೆಗಳು

ಸಂತಸದಿಂದ ಮಿನುಗುತ್ತಿದ್ದುವು ಪೂರ್ಣ ಚಂದ್ರ, ಆನಂದ ಚಂದ್ರನಾಗಿ ಮುಗುಳ್ನಗೆ ಬೀರುತ್ತಿದ್ದ.

ತಾತಾ ವಿಜ್ಞಾನ ಮಂದಿರದ ಗೋಪುರದ ಗಡಿಯಾರ ಡಣ್ ! ಡಣ್ ! ಎಂದು ಗಂಭೀರವಾಗಿ, ಮಂಜುಳವಾಗಿ ಹನ್ನೊಂದು ಬಾರಿ ಗಂಟೆ ಬಾರಿಸಿತು.

ಕೇಶವಯ್ಯಂಗಾರರು, ಆಲಿಂಗನ ಸಡಿಲಿಸಿ, ಸಮಾಧಾನದ ನಿಟ್ಟುಸಿರು ಬಿಟ್ಟು, ಮೇಲೆದ್ದರು.

ಕೆರೆಯ ಡೊಂಕು ಏರಿಯ ಮೇಲೆ ಇಬ್ಬರೂ ಆಳವಾದ ತಾನದಲ್ಲಿ ಮುಳುಗಿ ಮುಂದೆ ಮುಂದೆ ನಡೆಯುತ್ತಿದ್ದರು. ಅವರ ದೇಹಗಳು ಎರಡಾಗಿದ್ದರೂ ಅವರ ಮನ ಏಕೈಕ ಜ್ಯೋತಿಯಂತೆ ಜೊತೆ ಜೊತೆಗೇ ಅವರೊಡನೆ ಅಡಿಯಿರಿಸುತ್ತಿತ್ತು. ಆಗ ಸೊಂಟದ ಹಿಂದೆ ಎರಡು ಕೈಗಳನ್ನೂ ಕಟ್ಟಿ, ಗಂಭೀರವಾಗಿ ಅಡಿಯಿರಿಸುತ್ತಿದ್ದ ರಾಜಣ್ಣನಿಗೆ ತನ್ನ ವಿರೋಧಿಗಳೆಲ್ಲರನ್ನೂ ಕಾಲಿನ ಒಂದೇ ಒಂದು ತುಳಿತದಿಂದಲೇ ಪಾತಾಳಕ್ಕೆ ಮೆಟ್ಟಬಹುದೆನಿಸಿತು. ಕೇಶವಯ್ಯಂಗಾರರ ಪೂಜ್ಯ ಮೂರ್ತಿಯನ್ನು ತಲೆಯ ಮೇಲೆ ಹೊರಬೇಕೆನಿಸಿತು.

## ೧೦

ಗೇಟಿನ ಬಳಿ ಕೇಶವಯ್ಯಂಗಾರರಿಗೆ ತುಂಬಿಬಂದ ಹೃದಯದಿಂದ ಕೈಮುಗಿದು, ಮನೆಗೆ ಬಂದಕೂಡಲೇ ರಾಜಣ್ಣನ ಹುಬ್ಬು ಗಂಟಿಕ್ಕಿತು. ಬಾಗಿಲ ಬಳಿಯೇ ನಾಗಮ್ಮ ದುಗುಡವದನರಾಗಿ, ಕಣ್ಣೀರೊರೆಸಿ ಕೊಳ್ಳುತ್ತಾ ನಿಂತಿದ್ದರು. ಚಂದ್ರಪ್ಪ ಮುಖ ಗಂಟುಹಾಕಿಕ್ಕೊಂಡು ಒಂದು ಪತ್ರಿಕೆಯನ್ನೋದುತ್ತಾ ಸೋಫಾದಲ್ಲಿ ಕುಳಿತಿದ್ದರು. ಗಭೀರ ವಾತಾವರಣ ಮನೆಯೆಲ್ಲವನ್ನೂ ಆವರಿಸಿಕೊಂಡಿತ್ತು.

ನಾಗಮ್ಮನವರು ಅವನನ್ನು ಮಾತಾಡಿಸಲೇ ಇಲ್ಲ. ಚಂದ್ರಪ್ಪ ಪತ್ರಿಕೆಯನ್ನು ಮಡಿಚಿಡುತ್ತಾ, ಕೃತಕ ಸೌಮ್ಯತೆಯಿಂದ, "ಇಷ್ಟು ಹೊತ್ತೂ ಎಲ್ಲಿಗೆ ಹೋಗಿದ್ದೆ ರಾಜು ?" ಎಂದು ಕೇಳಿದರು.

"ಕೇಶವಯ್ಯಂಗಾರರ ಜೊತೆ ತಿರುಗಾಡಲು ಹೋಗಿದ್ದೆ.. ಸ್ವಲ್ಪ ಹೊತ್ತಾಯಿತು" ಎಂದು ರೂಮಿಗೆ ಹೋಗಿ ಪಂಚೆ ಉಟ್ಟು ಬಂದ ರಾಜಣ್ಣ ಆಗತಾನೇ ಚಂದ್ರಪ್ಪ ಕೆಳಗಿರಿಸಿದ್ದ ಪತ್ರಿಕೆಯನ್ನು ಕೈಗೆ ತೆಗೆದುಕೊಂಡು, ಶಿರೋನಾಮೆಗಳನ್ನು ಓದಲು ಯತ್ನಿಸಿದರು. ರಾಜಣ್ಣನಿಗಾಗಲೇ ಅನುಮಾನ ಹೊಳೆದಿತ್ತು. ಬಹುಶಃ ಈ ಸಂಜೆಯ ಘಟನೆ ಇವರಿಗೂ ಅರಿವಾಗಿರಬಹುದು ಎಂದುಕೊಂಡು, ಇನ್ನೂ ಧೈರ್ಯದಿಂದ ಎದುರಿಸಿಬಿಡಬೇಕೆಂದು ತೀರ್ಮಾನಿಸಿಕೊಳ್ಳುತ್ತಿದ್ದ. ಆಗ ಚಂದ್ರಪ್ಪ ಮೆಲುದನಿಯಲ್ಲೇ, "ಹು.. ಬೇಗ ಊಟಮಾಡ್ಹೋಗು ....ಆಗಲೇ ಹನ್ನೊಂದೂವರೆ ಗಂಟೆ ಆಯ್ತು...." ಎಂದರು.

ನಾಗಮ್ಮ ಮೌನವಾಗಿ ಅಡಿಗೆ ಮನೆಗೆ ನಡೆದರು. ರಾಜಣ್ಣನೂ ಅವರ ಹಿಂದೆ ಆಲೋಚನಾಭರಿತನಾಗಿ ನಡೆದ.

ಅವರು ತುಟಿ ಪಿಟಕ್ಕೆನ್ನದೆ ಊಟಕ್ಕೆ ಬಡಿಸುತ್ತಿದ್ದರು. ರಾಜಣ್ಣ ತಲೆಯೆತ್ತದೆ ಊಟ ಮಾಡುತ್ತಿದ್ದ. ಆ ಸ್ತಬ್ಧವಾತಾವರಣ ವನ್ನು ಅವನಿಂದ ತಾಳಲಾಗಲಿಲ್ಲ, ತುತ್ತು ಗಂಟಲಲ್ಲಿ ಇಳಿಯಲಿಲ್ಲ ನಿಜವಾಗಿಯೂ ಇವರಿಗೂ ವಿಷಯ ತಿಳಿದುಹೋಗಿದೆ ಎಂದುಕೊಂಡ.

....ಹೌದು. ಇವರಿಗೂ ವಿಷಯ ಚೆನ್ನಾಗಿಯೇ ಮನದಟ್ಟಾ ಗಿತ್ತು. ನಾಗಮ್ಮ ಒಬ್ಬರೇ ಇದ್ದಾಗ ವರದ ಮನೆಯೊಳಕ್ಕೆ ನುಗ್ಗಿ ಬಂದಿದ್ದ. ರಾಜಣ್ಣನನ್ನೂ, ನಾಗಮ್ಮನನ್ನೂ, ಚಂದ್ರಪ್ಪನನ್ನೂ, ಅವರೆಲ್ಲರ ತಂದೆತಾಯಿಗಳನ್ನೂ ಹೀನಾಮಾನವಾಗಿ ಬೈದು, ಅವನನ್ನು ಪ್ರತಿಭಟಿಸಲು ಬಂದ ಸುಧಾಳ ತಲೆಯಮೇಲೆ ಹೊಡೆದು ಹೊರಟು ಹೋಗಿದ್ದ.

ದುಃಖ, ಅವಮಾನ, ಹೆದರಿಕೆಗಳಿಂದ ತಲ್ಲಣಿಸಿ, ಹಾಸಿಗೆಯಲ್ಲಿ ಉರುಳಿದ್ದ ನಾಗಮ್ಮ, ಪತಿ ಹಿಂತಿರುಗಿದೊಡನೆಯೇ ಈ ಸುದ್ದಿ ಯನ್ನು ಕಣ್ಣೀರು ಹಾಕಿಕೊಂಡು ತಿಳಿಸಿದ್ದರು. ನಂತರ ಚಂದ್ರಪ್ಪ ಶ್ಯಾಮಲಳನ್ನು ಕರೆದು, ಅವಳಿಂದ ಅಂದು ನಡೆದ ಪ್ರಸಂಗವೆಲ್ಲವನ್ನೂ ವಿಷದವಾಗಿ ಅರಿತಿದ್ದರು.

ವರದನ ಗುಂಡಾವರ್ತನೆಯಿಂದ ಚಂದ್ರಪ್ಪನ ಕೋಪ ಮುಗಿಲು

ಮುಟ್ಟಿತ್ತು. ಅವರ ಮನೆಯು ಬಾಗಿಲ ಬಳಿಗೆ ಎಂದೂ ಪುಂಡು ಪೋಕರಿಗಳು ನುಗ್ಗಿ ಬಂದಿರಲಿಲ್ಲ. ಬಾಯಿಗೆ ಬಂದಂತೆ ಮಾತಾಡಿ ಹೋಗಿರಲಿಲ್ಲ ಅಂಥವರನ್ನು ಚಂದ್ರಪ್ಪ ಎಂದೂ ಸುಲಭವಾಗಿ ಕ್ಷಮಿಸುತ್ತಿರಲಿಲ್ಲ. ಮೂಳೆ ಮುರಿದು ಹಾಕುತ್ತಿದ್ದರು. ಆದರೆ ಇದೆಲ್ಲದರಲ್ಲಿ ರಾಜಣ್ಣನ ತಪ್ಪೂ ಬೆರೆತಿದೆ ಎಂದು ಅರಿತು, ವರದನ ಹೇಸಿಗೆ ವರ್ತನೆಯನ್ನು ಸಹಿಸಿದ್ದರು, ನಿಧಾನಿಸಿದ್ದರು.

ರಾಜಣ್ಣ ಕೈತೊಳೆದು ಬಂದ. ಇಷ್ಟುಹೊತ್ತೂ ಬಲವಂತದಿಂದ ಕಣ್ಣು ಮುಚ್ಚಿಕೊಂಡಿದ್ದ ಸುಧಾ ಓಡಿಬಂದು ಅವನನ್ನು ಸೇರಿದಳು. ಟವಲಿನಿಂದ ಒರೆಸಿಕೊಳ್ಳುತ್ತಿದ್ದ ಅವನ ಕೈಬೆರಳು ಹಿಡಿದು "ಇವತ್ತು ಹದಿನೆಂಟನೇ ಮಗ್ಗಿ ಹೇಳಲಾ....ಚೆನ್ನಾಗಿ ಕಲ್ತಿದೀನಿ !" ಎಂದಳು. ರಾಜಣ್ಣ ಅವಳ ತಲೆ ಸವರಿ, "ಇವತ್ತು ಬೇಡ.... ನಾಳೆ ಹೇಳುವೆ ಯಂತೆ" ಎಂದು, ಚಂದ್ರಪ್ಪನ ಬಳಿಗೆ ಬಂದ. ಚಂದ್ರಪ್ಪ ಒಂದು ಸಿಗರೇಟು ಎಳೆಯುತ್ತಾ ಅವನನ್ನು ಕುಳಿತುಕೋ ಎಂದು ಕೈತೋರಿ ಸಿದರು. ಅವನು ಕುಳಿತೊಡನೆಯೇ ಅವನನ್ನೇ ಒಂದು ನಿಮಿಷ ದಿಟ್ಟಿಸಿನೋಡಿ, "ರಾಜು, ನೀನು-ವರದ ಈ ದಿನ ಹೊಡೆದಾಡಿದಿರಾ?" ಎಂದು ಸ್ಥಿರವಾದ ಕಂಠದಲ್ಲಿ ಕೇಳಿದರು. ರಾಜಣ್ಣ ತಲೆ ಅಲ್ಲಾಡಿ ಸುತ್ತಾ "ಇಲ್ಲ....ನಾವು ಹೊಡೆದಾಡಲಿಲ್ಲ .... ಅವನು ಕಾಲು ಕೆರೆದು ಕೊಂಡು ಬಂದರೂ ನಾನು ಹೊಡೆದಾಟ ತಪ್ಪಿಸಿದೆ....ಏಕೆ?" ಎಂದ.

ಚಂದ್ರಪ್ಪ ಬೂದಿಯನ್ನು ಆಷ್-ಟ್ರೇನಲ್ಲಿ ಕೆಡವಿ, ಅವನನ್ನೇ ತಿಸ್ಕಾರ ದೃಷ್ಟಿಯಿಂದ ನೋಡುತ್ತಾ, "ಏತಕ್ಕೂ ಇಲ್ಲ....ಇನ್ನು ಮೇಲಾದರೂ ನೀನು ಆ ಹುಡುಗಿ ಜೊತೆ 'ಫ್ಲರ್ಟ್' ಮಾಡುವುದು ನಿಲ್ಲಿಸ್ತೀಯಾ ?" ಎಂದು ಕೇಳಿದರು.

ರಾಜಣ್ಣ ಸೆಟೆತು ಕುಳಿತು.

"ನಾನು ಅವಳ ಜೊತೆ 'ಫ್ಲರ್ಟ್' ಮಾಡುತ್ತಿಲ್ಲ" ಎಂದು ಪೇಪರಿನಲ್ಲಿ ನೋಟ ಬೆರೆಸಿದೆ. ಚಂದ್ರಪ್ಪ-ಅವನನ್ನೇ ಅಸಮಾ ಧಾನದಿಂದ ನೋಡುತ್ತಾ,

"ಹಾಗಾದರೆ ಇನ್ನೇನು ಮಾಡ್ತಿದೀಯ, ಅವಳೊಡನೆ ನಿನ್ನ

ಫ್ಲರ್ಟೇಷನ್ ಮಿತಿ ಮೀರಿದ್ದಕ್ಕಲ್ಲವೇ ಈದಿನ ವರದ ಮನೆಗೆ ಬಂದದ್ದು; ಗೌರವಸ್ಥರ ಮಾನ ಹಾಳಾದುದ್ದು. ಇದಕ್ಕೆ ನೀನೇನು ಹೇಳ್ತೀಯ ?" ಎಂದು ಕೇಳಿದರು.

ರಾಜಣ್ಣ ಕುಳಿತೆಡೆಯೇ ಮಿಸುಕಾಡಿದ. ವರದ ಇಲ್ಲಿಗೂ ಬಂದಿರುವುದು ಅವನಿಗೆ ಖಚಿತವಾಯಿತು. ಅವನು ಬಂದು ಏನು ಹೇಳಿದನೆಂದು ಕೇಳುವ ಅಗತ್ಯ ಕಾಣಲಿಲ್ಲ. ಅವನು ಏನು ಹೇಳಿರಬಹುದು, ಎಂಥ ಅವಾಚ್ಯ ಶಬ್ದಗಳನ್ನು ಬಳಸಿರಬಹುದು, ಎಷ್ಟು ಹೇಸಿಗೆ ಹುಟ್ಟಿಸುವಂತೆ ವರ್ತಿಸಿರಬಹುದು ಎಂಬುದೆಲ್ಲಾ ಅವನಿಗೆ ಹೊಳೆಯಿತು. ಇರುವ ಸಂಗತಿಯನ್ನು ತನ್ನ ಅಕ್ಕ ಭಾವ ಇವರೆದುರಿಗೂ ಮುಚ್ಚು ಮರೆ ಮಾಡುವ ಕಾಲ ಕಳೆದು ಹೋಯಿತು ಎಂದರಿತು, ನಿರ್ಧರದ ಮನದಿಂದ ಒಮ್ಮೆ ನಿಟ್ಟುಸಿರು ಬಿಟ್ಟು ನೆಟ್ಟಗೆ ಕುಳಿತು, "ಭಾವ, ನಾನು ಶಾಂತಳೊಡನೆ 'ಫ್ಲರ್ಟ್' ಮಾಡುತ್ತಿಲ್ಲ, ನಾನು ಅವಳನ್ನು ಪ್ರೇಮಿಸಿದ್ದೇನೆ. ಅವಳನ್ನೇ ವಿವಾಹವಾಗ್ತೇನೆ !" ಎಂದು ಹೇಳಿದ.

ನಾಗಮ್ಮನವರ ಮುಖ ಗಂಟಿಕ್ಕಿತು. ಚಂದ್ರಪ್ಪ ವಿನೋದ ಭರಿತ ಆಶ್ಚರ್ಯದಿಂದ ಸೋಫಾದಲ್ಲಿ ನಿಧಾನವಾಗಿ ಹಿಂದಕ್ಕೊರಗಿದರು. ತಮ್ಮ ಎರಡು ತೋಳುಗಳನ್ನೂ ವಿಶಾಲವಾಗಿ ಹರಡಿ, ಕುತೂಹಲಮಯ ನೋಟದಿಂದ ರಾಜಣ್ಣನನ್ನೇ ನೋಡತೊಡಗಿದರು. ಅಣಕ ಬೆರೆತ ಧ್ವನಿಯಲ್ಲಿ, "ಹಾಗಾದರೆ ನೀವು 'ಎಂಗೇಜ್ಡ್ ಕಪಲ್ಸ್' ಬರೀ 'ಫ್ಲರ್ಟಿಂಗ್ ಬಾಯ್ ಅಂಡ್ ಗರ್ಲ್' ಅಲ್ಲಾ !" ಎಂದು ಕೇಳಿದರು.

ರಾಜಣ್ಣ ಸ್ವಲ್ಪ ಅಸಹನೆಯಿಂದಲೇ "ಹೌದು, ನಾವು ಈಗ 'ಎಂಗೇಜ್ಡ್-ಕಪಲ್ಸೇ !' ಅದರ ಮೇಲೆ ಯಾರ ವಕ್ರ ನೋಟವೂ ಬೇಕಾಗಿಲ್ಲ" ಎಂದುಬಿಟ್ಟ.

ಚಂದ್ರಪ್ಪನ ನೋಟ ತೀಕ್ಷ್ಣವಾಯಿತು. ವದನ ನಿರ್ಧಾರದ ಭಾವ ತಾಳಿತು. ರಾಜಣ್ಣನನ್ನೇ ಕೆಲವು ಕಾಲ ಎವೆಯಿಕ್ಕದೆ ನೋಡಿದರು. ಅನಂತರ ಒಮ್ಮೆ ಆಳವಾಗಿ ಸಿಗರೇಟಿನ ಹೊಗೆ

ಎಳೆಯುತ್ತಾ, "ರಾಜು, ನೀನೊಬ್ಬ 'ಸ್ಮಾರ್ಟ್–ಗೈ' ಎಂದು ನಾನು ತಿಳಿದಿದ್ದೆ. ಆದರೆ ನನ್ನ ನಂಬಿಕೆಗೆ ನೀನೀಗ ಬಲವಾದ ಏಟುಕೊಟ್ಟೆ ನೀನಿಷ್ಟು 'ಸಿಂಪಲ್-ಟನ್' ಎಂದು ನಾನು ಭಾವಿಸಿರಲಿಲ್ಲ" ಎಂದರು.

ರಾಜಣ್ಣ ಏನನ್ನೂ ಉತ್ತರ ಕೊಡಲಾರದೆ ಕುಳಿತಿದ್ದ. ಚಂದ್ರಪ್ಪ ಒಂದೆರಡು ಬಾರಿ ಹೊಗೆ ಎಳೆದು, "ನೀನು ಆ ಹುಡುಗೀನೇ ಮದ್ವೆ ಆಗ್ತೀನೆಂದು ಹೇಳಿದ್ದು ಕೇಳಿ ನಾನು ಆಶ್ಚರ್ಯಪಟ್ಟೆ ಎಂದುಕೊಂಡೆಯಾ.. !" ಎಂದು ರಹಸ್ಯ ಆಪ್ತತೆಯಿಂದ ಕೇಳಿದರು.

ರಾಜಣ್ಣ ಅವರೊಡನೆ ನೋಟ ಬೆರೆಸದೆ, 'ಏನನ್ನಾದರೂ ಹೇಳಲಿ....ತಾಳ್ಮೆಯಿಂದ ಕೇಳುವ ಭಾರ ನನ್ನದು....' ಎಂಬ ಮನೋ ಭಾವದಿಂದ ಮೌನವಾಗಿದ್ದ. ಅವರು ಅವನನ್ನೇ ಎವೆಯಿಕ್ಕದೆ ನೋಡಿದರು. ಅನಂತರ ವಿಷಾದದಿಂದ ತಲೆ ಅಲ್ಲಾಡಿಸುತ್ತಾ ಹೇಳ ಲಾರಂಭಿಸಿದರು. "ಇಲ್ಲ ರಾಜು, ನೀನು ಅವಳನ್ನೇ ಮದುವೆ ಯಾಗ್ಬೇಕು ಎಂದದ್ದು ಕೇಳಿ ನಾನೊಂದು ಚೂರೂ ಆಶ್ಚರ್ಯಪಡ ಲಿಲ್ಲ. ನೀನು ಪಟಿತು ಕುಳಿತಕೂಡಲೇ ಹಾಗೆ ಹೇಳ್ತೀಯ ಎಂದು ತಿಳಿದ್ಕೊಂಡುಬಿಟ್ಟೆ.

"ನೋಡು, ಈಗಿನ ಕಾಲದ ಹುಡುಗರಿಗೆ ಹೆಣ್ಣಿನ ವಿಚಾರದಲ್ಲಿ ಸ್ವಲ್ಪಾನೂ ತಿಳುವಳಿಕೆ ಇಲ್ಲ. .... ಅನೇಕ ವರ್ಷ ಹೆಣ್ಣು ಕಾಣದ ಹುಡುಗ ಸೊಗಸಾದ 'ಫಿಗರ್', 'ಫೀಚರ್' ... ಇರೋ ಹುಡ್ಗೀನ ನೋಡಿ, ಒಂದ್ಸಲ ಮಾತಾಡಿಸಿಬಿಟ್ರೆ ಸಾಕು, ಅವಳೇ ನನ್ನ 'ಐಡಿಯಲ್-ಮೇಟ್' ಎಂದು ತೀರ್ಮಾನ ಮಾಡ್ಬಿಡ್ತಾನೆ. ದುಡ್ಡಿಲ್ದೆ ಪರದಾಡಿ ವಿದ್ಯೆ ಕಲಿತ ಹುಡುಗ ಸ್ವಲ್ಪ ಹಣವಂತರ ಮಗಳ್ನ ಕಂಡ ಕೂಡ್ಲೇ ನನ್ನ ಭಾಗ್ಯಲಕ್ಷ್ಮಿ ಅವಳೇ ಎಂದು ಭಾವಿಸ್ಕೊಳ್ತಾನೆ. ಸ್ವಲ್ಪ 'ಐಡಿಯಲಿಸ್ಟಿಕ್' ಆಗಿರೋ ಯುವಕ ನಾಲ್ಕಾರು ಪುಸ್ತಕ ಓದಿ, ಆದರ್ಶ, ಸ್ತ್ರೀ ಸ್ವಾತಂತ್ರ್ಯ, ಸಮಾನತ್ವ, ಮುಂತಾದ ಮಾತಾಡೋ ಹುಡುಗೀ ಕೈಮುಟ್ಟಿದ ಕೂಡ್ಲೇ ಸಿಕ್ಕಿಬಿಟ್ಟಳು ನನ್ನ 'ಐಡಿಯಲಿಸ್ಟಿಕ್ ಸ್ಪೌಸ್' ಎಂದುಕೊಂಡ್ಬಿಡ್ತಾನೆ. ಇದಾವುದೂ ಸಾಧ್ಯವಿಲ್ದಿರೋ ಬಹಳ ಜನ ಹುಡುಗರಿಗೆ ಕಣ್ಣು, ಮೂಗು, ಮೂತಿ ನೆಟ್ಟಗಿರೋ

ಯಾವ ಹುಡುಗೀನಾದ್ರೂ ಸಿಗಲಿ...'ಓ.ಕೆ.' ಎನ್ನಿಸಿಬಿಡುತ್ತೆ. ತಮ್ಮ ಗೋಳಿನ ಜೀವನದ ಮೊದಲನೇ ನಾಲ್ಕಾರು ವರ್ಷ ಸುಖವಾಗಿ ತಂಪಾಗಿ ಕಳೆಯೋಕೆ ಈ ಕೋಮಲೆಯೇ ಸಾಕು ಎನಿಸುತ್ತೆ. 'ಎತ್ತು ಈಯ್ತು ಅಂದರೆ ಕೊಟ್ಟಿಗೆಗೆ ಕಟ್ಟು' ಎನ್ನೋಹಾಗೆ ಅಪ್ಪ ಅಮ್ಮ ಒಪ್ಪಿದರು ಅಂದಕೂಡ್ಲೇ ಆ ನೆರೆದ ಹುಡುಗಿ ಕೈಮುಟ್ಟಲು ಹಾತೊರೀತಿರ್ತಾರೆ.

"ಆ ಅಮಲಿನಲ್ಲಿ ಅವರಿಗೆಲ್ಲಾ ತಾವೇನು ಮಾಡ್ತಿದೇವೆ? ಹಾಗೆ ಮಾಡೋದರಿಂದ ತಮ್ಮ ಜೀವನ ಏನಾಗುತ್ತೆ? ಯಾವ ಗುರಿ ಮುಟ್ಟುತ್ತೆ? ಎಂಬ ವಿವೇಚನೆ ಒಂದು ಚಿಕ್ಕಾಸಿನಷ್ಟೂ ಇರೋಲ್ಲ.

ಆಗ ಅವರು ಯಾವ ಕಡೇಗೆ ನೋಡ್ಲಿ ... ಕಪಲ್ಸ್! ಕಪಲ್ಸ್!!—ಗಳೇ. ಕೈ ಕೈ ಹಿಡ್ಕೊಂಡು ಸಿನಿಮಾಗ್ಹೋಗ್ತಿರೋ ಕಪಲ್ಸ್, ವಾಕಿಂಗ್ ಹೋಗ್ತಿರೋ ಕಪಲ್ಸ್, ಪಾರ್ಕ್‌ಬೆಂಚಿನ ಮೇಲೆ, ಸಿಟಿ ಬಸ್ಸಿನಲ್ಲಿ ಪಕ್ಕಪಕ್ಕದಲ್ಲೇ, ಮೈಗೆ-ಮೈ ತಗುಲಿಸಿಕೊಂಡು ಕುಳ್ತಿರೋ ಕಪಲ್ಸ್.... ಎಲ್ಲೆಲ್ಲೂ ಕಪಲ್ಸೇ! ಇಡೀ ಪ್ರಪಂಚವೇ ಕಪಲ್‌ಗಳ ಒಂದು 'ಕಾರ್ನಿವಲ್!' .... ಒಂದು 'ಮೆರ್‍ರೀ-ಗೋ-ರೌಂಡ್!'....ಆಗಿಬಿಟ್ಟಂತೆ ಕಾಣುತ್ತೆ.

"ಅದನ್ನು ನೋಡ್ತಾ ನೋಡ್ತಾ ಅವರ ಮೈ ಝುಮ್ಮೆಂದು ಬಿಡುತ್ತೆ! ಒಂದು ಕ್ಷಣವೂ ತಡಮಾಡದಂತೆ ತಮ್ಮ 'ಫ್ಯಾನ್ಸಿ'ಯ 'ಐಡಿಯಲ್ ಗರ್ಲ್' ಕೈಹಿಡುಕೋತಾರೆ. ಹಿಂದೆ ಮುಂದೆ ನೋಡದೆ ಆ 'ಮೆರ್‍ರೀ-ಗೋ-ರೌಂಡ್'ನ ಒಂದು ಕುದುರೆ ಮೇಲೆ ಹಾರಿಬಿಡ್ತಾರೆ.

"ಮೊದಲು ಮೊದಲು ಅವರಿಗೆ ತಾವು ಎಲ್ಲಿದೇವೆಂದೇ ಗೊತ್ತಾಗೋಲ್ಲ....ಹುಡುಗಿ ಪಕ್ಕದಲ್ಲಿ ಕುಳ್ತಿರ್ತಾಳೆ.... ಕುದುರೆ ಕುಣೀತಿರುತ್ತೆ ....ಚಕ್ರ ತಿರುಗುತ್ತಿರುತ್ತೆ .... ಬಣ್ಣಬಣ್ಣದ ದೀಪಗಳು ಹತ್ತಿ ಹತ್ತಿ ಆರುತ್ತಿರುತ್ತೆ. ಆಗ ಅವರಿಗೆ ಮರದ ಕುದುರೆ ಮೇಲೆ ಕುಳಿತಿದೇವೆಂದೇ ಗೊತ್ತಾಗೋಲ್ಲ .... ಹಂಸದ ಬೆನ್ನಮೇಲೆ ಕುಳಿತು, ಚಂದ್ರನ ಕಡೆಗೆ ಹಾರಿಹೋಗ್ತಿದೇವೆ....ಎಂದು ತಿಳೀತಾರೆ!

"ಹಾಗೇ ಸ್ವಲ್ಪಕಾಲ ಕಳೆಯುತ್ತೆ.....ನಂತರ ಅವರ ಅಮಲು

ಇಳಿಯುತ್ತೆ..... ಈಗ ಬಣ್ಣ ಬಣ್ಣದ ದೀಪಗಳು ಹಾರಿಹೋಗಿರುತ್ತೆ..... ಆ 'ಕಾರ್ನಿವಲ್' 'ಕ್ಲೋಸ್' ಆಗಿರುತ್ತೆ. ...... . ಆದರೆ ಆ 'ನೆವರ್ ಎಂಡಿಂಗ್ - ಮೆರ್‍ರಿ - ಗೋ - ರೌಂಡ್!' ತಿರುಗುತ್ತಲೇ ಇರುತ್ತೆ. ಕೂಡಲೇ ಅವರು ಕುಳಿತಿರೋ ಮರದ ಕುದುರೆ ಬೆನ್ನಿನಲ್ಲಿರೋ ನೊಳೆಗಳು ಚುಚ್ಚೋದು ಕಾಣಿಸುತ್ತೆ. ಆ ಕುದುರೆ ಡೊಳ್ಳು ಹೊಟ್ಟೇಲಿರೋ ಇರುವೆ, ಕೆಂಜಿಗ, ಕೆಂಜೇಳುಗಳು ಮೈಮೇಲೆ ಹರಿದಾಡ್ತಿರೋದು ಕಾಣಿಸುತ್ತೆ.....ಅದಕ್ಕೂ ಘೋರವಾದದ್ದೇನೆಂದರೆ ಅವರ 'ಐಡಿಯಲ್ ಪಾರ್ಟ್‌ನರ್'ನ 'ಫರ್‌ಫ್ಯೂಮ್' ಮಾತ್ರವಲ್ಲದೆ, 'ಪರ್‌ಸ್ಪಿರೇಷನ್' ಸಹ ಮೂಗಿಗೆ ಬಡಿಯಲು ಶುರೂ ಮಾಡಿರುತ್ತೆ.

"....'ಪರ್ಫೆಕ್ಟ್-ಫಿಗರ್-ಫೀಚರ್'ನ ಬೆಡ್-ಮೇಟ್ ಆಗಿದ್ದವಳು ಈಗೊಬ್ಬ 'ಬೆಡ್-ಬಗ್' ಆಗಿರ್ತಾಳೆ. ಸವಿಯಾದ ಶ್ರೀಮಂತ ಕನ್ಯೆ ಈಗೊಬ್ಬ 'ಕ್ರೂಯಲ್-ರಿಂಗ್-ಮಾಸ್ಟರ್' ಆಗಿರ್ತಾಳೆ........ 'ಸೆಲೆಸ್ಟಿಯಲ್ ಲೊವ್'ನ ಆ 'ಡ್ರೀಮ್-ಗರ್ಲ್' ಈಗೊಬ್ಬ 'ವರ್ಡ್ಲೀ...., ಲಕ್ಷುರಿ ಲೊವ್ವಿಂಗ್, ಪವರ್-ಲೊವ್ವಿಂಗ್' ವುಮನ್ ಆಗಿರ್ತಾಳೆ....ತಾನು ಮಾತ್ರ ಒಬ್ಬ 'ಕಮಂಗಿ' ಆಗಿರ್ತಾನೆ! .... ಅವಳ ತಾಳಕ್ಕೆ ತಕ್ಕಂತೆ ಕುಣೀದಿದ್ದರೆ ಇಬ್ಬರೂ ಆ ಕುದುರೆಯಿಂದ ಕೆಳಕ್ಕೆ ಬೀಳ್ತಾರೆ .... ಕೆಳಗಡೆ ಯಾವ ಪ್ರಪಾತ ಇದೆಯೋ ಆ ಕತ್ತಲೇಲ್ಲಿ ಕಾಣೋಲ್ಲ!

"ಆಗ ಅವರಿಗೆ 'ಅಯ್ಯೋ!....ಮದುವೆ ಒಂದು ಮೋಸ!!" ಎನಿಸುತ್ತೆ ... 'ಮೆರ್‍ರೀ-ಗೋ-ರೌಂಡ್' ಒಂದು 'ಸಾರೀ-ಗೋ-ರೌಂಡ್' ಆಗಿ ಕಾಣುತ್ತೆ. ಈ ಕುದುರೆ ಬಿಟ್ಟು ಬೇರೆ ಕುದುರೇಗೆ ಹಾರೋಣ ಅಂತ ನೋಡ್ತಾರೆ....ಆದರೆ ಸಾಧ್ಯವಾಗದೆ, ಕೆಳಗೆಲ್ಲಿ ಬೀಳ್ತೇವೋ ಎಂದು ಹೆದರಿ, ಒಬ್ಬರನ್ನೊಬ್ಬರು ಬಲವಾಗಿ ಅನಿವಾರ್ಯವಾಗಿ, ಅತ್ತುಕೊಳ್ತಾ ಅಪ್ಪಿಕೋತಾರೆ .... 'ನಾಥಾ', .... 'ಚಿನ್ನಾ!' ಎಂದು ಒಬ್ಬರು ಇನ್ನೊಬ್ಬರ ಕಣ್ಣೀರೊರಸಿ, ಮೂಗೊರೆಸುತ್ತಾ, ಕಹಿ-ಸಿಹಿ, ಕಷ್ಟ-ಸುಖ, ಇವನ್ನು ಸಹಿಸಿಕೋತಾ, ಆ ಕುದುರೆ ಮೇಲೆ ಕೆಳಕ್ಕೆ ಮೇಲಕ್ಕೆ, ಕೆಳಕ್ಕೆ-ಮೇಲಕ್ಕೆ, ಸುತ್ತಿ-ಸುತ್ತಿ, ಸುತ್ತಿ-ಸುತ್ತೀ

ಸುಸ್ತಾಗಿ,........ 'ಅಯ್ಯೋ ಭಗವಂತಾ! ಏಕಪ್ಪಾ ಮದುವೆ ಮಾಡಿಕೊಂಡೇ!.... ಸಾಕು ಮಾಡೋ ಈ ಪಾಪಿ ಜನುಮಾ....!' ಎಂದು ಕೂಗಿಕೋತಿರ್ತಾರೆ........ ಇವರೊಬ್ಬರೇ ಅಲ್ಲ ... 'ಆ ಮೆರ್ರ್ರಿ-ಗೋ-ರೌಂಡ್'ನಲ್ಲಿ ಕುಳಿತ ಮುಕ್ಕಾಲುಪಾಲು ಕಪಲ್ಸ್ ಎಲ್ಲಾ....! ಹೀಗೇ ರಾಜು....ಈಗಿನ ಕಾಲದ ವಿವಾಹಗಳು!

"ನಾನು ಇಂಥ ನೂರಾರು ಮದುವೆಗಳ್ನ ನೋಡಿದೇನೆ. ಎಲ್ಲಾ 'ಸೋಡಾ-ಬಾಟಲ್ ಸ್ಪಿರಿಟ್ ಪ್ರೇಮಗಳೇ!' ಎಲ್ಲಾ 'ಪಾಸಿಂಗ್-ಫ್ಯಾನ್ಸಿ'ಗಳೇ!....ನೀನೂ ಹಾಗಾಗಬೇಡ. ನನ್ನ ಮಾತು ಸ್ವಲ್ಪಕೇಳು" ಎಂದು ನಗುತ್ತಾ ಮತ್ತೊಂದು ಸಿಗರೇಟು ಹೊತ್ತಿಸಿದರು.

ರಾಜಣ್ಣ ತಲೆಬಾಗಿಸಿ, ಅವರು ವಿನೋದದಿಂದ ಹೇಳಿದ್ದನ್ನೆಲ್ಲಾ ಆಲಿಸಿದ್ದ. ಒಮ್ಮೊಮ್ಮೆ ನಸುನಗುತ್ತಾ ತಲೆಯೆತ್ತಿದಾಗ ನಾಗಮ್ಮನ ದುಗುಡವದನದಲ್ಲೂ ಮುಗುಳು ನಗೆಯ ನೇತ್ರಗಳು ಕಂಡಿದ್ದುವು.

ಈಗ ಚಂದ್ರಪ್ಪ ಆಳವಾಗಿ ಹೊಗೆಯೆಳೆದು ವರ್ತುಲಾಕೃತಿಯ ಹತ್ತಾರು ಧೂಮದ ಉಂಗುರಗಳನ್ನು ಗಾಳಿಯಲ್ಲಿ ತೇಲಿಬಿಟ್ಟು, ರಾಜಣ್ಣನನ್ನೇ ನೋಡುತ್ತಾ, 'ಏನು ರಾಜು? ........ ಏನು ನಿನ್ನ ತೀರ್ಮಾನ? ಈಗಲೂ ಮದುವೆ ಆಗಬೇಕೆಂತಲೇ ಇದ್ದೀಯಾ?...." ಎಂದು ಕೇಳಿದರು.

ರಾಜಣ್ಣ ಅವರನ್ನೇ ದಿಟ್ಟಿಸಿ ನೋಡಿ, "ಹಾಗಾದರೆ ವಿವಾಹದಲ್ಲಿ ಸುಖವೇ ಇಲ್ಲ, ತೃಪ್ತಿಯೇ ಇಲ್ಲ ಎಂದೇ ನಿಮ್ಮ ಅಭಿಪ್ರಾಯ?" ಎಂದು ಕೇಳಿದ.

ಚಂದ್ರಪ್ಪ ಪತ್ನಿಯ ಕಡೆಗೆ ಒಮ್ಮೆ ನಗೆಯ ನೋಟ ಹೊರಳಿಸಿ, ಮತ್ತೆ ರಾಜಣ್ಣನನ್ನು ನೋಡುತ್ತಾ, "ನಾನು ಹಾಗೆ ಹೇಳಿದೆನೇ ರಾಜು ವಿವಾಹದಲ್ಲಿ ಒಬ್ಬರಿಗೂ ಸುಖ ಸಂತೃಪ್ತಿ ಇಲ್ಲ ಎಂದರೆ ನನ್ನನ್ನು ಒಬ್ಬ 'ಕ್ರೇಜಿ-ಫೂಲ್' ಎಂದಾರು! ನಾನು ಹೇಳಿದ್ದು ನಿನ್ನ ಹಾಗೆ ಅವಸರ ಬಿದ್ದು ಮದುವೆ ಆಗೋರ ವಿಚಾರ. 'ಲೊವ್-ಮ್ಯಾರೇಜ್' ಮತ್ತು 'ಲೊವ್-ಲೆಸ್-ಮ್ಯಾರೇಜ್'ಗಳ ವಿಚಾರ. ಮದುವೆ

ಸುಖಕರವಾಗಿರಬೇಕಾದರೆ ಇವೆರಡಕ್ಕೂ ನಡುವಣ 'ಗೋಲ್ಡನ್ ಮೀನ್' ಉತ್ಕೃಷ್ಟ. ಶೇಕಡಾ ಐವತ್ತು ಪ್ರೇಮ ಉಳಿದ ಐವತ್ತು ಭಾಗ ಪರಸ್ಪರ ಅನುಸರಿಸಿಕೊಂಡು ಹೋಗೋ ಬುದ್ಧಿ. ಇದರ ಜೊತೆಗೆ ಆ ವಿಧಾತನೂ ಇಬ್ಬರ ಹಣೇಲ್ಲಿ ಅದೃಷ್ಟದ ಗೆರೆ ಎಳೆದಿರ ಬೇಕು! ನೋಡು ನಾನು ಎಂದಾದರೂ ನಿಮ್ಮಕ್ಕನಂಥ ಹೆಂಡತಿ ಸಿಗುತ್ತಾಳೆ ಎಂದುಕೊಂಡಿದ್ದೆನೇ? ಮೊದಲಿನಿಂದ ನಾಗು ನನ್ನ ಹೆಂಡತಿ ಆದರೆ ಎಷ್ಟು ಚೆನ್ನಾಗಿರುತ್ತೆ! ಎಂದುಕೊಂಡಿದ್ದೆ. ಅವಳೂ ನನ್ನನ್ನು ಕಂಡು ಅದೇ ರೀತಿ ಅಂದುಕೊಳ್ತಿದ್ದಳೇನೋ ಇದುವರೆಗೂ ಅವಳದನ್ನು ಬಾಯಿಬಿಟ್ಟಿಲ್ಲ! ಸರಿ, ನಿಮ್ಮ ಅಪ್ಪಾಜಿ ನಮ್ಮಿಬ್ಬರಿಗೂ ಗಂಟು ಹಾಕಿ ಬಿಟ್ರು. ನಾವು ನಿಜವಾಗಿಯೂ ಒಂದು 'ಸ್ವೀಟ್ ಹೋಂ' ಮಾಡಿಕೊಂಡ್ವಿ. ಆದರೆ ನಿನಗೆ ಹೇಳ್ತೀನಿ ತಿಳಿದುಕೋ. ನಾನು ಇನ್ನೂ ಅವಳನ್ನು ಸಂಪೂರ್ಣವಾಗಿ ತಿಳಿದುಕೊಂಡಿಲ್ಲ. ಅವಳೂ ನನ್ನನ್ನು ಸಂಪೂರ್ಣವಾಗಿ ತಿಳಿದುಕೊಂಡಿಲ್ಲ. ನಾವಿಬ್ಬರೂ ಸ್ವಲ್ಪ ಮಟ್ಟಿಗೆ ಪರಸ್ಪರ 'ಸ್ವೀಟ್-ಅನ್‌ನೋನ್'ಗಳೇ! ಅದೇ ನಮ್ಮ ಮ್ಯಾರೇಜ್‌ನ 'ಛಾರ್ಮ್' ರಾಜು! ಹಾಗಲ್ಲದೆ, ಒಬ್ಬ ಹುಡುಗ, ಮತ್ತೊಬ್ಬ ಹುಡುಗಿಯ ಸ್ವಭಾವವನ್ನೇ ಕೈ ಕನ್ನಡಿಯಂತೆ ಕಂಡು ಬಿಟ್ಟರೆ, ಅದರಲ್ಲೇನಿದೆ 'ಛಾರ್ಮ್'! ಹೋಗಲಿ, ಅವನು ಹಾಗೆ ಕಾಣುವುದಾದರೂ ಹೇಗೆ ಸಾಧ್ಯ? ಆ ಹುಡುಗಿ ಇನ್ನೂ ಒಬ್ಬ ಹುಡುಗಿಯೇ! ಅವಳಿನ್ನೂ ಬೆಳೀಬೇಕು. ಅವಳ 'ವುಮನ್‌ಹುಡ್' ಅರಳಬೇಕು. ಆಗ ಅವಳ ನಿಜ ಸ್ವಭಾವ ಗೊತ್ತಾಗುತ್ತೆ. ಮೊದಲು ಮೊದಲು ಅವನು ಕಂಡಿರೋದೆಲ್ಲ ಅವಳ ಹೊಸ ಯೌವನದ ಎಳೇ ನಿಂಬೇಕಾಯಿನಂಥ ಮನಸ್ಸು ಏಕೆಂದರೆ ಅದಕ್ಕೆ ಒಪ್ಪಿ ತಲೆ ಹಾಕುವಂಥ ಬುದ್ಧಿ. ಆದರೆ, ಅವಳು ಮದುವೆಯಾಗಿ ಬೆಳೀತ ಬೆಳೀತ ತುಂಬಾ ಬದಲಾಯಿಸುತ್ತಾಳೆ. ಅದಕ್ಕೇ ಹುಡುಗ ಹುಡುಗಿಯರ ಈ 'ಸೋ ಕಾಲ್ಡ್ ಲೊವ್ ಮ್ಯಾರೇಜ್'ಗಳು ಒಮ್ಮೊಮ್ಮೆ ಬೆಲೂನಿನಂತೆ ಒಡೆದು ಹೋಗೋದು. ನೀನೂ ಹಾಗೆ ದುಡುಕಬೇಡ. ಈಗಲೇ ಮದುವೆಯಾಗುವ ಕಾಲವಲ್ಲ ನಿನಗೆ. ಮೊದಲು ನಿನ್ನ 'ಕೆರಿಯರ್'ನಲ್ಲಿ

ನೀನು 'ಸಕ್ಸಸ್' ಆಗಬೇಕು. ನಂತರ 'ಸಕ್ಸಸ್ ಫುಲ್' ಮದುವೆ ತಾನೇ ತಾನಾಗಿ ಆಗುತ್ತೆ" ಎಂದರು.

ರಾಜಣ್ಣ ಅವರನ್ನೇ ನೋಡುತ್ತಾ, "ನಾನು ಈಗಲೇ ಮದುವೆಯಾಗಬೇಕು ಎಂದು ಎಲ್ಲಿ ಹೇಳಿದೆ? ನಾನು ಮದುವೆಯಾದರೆ ಶಾಂತಳನ್ನೇ ಆಗೋದು ಎಂದು ತಿಳಿಸಿದೆ, ಅಷ್ಟೆ" ಎಂದ.

ನಾಗಮ್ಮನವರ ಮುಖ ಪುನಃ ಗಂಟಿಕ್ಕಿತು. ಚಂದ್ರಪ್ಪ ಸೆಟೆತು ಕುಳಿತು, "ನಾನಿಷ್ಟು ಹೇಳಿದ ಮೇಲೂ ನಿನಗೆ ಬುದ್ಧಿ ಬರಲಿಲ್ಲವೇ ರಾಜು! ನೀನು ಅವಳನ್ನೇ ಮದುವೆ ಆಗಬೇಕೆಂದಿರುವುದು ಅಷ್ಟು ದೃಢ ನಿಶ್ಚಯ ಏನು?" ಎಂದು ಅಸಮಾಧಾನ ಬೆರೆತ ಧ್ವನಿಯಲ್ಲಿ ಕೇಳಿದರು.

ರಾಜಣ್ಣ ಗಂಭೀರವಾಗಿ ತಲೆ ಹಾಕುತ್ತಾ, ದೃಢ ಕಂಠದಲ್ಲಿ, "ಹೌದು" ಎಂದ.

ಚಂದ್ರಪ್ಪ ಮಂಡಿಯ ಮೇಲೆ ಕೈಯಿಟ್ಟು ಕುಳಿತರು. ರಾಜಣ್ಣನನ್ನೇ ನೋಡುತ್ತಾ ತೀಕ್ಷ್ಣವಾದ ಧ್ವನಿಯಲ್ಲಿ, "ನೋಡು ನೀನು ದುಡುಕಿ ಹಾಳಾಗಬೇಡ. ನೀನು ಆ ರೀತಿ ದುಡುಕದಿರಲಿ. ಕಣ್ಣು ಮುಚ್ಚಿಕೊಂಡು ಗುಂಡಿಗೆ ಬೀಳದಿರಲಿ ಎಂದೇ ನಿನ್ನ 'ಫ್ಲರ್ಟೇಷನ್'ಗೆ ನಾನು ವಿರೋಧ ಮಾಡಲಿಲ್ಲ. ಹುಡುಗಿಯರ ಜೊತೆ 'ಫ್ಲರ್ಟೇಷನ್' ಕಟ್ಟದ್ದಲ್ಲಿ, ಒಳ್ಳೆಯದೇ ಅದರಿಂದ ಅನುಭವ ಬರುತ್ತೆ. ಹೆಣ್ಣನ್ನು ತಾಳ್ಮೆ, ಆತ್ಮವಿಶ್ವಾಸ, ನಿರುದ್ವೇಗದೃಷ್ಟಿಯಿಂದ ತೂಗಿ ನೋಡೋ ಸಾಮರ್ಥ್ಯ ಬರುತ್ತೆ. ಅವೆಲ್ಲ ಗುಣಗಳು ನಿನ್ನಲ್ಲಿ ಬೆಳೆಯಲಿ ಎಷ್ಟೇ ಆಗಲಿ, ಮುಂದೆ ದೊಡ್ಡದೊಡ್ಡ ಕಡೆಗಳಲ್ಲಿ ಓಡಾಡುವ 'ಹ್ಯಾಂಡ್‌ಸಮ್' ಯುವಕ ಎಂದು ನಾನು ತೆಪ್ಪಗಿದ್ದೆ.

"ಅಲ್ಲದೆ ಆ ಹುಡುಗಿ ಸ್ವಜಾತಿಯವಳೂ ಅಲ್ಲ. ಅದನ್ನು ನೋಡಿ ನನಗೆ ಯಾವ ಹೆದರಿಕೆಯೂ ಇರಲಿಲ್ಲ. ಎಂವಿದ್ದರೂ ನಿಮ್ಮ ಸಂಬಂಧ 'ಫ್ಲರ್ಟೇಷನ್' ಘಟ್ಟದಲ್ಲೇ ಕೊನೆಮುಟ್ಟುತ್ತೆ ಎಂದು ನಂಬಿದ್ದೆ. ಆದರೆ ನೀನು ಆ 'ಸಿಂಪಲ್' ಹುಡುಗಿಯ 'ಸಿಂಪಲ್' ಪಟ್ಟಿಗೆ ಮೊದಲನೇ 'ರೌಂಡ್'ನಲ್ಲೇ ಬಿದ್ದುಬಿಟ್ಟಿರುವೆಯಲ್ಲಾ! ನಿನ್ನ

ದಡ್ಡತನಕ್ಕೆ ನಾನೇನುಹೇಳಲಿ! ನೀನಿಷ್ಟು ಪೆತ್ತ್ರೆ ಎಂದು ನಾನು ತಿಳಿದಿರಲಿಲ್ಲ ರಾಜು. ನೀನಿನ್ನೂ ಸ್ವಲ್ಪ 'ಕೂಲ್', 'ಕಲೆಕ್ಟೆಡ್', 'ರೂತ್-ಲೆಸ್' ಆಗಬೇಕು. ಇಲ್ಲದಿದ್ದರೆ ನೀನೊಬ್ಬ 'ಸಕ್ಸಸ್' ಆಗೋಲ್ಲ!" ಎಂದು ಕಪಿಮೂತಿ ಮಾಡುತ್ತಾ, ಸೋಫಾದಲ್ಲಿ ಒರಗಿದರು.

ರಾಜಣ್ಣ ಅವರೆಡೆಗೆ ನೋಟ ಬೀರದೆ, ಅಸಮಾಧಾನದಿಂದ ಉದ್ವೇಗವಾದ ಹರಿತ ಧ್ವನಿಯಲ್ಲಿ, "ನಾನು ಅವಳನ್ನು ಕೈಬಿಡುವ ವಿಚಾರದಲ್ಲಿ 'ರೂತ್-ಲೆಸ್' ಆಗಿರೋಲ್ಲ; ಅವಳನ್ನು ಕೈ ಹಿಡಿಯುವ ವಿಚಾರದಲ್ಲಿ 'ರೂತ್-ಲೆಸ್' ಆಗಿರ್ತೇನೆ" ಎಂದ.

ಚಂದ್ರಪ್ಪ ಆಶ್ಚರ್ಯಚಕಿತರಾಗಿ ಅವನೆಡೆಗೆ ತಿರುಗಿದರು. ಆಗ ರಾಜಣ್ಣ ಬೇಡಿಕೆಯ ನೋಟದಿಂದ ಅವರನ್ನು ನೋಡುತ್ತಾ, "ನೀವು ದಯವಿಟ್ಟು ನನ್ನನ್ನು ಅರ್ಥಮಾಡಿಕೊಳ್ಳಿ. ನಾನು ಅವಳನ್ನು ಪ್ರೇಮಿಸುತ್ತೇನೆ. ನನಗೆ ಅವಳೂ ನಿಮ್ಮಷ್ಟೇ, ಅಕ್ಕನಷ್ಟೇ ಅಮೂಲ್ಯವಾದ, ಅಗತ್ಯವಾದ ವ್ಯಕ್ತಿ. ಅವಳನ್ನು ಕೈಬಿಡಲು ಸಾಧ್ಯವಿಲ್ಲ" ಎಂದು ಮೊರೆಯಿಟ್ಟ.

ಚಂದ್ರಪ್ಪನ ನೋಟದ ನಿಷ್ಠುರತೆ ಅಳಿಸಲಿಲ್ಲ. ಸಹಾನುಭೂತಿ ಬೆಂಬಲ-ಒಪ್ಪಿಗೆಯ ಕಾಂತಿ, ಅಲ್ಲಿ ಮೂಡಲಿಲ್ಲ. ಅದನ್ನು ಕಂಡು ರಾಜಣ್ಣ ನೊಂದ ಮನಸ್ಸಿನಿಂದ ಮೇಲೆದ್ದು ಹೊರಟ. ಅದನ್ನು ಕಂಡು ಚಂದ್ರಪ್ಪ ಸೋಫಾದ ಅಂಚಿಗೆ ಹಾರಿ ಕುಳಿತು, "ರಾಜಣ್ಣಾ! ಸ್ವಲ್ಪ ತಡಿ!" ಎಂದರು.

ರಾಜಣ್ಣ ಅಲ್ಲೇ ನಿಂತ. ಚಂದ್ರಪ್ಪ ಅವನನ್ನೇ ದೇಹಾದ್ಯಂತ ಸುಡುವವರಂತೆ ನೋಡುತ್ತಾ ಕೆರಳಿದ ಕಂಠದಲ್ಲಿ, "ರಾಜು, ನೀನು ಅವಳನ್ನು ಮದುವೆ ಆಗು-ಬಿಡು, ಅದು ನನಗೆ ಪ್ರಾಮುಖ್ಯವಲ್ಲ. ಆದರೆ ಒಂದು ಮಾತು ಹೇಳ್ತೇನೆ. ಅದನ್ನು ಚೆನ್ನಾಗಿ ತಿಳಿದುಕೋ!

"ಅಂತರ್ಜಾತೀಯ ವಿವಾಹಗಳ ವಿಚಾರ ನಿನಗೆ ಗೊತ್ತಿಲ್ಲ. ಅದು ವಿವಾಹವಲ್ಲ, ಒಂದು ದುರ್ಘಟನೆ! ಒಂದು ಕೌಟುಂಬಿಕ, ಅನುವಂಶಿಕ ದುರ್ಘಟನೆ!! ಹಾಗೆ ಮದುವೆಯಾದವನೂ ಹಾಳು!

ಮದುವೆಯಾದವಳೂ ಹಾಳು! ಅವರಿಗೆ, ಹುಟ್ಟಿದ ಮಕ್ಕಳು ಮರಿಯೂ ಹಾಳು! ತಲೆತಲಾಂತರದವರೆಗೂ ಅವರು ಉಭಯ ಜಾತಿಗಳಿಗೂ ಬಾಹಿರರೇ! ಬೆರಕೆಗಳೇ!! ಇದನ್ನು ಚೆನ್ನಾಗಿ ತಿಳಿದುಕೋ.

"ಇಲ್ಲಿ ನೋಡು! ಈ ತಲೆಮಾರಿನಲ್ಲಿ ನಿಮ್ಮನ್ನು ಈ ಸಮಾಜ ದೂಷಿಸುತ್ತೆ. ಮುಂದಿನ ತಲೆಮಾರಿನಲ್ಲಿ ನಿಮ್ಮ ಸಂತಾನವೇ ನಿಮ್ಮನ್ನು ದೂಷಿಸುತ್ತೆ! ತಮ್ಮನ್ನು ಬೆರಕೆಗಳನ್ನಾಗಿ ಈ ಪ್ರಪಂಚಕ್ಕೆ ಕರೆತಂದ ಘೋರ ಅಪರಾಧಕ್ಕಾಗಿ, ತನ್ನ ತಂದೆತಾಯಿಗಳನ್ನೇ ಪರಮಶತ್ರುಗಳಂತೆ ದ್ವೇಷಿಸುತ್ತೆ! ಇಂಥ ಒಂದೆರಡು ಸಂಸಾರಗಳ ದುರಂತವನ್ನು ನಾನು ಕಣ್ಣಾರೆ ಕಂಡಿದ್ದೇನೆ, ಕಾಣುತ್ತಿದ್ದೇನೆ. ಅವರೂ ನನ್ನ ಸ್ನೇಹಿತರೇ. ಬೆಳೆದ ಹೆಣ್ಣುಮಕ್ಕಳುಳ್ಳ ಸಂಸಾರಸ್ಥರೇ. ಅವರು ಪಡುತ್ತಿರುವ ಪಾಡು ಶತ್ರುವಿಗೂ ಬೇಡ! ಇದೆಲ್ಲವನ್ನೂ ನೀನು ನೋಡಿಲ್ಲ. ನೀನಿನ್ನೂ ಒಬ್ಬ ಹುಡುಗ. ನಿನಗೆ ಪ್ರಪಂಚ ಗೊತ್ತಿಲ್ಲ. ನಾನು ಹೇಳಿದ್ದನ್ನು ನೀನು ಕಡೆಗಣಿಸಬೇಡ. ಬೀದಿಯ ಕಲ್ಲನ್ನು ಕಾಲಮೇಲೆ ಹಾಕಿಕೋಬೇಡ. ಸ್ವಲ್ಪ ಎಚ್ಚರಿಕೆಯಿಂದ ಇರು. ಇಂಥ ಆತ್ಮಘಾತಕ 'ಐಡಿಯಾ'ಗಳನ್ನು ಈ ಕ್ಷಣವೇ ಮರೆತುಬಿಡು. ಆಗ ನೀನೂ ಸುಖವಾಗಿರ್ತೀಯ, ಆ 'ಪೂರ್ ಗರ್ಲ್' ಸುಖವಾಗಿ ಇರ್ತಾಳೆ. ನಿಮ್ಮಿಬ್ಬರ ಮಕ್ಕಳು ಮರಿಗಳೂ ಸುಖವಾಗಿರ್ತಾರೆ ಅದನ್ನು ಬಿಟ್ಟು ನೀವಿಬ್ಬರೂ ಮದುವೆಯಾದರೆ, ಅದು ಮದುವೆಯಲ್ಲ. ನಿಮ್ಮ 'ಮ್ಯೂಚುಯಲ್ ಸೂಯಿಸೈಡ್!'. ನಿಮ್ಮ 'ಪರಸ್ಪರ ಆತ್ಮಹತ್ಯೆ!!' ಅದನ್ನು ನೀನು ಒಂದು ಕಡೆ ಬರೆದಿಟ್ಟುಕೋ!" ಎಂದು ಫೂತ್ಕಾರ ಮಾಡಿದರು.

ಅದನ್ನು ಕೇಳಿ ರಾಜಣ್ಣ ಭೀತಿಯಿಂದ ರೋಮಾಂಚಿತನಾಗಿ ತತ್ತರಿಸಿ ನಿಂತ. ಅವನ ಮೈ ಬೆವರಿತು. ತಾನಿದ್ದ ಕೊಠಡಿ ಕಂಡು ಕೇಳದ ಶೂನ್ಯದಲ್ಲಿ ಸಿಡಿದೆದ್ದು ಉರುಳುರುಳಾಗಿ ತಿರುಗುತ್ತಿರುವಂತೆ ಕಂಡಿತು. ನಿಧಾನವಾಗಿ ಸೋಫಾದ ಬಳಿಗೆ ಬಂದು ಅದರ ಹಿಡಿಯ ಮೇಲೆ ಕುಸಿದ. ಮೌನವಾಗಿ ಚಂದ್ರಪ್ಪನ ಕಡೆಗೆ ನೋಡಿದ

ನಾಗಮ್ಮನ ಕಡೆಗೆ ನೋಡಿದ. ಅವರೊಬ್ಬರಾದರೂ ಅವನೆಡೆಗೆ ಉತ್ತೇಜನದ ನೋಟ ಬೀರುತ್ತಿರಲಿಲ್ಲ. ಅವನನ್ನೇ ನಿಷ್ಠುರವಾಗಿ, ನಿರ್ದಯ ನೇತ್ರಗಳಿಂದ ಎವೆಯಿಕ್ಕದೆ ನೋಡುತ್ತಿದ್ದರು.

ರಾಜಣ್ಣ ಕಣ್ಣುಮುಚ್ಚಿ, ಎರಡು ಕೈಗಳಿಂದಲೂ ಮುಖ ಮುಚ್ಚಿಕೊಂಡ. ಅವನ ಮನಕ್ಕೆ ಘೋರ ಕಗ್ಗತ್ತಲೆ ಕವಿಯಿತು. ಆ ಅಂಧಕಾರದ ಮೂಲಕ, ಬಾಗಿಲ ಬಳಿ ಕ್ರಾಂತಿಕನ್ಯೆಯಂತೆ ನಿಂತ ಶಾಂತಳ ಪ್ರೇಮದ, ನಿರ್ಧಾರದ ನೇತ್ರದ್ವಯ, ವರದನ ಸಂಗಾತಿಗಳ ಪ್ರೇತಗಣ, ಬೆರಕೆ ಸಂತಾನದ ರುದ್ರ–ಚಿತ್ರಗಳೇ ಒಂದರ ಹಿಂದೊಂದು ಉಜ್ವಲವಾಗಿ ಮೂಡಿ, ಮಸಕು ಮಸಕಾಗಿ ಮತ್ತೆ ಮಾಯವಾಗು ತ್ತಿದ್ದುವು. ಅವನ ಮನ ಆಲೋಚಿಸುವ ಶಕ್ತಿಯನ್ನೇ ಕಳೆದು ಕೊಂಡಿತ್ತು .. 'ತಲೆತಲಾಂತರದವರೆಗೂ ನಿಮ್ಮ ಸಂತಾನ ಜಾತಿ ಬಾಹಿರರೇ ! ಬೆರಕೆಗಳೇ ! .... ನಿಮ್ಮ ಸಂತಾನ ನಿಮ್ಮನ್ನೇ ಘೋರ ಶತೃಗಳಂದು ದ್ವೇಷಿಸುತ್ತೆ! ಘೋರ ಅಪರಾಧಿಗಳಂತೆ ದ್ವೇಷಿಸುತ್ತೆ!' ಎಂಬ ನುಡಿ-ಬಂಡೆಗಳೇ ಅವನ ಮನದ ಕುಸಿದುಬೀಳುವ ಕಗ್ಗವಿಯಲ್ಲಿ ಉರುಳಿ ಧೀಂಕಿಟ್ಟು ಪ್ರತಿಧ್ವನಿಗೈಯುತ್ತಿದ್ದುವು.

ಹಲವಾರು ನಿಮಿಷ ಅವನು ಸಿಡಿಲು ಹೊಡೆದವನಂತೆ ಕುಳಿತ. ಸ್ವಲ್ಪಕಾಲದ ಬಳಿಕ ಚಂದ್ರಪ್ಪನ ಕೈ ತನ್ನ ಕೈಮುಟ್ಟಿದಂತೆ ಅವನಿಗೆ ಭಾಸವಾಯಿತು. ತಲೆಯೆತ್ತಿ ನೋಡಿದ. ಅವರ ವದನ ಈಗ ಪ್ರಶಾಂತ ವಾಗಿತ್ತು. ಕಣ್ಣುಗಳು ಸಹಾನುಭೂತಿಯಿಂದ ತುಳುಕಾಡುತ್ತಿದ್ದವು. ಅವನು ಈಗ ಅವರ ನೋಟದೊಡನೆಯೇ ನೋಟ ಬೆರೆಸಿ ಬೇಡಿಕೆ ಯಿಂದ ನೋಡಿದ. ಅವರು ಅವನ ಕೈತಟ್ಟಿ ಮರ್ದಿಸುತ್ತಾ, ಪ್ರೇಮ ಭರಿತ ಧ್ವನಿಯಲ್ಲಿ ಹೇಳಿದರು—"ರಾಜು, ಜೀವನ ಬಹು ಅಮೂಲ್ಯ, ಬಹು ಅಪರೂಪ. ಒಂದೇ ಒಂದು ಬಾರಿ ನಾವು ಈ ಜಗತ್ತಿನಲ್ಲಿ ಜೀವಿಸೋದು. ಅಷ್ಟು ದಿನವನ್ನೂ ಸುಖವಾಗಿ ಇದ್ದು ಹೋಗೋಣ ... ನಮ್ಮ ಕರ್ತವ್ಯ ನಾವು ಮಾಡಿ, ನಮ್ಮ ಪಾಲಿನ ಸುಖ, ಸಂತೋಷ ಗಳನ್ನು ಅನುಭವಿಸಿ, ಯಾವ ಕಹಿ-ನೆನಪನ್ನೂ ಬಿಡದೆ ಹೋಗೋಣ. ಶತಮಾನಗಳಿಂದ ಒಂದು ರೀತಿಯಲ್ಲಿ ಉರುಳಿಕೊಂಡು ಹೋಗ್ತಾ

ತ್ತಿರುವ ಜೀವನ ಚಕ್ರ, ಇನ್ನೊಂದು ರೀತಿಯಲ್ಲಿ ಉರುಳಿಕೊಂಡು ಹೋಗುವವರೆಗೂ ನಿನ್ನಂಥವರ ಆಸೆ, ಆಸೆಯಾಗಿಯೇ ಅಳಿಯಬೇಕು; ಕನಸು, ಕನಸಾಗಿಯೇ ಉಳಿಯಬೇಕು. ನನಗೆ ನಿನ್ನಮೇಲೆ ದ್ವೇಷ ವಿಲ್ಲ. ಶಾಂತಳ ಮೇಲೆ ದ್ವೇಷವಿಲ್ಲ. ನೀವಿಬ್ಬರೂ ಒಳ್ಳೆಯ 'ಮ್ಯಾನ್ ಅಂಡ್ ವೈಫ್' ಆಗಬಲ್ಲಿರಿ. ಒಂದು 'ಸ್ವೀಟ್-ಹೋಂ' ಮಾಡಬಲ್ಲಿರಿ. ಅದು ನನಗೆ ಗೊತ್ತು....ಆದರೆ ಇದು ಪ್ರಪಂಚ ! .... ಕೇವಲ ಸುಂದರ ವಾಗಿರುವುದಕ್ಕೆಲ್ಲಾ ಇಲ್ಲಿ ಉಳಿವಿಲ್ಲ, ಸಶಕ್ತವಾಗಿರುವುದಕ್ಕೇ ಉಳಿವು; ಉನ್ನತಿ. ಅವು ವಿಕಾರವಾಗಿರಲಿ, ಅಸಹ್ಯವಾಗಿರಲಿ, ಅವಕ್ಕೇ ಅಭಿವೃದ್ಧಿ. ಅದರೊಡನೆ ನಡೆಸುವ ಹೋರಾಟ ವಿಫಲ. ಹೋರಾಡಿ ದವರು ಲಕ್ಷ ಮಂದಿಯಾದರೆ, ಜಯಗಳಿಸಿದವರು ಕೇವಲ ಹತ್ತು ಮಂದಿ. ಅಳಿದವರೇ ಹೆಚ್ಚು, ಸೋತವರೇ ಅಪಾರ....ಹೀಗಿರುವಾಗ ವಸ್ತುಸ್ಥಿತಿಯೊಂದಿಗೆ, ನಮ್ಮ ಸುತ್ತುಮುತ್ತಿನೊಂದಿಗೆ ಒಪ್ಪಂದಮಾಡಿ ಕೊಂಡು, ಸುಲಲಿತವಾಗಿ ಜೀವಿಸುವುದೇ ಉತ್ತಮ. ತನಗೂ ಹಿತಕರ. ಪರರಿಗೂ ಹಿತಕರ....ನೀನು ಈ ಹೋರಾಟದ ಹುಚ್ಚನ್ನು ಬಿಡು....!

" ನನ್ನ ಸ್ನೇಹಿತನೊಬ್ಬ ಇದಾನೆ. ರೈಲ್ವೆಯಲ್ಲಿ ಭಾರಿ ಕೆಲಸ ವಿದೆ. ಅವರ ಮಗಳು ಈ ವರ್ಷ 'ಜೂನಿಯರ್-ಬಿ.ಎ.' ಓದ್ತಾಳೆ. ಅವರ ಮನೆತನ, ಒಳ್ಳೇ ಗುಣ, ಸುಸ್ವಭಾವ, ಸುಂದರರೂಪ—ಎಲ್ಲ ವನ್ನೂ ನೀನು ಒಂದು ಸಾರಿ ನೋಡು.

" ಆಗ ಪ್ರಪಂಚದಲ್ಲೆಲ್ಲಾ ಶಾಂತ ಒಬ್ಬಳೇ ಸುಂದರಿಯಲ್ಲ : ಅವಳಿಗಿಂತ ' ಬೆಟರ್-ಗರ್ಲ್ಸ್ ' ಇದಾರೆ. ಎಲ್ಲ ವಿಚಾರಗಳಲ್ಲೂ 'ಸುಪೀರಿಯರ್' ಆಗಿರೋ 'ಗರ್ಲ್ಸ್' ಇದಾರೆ. ಅಂಥವರ ಕೈಹಿಡೀಬೇ ಬೇಕು ಎನಿಸುತ್ತೆ.

" ನಾನು ಹೇಳಿದ್ದನ್ನು ನೀನು ಚೆನ್ನಾಗಿ ಕೇಳು. ಎಲ್ಲಾ ನಿನ್ನ ಒಳ್ಳೆಯದಕ್ಕೇ ಹೇಳ್ತಿರೋದು....ಈ ಹುಡುಗಿಯ ದೆಸೆಯಿಂದ ನೀನೇಕೆ ಅಷ್ಟು ಕಷ್ಟಪಡಬೇಕು?.... ಬೀದಿಯ ಪುಂಡು-ಪೋಕರಿ-ಗೂಂಡಾಗಳ ಕೈಯಲ್ಲೆಲ್ಲಾ ಬೈಗಳು ತಿನ್ನಬೇಕು ? .... ನಿನ್ನ ಯೋಗ್ಯತೆ ಏನು ?.... ಅವರ ಯೋಗ್ಯತೆ ಏನು ? ಇದೆಲ್ಲಾ ಅತ್ತೆ, ಮಾವ ಇವರಿಗೆ ತಿಳಿದರೆ

ಎಷ್ಟು ಮನನೊಂದುಕೋತಾರೆ ನಿನಗೇನಾದರೂ ಗೊತ್ತೇ?" ಎಂದು ಅವನನ್ನೇ ನಿರೀಕ್ಷಣೆಯಿಂದ ನೋಡತೊಡಗಿದರು.

ಉಗ್ರ ಒಳತೋಟಿಯ ಒಂದು ಒರಟು ಶಿಲಾಪ್ರತಿಮೆಯ ರೌದ್ರವದನದಂತಿತ್ತು ರಾಜಣ್ಣನ ಮುಖ. ಅವನು ಶೂನ್ಯ ನೇತ್ರಗಳಿಂದ, ಉದ್ವಿಗ್ನತೆಯಿಂದ, ನೆಲವನ್ನೇ ದಿಟ್ಟಿಸಿನೋಡುತ್ತಿದ್ದ. ಸ್ವಲ್ಪ ಕಾಲದ ಬಳಿಕ ಹಾಲ್‌ನ ಗಡಿಯಾರ ರಾತ್ರಿ ಒಂದು ಗಂಟೆಯೆಂದು ಘೋಷಿಸಿತು. ರಾಜಣ್ಣ ಮೇಲೆದ್ದು " ಆಗಲಿ....ಯೋಚಿಸುತ್ತೇನೆ." ಎಂದು ರೂಮಿನ ಕಡೆಗೆ ಹೊರಟ. ಆಗ ಅವನು ಆಲೋಚನೆಯ ಮಹಾಮೇರುವನ್ನು ಹೊತ್ತು ತತ್ತರಿಸುತ್ತಿರುವವನಂತೆ ತೋರಿದ. ಹಾಸಿಗೆಯಲ್ಲುರುಳಿ ಕುದಿಯುವ ಎದೆ, ಉರಿಯುವ ಮನ - ಇವುಗಳ ತಾಪ ತಾಳಲಾರದೆ, ಒಂದು ದಿಂಬನ್ನು ಬಲವಾಗಿ ಅಪ್ಪಿ, ಕಣ್ಣು ಮುಚ್ಚಿದ. ಅವನ ತಲೆ ಹಾವಾಡಿಗನ ಒಂದು ಬುಟ್ಟಿಯಂತಾಗಿತ್ತು; ಅಲ್ಲಿ ಆಲೋಚನೆ ಚಿಂತೆಗಳ ಘಟಸರ್ಪಗಳು ಒಂದಕ್ಕೊಂದು ಜಡೆ ಹೆಣೆದುಕೊಂಡು ಬುಸುಗುಟ್ಟುತ್ತಾ, ಒಂದಕ್ಕೊಂದು ಮುಸೆದುಮುಸೆದು ವಿಷಚಕ್ರದಂತೆ ತಿರುಗುತ್ತಿದ್ದುವು. ದೂರದ ಶಿಖರದ ಗಡಿಯಾರ ಐದು ಗಂಟೆ ಹೊಡೆಯಿತು; ಆರು ಗಂಟೆ ಹೊಡೆಯಿತು....ಆದರೂ ರಾಜಣ್ಣನಿಗೆ ವಿಸ್ಮೃತಿ ದೊರೆಯಲಿಲ್ಲ. ದಿಂಬಿನ ಮೃದು ಒಡಲಿಗೆ ಮುಖ ಒತ್ತಿ ಬಿಸಿ ಕಂಬನಿಗಳನ್ನೊರಸುತ್ತಾ ಎರಡು ಕ್ಷಣದ ನಿದ್ರೆ ನೆಮ್ಮದಿಗಳಿಗಾಗಿ ಹಂಬಲಿಸುತ್ತಿದ್ದ.

* * *

ಅದೇ ಸಮಯದಲ್ಲಿ ಶಾಂತ, ಅರೆನಿದ್ದೆ ಅರೆ ಎಚ್ಚರದ ಉರಿ ನೇತ್ರಗಳನ್ನು ತೆರೆದು ಸುತ್ತಲೂ ನೋಡಿದಳು. ಕಿಟಕಿಯಾಚೆಗೆ ಹೊರಗಿನ ಜಗತ್ತಿನಲ್ಲಿ ಆಗಲೇ ಬೆಳಕು ಹರಿದಿರುವುದು ಗೋಚರಿಸಿತು. ಇನ್ನೂ ಸೂರ್ಯ ಮೂಡಿ ಮೇಲೆದ್ದಿರಲಿಲ್ಲ.

ಅದನ್ನು ಕಂಡು ಶಾಂತ ಬೇಗನೆ ಹಾಸಿಗೆ ಬಿಟ್ಟೆದ್ದಳು. ತಣ್ಣೀರಿನಲ್ಲಿ ತನ್ನ ಕುದಿಯುವ ಮುಖ ತೊಳೆದು, ತಲೆಕೂದಲು ಸರಿಪಡಿಸಿಕೊಂಡು, ಮನೆಯ ಮುಂದಿನ ಮೆಟ್ಟಲಿನ ಬಳಿ ಕಸಗುಡಿಸಿ,

ನೀರು ಹಾಕಿ, ರಂಗೋಲಿ ಇಡಲು ಹೊರ ಬಂದಳು. ಅವಳಿಗೆ ತನ್ನೆದೆಯ ದುಗುಡದ ಭಾರ ಇಳಿಯುವವರೆಗೂ ಅಂದು ಚಿತ್ರ ವಿಚಿತ್ರ ರಂಗೋಲಿ ಇಡಬೇಕೆನಿಸಿತು. ಎಷ್ಟೋ ಬಾರಿ ಅವಳ ಮನೋ ರಾಜ್ಯದಲ್ಲಿ ಭೀಕರ, ಬಿರುಗಾಳಿ ಮೇಲೆದ್ದಾಗ, ಅವಳ ಹೃದಯದಲ್ಲುಕ್ಕಿ, ಮನದಲ್ಲಿ ರೂಪು ಪಡೆದು, ಬೆರಳು ತುದಿಯಿಂದ ಹರಿದು ಮನೋ ಹರವಾಗಿ ಮುಂದೆ ನಿಲ್ಲುವ ಆ ಸುಂದರ ಆಕೃತಿಗಳೇ ಅವಳ ಜೀವಕ್ಕೆ ತಂಪೆರೆದಿದ್ದುವು. ಶಾಂತಿ ನೀಡಿದ್ದುವು.

ಆದರೆ ಅದೇ ಸುಖ ಇಂದು ಶಾಂತಳಿಗಾಗಿ ಕಾಯ್ದಿರಲಿಲ್ಲ. ಅವಳಿಗೆ ರಾತ್ರಿಯಿಂದ ಎದುರು ಮನೆಯ ಕಾಂಪೌಂಡಿನ ಮೇಲೆ ಇದ್ದಿಲಿನ ದಪ್ಪದಪ್ಪ ಕರಾಳ ಅಕ್ಷರಗಳಲ್ಲಿ ಕಾಯ್ದು ನಿಂತಿದ್ದುದೇ ಬೇರೆ. ಹಿಂದೂ ಸಂಸ್ಕೃತಿಯ ಉದ್ಧಾರಮಾಡುವ ಭರತಮಾತೆಯ ವೀರ ಪುತ್ರನೊಬ್ಬ ಬರೆದಿದ್ದ ಮೂರೇ ಮೂರು ಪದಗಳು—

"ಶಾಂತ ರಾಜಣ್ಣನ ಸೂಳೆ....!"

ಅದು ಕಲ್ಲಿನಂತೆ ಕಣ್ಣಿಗೆ ಬಡಿದಾಗ, ಕೆಂಪಗೆ ಕಾಯ್ದ ಕಬ್ಬಿಣದ ಗುಳವಿಟ್ಟಂತಾದ ಅವಳ ಹೃದಯ, ಅಸಹನೀಯ ವೇದನೆಯಿಂದ ಒಮ್ಮೆ ಕರುಳು ಕತ್ತರಿಸುವಂತೆ, ತನ್ನಲ್ಲಿ ತಾನೇ ಮೌನವಾಗಿ ಚೀರಿ ಟ್ಟಿತು. ಕಣ್ಣುಗಳಿಂದ ಬಿಸಿ ಕಂಬನಿಗಳ ಕೋಡಿ ಬಿದ್ದು, ನಿತ್ರಾಣ ದಿಂದ ತೊಡೆಗಳು ಕುಸಿಯುವಂತಾಗಿ, ಅಂಗಾಂಗಗಳೆಲ್ಲಾ ಭೀತಿ, ಅವಮಾನ, ಹೇಸಿಗೆಯಿಂದ ತಲ್ಲಣಿಸಿ, ಅವಳು ಹೆಬ್ಬಾವಿನ ಮೂತಿ ಕಂಡ ಬಿಳಿಯ ಮೊಲದಂತೆ ಬೆಚ್ಚಿ ನಿಂತಳು. ಆ ಮೂರು ಪದಗಳನ್ನೇ ದಿಙ್ಮೂಢಳಾಗಿ ನೋಡಿದಳು.

ಅವಳಿಗೆ ನಿನ್ನೆಯ ರಾತ್ರಿಯೆಲ್ಲಾ ನಿದ್ರೆ ಹತ್ತಿರಲಿಲ್ಲ. ಎರಡು ಮೂರು ಗಂಟೆಯವರೆಗೂ ಅವಳ ತಾಯಿ, ಕೋಪ ದುಃಖಗಳಿಂದ ಹಾಸಿಗೆಯ ಮೇಲೆ ಗೋಳಾಡಿ ರಂಪ ಎಬ್ಬಿಸಿದ್ದರು. ಈಗ ಕೆಲವು ವರ್ಷ ಗಳ ಹಿಂದೆ ಖಾಯಿಲೆ ಬಿದ್ದಾಗಿನಿಂದಲೂ ಮನಸ್ಸಿಗೆ ದುಃಖದ-ಸುಖದ ಒತ್ತಡ ಅತಿಯಾದಾಗ ಅವರು ಉನ್ಮಾದಾವಸ್ಥೆಗೆ ಜಾರುತ್ತಿದ್ದರು. ನಿನ್ನೆ ಅವರನ್ನು ಆ ಸ್ಥಿತಿಗೆ ದೂಡಿದ್ದ ದುಃಖದ ಆಘಾತಗಳು ಒಂದಲ್ಲ

ಹಲವಾರು. ಅವುಗಳ ದೌರ್ಜನ್ಯಕ್ಕೆ ಸಿಕ್ಕಿದ್ದ ಅವರ ಅಂಧಶ್ರದ್ಧೆಯ ಸಂಪ್ರದಾಯ ಶೀಲದ, ಭಯಭ್ರಾಂತ ದುರ್ಬಲ ಮನಸ್ಸು ರಾತ್ರಿ ಯೆಲ್ಲಾ ತಮ್ಮ ಹಿರಿಯರ, ಮನೆತನದ ಶೀಲ, ಸಂಸ್ಕಾರ, ಚಾರಿತ್ರ್ಯ ಗಳ ಶ್ರವಣವನ್ನೇ ಮಾಡಿ ಗೋಳಾಡಿದ್ದಿತು. ತಮ್ಮ ಮನೆತನದ ಅಖಂಡ ಸಂಪ್ರದಾಯ ಸರಪಣಿಯ ಒಂದು ಪುಟ್ಟ ಹಾಗೂ ಅತ್ಯಗತ್ಯ ಕೊಂಡಿಯಂತಿದ್ದ ಶಾಂತ, ಇಂದು ವರಿಸಲರ್ಹನಲ್ಲದ ಅನ್ಯಜಾತಿಯ ಯುವಕನೊಬ್ಬನೊಡನೆ ಊರ ಹೊರಗೆ ತಿರುಗಾಡಲು ಹೋಗಿದ್ದುದು ತಮ್ಮ ವಂಶ, ಗೌರವ, ಪಾವಿತ್ರ್ಯತೆಯ ಮಾಂಗಲ್ಯವನ್ನೇ ಬೀದಿಗೆ ಹರಿದೆಸೆದಂತೆ ಎಂದು ಭಾವಿಸಿದ್ದಿತು. ವಿದ್ಯಾವತಿಯಾಗಿದ್ದ, ಆಧುನಿಕ ಭಾವನೆಗಳುಳ್ಳ ಬೆಳೆದ ಮಗಳೇ ತಮ್ಮ ಘೋರ ಶತ್ರು ಎಂದು ಅವರು ತೀರ್ಮಾನಿಸಿಬಿಟ್ಟಿದ್ದರು. ಅವಳನ್ನು ರಾತ್ರಿಯೆಲ್ಲಾ ಶತೃವಿನಂತೆಯೋ ಒಂದು ಹೀನ ಕ್ರಿಮಿಯಂತೆಯೋ ಪರಿಗಣಿಸಿದ್ದರು.

ಆ ಕೌಟುಂಬಿಕ ಕೊರೆತದ ಉರಿ ಮುಷ್ಟಿಯಿಂದ ಹೊರಗೆದ್ದು ಬಂದ ಶಾಂತಳಿಗೆ, ಬೆಳಗಾದ ಕೂಡಲೇ ತನ್ನ ಅಧುನಿಕ, ಸುಸಂಸ್ಕೃತ ಅಕ್ಷರಸ್ಥ ಸಮಾಜ ನೀಡಿದ್ದುದು 'ಸೂಳೆ' ! ಎಂಬ ಬಿರುದನ್ನು ಮಾತ್ರ.

ಅದನ್ನು ಕಂಡು ಅವಳು ಮೊದಲು ಮೊದಲು ತತ್ತರಿಸಿ ಭೂಮಿಗಿಳಿದು ಹೋದರೂ, ಕೆಲವು ನಿಮಿಷಗಳಲ್ಲಿಯೇ, ಕಣ್ಣೊರೆಸಿ ಕೊಂಡು, ದೇಹ ಸೆಟೆಸಿ, ತಲೆ ಎತ್ತಿ ನಿಂತಳು. ಎದುರು ಗೋಡೆಯ ಲಿಖಿತವನ್ನೇ ತಿರಸ್ಕಾರದಿಂದ ನೋಡಿ, ಅವುಡುಗಚ್ಚಿ, ಅದರೆಡೆಗೆ ಧಿಕ್ಕಾರದ ನಿಟ್ಟುಸಿರೊಂದನ್ನು ಎಸೆದು, ತನ್ನ ಕೆಲಸದಲ್ಲಿ ತಾನು ತಲ್ಲೀನಳಾದಳು.

ಕೆಲಸ ಮುಗಿದಾಗ ಅದರೆಡೆಗೊಮ್ಮೆ ಉಗಿದು, ಮನೆಗೆ ಹಿಂತಿರುಗಬೇಕೆಂಬ ಮನಸ್ಸಾದರೂ, 'ಮೇಲೆ ಉಗಿದು, ಅದನ್ನೇಕೆ ಗೌರವಿಸುವುದು' ಎಂದು ಸಹನೆ ಸಮತೋಲನೆಯ ಗಂಭೀರ ಮನದಿಂದ ಮನೆಗೆ ಅಡಿಯಿರಿಸಿ, ಅಲ್ಲಿನ ಕೆಲಸಗಳಲ್ಲಿ ಯಾಂತ್ರಿಕವಾಗಿ ತಲ್ಲೀನಳಾದಳು.

ಅಂದು, ಕಾಲೇಜಿಗೆ ಹೊರಡುವಾಗ ಬಾಗಿಲ ಬಳಿ ಚಂಡಿಯಂತೆ

ನಿಂತ ತಾಯಿ, ಅವಳ ಕೈಯಿಂದ ಪುಸ್ತಕಗಳನ್ನು ಕಿತ್ತು ಒಲೆಗೆ ಹಾಕಿ ಸುಟ್ಟರು. ಜೊತೆಗೆ ಹೊರಟಿದ್ದ ಶ್ಯಾಮಲಳ ಕೆನ್ನೆಗೆ ಬಿಗಿದು 'ಬಿದ್ದಿರು ಮನೇಲ್ಲೇ! ಒಬ್ಬಳು ಓದಿ ತಂದ ಗೌರವ ಸಾಕು!' ಎಂದು ಅಬ್ಬರಿಸಿ, ಸಿಡುಕಾಡಿದರು. ಆದರೆ ಶಾಂತ ಮತ್ತೊಂದು ನೋಟು ಪುಸ್ತಕ, ಪೆನ್ನಿನೊಡನೆ, ತನ್ನ ಪುಸ್ತಕಗಳೆಲ್ಲವನ್ನೂ ಪೆಟ್ಟಿಗೆಯಲ್ಲಿರಿಸಿ ಬೀಗ ಹಾಕಿದ ನಂತರ ಪುನಃ ಕಾಲೇಜಿಗೆ ಹೊರಟಳು.

ಅವಳು ಮನೆಗೆ ಹಿಂತಿರುಗಿದಾಗ, ತಾಯಿ ಮನೆಯ ಬಾಗಿಲನ್ನು ಅವಳ ಮುಖಕ್ಕೇ ಬಡಿದು, ಅಗುಣಿ ಹಾಕಿಕೊಂಡರು. ಅವಳು ತಾಳ್ಮೆಯಿಂದ ಅಲ್ಲೇ ಕೇಶವಯ್ಯಂಗಾರರು ಹಿಂತಿರುಗುವವರೆಗೂ, ರಂಗಪ್ಪನ ಮನೆಯ ಸಾಧ್ವೀಮಣಿಯರ ಅಣಕ, ನಗೆಯಾಟ, ಆಶ್ರಯ ಭಿಕ್ಷೆಗಳನ್ನು ಕಡೆಗಣಿಸುತ್ತಾ ಕಾಯ್ದು ನಿಂತಿರಬೇಕಾಯ್ತು.

ಮಾರನೆಯ ದಿನದಿಂದ ತಾಯಿಯ ಆಕ್ರೋಶವನ್ನಲ್ಲದೆ ಅವಳು, ಹೇಗೋ ಸುದ್ದಿ ತಿಳಿದ ಗೆಳತಿಯರ ಗುಪ್ತ ಅಸೂಯೆ, ತಿರಸ್ಕಾರ, ಅನಗತ್ಯ ಕನಿಕರ ಹಿತವಚನಗಳಿಗೂ ಪಾತ್ರವಾಗಬೇಕಾಯಿತು. ಮನೆಗೆ ಹಿಂತಿರುಗುವಾಗ ವರದನ ಗೆಳೆಯರ, "ಹಹ್ಹಾ! ನೋಡ್ರೋ ರಾಜಣ್ಣನ ಕುದುರೆ ಹೇಗೆ ಹೋಗ್ತಿದೆ!", "ಅವನಿಗಿಂತ ಎಂಟಾಣೆ ಜಾಸ್ತಿ ಕೊಡ್ತೀನಿ, ಬರ್ತೀಯಾ?" ಎನ್ನುವ ಮಾತುಗಳಿಗೂ ಕಿವುಡು-ಕಿವಿ ಕೊಟ್ಟು, ಕುದಿಯುವ ಎದೆಯಲ್ಲಿ ನಡೆದು ಬರಬೇಕಾಯಿತು. ರಾತ್ರಿಯಾದೊಡನೆಯೇ ಹೇಗೋ ಓದು ಮುಗಿಸಿ, ಹಾಸಿಗೆಯಲ್ಲುರುಳಿ ಅಸಹನೀಯ ಯಾತನೆಯ ಗಾಣದಂತೆ ಉರುಳುವ ಮುಂದಿನ ದಿನವನ್ನೇ, ಸುತ್ತ ಕವಿದ ಕಗ್ಗತ್ತಲಲ್ಲಿ ಎದುರುನೋಡುತ್ತಾ ತಲೆದಿಂಬನ್ನು ಕಂಬನಿಯಿಂದ ನೆನೆಸಬೇಕಾಗಿತ್ತು.

ಅತ್ತ ಚಂದ್ರಪ್ಪನ ಮನೆಗೆ ರಾಜಣ್ಣನ ತಂದೆ-ತಾಯಿಗಳು ಹಳ್ಳಿಯಿಂದ ಧಾವಿಸಿ ಬಂದಿದ್ದರು. ಅವರ ಅನಿರೀಕ್ಷಿತ ಆಗಮನದಿಂದ ರಾಜಣ್ಣನೇ ಅಲ್ಲದೆ, ಚಂದ್ರಪ್ಪ-ನಾಗಮ್ಮ ಇವರೂ ಆಶ್ಚರ್ಯಚಕಿತರಾಗಿದ್ದರು.

ಅವರಿಬ್ಬರೂ ರಾಜಣ್ಣನ ಈ ಪ್ರಸಂಗವನ್ನು ಅವನ ತಂದೆ-ತಾಯಿ

ಗಳಿಗೆ ತಿಳಿಸಿರಲಿಲ್ಲ. ಪರೀಕ್ಷೆಯ ಸಮಯದಲ್ಲಿ, ಈ ವಿಚಾರವನ್ನೇ ದೊಡ್ಡದು ಮಾಡಿ, ಅವನ ಓದಿಗೆ ಭಂಗಪಡಿಸಬಾರದೆಂದು ಅವರು ತೀರ್ಮಾನಿಸಿದ್ದರು. ಅದಕ್ಕಾಗಿಯೇ ಈ ಸುದ್ದಿಯನ್ನು ಅವರು ಹಳ್ಳಿಗೆ ಮುಟ್ಟಿಸಿರಲಿಲ್ಲ.

ಹಾಗಿದ್ದರೂ ನಾಲ್ಕಾರು ದಿನಗಳಲ್ಲಿಯೇ ಅತ್ತೆ – ಮಾವಂದಿ ರಿಬ್ಬರೂ ಇಲ್ಲಿಗೆ ಹಠಾತ್ತನೆ ಬಂದುದನ್ನು ಕಂಡು ಅವರಿಗೆ ರಂಗಪ್ಪನ ಮೇಲೆ ಸಂಶಯ ಹುಟ್ಟಿತು, ತಿರಸ್ಕಾರ ಮೂಡಿತು.

ಕೆಳಗಿನ ಮನೆಯ ರಂಗಪ್ಪ, ಈ ಪ್ರಸಂಗವನ್ನರಿತಕೂಡಲೇ ಮನೆಗೆ ಬಂದು, ಬ್ರಾಹ್ಮಣರನ್ನೆಲ್ಲಾ ಸುಟ್ಟು ಹಾಕಬೇಕೆಂದು ಅರ್ಭಟಿಸಿ, ಕಡೆ–ಕಡೆಗೆ ತಮ್ಮ ಮಗಳೊಬ್ಬಳನ್ನು ರಾಜಣ್ಣನಿಗೆ ಕೊಡುವ ಮಾತಿಗೆ ಪೀಠಿಕೆ ಹಾಕಿದ್ದರು. ಚಂದ್ರಪ್ಪ ಔಪಚಾರಿಕ ಸಮಾಧಾನ ವಚನಗಳನ್ನಾಡಿದ್ದನಂತರ, ಅವರು ಹಿಂತಿರುಗಿದ್ದರು.

ಈಗ ಅವರ ಹೀನ ಬುದ್ಧಿಯ ಅರಿವು ಚಂದ್ರಪ್ಪನಿಗೆ ಸಂಪೂರ್ಣ ವಾಗಿ ಆಯಿತು ಏಕೆಂದರೆ ರಾಜಣ್ಣನ ತಂದೆ, ಮನೆಗೆ ಬಂದು ಒಂದು ಲೋಟ ನೀರು ಕುಡಿದ ಕೂಡಲೇ, “ಯಾರು ಈ ರಂಗಪ್ಪ? ಹೇಗೆ ಆತನ ಸಮಾಚಾರ? ಈ ಕಾಗದದಲ್ಲಿ ಬರೆದಿರೋದು ನಿಜ ಏನು?” ಎಂದು ಅವರಿಂದ ತಮಗೆ ಬಂದಿದ್ದ ಪತ್ರವನ್ನು ಚಂದ್ರಪ್ಪನ ಕೈಗೆ ಕೊಟ್ಟಿದ್ದರು.

ನಾಗಮ್ಮ ತಂದೆ–ತಾಯಿಗಳಿಗೆ ಇದ್ದ ಸಂಗತಿಯೆಲ್ಲವನ್ನೂ ತಿಳಿಸಿ, “ರಾಜಣ್ಣನನ್ನು ಹೆಚ್ಚಿಗೆ ಪೀಡಿಸಬೇಡಿ. ಅವನನ್ನು ದಾರಿಗೆ ತರುವ ಭಾರ ಮಾಮನಿಗೇ ಬಿಡಿ. ಅವರೇ ಅವನನ್ನು ಬಗ್ಗಿಸೋಕೆ ಸರಿ” ಎಂದು ತಿಳಿಸಿದ್ದರು.

ಆದರೂ, ರಾಜಣ್ಣನ ತಂದೆಗೆ ಮಗನಮೇಲೆ ಉಕ್ಕೇರಿದ್ದ ಕೋಪ ಕಡಿಮೆಯಾಗಿರಲಿಲ್ಲ. ಅವರು ಒಂದು ಮಾತನ್ನೂ ಅವ ನೊಡನೆ ಆಡದೆ, ಬೆದರಿಕೆಯ ಉಗ್ರಮೂರ್ತಿಯಂತೆ ಕೆಂಗಣ್ಣು ಮಾಡಿ ಕೊಂಡು, ಮನೆಯಲ್ಲೇ ಉಳಿದಿದ್ದರು. ರಾಜಣ್ಣನ ತಾಯಿ ಮಾತ್ರ ಅವನೊಡನೆ ಮಾತನಾಡಲು, ಬುದ್ಧಿವಾದ ಹೇಳಲು, ಬಹು ಕಾತುರ

ರಾಗಿದ್ದರು. ಅವನ ಮನಸ್ಸನ್ನು ಬದಲಿಸಲು ದೃಢಸಂಕಲ್ಪಮಾಡಿದ್ದರು. ಆದರೆ ರಾಜಣ್ಣ ಅವರ ಹಿಡಿತಕ್ಕೆ ಸಿಕ್ಕಿಬೀಳಲೇ ಇಲ್ಲ. "ಪರೀಕ್ಷೆ ಮುಗಿಯುವವರೆಗೂ ನನ್ನ ಮುಂದೆ ಈ ಸುದ್ದಿ ದಯವಿಟ್ಟು ಎತ್ತಬೇಡಿ. ಇದೊಂದು ನನ್ನ ಪ್ರಾರ್ಥನೆ" ಎಂದುಬಿಟ್ಟಿದ್ದ.

ಅದರಿಂದ ಅವನ ತಾಯಿಗೆ ಸಮಾಧಾನವಾಗಿರಲಿಲ್ಲ. ಮನಸ್ಸಿನ ಸಂಶಯ ಇನ್ನೂ ಆಳವಾಗಿತ್ತು, ಎದೆಯ ನೋವು ಮತ್ತೂ ಅಧಿಕವಾಗಿತ್ತು.

ರಾಜಣ್ಣ ಮನೆಯಿಂದ ಹೊರಗೆ ಬಂದಾಗಲೆಲ್ಲಾ ಎದುರು ಗೋಡೆಯ ಲಿಖಿತ ಅವನ ಕಣ್ಣುಗಳನ್ನು ಚೂರಿಯಂತೆ ಚುಚ್ಚುತ್ತಿತ್ತು. ಆಗ ಅವನ ಊಹೆಯ ಮನಕ್ಕೆ ಶಾಂತಳ ಸ್ಥಿತಿ ಮುಟ್ಟಿ, ಅಂಕುಶವಿಟ್ಟ ಯಾತನೆಯಿಂದ ನರಳಾಡುತ್ತಿದ್ದ.

ಹತ್ತಾರು ದಿನಗಳನಂತರ ಒಂದು ಶನಿವಾರ ಮಧ್ಯಾಹ್ನ ಅವನು ಮಹಡಿಯ ಮುಂಭಾಗದಲ್ಲಿ ನಿಂತು ಶಾಂತಳಿಂದ ಯಾವ ಪತ್ರವಾಗಲೀ ಬಾರದಿದ್ದುದನ್ನೇ ಚಿಂತಿಸುತ್ತಿದ್ದ. ಬೀದಿಯಲ್ಲಾಗಲೀ, ಅಕ್ಕ-ಪಕ್ಕದ ಮನೆಯ ಮುಂದಾಗಲೀ, ಜನರು ಕಾಣುತ್ತಿರಲಿಲ್ಲ. ಆಗ ಶಾಂತ, ಒಂದು ಪೆನ್ಸಿಲ್ ಹೆರೆಯುತ್ತಾ ಮನೆಯ ಹೊರಬಾಗಿಲ ಬಳಿಗೆ ಬಂದಳು. ರಾಜಣ್ಣ ನಿಂತಿರುವುದನ್ನು ಕಂಡು ಸಂತೋಷದಿಂದ, ಅತ್ತಿತ್ತ ನೋಡಿ, ಒಂದೆರಡುಬಾರಿ, ಬಾಗಿಲಿನ ಬೋಲ್ಟನ್ನು ಕುಟ್ಟಿದಳು. ಅದನ್ನು ಕೇಳಿ ರಾಜಣ್ಣ ತಿರುಗಿನೋಡಿದ. ಅವಳನ್ನು ಹೆತ್ತಿಪ್ಪತ್ತು ದಿನಗಳಿಂದಲೂ ನೋಡಲಾಗದಿದ್ದ ರಾಜಣ್ಣ, ಕ್ಷಮಾಯಾಚನೆ ಬೇಡುವ, ಸಹಾನುಭೂತಿ, ಪ್ರೇಮ ಕಾರುವ ಕಣ್ಣುಗಳಿಂದ ಅವಳನ್ನೇ ಎವೆಯಿಕ್ಕದೆ ನೋಡಿದ. ಶಾಂತಳ ವದನ ನಗುವಿನಿಂದ ಕಮಲದಂತೆ ಅರಳಿತು. ಅದನ್ನು ಕಂಡು, ಅವನ ಮುಖವೂ ಆನಂದದಿಂದ ಅರಳಿತು. ಎದೆಯ ಭಾರವೆಲ್ಲಾ ನಿಟ್ಟುಸಿರಿನ ರೂಪದಲ್ಲಿ ಮಾಯವಾಯಿತು.

ಶಾಂತ, ಎದುರು ಮನೆ ಗೋಡೆಯ ಲಿಖಿತವನ್ನೇ ಬೆರಳು ಮಾಡಿ ತೋರಿಸಿದಳು. ರಾಜಣ್ಣ ಅವಳೆಡೆಗೆ ತಿರುಗಿ, 'ಅಳಿಸಿ

ಬಿಡಲೇ ?' ಎಂದು ಸನ್ನೆಮಾಡಿದ. ಅವಳು 'ಬೇಕಾಗಿಲ್ಲ !' ಎಂದು ತಲೆ ಅಲ್ಲಾಡಿಸಿ, 'ಅಂಥವಕ್ಕೆಲ್ಲ ಏಕೆ ಹೆದರುವುದು ? ಇದ್ದರೆ ಇದ್ದುಕೊಳ್ಳಲಿ ಬಿಡಿ ' ಎಂದು ಸನ್ನೆಮಾಡಿದಳು.

ಅದರಿಂದ ರಾಜಣ್ಣನ ಮನದ ಯಾತನೆ ಕಡಮೆಯಾಯಿತು. ನಸು-ನಗುತ್ತಾ, 'ಓದು, ಊಟ, ನಿದ್ದೆ ಹೇಗಿದೆ ?' ಎಂದು ಕೇಳಿದ. ಅವಳು ' ಹೀಗೇ ನಡೀತಿದೆ !' ಎಂದಳು. ' ಧಡಿಯ ಎಲ್ಲಿ ?' ಎಂದು ಕೇಳಿದ. ಅವಳು ನಟಿಕೆ ಮುರಿದು ' ಹಾಳಾಗಿ ಹೋದ ' ಎಂದಳು. ' ಶ್ಯಾಮಲ ! ಕುಳ್ಳಿ ! ಎಲ್ಲಿ ?' ಎಂದು ಸನ್ನೆಮಾಡಿದ. ಆಗ ಅದೇಕೋ ಶಾಂತಳ ವದನ ನಾಚಿಕೆಯಿಂದ ಕೆಂಪೇರಿತು. ಅವಳು ನಕ್ಕು, ಒಂದು ನಿಮಿಷ ತಲೆತಗ್ಗಿಸಿ ನಂತರ, 'ಕುಳ್ಳಿ ಈಗ ಕುಳ್ಳಿಯಲ್ಲ ! ದೊಡ್ಡವಳು !' ಎಂದು ತುಟಿಕಡಿದು, ಹುಬ್ಬೇರಿಸಿ, ಎತ್ತರವಾಗಿ ಕೈ ಎತ್ತಿ ತೋರಿದಳು. ರಾಜಣ್ಣ ಪಪ್ಪೆತುಟಿ ಮಾಡಿ, ತಲೆ ಅಲ್ಲಾಡಿಸುತ್ತಾ ಗೊತ್ತಾಗಲಿಲ್ಲ ' ಎಂದ. ಅವಳು ಅವನ ಹೆಡ್ಡತನವನ್ನು ಮೂದಲಿಸುವ ರೀತಿಯಲ್ಲಿ, 'ನಿಮಗೆ ಒಂದೂ ಗೊತ್ತಾಗೋಲ್ಲ ' ಎಂದಳು.

ರಾಜಣ್ಣ ಅವಳನ್ನೇ ಕೆಲವು ಕ್ಷಣ ತುಂಟನೋಟದಲ್ಲಿ ನೋಡಿದ. ನಂತರ 'ಹೈಸ್ಕೂಲಿನ ಬಳಿಗೆ ಬಾ. ಒಂದು ಟ್ಯಾಕ್ಸಿ ತರುತ್ತೇನೆ. ಎಲ್ಲಾದರೂ ಹೋಗೋಣ ' ಎಂದು ಸನ್ನೆಮಾಡಿದ. ಅವಳು 'ಅದೆಲ್ಲಾ ಸಾಧ್ಯವಿಲ್ಲ. ಮನೆಬಿಟ್ಟು ಆ ದಿಕ್ಕಿಗೆ ಹೋದರೆ ನಮ್ಮ ತಾಯಿ ಕತ್ತು ಕೊಯ್ದುಬಿಡ್ತಾರೆ !' ಎಂದು ಕೈಲಿದ್ದ ಸ್ಲೇಟನ್ನು ಕತ್ತಿನ ಮುಂದೆ ಎಳೆದುಕೊಂಡಳು. ರಾಜಣ್ಣ ಬೇಡಿಕೆಯ ನೋಟ ಬೀರುತ್ತಾ, ' ನಿನ್ನನ್ನು ಮುತ್ತಿಡಬೇಕು !' ಎಂದ. ಅವಳು 'ಥೂ !' ಎಂದು ಕೈ ಬೀಸಿದಳು. ಕಣ್ಣು ಕೆಂಪಗೆ ಮಾಡಿಕೊಂಡಳು. ಹೋಗಲಿ ; ಕಾಗದ ಬರೆಯೋಲ್ಲವೇ ?' ಎಂದರೂ. ' ಊಹು ' ಎಂದು ಅವನನ್ನೇ ನೋಡುತ್ತಾ ಪೆನ್ಸಿಲ್ ಹೆರೆಯತೊಡಗಿದಳು. ಮರು ನಿಮಿಷವೇ ಕೈ-ಕೊಯ್ದುಕೊಂಡವಳಂತೆ ಬೆಚ್ಚಿಬಿದ್ದು ; ರಕ್ತ ಬರುತ್ತಿದ್ದ ಬೆರಳು ತೋರಿಸಿದಳು. ಅವನು ವಿಷಾದದಿಂದ ಲೊಟ್ಟೆ ಗುಟ್ಟಿ, 'ಎಲ್ಲಿ ! ಆ ಬೆರಳನ್ನು ನನ್ನ ಬಾಯಿನಲ್ಲಿಡು ' ಎಂದು ಬೇಡಿದ.

ಅವಳು ಆ ಬೆಟ್ಟನ್ನು ತನ್ನ ಬಾಯಿನಲ್ಲಿಟ್ಟು ಚೀಪಿ, 'ನೀನು ಕೆಟ್ಟವನು, ರಕ್ತ ಬರಿಸಿಬಿಟ್ಟೆ. ಥೂ ಬಳೆ!' ಎಂದು ಸನ್ನೆಮಾಡಿದಳು.

ಅಷ್ಟರಲ್ಲೇ ಅವಳ ಮನೆಯಲ್ಲಿ ಏನೋ ಶಬ್ದವಾಯಿತು. ಕೂಡಲೇ ಅವಳು 'ಅಲ್ಲಿ ನಿಂತುಕೋ ಬೇಡ. ಬೇಗ ಒಳಕ್ಕೆ ಹೋಗು ಹೋಗು! ಹೋಗು!' ಎಂದು ಸನ್ನೆಮಾಡಿ, ತಾನೂ ಹಕ್ಕಿಯಂತೆ ಗೂಡಿನೊಳಕ್ಕೆ ತಲೆ ಎಳೆದುಕೊಂಡಳು.

ಅವಳ ಎಚ್ಚರಿಕೆಯಂತೆ ಹಿಂದೆ ಸರಿದು ಕುರ್ಚಿಯಲ್ಲಿ ಕುಳಿತಿದ್ದ ರಾಜಣ್ಣ, ಐದು ನಿಮಿಷಗಳಾದ ಬಳಿಕ 'ಯಾರು ಬಂದಿದ್ದರೋ!' ಎಂದು, ಕುತೂಹಲದಿಂದ ಹೊರಕ್ಕೆ ತಲೆಯಿರಿಸಿ ನೋಡಿದ. ಆಗ ಹೊರಗೆ ಯಾರೂ ಇಲ್ಲವೆಂದು ಸಮಾಧಾನದಿಂದ ಹಿಂತಿರುಗುತ್ತಿದ್ದ. ಶಾಂತಳ ತಾಯಿಯ ಸೆರಗು ಕಾಣಿಸಿತು. ಕೂಡಲೇ ಅವನು ವಿದ್ಯುತ್ ತಂತಿ ಮುಟ್ಟಿದವನಂತೆ ತಲ್ಲಣಿಸಿ ಹಿಂದೆ ನೆಗೆದ!

ಅವನಿಗೆ ಶಾಂತಳ ನಗುಮುಖವನ್ನು ಕಂಡು ಮನಸ್ಸಿನ ದುಗುಡವೆಲ್ಲಾ ಪರಿಹಾರವಾಯಿತು. ಆದರೂ ಶ್ಯಾಮಲಳಿಗೆ ಏನಾಯಿತೋ ಗೊತ್ತಾಗಲಿಲ್ಲ.

ಆ ದಿನವೇ ಪ್ರಾತಃಕಾಲದಲ್ಲಿ ಶ್ಯಾಮಲ ಮೈ-ನೆರೆದಿದ್ದಳು!

## ೧೧

ಮಾರನೆಯ ದಿನ ರಾಜಣ್ಣನ ತಂದೆ ತಮ್ಮ ಎಡೆಬಿಡದ ಕೋರ್ಟ್ ಕೆಲಸವೊಂದರ ಮೇಲೆ ಊರಿಗೆ ಹೋದರು. ಹೀಗೆ ಸ್ವತಂತ್ರವಾಗಿ ಪ್ರೇಮ ವ್ಯವಹಾರಕ್ಕೆ ಬಿದ್ದಿದ್ದ ರಾಜಣ್ಣ, ಅವರಿಗೆ ತಮ್ಮ ಕುಟುಂಬ - ರಾಜ್ಯದ ದೊಡ್ಡ ದಂಗೆಕೋರನಂತೆ ಕಂಡಿದ್ದ. ಅವರಿಗೆ ತಮ್ಮ ಮನೆ ಮಂದಿಯಮೇಲೆ ಸರ್ವ - ವಿಚಾರಗಳಲ್ಲೂ ಹತೋಟಿಯಿರಬೇಕಾಗಿತ್ತು. ಅವರ ಅಭಿಲಾಷೆ, ಆಜ್ಞೆ, ಇಂಗಿತಗಳನ್ನು ಪಾಲಿಸದಿದ್ದವರಿಗೆ ಅವರು ಎಳ್ಳುಕಾಳಿನಷ್ಟು ದಯೆ - ದಾಕ್ಷಿಣ್ಯಗಳನ್ನು ತೋರಿಸುತ್ತಿರಲಿಲ್ಲ. ಈಗ ರಾಜಣ್ಣನ ಮೇಲೂ

ಅವರು ಮೌನ ಜ್ವಾಲಾಮುಖಿಯೊಂದರಂತೆ ಕುದಿಕುದಿದು, ಅವನು ಇದೇ ರೀತಿ ಮುಂದುವರೆದರೆ ತಮಗೆ ಅಂಥ ಮಗನ ಅಗತ್ಯವೇ ಇಲ್ಲ ಎಂಬ ಅರ್ಥ ಬರುವ ಎಚ್ಚರಿಕೆಯ ಮಾತುಗಳನ್ನು ಪರೋಕ್ಷವಾಗಿ ಗುಡುಗಾಡಿ ಹೋಗಿದ್ದರು. ಏಕೆಂದರೆ ಅವರ ಪರೋಕ್ಷ ಎಚ್ಚರಿಕೆಯೇ ತಮ್ಮ ಕುಟುಂಬದಲ್ಲಿ ಎಂಥ ಬಂಡಾಯವನ್ನಾದರೂ ಅಡಗಿಸಬಲ್ಲ ಅಧಿಕಾರದ ಪ್ರಬಲ ಹಸ್ತದಂತಿತ್ತು.

ಅವನ ತಾಯಿ, ಮಗಳ ಮನೆಯಲ್ಲೇ ಕ್ರಿಸ್‌ಮಸ್ ರಜೆಯ ವರೆಗೂ ಉಳಿದುಕೊಂಡಿರಬೇಕು ; ನಂತರ ತನ್ನ ಮಗನೊಡನೆ ಒಟ್ಟಿಗೆ ಹಳ್ಳಿಗೆ ಹಿಂತಿರುಗಬೇಕು ಎಂದು ನಿರ್ಧರಿಸಿದ್ದರು. ಹಿಂದಿನಂತೆ ಅವರೂ ಈಗ ಸುಗ್ಗಿಯ ಕಾಲದಲ್ಲಿ ಮನೆಗೆ ಬರುವ ಆಳು–ಕಾಳು ಗಳನ್ನು ಹತೋಟಿಯಲ್ಲಿಡಬೇಕಾಗಿರಲಿಲ್ಲ. ಆ ಅಧಿಕಾರವನ್ನೆಲ್ಲಾ ಅವರ ಹಿರಿಯ ಸೊಸೆಯೇ ಅವರ ಕೈಯಿಂದ ಕಸಿದುಕೊಂಡಿದ್ದಳು. ಅವರು ಇಲ್ಲಿಯೇ ಉಳಿದುಕೊಂಡ ಕಾರಣದಿಂದ ರಾಜಣ್ಣನೂ ತುಂಬಾ ಹರ್ಷಗೊಂಡ.

ಅವರು ಎಷ್ಟು ಒತ್ತಾಯ ಮಾಡಿದರೂ ಶಾಂತಳೊಡನೆ ವಿವಾಹ ವಾಗುವ ಮಾತನ್ನು ಅವನು ಪ್ರಾರಂಭಿಸಲಿಲ್ಲ. ಆ ಸಮಸ್ಯೆಯನ್ನು ಪರೀಕ್ಷೆ ಮುಗಿಯುವವರೆಗೂ ಸುಪ್ತವಾಗಿಯೇ ಇರಿಸಿ, ಅದು ಮುಗಿದು ಪಾಸ್ ಆದಕೂಡಲೇ ಆ ಕಾರ್ಯಕ್ಕೆ ಸರ್ವಶಕ್ತಿಯ ಪ್ರಯೋಗ ಮಾಡಿ, ಮಿಂಚಿನಂತೆ ಸಫಲನಾಗಬೇಕೆಂದು ಅವನು ಹವಣಿಕೆ ಹಾಕಿ ಕೊಂಡಿದ್ದ.

ಈಗಾಗಲೇ ಪರೀಕ್ಷೆ ಕೇವಲ ನಾಲ್ಕು ತಿಂಗಳಿದ್ದವು. ಮನಸ್ಸಿನ ಹತ್ತಾರು ಜಂಝಡಗಳ ನಡುವೆಯೂ ಅವನು ಓದನ್ನು ನಿಧಾನವಾಗಿ ಮತ್ತೆ ಕುದುರಿಸಿಕೊಂಡ. ಪರೀಕ್ಷೆ-ಓದು ಇವುಗಳ ವಿಚಾರ ಯೋಚಿ ಸಿದಂತೆಲ್ಲಾ ಅವನಿಗೆ ತಾನು ಇಲ್ಲಿಗೆ ಮಾಡಲು ಬಂದಿದ್ದ ಕಾರ್ಯ ಗಳ ; ಸಾಧಿಸಲು ಬಂದಿದ್ದ ಸಾಧನೆಗಳ ನೆನಪಾಗುತ್ತಿತ್ತು.

ತುಟ್ಟ ತುದಿಗೆ ಬಂದು ನಿಂತಿದ್ದ ಓದಿನ ಶಿಖರವನ್ನೇರಿ, ಪದ ವಿಯ ಬಾವುಟ ಹಾರಿಸುವುದಕ್ಕೆ ಮಾತ್ರ ಅವನಿಲ್ಲಿಗೆ ಬಂದಿರಲಿಲ್ಲ. ತನ್ನ

ಭವಿಷ್ಯ ಜೀವನಕ್ಕೆ ಅತ್ಯಗತ್ಯವಾಗಿದ್ದ ಅನೇಕ ಬೌದ್ಧಿಕ ಬೇಡಿಕೆಗಳ ತೃಪ್ತಿ, ಪೋಷಣೆಗಳಿಗೂ ಇಲ್ಲಿಗೆ ಬಂದಿದ್ದ. ಆ ದಿಕ್ಕಿನಲ್ಲಿ ಪಟ್ಟ ಶ್ರಮ ಸಮರ್ಪಕವಾಗಿಲ್ಲದಿದ್ದರೂ, ಅಸಮಾಧಾನಕರವಾಗಿರಲಿಲ್ಲ. ಫಲಕಾರಿಯಾಗಿದೆಯೆಂದೇ ಅವನಿಗೆ ಭಾಸವಾಗಿತ್ತು.

ಅರಿವು, ವಿದ್ಯೆಗಳ ಸಿದ್ಧಿ ಶೇಖರಿಸಲು ಬಂದ ಅವನಿಗೆ, ಶಾಂತಳ ಸೌಭಾಗ್ಯದಾಯಕ ಪ್ರೇಮನಿಧಿಯೂ ದೊರೆತುದನ್ನು ಕಂಡು, ಅವನ ಬಾಳಿನಲ್ಲಿ ಇದುವರೆಗೂ ಇಲ್ಲದಿದ್ದ ಜೀವನೋದ್ವೇಗ, ಮಾಧುರ್ಯಗಳು ಕುಡಿಯೊಡೆದಿದ್ದುವು. ಪ್ರೇಮ, ಸಾಹಸ, ಸತತ ಶ್ರಮದ ಪಂಜುಹಿಡಿದು, ತಾನು ಅವಳೊಡನೆ ತನ್ನ ಭೂಮಿಗೆ ಹಿಂತಿರುಗಿ, ಅಲ್ಲಿ ದೃಢವಾಗಿ ಕಾಲೂರಿ ನಿಂತರೆ; ಆಗ ಜೀವನದ ಶುಭ್ರ-ಸುಂದರ ಮುಗಿಲನ್ನು ವಿಕಾರತೆಯ ಯಾವ ಕಾರ್ಮೋಡಗಳೂ ಕಬಳಿಸಲಾರವು, ತಮ್ಮ ಗುಡುಗು-ಸಿಡಿಲುಗಳಿಂದ ನಮ್ಮನ್ನು ಅಂದು ಚಂದ್ರಪ್ಪ ಹೇಳಿದಂತೆ ಬೆದರಿಸಲಾರವು, ವಿನಾಶಗೊಳಿಸಲಾರವು. ಅದಕ್ಕೆ ಬದಲು ಸುಸಂಸ್ಕೃತಸೌಜನ್ಯದ ಕೆಚ್ಚಿದೆಯ ಅಗ್ನಿಕುಂಡದಲ್ಲಿ, ಜೀವನದ ಕುಸುಮ-ಕೋಮಲ-ಸತ್ಯ-ಸೌಂದರ್ಯಗಳೇ ಕೂರಸಿಯಂತೆ ಬೆಂದು ಕೈಗೆದ್ದು ಬಂದರೆ, ಆಗ ವಿಕಾರತೆಯ ಯಾವ ಸಶಕ್ತ ಪಶುವೂ ಅದರ ಮುಂದೆ ನಿಲ್ಲಲಾರದು, ಉಳಿಯಲಾರದು ಎಂದೆನಿಸುತ್ತಿತ್ತು. ತನ್ನ ಈ ಬಾಳ ನಂಬಿಕೆಯಲ್ಲಿ, ಶಾಂತಳ ಪ್ರೇಮದಲ್ಲಿ, ಅವನ ಎದೆ ದುರ್ದಮ್ಯ ಆತ್ಮವಿಶ್ವಾಸದ ಗೌರೀಶಂಕರವಾಯಿತು. ಅವನ ದೃಷ್ಟಿ ಆ ನಂಬಿಕೆಯ ಚಿರಂತನ ಪ್ರಭೆ ಬೀರುವ ಧ್ರುವತಾರೆಯಾಯಿತು.

*

ಛಳಿಗಾಲದ ಬಿಡುವಿಗೆ ಇನ್ನೇನು ಎಳೆಂಟು ದಿನಗಳಿದ್ದುವು. ಹಳ್ಳಿಗೆ ಹಿಂತಿರುಗುವ ಮುನ್ನ, ಶಾಂತಳನ್ನೊಮ್ಮೆ ಹೇಗಾದರೂ ಭೇಟಿ ಮಾಡಿ ಹೋಗಲು ಅವನು ಮನಸ್ಸು ಮಾಡಿದ್ದ. ಒಂದೆರಡು ದಿನ ಯತ್ನಿಸಿ ಅವಳನ್ನೊಮ್ಮೆ ಕಾಲೇಜಿನ ಬಳಿ ಸಂಧಿಸಿ, ಅವನ ಅಭಿಲಾಷೆಯನ್ನು ಅವಳಿಗೆ ವ್ಯಕ್ತಪಡಿಸಿದ್ದ. ಅದಕ್ಕೆ ಅವಳು ಆಗಲೇ ಯಾವುದನ್ನೂ, ನಿಷ್ಕರ್ಷೆಯಾಗಿ ತಿಳಿಸಿರಲಿಲ್ಲ ನಾಳೆಯೊ-ನಾಡಿದ್ದೊ

ಒಂದು ಪತ್ರದಲ್ಲಿ ತನ್ನ ತೀರ್ಮಾನ ತಿಳಿಸುವೆನೆಂದು ಹೇಳಿದ್ದಳು. ಹಾಗೆಯೇ ಇನ್ನು ಮುಂದೆ ಕಾಲೇಜಿನ ಬಳಿ ಭೇಟಿಗೆ ಯತ್ನಿಸಬಾರ ದೆಂದು ಸೂಚಿಸಿದ್ದಳು.

ಆ ಅಲ್ಪಕಾಲಾವಧಿಯ ಭೇಟಿಯಲ್ಲಿ ಅವಳ ಜೊತೆಗೆ ಮತ್ತೊಬ್ಬ ಕೋಮಲ ಸಹಪಾಟಿಯಿದ್ದಳು. ಅವಳ ಹೆಸರು ಸುಮಾ ಎಂದು. ಅವಳು ಈಗೀಗ ಶಾಂತಳೊಡನೆ ಸದಾಕಾಲವೂ ಇರುತ್ತಿದ್ದಳು. ತಾವಿಬ್ಬರೂ ಮಾತನಾಡುತ್ತಿರುವಾಗ ಅವಳು ಮೌನವಾಗಿ ನಿಂತು, ಅವರಾಡುವ ಮಾತನ್ನೆಲ್ಲಾ ನಿರ್ಲಿಪ್ತತೆಯಿಂದ ಆಲಿಸಿ, ಬೇರ್ಪಡುವಾಗ ಅಷ್ಟು ಸಪ್ಪೆಯಾದ ತಿಳಿನಗೆಯನ್ನು ರಾಜಣ್ಣನೆಡೆಗೆ ಬೀರಿ, ಹೋಗಿದ್ದಳು. ಅವಳನ್ನು ಕಂಡೊಡನೆಯೇ ರಾಜಣ್ಣನ ಎದೆಯಲ್ಲಿ 'ನನಗೂ ಆಕೆಯಂಥ ತಂಗಿಯೊಬ್ಬಳಿದ್ದಿದ್ದರೆ!' ಎಂಬ ಬಯಕೆ ಉದಿಸಿತ್ತು.

ಅದಾದ ಎರಡು ದಿನಗಳ ಬಳಿಕ, ಒಮ್ಮೆ ಸುಮಾ ತನ್ನ ಕಾಲೇಜಿನ ಆವರಣದಲ್ಲೇ ನಾಲ್ಕಾರು ಬಾರಿ ಅತ್ತಿತ್ತ ಸುಳಿದಾಡಿದಂತಾಯ್ತು. ರಾಜಣ್ಣ ಏನೋ ವಿಚಾರವಿರಬಹುದೆಂದು ಅವಳ ಬಳಿಗೆ ನಡೆದ. ಆಗ ಬಹು ಕಾತುರದಿಂದ ನಿರೀಕ್ಷಿಸುತ್ತಿದ್ದ ಶಾಂತಳ ಪತ್ರ ಅವನಿಗೆ ದೊರಕಿತು. ಅವಳು ಅದರಲ್ಲಿ, ತಮ್ಮ ಮನೆಯ ಇತ್ತೀಚಿನ ಪರಿಸ್ಥಿತಿಯೆಲ್ಲವನ್ನೂ ವಿವರವಾಗಿ ತಿಳಿಸಿದ್ದಳು.

ಅವಳ ತಂದೆ ಎಷ್ಟು ಹುಡುಕಾಡಿದ್ದರೂ ವರದ ಅವರಿಗೆ ಕಂಡು ಬಂದಿರಲಿಲ್ಲವಂತೆ. ಅವರಿಗೆ ಕಾರ್ಖಾನೆಯಿಂದ ಬರಬೇಕಾಗಿದ್ದ ವಿವಾದಾಸ್ಪದ ಬಾಕಿಯೊಂದರ ಒಂಭೈನೂರು ರೂಪಾಯಿಗಳು ನಿನ್ನೆಯೇ ಕೈಗೆ ಬಂದಿದ್ದುವಂತೆ, ಅವಳ ತಾಯಿಯ ಸರ್ಪಗಾವಲು, ವರಾನ್ವೇಷಣೆ ತೀವ್ರವಾಗಿದ್ದುವಂತೆ. ಅವರು ತಮ್ಮ ಅಳಿದುಳಿದ ದೊಡ್ಡ ಒಡವೆ-ವಸ್ತುಗಳನ್ನೆಲ್ಲಾ ಮಾರಿ, ಮೊದಲು ದೊರೆತ ಗಂಡಿಗೆ ಅವಳನ್ನು ಲಗ್ನಮಾಡಲು ಹವಣಿಸುತ್ತಿದ್ದರಂತೆ. ಗೆಳತಿಯಂತೆ ನಟಿಸುತ್ತಿದ್ದ ಶಕ್ಕು ಗೂಢಚಾರಿಣಿಯಾಗಿ ಅವಳ ಕಾಲೇಜಿನ ಚಲನ-ವಲನವನ್ನೆಲ್ಲಾ ತಾಯಿಗೆ ತಿಳಿಸುತ್ತಿದ್ದಳಂತೆ. ಈ ಎಲ್ಲ ಸುದ್ದಿಗಳಾದ ನಂತರ—

" ....ಭೇಟಿ ಅಸಾಧ್ಯವೆಂದೇ ತೋರುತ್ತಿದೆ. ಆದರೂ ಕಡೆಯ ಘಳಿಗೆಯವರೆಗೂ ಯತ್ನಿಸುತ್ತೇನೆ.

" ಅಂದಿನ ನಿಮ್ಮ ಮುತ್ತುಗಳನ್ನು ನಾನು ಎಂದಿಗೂ, ಎಂದೆಂದಿಗೂ ಮರೆಯಲಾರೆ! ನಿಮ್ಮ ಬಳಿಗೆ ಬರಲು ಅಂದು ಕೊಂಚ ಹೆದರಿಕೆಯೇ ಆಗಿತ್ತು. ಕವಿದು ಬರುವ ಬಯಕೆಗಳಿಗೆ ಎಲ್ಲಿ ಮನ ಸಡಿಲಬಿಟ್ಟು ಬಿಡುತ್ತೇನೋ ಎಂದು ಹೆದರಿದ್ದೆ. ನಿಮ್ಮನ್ನು ಪಕ್ಕಕ್ಕೆ ತಳ್ಳಿದಾಗ ನನ್ನ ಮನಸ್ಸಿನ ಹತೋಟಿಯೇ ಗಾಳಿಗೆ ತೂರಿ ಹೋಗಿತ್ತು. ಆದರೆ....ಆ ಕ್ಷಣ, ನೀವೂ ನನ್ನೊಡನೆ ಸಹಕರಿಸಿದಿರಿ. ಅದರಿಂದ ಒಂದು ದೊಡ್ಡ ಗಂಡಾಂತರ ತಪ್ಪಿತು!

" ಈಗ ನಿಮ್ಮ ಬಳಿಗೆ ಬರಲು ಅಂಥ ಯಾವ ಹೆದರಿಕೆಯೂ ಇಲ್ಲ. ನಮ್ಮ ವಿವಾಹವಾಗುವವರೆಗೆ ನೀವೂ ಮನಸ್ಸು ಬಿಗಿ ಹಿಡಿಯಬಲ್ಲಿರಿ ಎಂಬ ನಂಬಿಕೆಯಿದೆ. ಆದರೆ ಪರಿಸ್ಥಿತಿ ಹದಗೆಟ್ಟಿದೆ, ಆಸ್ಫೋಟಕಕಾರಿಯಾಗಿದೆ. ನಾನು ನಿಮ್ಮನ್ನು ತ್ಯಜಿಸಿ, ಮರೆತುಬಿಟ್ಟಿದ್ದೇನೆಂದೇ ನಮ್ಮ ತಾಯಿ ಈಗೀಗ ಭಾವಿಸುತ್ತಿದ್ದಾರೆ. ಇದರಿಂದ ಮನೆಯಲ್ಲಿ ಈಗ ನನ್ನ ಸ್ಥಿತಿ ಅಷ್ಟು ಕಠಿಣವಾಗಿಲ್ಲ. ಮತ್ತೊಂದು ಬಾರಿ ನಮ್ಮ ಭೇಟಿಯ ಸಂಶಯವೇನಾದರೂ ಅವರಿಗೆ ಒಂದು ಸಾಸಿವೆಯಷ್ಟು ತೋರಿಬಿಟ್ಟರೆ ಸಾಕು; ನನ್ನ ವಿದ್ಯೆಗೆ ಖಂಡಿತವಾಗಿಯೂ ಕಲ್ಲು ಬೀಳುತ್ತದೆ. ಮನೆ ಮತ್ತೊಮ್ಮೆ ಮನಸ್ತಾಪಗಳ ಮಸಣವಾಗುತ್ತದೆ. ನನ್ನ ಬಯಕೆಯ ಜೀವನದ ಅಸ್ತಿಭಾರವೇ ಕೆಳಗೆ ಕುಸಿಯುತ್ತದೆ.

" ನಾನೊಮ್ಮೆ ಭೇಟಿ ಕೊಡಲಾಗದಿದ್ದರೂ ನನ್ನನ್ನು ಅರ್ಥ ಮಾಡಿಕೊಳ್ಳಿ. ದಯವಿಟ್ಟು ಮನ್ನಿಸಿ. ಪರೀಕ್ಷೆಯಾದ ಕೂಡಲೇ, ಹೆಗಲಮೇಲಿರುವ ಈ ಹೊರೆಯನ್ನು ಕೆಳಗೆಸೆದು, ನಮ್ಮ ಬಯಕೆಗಳ ಬಾಕಿಯೆಲ್ಲವನ್ನೂ ಮನದಣಿಯುವಂತೆ ತೀರಿಸಿಕೊಳ್ಳೋಣ. ಆ ಆಸೆ ನಿಮಗೊಬ್ಬರಿಗೇ ಇದೆ ಎಂದುಕೊಳ್ಳಬೇಡಿ. ನನಗೂ ಇದೆ. ಹುಡುಗಿಯರಿಗೂ ಬಿಸಿ-ಬಿಸಿ ರಕ್ತವಿರುತ್ತೆ!

"....ಈಗ, ನಿಮಗೆ ತಿಳಿಸದೇ ನಾನೊಂದು ಕೆಲಸ ಮಾಡಿದ್ದೇನೆ.

ಒಂದು ದಿನ ಸುಮಾ ಜೊತೆಯಲ್ಲಿ ಮನೆಗೆ ನಡೆದುಕೊಂಡೇ ಬಂದೆ. ಕುತೂಹಲದಿಂದ ಆ ಪ್ರಭಾವತಿಯ ಮನೆಯ ಮುಂದೆಯೇ ಹಾದೆ. ನೀವು ಪತ್ರದಲ್ಲಿ ತಿಳಿಸಿದ್ದಂತೆಯೇ ಅವಳು ಮಹಡಿಯ ಕಟಕಟೆಗೆ ಕೈಯೂರಿ, ಅದರ ಮೇಲೆ ತಲೆ ಹೊತ್ತು ನಿಂತಿದ್ದಳು. ಅವಳ ನಾಯಿ ತಂದು ಕೊಡುವ ರಬ್ಬರ್ ಚೆಂಡನ್ನು ಉದ್ಯಾನಕ್ಕೆ ಎಸೆಯುತ್ತಾ ಇದ್ದಳು. ಅದನ್ನು ಕಂಡು ನನಗೆ ಏಕೋ ಒಂದು ಕ್ಷಣ ಕನಿಕರ ವಾಯ್ತು. ಒಬ್ಬ ವಿದ್ಯಾವಂತೆ, ಸುಂದರಿ, ಯುವತಿ, ಆ ಒಲ್ಲದ ಬದುಕಿನ ಬಲೆಯಲ್ಲಿ, ಸಲ್ಲದ ಸುಖಗಳ ಅನ್ವೇಷಣೆಯಲ್ಲಿ ಏಕೆ ಆ ಕಹಿ ಬಾಳನ್ನು ದೂಡಬೇಕೋ ನನಗೆ ತೋರದು. ಜೀವನದಲ್ಲಿ ಕಹಿ ಮನಸ್ಕರಾಗುವುದು ಎಷ್ಟು ಸುಲಭ; ಆದರೆ ನಮ್ಮ ಎದೆಯಲ್ಲಿ ಸಮಾಜ, ಸಂದರ್ಭಗಳು ಕಡೆದು ಮೇಲುಕ್ಕಿಸುವ ಹಾಲಾಹಲವನ್ನು ದಕ್ಕಿಸಿಕೊಂಡು, ಜೀವನದ ಸವಿಯೆಲ್ಲವನ್ನೂ ಪರಿಶುದ್ಧ-ಹೃದಯದಿಂದ ಹೀರುವುದು ಎಷ್ಟು ಸುಂದರ ಎಂದೆನಿಸಿತು. ಅದನ್ನೇ ಅವಳಿಗೂ ಹೇಳಬೇಕೆನಿಸಿತು. ಆದರೆ, ತನ್ನ ಸ್ವಪ್ರತಿಷ್ಠೆಯ ಕೋಟೆಯಲ್ಲೇ ಕುಳಿತು ಗರ್ವಪಡುತ್ತಿರುವ ಅವಳನ್ನು ಸಮೀಪಿಸಲು ಸಾಧ್ಯವೇ ?....

"ಎಂದಾದರೂ ಒಂದು ದಿನ ಅದೂ ಸಾಧ್ಯವಾಗಬಹುದು. ಆಗ ನಾವಿಬ್ಬರೂ....ನಮ್ಮ ಮೊದಲನೆಯ ಮುದ್ದು ಮಗುವನ್ನು ಪೆರಂಬುಲೇಟರಿನಲ್ಲಿ ತಳ್ಳಿಕೊಂಡು, ಇಬ್ಬರೂ ಅವಳ ಬಳಿಗೆ ಹೋಗೋಣ. ಅದನ್ನು ನೋಡಿಯಾದರೂ ಅವಳು, ಪತಿವ್ರತೆ ಯರು ಗೊಣ್ಣೆಸುರುಕಿಯರಲ್ಲ; ಅವರ ಮಕ್ಕಳು ನಾಯಿಕುನ್ನಿಗಳಲ್ಲ, ಎಂಬುದನ್ನು ಕಣ್ಣಾರೆ ಅರಿಯಲಿ ತನ್ನ ಆ ಕಳ್ಳ-ಸುಖದ ಬಾಳನ್ನು ಕಂಡು ಹೇಸಿಗೆ ಪಡಲಿ. ಪಶ್ಚಾತ್ತಾಪದ ಅಗ್ನಿಯಲ್ಲಿ ಬೆಂದು ಶುಚಿ ಯಾದ ಬದುಕಿಗೆ ಅಡಿಯಿರಿಸಲಿ....

"ನಿಮ್ಮ ಸಂಗತಿಯೆಲ್ಲವನ್ನೂ ಈ ಪತ್ರ ತಂದ ಸುಮಾಳಿಗೆ ತಿಳಿಸಿದ್ದೇನೆ. ಕಡೆಗೆ, ನೀವು-ನನಗೆ ಮುತ್ತಿಟ್ಟಿರುವುದನ್ನೂ ಹೇಳಿ ದ್ದೇನೆ. ಅವಳು ನನ್ನ ಒಬ್ಬ ನೆಚ್ಚಿನ ಗೆಳತಿ. ಅವಳಿಗೆ ಗಂಡಸರನ್ನು ಕಂಡರೆ ಹೆದರಿಕೆ, ನಡುಕ. ಒಮ್ಮೆ ಅವಳು ಒಂಟಿಯಾಗಿ ಕಾಲೇಜಿ

ನಿಂದ ಬರುತ್ತಿರಬೇಕಾದರೆ, ನಿರ್ಜನ ರಸ್ತೆಯೊಂದರಲ್ಲಿ ಯಾರೋ ಪೋಲಿ ವಿದ್ಯಾರ್ಥಿ ಅವಳನ್ನು ಹಿಡಿದು ಒಮ್ಮೆ ಚುಂಬಿಸಿ ಓಡಿಹೋಗಿದ್ದನಂತೆ! ಆ ಪಶು ಹಲ್ಲಿನಿಂದ ಕಡಿದಿರುವ ಮಚ್ಚೆ ಈಗಲೂ ಅವಳ ಕೆನ್ನೆಯಮೇಲಿದೆ. ಅದಕ್ಕಿಂತಲೂ ಹೆಚ್ಚಾಗಿ ಆ ಭೀತಿ ಅವಳ ಸುತ್ತ - ಮನದಲ್ಲಿ ಅಚ್ಚೊತ್ತಿದ್ದಂತೆ ಉಳಿದುಕೊಂಡಿದೆ. ಅಂದಿನಿಂದ ಅವಳು ಹುಡುಗರನ್ನು ಕಂಡೊಡನೆಯೇ ಬೆವರಿ, ಸೆಲಕ್ಕಿಳಿದು ಹೋಗುತ್ತಾಳೆ. ಆದರೆ ಈಗೀಗ ನಿಮ್ಮ ಸ್ನೇಹಮಾಡುವ ಆಸೆಯಾಗಿದೆ ಅವಳಿಗೆ ಅವಳು ಸಿಕ್ಕಿದಾಗಲೆಲ್ಲಾ ನೀವು ಪ್ರೀತಿಯಿಂದ ಮಾತಾಡಿಸಿ. ಹಾಗಾದರೂ ಆ ಹೆದರಿಕೆ ಅವಳನ್ನು ಬಿಡಲಿ ಆ ಮನೋರೋಗ ತೊಲಗಿ ಹೋಗಲಿ....

"ಆದರೆ, ಆ ಪಕ್ಕು ಇದ್ದಾಳೆ ನೋಡಿ, ಅವಳ ವಿಚಾರದಲ್ಲಿ ಸ್ವಲ್ಪ ಎಚ್ಚರಿಕೆಯಾಗೇ ಇರಿ. ಅವಳು ಎಷ್ಟು ಘಾಟಿ ಎಂದು ನಿಮಗೆ ಆಗಲೇ ತಿಳಿದಿರಬಹುದು. ಅವಳ ಫರ್ ಕೋಟ್, ರಿಸ್ಟ್ ವಾಚ್, ಮೂವತ್ತು ಸಿಲ್ಕು ಸೀರೆಗಳ ಚರಿತ್ರೆ, ಹೊಟೇಲು ಪ್ರಣಯಿಗಳನ್ನೆಲ್ಲಾ ನಿಮಗೆ ಎಂದಾದರೂ ತಿಳಿಸುತ್ತೇನೆ. ಅವಳು ಮೊನ್ನೆ 'ಈವ್ಸ್-ವೀಕ್ಲಿ'ಯಲ್ಲಿ ಒಂದು ಲೇಖನ ಬೇರೆ ಬರೆದಿದ್ದಳು! ಅದರಲ್ಲಿ ಏನೇನು ಬರೆದಿದ್ದಾಳೆ ಗೊತ್ತೇ? 'ಸ್ತ್ರೀಯರು ಹುಟ್ಟಿರುವುದೇ ಗಂಡಸಿನ ಸುಖದ ಗೊಂಬೆಯಾಗುವುದಕ್ಕೆ. ಹಾಗಲ್ಲದಿದ್ದರೆ ದೇವರು ಅವರಿಗೇಕೆ, ಆ ಮೃದು ದೇಹ, ಸಿಹಿ ತುಟಿ, ಮೈಮರೆಸುವ ತಲೆಕೂದಲು, ಚಾಂಚಲ್ಯ ಪ್ರೇರಕ ನೇತ್ರಗಳು, ರಸಭರಿತ ತೊಡೆಗಳು ಇವನ್ನು ಕೊಡುತ್ತಿದ್ದ? ಅವನ ದಿವ್ಯ ಉದ್ದೇಶವನ್ನು ಅರಿತು ಎಲ್ಲ ಸ್ತ್ರೀಯರೂ ಬಣ್ಣದ ಹೂವುಗಳಂತೆ – ಚಿಟ್ಟೆಗಳಂತೆ ಪುರುಷನ ಒರಟು ಪ್ರಪಂಚವನ್ನು ಆಕರ್ಷಕಗೊಳಿಸಬೇಕು?' ಎಂದು ಇನ್ನೂ ಏನೇನೋ ತಲೆಹರಟೆ ಹೊಡೆದಿದ್ದಾಳೆ. ಹೆಂಗಸರು ಈ ಭೂಮಿ ಮೇಲೆ ಹುಟ್ಟಿರೋದೇ ಗಂಡಸಿನ ಸೂಳೆಯಾಗೋಕೆ ಎಂಬ ಅರ್ಥ ಬರೋ ಹಾಗಿದೆ ಅದರ ಸಾರಾಂಶ! ಅದು ಅವಳ ಜೀವನದ ಸಾರಾಂಶವೇ!!

"ಅಬ್ಬಾ! ಅವಳ ಸುದ್ದಿಯೆಲ್ಲ ಈಗೇಕೆ? ಆದರೂ ನೋಡಿ,

ಅವಳು ಇದುವರೆಗೂ ಒಬ್ಬರ ಕೈಗೂ ಸಿಕ್ಕಿಹಾಕಿಕೋಬಾರದೇ? ಒಬ್ಬರನ್ನೊಬ್ಬರು ಮದುವೆಯಾಗೋಣ ಎಂದು ಭಾಷೆಯಿಟ್ಟುಕೊಂಡು ಸುಮ್ಮನೆ ಒಂದೆರಡು ಮುತ್ತಿಟ್ಟು ಬರುತ್ತಿದ್ದ, ನಮ್ಮಂಥವರೇ ಸಿ ಹಾಕಿಕೊಂಡು, ಫಜೀತಿ ಬೀಳಬೇಕೇ? ಅದನ್ನು ನೆನೆಸಿಕೊಂಡರೆ ದೇವರು ಅನ್ನೋನಿಗೆ....!

"ಬೇಡ ಅವನಿಗೇಕೆ ಬಯ್ದು ಬಾಯಿ ನೋಯಿಸಿಕೊಳ್ಳ

"ಈಗ ಒಂದು ದೊಡ್ಡ ಸುದ್ದಿ ನಿಮಗೆ ಹೇಳಬೇಕಾಗಿದೆ. ತಿಳಿಸುವುದಕ್ಕಾಗೇ ಈ ಪತ್ರ ಬರೆಯೋ ಅಗತ್ಯ ಉಂಟಾಗಿ

"ನಿನ್ನೆ ದಿನ ನಾನು-ಶ್ಯಾಮಲ ಇಬ್ಬರೇ ಮನೆ ನಿಮ್ಮ ತಾಯಿ ಮನೆಗೆ ಬಂದ್ರು! ಅವರನ್ನು ನೋ ಮೊದಲು ಗಾಬರಿಯೇ ಆಯ್ತು. ಏನಾದರೂ ಬಂದಿರಬೇಕು, ಎಂದುಕೊಂಡೆ. ಅವರು ಬಂ ಪಾತ್ರೆ ಬೆಳಗುತ್ತಿದ್ದೆ. ನೀವು ಮೆಚ್ಚಿದ್ದ ಬಿ

"ನಾನು ಪಾತ್ರೆ ಉಜ್ಜುತ್ತಿರುವುದನ ನಿಂತರು. ಬಹುಶಃ ಅವರು ನಾನೊಬ್ಬ ಮಂಕುಬೂದಿ ಹಾಕಿ ಬುಟ್ಟಿಗೆ ತಿಳಿದಿದ್ದರೇನೋ... !

"ಅದಕ್ಕೇ ಅವರು ಗಲ್ಲದಮೇ ನನ್ನನ್ನೇ ಒಂದು ನಿಮಿಷ ನೋಡೇ ನ ನಗುತ್ತಾ, ಒಂಗೈಯಿಂದ ಹಣೇಮೆ ಮಾಡಿಕೊಂಡು 'ಬನ್ನಿ....!' ಎಂ ಕೂಡಲೇ ನನ್ನ ಅಜ್ಜಿಯಂತೆ ನಕ್ಕರ ನನಗೆ ಸಕ್ಕರೆ ತಿಂದಹಾಗಾಯ್ತು!

"ಸಮಾಧಾನದಿಂದ ನಿಟ್ಟು ಕೊಂಡು, ಅವರನ್ನು ನನ್ನ ರ ಅವರು ನಮ್ಮ ಮನೆ, ನನ್ನ ಪು ಕೃಷ್ಣ, ಶಾರದಾದೇವಿ, ಸರೋಜ

ಇವರೆಲ್ಲರ ಫೋಟೋ ನೋಡಿದರು. ಸರೋಜಿನಿ ನಾಯ್ಡು ಫೋಟೋ ಕಡೆ ಕೈ ತೋರಿಸಿ, 'ಇವರೆಲ್ಲಾ ಯಾರಮ್ಮಾ?' ಎಂದು ಕೇಳಿದರು. ...ನು ಅವರಿಗೆ ಎಲ್ಲಾ ಫೋಟೋಗಳ ಪರಿಚಯ ಮಾಡಿಕೊಟ್ಟೆ. ...ಲೆ ಅವರು ನೀನು 'ಬೀಯೆ' ಓದ್ತೀಯೇನಮ್ಮಾ!' ಎಂದು ...ರು. ಅವರ ಧ್ವನಿಯಲ್ಲಿ ತುಂಬಾ ಆಶ್ಚರ್ಯವಿತ್ತು. ನಾನು ...ಂದ ನಗುತ್ತಾ, 'ಹೌದು!' ಎಂದೆ. ಅವರು ನನ್ನನ್ನೇ ...ಡವರಂತೆ ನೋಡಿ, 'ನನ್ನ ಕೈಯಲ್ಲಿ ನಂಬೋಕೆ ಸಾಧ್ಯ ...' ಎಂದರು. ನಾನು ಏನನ್ನೂ ಹೇಳಲಿಲ್ಲ.

...ಲಡಿಕೆ ಚೀಲ ಬಿಚ್ಚಿ, ನಮ್ಮ ತಂದೆ, ತಾಯಿ, ನಮ್ಮ ...ರಾನೂ ಕೇಳಿ ತಿಳಿದುಕೊಂಡ್ರು. ನಿಮ್ಮ ಅತ್ತಿಗೆ ...ಅಸಮಾಧಾನದಿಂದ ಏನೇನೋ ಹೇಳಿದರು. ...ಮೇಲೆ ಏನು ಮಾಡ್ತೀಯಮ್ಮಾ? .... ನೀನು ...ೀಡಿದರೆ, ಸಾಹೇಬಗಿತ್ತಿ ಆಗೋ ಹಂಗೆ ...ಗ ನಾನು ಅವರಿಗೆ ಒಂದು ಸುಳ್ಳು ಹೇಳಿ... ...ಪಕ್ಕೆ ಸೇರೊಲ್ಲ....ಮದುವೆ ಆಗ್ತೀನಿ...' ...ಂಡು ಗೊತ್ತಾಗಿದೆಯಾ?' ಎಂದರು. ...ಅವರು ನನ್ನನ್ನೇ ಒಂದು ರೀತೀಲ್ಲಿ ...ದ್ದರು. ಅದನ್ನು ನೋಡಿ, ನನಗೆ ... 'ಹೂ....ಗಂಡು ಗೊತ್ತಾಗಿದೆ!' ...ರುಬಿಟ್ಟು ... ಅದೇಕೋ ನಮ್ಮ ...ೀಲ್ಲಿ....ಏನೋ ಚಿಂತೆ ಮಾಡ್ತಿರ... ...ಅವರ ಮಾತು ಅರ್ಥವಾಗಲಿಲ್ಲ. ...ರೇ ಇರಬಹುದು ಎಂದು ಊಹಿಸಿ ...ನಾಚಿ, ತಲೆತಗ್ಗಿಸಿದೆ. ಅವರು, ...ನಿಜವೇ?' ಎಂದರು. ನಾನು ...ಏಕೋ ದುಃಖದಿಂದ ನಿಟ್ಟುಸಿರು ...ಗೋ....!' ಎಂದರು.

ನಾನು ಆ ಸಂದರ್ಭ ಚೆನ್ನಾಗಿ ಉಪಯೋಗ ಮಾಡಿಕೊಂಡು ಬಿಟ್ಟೆ. ನಿಮ್ಮ ಮೇಲಿನ ಪ್ರೇಮವೆಲ್ಲ ಅವರಿಗೆ ತೋಡಿಕೊಂಡು, 'ನನ್ನನ್ನು ಸೊಸೆಯಾಗಿ ಸ್ವೀಕರಿಸಿ. . ಆಶೀರ್ವಾದ ಮಾಡಿ' ಎಂದು ಅವರ ಕಾಲು ಹಿಡಿದುಕೊಂಬಿಟ್ಟೆ. ನನಗೆ ಆಗ ತುಂಬಾ ಕಣ್ಣೀರು ಬಂದು ಬಿಡ್ತು. ಅವರ ಕಾಲೆಲ್ಲಾ ನನೆದು ಹೋಯ್ತು. ಆಗ ಅವರು ನನ್ನ ತಲೆ ಮುಟ್ಟಿ, ಮೇಲೇಳು ನನ್ನ ತಾಯೀ! ದೇವರ ಇಷ್ಟ ಇದ್ದರೆ ಎಲ್ಲಾ ಆಗುತ್ತೆ. ನೀನು ನನ್ನ ಮನೆಗೆ ಬಂದರೆ ಗೌರಮ್ಮ ಬಂದ ಹಾಗೆ ಆಗುತ್ತೆ. ಮೇಲೇಳಮ್ಮಾ! ಎಂದರು. ಅವರ ಕಣ್ಣಲ್ಲೂ ಏಕೋ ನೀರು ಬಂದು ಬಿಟ್ಟಿತ್ತು. ಅವರಿಗೆ ಹೂವು, ಕುಂಕುಮ ಕೊಟ್ಟೆ. ಶ್ಯಾಮಲ ಟೀ ಮಾಡಿ ತಂದು ಕೊಟ್ಟಳು. ಕುಂಕುಮ ಇಟ್ಟುಕೊಂಡು, ಹೂವು ಮುಡಿದು, ಟೀ ಕುಡಿಯುತ್ತಾ 'ನಿನ್ನ ತಂಗೀನೂ ಓದ್ತಿದಾಳೇನಮ್ಮಾ?' ಎಂದರು. ನಾನು 'ಹೂ' ಎಂದೆ.

"ಅವರು ಟೀ ಕುಡಿಯುವುದನ್ನು ನಿಲ್ಲಿಸಿ ಏನನ್ನೋ ಒಂದು ಕ್ಷಣ ಆಳವಾಗಿ ಯೋಚಿಸಿ ಹೇಳಿದರು, ಎಷ್ಟೇ ಓದಿರಲಿ ಶಾಂತಮ್ಮ, ಒಬ್ಬ ಹೆಂಗಸಿಗೆ ಗುಣ ಇರಬೇಕು, ಗಂಡ ಇರಬೇಕು. ನಾವೆಲ್ಲಾ ಕಮಕ್ ಕಿಮಕ್ ಎನ್ನದೆ ತಂದೆ ತಾಯೀ ಕೊಟ್ಟ ಗಂಡನ್ನ ಕಟ್ಟಿ ಕೊಂಡ್ವಿ. ಅದೃಷ್ಟ ಹಣೇಲಿ ಬರೆದಿದ್ದವರಿಗೆ ದೇವರಂಥ ಗಂಡ ಸಿಕ್ದ. ಇಲ್ಲದವರಿಗೆ ಚರ್ಮ ಸುಲಿಯೋ ಕಟುಕ ಸಿಕ್ದ. ಅಂಥವರನ್ನು ಕಟ್ಟಿಕೊಂಡ ತಪ್ಪಿಗೆ ಸಾಯೋವರೆಗೂ ಹೇಗೋ ಮರ್ಯಾದೆಯಿಂದ ಹೆಣಗೋ ಗುಣವಂತೆಯರೇ ಹೆಚ್ಚಿಗೆ ಈ ಪ್ರಪಂಚದಲ್ಲಿ. ಅವರೂ ನಿಮ್ಮ ಹಂಗೇ ವಿದ್ಯಾ ಕಲ್ತಿದ್ರೆ, ಕಷ್ಟ ಸಹಿಸೋಕೆ ಆಗ್ದಿದ್ದಾಗ ಬಾವಿಗೆ ಬೀಳ್ದೆ, ನೇಣುಹಾಕ್ಕೊಳ್ದೇ, ಸೀಮೆಎಣ್ಣೆ ಸುರ್ಕೊಂಡು ಬೆಂಕಿ ಇಟ್ಟುಕೊಳ್ದೆ, ಆ ಗಂಡ ಅನ್ನೋ 'ದನಾ'ನ್ನ, 'ಹೋಗ್ ನನ್ನ ಮಗನೇ!' ಎಂದು ಬಿಟ್ಟು ಬಂದು, ತಮ್ಮ ಕಾಲ ಮೇಲೆ ತಾವು ನಿಲ್ಲಬೋದಾಗಿತ್ತು. ತಮ್ಮ ಮಕ್ಕಳು ಮರೀಗೆ ವಿದ್ಯಾ ಬುದ್ಧಿ ಕಲಿಸ್ಕೊಂಡು ಶಿವ ಕರಕೊಂಡು ಹೋಗೋವರೆಗೂ ಇದ್ದಷ್ಟು ದಿನ

ಸುಖವಾಗಿರಬೋದಾಗಿತ್ತು. ಆ ಸುಖ ನೀವು ಕೇಳ್ಕೊಂಡು ಬಂದಿದೀರಪ್ಪ. ಚೆನ್ನಾಗಿ ಬಾಳಿ. ನಿಮಗೆಲ್ಲಾ ಮುತ್ತಿನಂಥ ಗಂಡ ಸಿಗಲಿ ಎಂದು ಎದ್ದು ಹೊರಟರು. ಬಾಗಿಲ ಬಳಿ ನಿಂತು, 'ಪರೀಕ್ಷೆ ಮುಗಿಸ್ಕೊಂಡು ನನ್ನ ಮಗಳ ಜೊತೆ ಒಂದ್ಸಲ ನೀನು, ನಿಮ್ಮ ಅಮ್ಮ, ತಂಗಿ ಎಲ್ಲಾ ಸಮಸ್ಕಾರ ಜಾತ್ರೆಗೆ ಬರ್‍ರವ್ವಾ.. ನಿಮ್ಮನ್ನ ನೋಡಿ, ನನ್ನ ದೊಡ್ಡ ಸೊಸೆನಾದ್ರು ಒಂದಿಷ್ಟು ಬುದ್ಧಿ ಕಲಿತ್ಕೊಳ್ಳಿ. ಎಲ್ಲೋ ನಾಕಕ್ಷರ ಇಂಗ್ಲೀಷ್ ಕಲಿತೀವ್ನಿ ಅಂತ ಯಾವಾಗಲೂ ಮೊಕ್ಕೆ ಬೂದಿ ಬಳ್ಕೊಂಡು, ಗಂಡನ ಜೊತೆ 'ಕಿಸ್ ಪಿಸ್' ಅಂದ್ಕೊಂಡು ದೊರೆಸಾನಿ ಹಂಗೆ ಕುರ್ಚಿ ಮೇಲೆ, ಕುಕ್ತಿರ್ತಾಳೆ ಸೆರಗಿನಲ್ಲಿ ಬೀಗದ ಗೊಂಚಲು ಕಟ್ಕೊಂಡು' ಎಂದು ತಮಗೆ ತಾವೇ ಹೇಳಿಕೊಂಡು ಹೊರಟು ಹೋದರು. ಅವರು ಕಣ್ಮರೆಯಾದ ಕೂಡ್ಲೇ ನಾನು ಶ್ಯಾಮಲಾನ ತಬ್ಬಿ ಮುತ್ತಿಟ್ಟು ಕುಣಿದಾಡಿದೆ.

"ನೋಡಿ, ಹೇಗಿದೆ ನನ್ನ ಕಮಾಲ್! ನಿಜವಾಗಿಯೂ ನಿಮ್ಮ ತಾಯಿ ಬೆಣ್ಣೆಯಷ್ಟು ಮೃದು, ಸಕ್ಕರೆಯಷ್ಟು ಸಿಹಿ! ನಮ್ಮ ಮದುವೆಗೆ ಅವರ ಒಪ್ಪಿಗೆ ಆಗಲೇ ಸಿಕ್ಕಿ ಬಿಟ್ಟಿದೆ ಎಂದೇ ತಿಳಿಯಿರಿ.

"ನಿಮ್ಮ ತಂದೆಯವರನ್ನೂ ಒಂದು ದಿನ ನೋಡಿದೆ. ಒಳ್ಳೇ ಹಿಂದಿನ ಕಾಲದ ಪಾಳೆಯಗಾರ ಇದ್ದಾಗೆ ಇದಾರೆ. ಅವರನ್ನು ನೀವು ಹೇಗೆ ಜಗ್ಗಿಸುತ್ತೀರೋ ನನಗೆ ತೋಚೋಲ್ಲ.

"ನಿಮ್ಮ ಅತ್ತಿಗೆಯ ಸಮಾಚಾರವೇನು! ಅವರು ಎಷ್ಟು ಓದಿದಾರೆ? ಇವನ್ನು ನನಗೆ ಬೇಗ ತಿಳಿಸಿ.

"ಕಡೆಗೂ ನಮ್ಮ ತಂದೆಯ ಹಣದಲ್ಲೇ ಪರೀಕ್ಷೆಗೆ ಕಟ್ಟಿದೆ! ನಿಮ್ಮ ದುಡ್ಡನ್ನು ಹಾಗೇ ಭದ್ರವಾಗಿ ಇರಿಸಿದ್ದೇನೆ. ನಿಮ್ಮ ಆ ದೇವೀ ಪ್ರಸಂಗದ ಪತ್ರವನ್ನೂ ಭದ್ರವಾಗಿ ಉಳಿಸಿಕೊಂಡಿದೇನೆ. ಅದನ್ನು ಸುಮಾಳಿಗೂ ತೋರಿಸಿಲ್ಲ. ಅಂಥ ವಿಚಾರಗಳೆಲ್ಲ ನನ್ನ ನಿಮ್ಮ ಇಬ್ಬರ ಮಧ್ಯೆ ಮಾತ್ರ ಇರಬೇಕು, ಅಲ್ಲವೇ? ಈಗ ಅವೆರಡನ್ನೂ ನನ್ನ ಹತ್ತಿರವೇ ಇಟ್ಕೊಂಡಿರೋದು ತುಂಬಾ ಅಪಾಯಕರ. ನಾನಿಲ್ಲದಿರುವಾಗ ನಮ್ಮ ತಾಯಿ ಟ್ರಂಕ್ ಬೀಗ ತೆಗೆದು ಎಲ್ಲಾ ಜಪ್ತಿ

ಮಾಡಲೂ ಹೇಸೋಲ್ಲ, ನಿಮಗೆ ಅದನ್ನು ನಾಳೆಯೇ ಸುಧಾಳ ಕೈಲಿ ಕೊಟ್ಟು ಕಳಿಸುತ್ತೇನೆ. ವಯುವಿಟ್ಟು ತೆಗೆದುಕೊಳ್ಳಿ.

"ಸಾಧ್ಯವಾದರೆ ಅವಳಿಗೆ ಬದಲು ನಾನೇ ಭೇಟಿ ಮಾಡುತ್ತೇನೆ. ಮಧ್ಯಾಹ್ನ ಮೂರು ಗಂಟೆಗೆ ಪಬ್ಲಿಕ್ ಲೈಬ್ರೆರಿಯಲ್ಲಿರಿ. ಆ ಹಾಳು ದೇವರು ನಮಗೆ ಒಂದೇ ಒಂದು ಗಂಟೆಕಾಲ ಯಾರ ಕಣ್ಣಿಗೂ ಬೀಳದಿರೋ ಹಾಗೆ ಅದೃಶ್ಯ ಆಗೋ ಶಕ್ತಿ ಏಕೆ ಕೊಡಲಿಲ್ಲವೋ? ಆಗ ನಾವಿಬ್ಬರೇ ಏನೇನು ಮಾಡಬಹುದು! ಕಬ್ಬನ್ ಪಾರ್ಕಿನಲ್ಲೆಲ್ಲಾ ಕೈ-ಕೈ ಹಿಡಿದು ಸುತ್ತಾಡಬಹುದು. ಶಕ್ಕು ವ್ಯಾನಿಟಿ ಬ್ಯಾಗ್‌ನಲ್ಲಿರೋ ಹೋಟೇಲ್ ಬಿಲ್, ಇನ್ನೂ ಏನೇನೋ ಪಜೀತಿ ಸಾಧನಗಳನ್ನೆಲ್ಲಾ ನೋಡಿ ಹಾಗೇ ಇಡಬಹುದು. ಹೋಟೇಲಿನಲ್ಲಿ ಕುಳಿತು ಮಾಣಿ ಬೆಚ್ಚಿ ಬೀಳುವಂತೆ ಆರ್ಡರ್ ಮಾಡಿ, ಪ್ಲೇಟು, ಕಪ್ಪಿನಲ್ಲಿರೋ ತಿಂಡಿ-ಕಾಫಿ ಕಾಲಿಮಾಡಿ, ದುಡ್ಡು ಬಡಿದು ಹೊರಕ್ಕೆ ಬರಬಹುದು. ಆಮೇಲೆ ....ಆಮೇಲೆ....ನೀವು ನನಗೆ........ತ್ತುಗಳನ್ನು ಇಡಬಹುದು!

"ಹು, ಈಗ ಇಷ್ಟು ಸಾಕು. ನಾಳೆ ಮೂರು ಗಂಟೆ ಪಬ್ಲಿಕ್ ಲೈಬ್ರರಿ—ಮರೆಯಕೂಡದು!

"ಎಲ್ಲಿ ಹಾಗೇ ಒಂದು ಕ್ಷಣ ನಿಲ್ಲಿ!.... ತೀರಿತೇ ನಿಮ್ಮ ಬಯಕೆ?

ಓ, ರಾಜೂ! ಹೇಗೆ ಲೇಖನಿ ನಿಲ್ಲಿಸಲಿ?"

ಆ ಸಂಜೆ ಅವನು ನಾಲ್ಕನೆಯ ಬಾರಿ ಓದಿ, ಒಂಟಿಯಾಗಿ, ಕುಮಾರಾಪಾರ್ಕ್ ಬಡಾವಣೆಯ ಖಾಲಿ ನಿವೇಶನಗಳ ಬಂಡೆಯೊಂದರ ಮೇಲೆ ಕುಳಿತಿದ್ದ.

ಅವನು ಕುಳಿತೆಡೆಯಿಂದ ಸೂರ್ಯಾಸ್ತದ ದೃಶ್ಯ ಬಹು ರಮ್ಯ ವಾಗಿ ಕಂಡಿತ್ತು. ಈಗ ಕಗ್ಗತ್ತಲು ಮುಸಕು-ಮುಸಕಾಗಿ ಕವಿಯು ತ್ತಿತ್ತು. ನಾಳೆ ಶಾಂತಳನ್ನು ಭೇಟಿ ಮಾಡುವ ಸಂಭವ, ತನ್ನ ತಾಯಿಯ ಮನವನ್ನು ಅವಳು ಒಲಿಸಿಕೊಂಡಿದ್ದ ಸಂಗತಿ, ಅವಳ 'ಓ ರಾಜೂ!' ಎಂಬ ಕಿವಿಗೇ ಕೇಳುವ ವಿರಹ ವಾಣಿ, ಇವುಗಳ ಸವಿ ಯನ್ನು ಮೆಲುಕು ಹಾಕುತ್ತಾ, ಬಾಯಲ್ಲೊಂದು ಸಿಗರೇಟು ಕಚ್ಚಿ

ಅವನು ನೈವುರಿತು ಕುಳಿತಿದ್ದ. ಆಗ ಹಠಾತ್ತನೆ ರಾಜಣ್ಣನ ಕೆನ್ನೆಗೆ ಯಾರೋ ಘರೀರನೆ ಒಂದು ಏಟು ಬಾರಿಸಿದರು.

ಅವನು ಸಿಡಿಲೊಡೆದವನಂತೆ ಮೇಲೆದ್ದು ನಿಂತ. ಅವನೆದುರು, ಗಡ್ಡ ಬೆಳಸಿ, ರೌದ್ರಾವತಾರ ತಾಳಿದ್ದ ವರದ "ಇವತ್ತು ಸಿಕ್ಕಿದೆಯಾ ಶೂದ್ರ ಸೂಳೆ ಮಗನೇ!" ಎಂದು ಹಲ್ಲುಕಡಿಯುತ್ತಾ ಮುಷ್ಟಿ ಮೇಲೆತ್ತಿ ನಿಂತಿದ್ದ. ತನ್ನ ಮೂಗಿಗೆ ಗುರಿಯಿಟ್ಟಿದ್ದ ಏಟನ್ನು ತಪ್ಪಿಸಿಕೊಂಡು ರಾಜಣ್ಣ ಮಿಂಚಿನ ವೇಗದಲ್ಲಿ ವರದನ ಕೈ ಹಿಡಿದು ನುಲಿಸಿ, ಅವನನ್ನು ಮೇಲೆತ್ತಿ ಕೆಳಗೆ ಕುಕ್ಕಿ, ಅವನ ಮೇಲೆ ಕುಳಿತ. ಅಷ್ಟರಲ್ಲಿ ಸುತ್ತುಮುತ್ತಲಿಂದಲೂ ನಾಲ್ಕಾರು ಭೀಕರ ಆಕೃತಿಯ ಅಪರಿಚಿತರು ಓಡಿಬಂದರು. ಒಬ್ಬ ತನ್ನ ಕಾಲಿನಿಂದ ರಾಜಣ್ಣನ ಕೆನ್ನೆಗೆ ಒದೆದ, ಇನ್ನೊಬ್ಬ ಪಕ್ಕಕ್ಕೆ ಒದೆದ, ಮತ್ತೊಬ್ಬ ಮುಖಕ್ಕೆ ಒದೆದ. ರಾಜಣ್ಣ ನೋವಿನಿಂದ ನರಳಿ ಯಾತನೆಯ ಉಂಡೆಯಂತೆ ನೆಲಕ್ಕುರುಳಿದ. ಅವನ ಮೇಲೆ ಅವರೆಲ್ಲರೂ ಕಾಲೇಟುಗಳ ಮಳೆ ಹೇರತೊಡಗಿದರು ಬಹು ದಿನಗಳ ಬೇಟೆಯ ನಂತರ ಒಂಟಿಯಾಗಿ ಬಲಿಬಿದ್ದ ಮಿಕದ ಸುತ್ತಲೂ ನೆರೆವ ಕಾಡಿನ ಕ್ರೂರ ಜಂತುಗಳಂತೆ ಅವರೆಲ್ಲರೂ ರಕ್ತ ಪಿಪಾಸೆಯಿಂದ ನೆಲದಲ್ಲಿ ಹೊರಳಿ ಹೋರಾಡುವ ರಾಜಣ್ಣನ ದೇಹದ ಮೇಲೆ ಹರಿದು ಬಿದ್ದರು.

* * *

ಅಂದು ರಾತ್ರಿ ಒಂಭತ್ತು ಗಂಟೆಗೆ ವರದ ಹರುಕು ಬಟ್ಟೆಯಲ್ಲಿ, ಬೆಳೆದ ಗಡ್ಡದಲ್ಲಿ, ಊದಿಕೊಂಡ ತುಟಿಯನ್ನು ಅದುಮಿ ಭಯ ಭ್ರಾಂತವಾದ ಕಣ್ಣುಗಳಿಂದ ಮನೆಗೆ ಹಿಂತಿರುಗಿದ. ಅವನ ತಾಯಿ ಅವನ ದುರವಸ್ಥೆಯನ್ನು ಕಂಡು ಮರುಗಿ ಕಣ್ಣೀರಿಟ್ಟರು. ಕೇಶವಯ್ಯಂಗಾರರು ಮುಗುಳು ನಗೆ ಬೀರಿ ಮೌನವಾಗಿ ಅವನನ್ನು ಸ್ವಾಗತಿಸಿದರು. ಅಂದು ರಾತ್ರಿ ಅವನಿಗೆ ಪ್ರೀತಿ-ಆದರದ ಊಟ-ಉಪಚಾರವಾಯಿತು. ಒಳ್ಳೆಯ ದಾರಿಗೆ ಬರುವ ಉಪದೇಶವಾಯಿತು. ಅದೆಲ್ಲವನ್ನೂ ಅವನು ತಲೆ ಬಗ್ಗಿಸಿ ಕೇಳಿ ಹಾಸಿಗೆಗೆ ಹೋಗಿ ಹೊದಿಕೆ ಹೊದೆದು ಮಲಗಿದ.

ಅವನು ಊರು ಬಿಟ್ಟು ಎಲ್ಲಿಗೋ ತೊಲಗಿ ಹೋಗಿದ್ದನೆಂದು ತಿಳಿದಿದ್ದ ಶಾಂತ ಭಯದಿಂದ ಕಂಪಿಸಿದಳು. ರಾಜಣ್ಣನೊಡನೆ ನಾಳೆ ಭೇಟಿ ಮಾಡಲು ಅವಳು ಈಗಾಗಲೇ ನಿರ್ಧರಿಸಿಕೊಂಡಿದ್ದಳು. ಆದರೆ ವರದನ ಮುಖ ಕಂಡೊಡನೆಯೇ ಆ ನಿರ್ಧಾರವನ್ನು ಅವಳು ಅಳಿಸಿ ಹಾಕಬೇಕಾಯಿತು.

ರಾತ್ರಿ ಊಟವಾದಮೇಲೆ ಎಲ್ಲರೂ ಮಲಗಿದರು. ಸುಮಾರು ಎರಡು ಗಂಟೆಯ ಸಮಯದಲ್ಲಿ ಕೇಶವಯ್ಯಂಗಾರರಿಗೆ ಎಂದಿನಂತೆ ಒಂದು ಲೋಟ ನೀರು ಕುಡಿಯಲು ಎಚ್ಚರವಾಯಿತು. ಅವರು ಕಣ್ತೆರೆದು ನೋಡಿದಾಗ ಮನೆಯ ಮುಂಬಾಗಿಲು ವಿಶಾಲವಾಗಿ ತೆರೆದಿತ್ತು! ಅವರು ಗಾಬರಿಯಿಂದ ದೀಪಹಚ್ಚಿ ನೋಡಿದರು. ಮನೆಗೆ ಕಳ್ಳರು ಯಾರಾದರೂ ಬಿದ್ದಿದ್ದರೋ ಎಂದು ದಿಗಿಲಾಯಿತು. ಬೇಗನೆ ತಮ್ಮ ಹಣದ ಪೆಟ್ಟಿಗೆ, ತಮ್ಮ ಪತ್ನಿಯ ಒಡವೆಯಿದ್ದ ದೊಡ್ಡ ಟ್ರಂಕ್‌ನ ಬಳಿಗೆ ಧಾವಿಸಿ ನೋಡಿದರು. ಒಂಭೈನೂರು ರೂಪಾಯಿ ಇರಿಸಿದ್ದ ಅವರ ಕ್ಯಾಷ್-ಬಾಕ್ಸ್ ಮಾಯವಾಗಿತ್ತು. ಮನೆಯಿಂದ ವರದನೂ ಪರಾರಿಯಾಗಿದ್ದ!

—ಅದೇ ಸಮಯದಲ್ಲಿ ಚಂದ್ರಪ್ಪನ ಮನೆಯಲ್ಲಿ ರಾಜಣ್ಣನ ತಾಯಿ, ಮಧ್ಯರಾತ್ರಿ ಕಳೆದುಹೋಗಿದ್ದರೂ ಮಗ ಹಿಂತಿರುಗದಿರುವುದನ್ನು ಕಂಡು 'ಅವನು ನಿಜವಾಗಿಯೂ ಕೆಟ್ಟು ಹೋಗಿದ್ದಾನೆ. ಬಂದ ಕೂಡಲೇ ತರಾಟೆಗೆ ತೆಗೆದುಕೊಳ್ಳಬೇಕು' ಎಂದು ಆಲೋಚಿಸುತ್ತಾ, ಅವನು ಮೆಟ್ಟಲೇರಿ ಬಂದು ಬಾಗಿಲು ತಟ್ಟುವ ನಿರೀಕ್ಷಣೆಯಲ್ಲೇ, ನಿದ್ರೆ ಮಾಡದೆ, ಎಲೆ-ಅಡಿಕೆ ಜಗಿಯುತ್ತಾ ಕುಳಿತಿದ್ದರು.

*　　*　　*

ಮಾರನೆಯ ಬೆಳಿಗ್ಗೆ ಹತ್ತು ಗಂಟೆಯ ಸಮಯ. ಶಾಂತಳ ಮನೆಯನ್ನು ಗಭೀರ ಮೌನ ಆವರಿಸಿತ್ತು. ಕೇಶವಯ್ಯಂಗಾರರು ವಿರಾಮ ಕುರ್ಚಿಯಲ್ಲಿ ಮುಂಡಿ ಮುಡಿಚಿ ಕುಳಿತು, ತಲೆಯ ಹಿಂದೆ ಕೈ ಕಟ್ಟಿ, ಕಣ್ಣು ಮುಚ್ಚಿಕೊಂಡಿದ್ದರು. ಅವರ ಸುಕ್ಕು ಗಟ್ಟಿದ ವೃದ್ಧ ವದನ ಯಾತನೆ, ಅವಮಾನ, ಸಂಕಟ, ಅಸಹಾಯತೆಯ ಒಂದು

ರುದ್ರ - ಮುಖವಾಡದಂತಿದ್ದಿತು.

ಅವರ ಪತ್ನಿ ಉಕ್ಕುಕ್ಕಿ ಬರುವ ಕಣ್ಣೀರನ್ನು ಒರೆಸಿಕೊಳ್ಳುತ್ತಾ, ತಮ್ಮ ಪೆಟ್ಟಿಗೆಯಲ್ಲಿ ಅಳಿದುಳಿದಿದ್ದ ಒಡವೆಗಳನ್ನು ತೆಗೆದು ಒಂದು ಚೌಕಕ್ಕೆ ಹಾಕುತ್ತಿದ್ದರು. ಆಗ ಅವರಿಗೆ ತಮ್ಮ ಹೃದಯದ ಒಂದೊಂದು ಚೂರನ್ನೇ ಕೊಯ್ದು - ಕೊಯ್ದು ಚೌಕಕ್ಕೆ ಹಾಕಿ ದಂತಾಗುತ್ತಿತ್ತು.

ಶಾಂತ ಮೌನವಾಗಿ, ಕೂದಲು ಬಿದ್ದಷ್ಟು ಸದ್ದನ್ನೂ ಮಾಡದೆ, ದುಗುಡವದನಳಾಗಿ, ಮನೆಯ ಕೆಲಸಗಳನ್ನು ಯಾಂತ್ರಿಕವಾಗಿ ಮಾಡುತ್ತಾ ಅತ್ತಿಂದಿತ್ತ ಓಡಾಡುತ್ತಿದ್ದಳು. ಮನೆಯ ಸ್ತಬ್ಧ ವಾತಾ ವರಣ ಗೋರಿಯ ಕಲ್ಲಿನಂತೆ ಅವಳ ಎದೆಯನ್ನೊತ್ತುತ್ತಿತ್ತು. ಶ್ಯಾಮಲ ಮನೆಯ ಬಾಗಿಲಲ್ಲಿ ನಿಂತು ಬೀದಿಯಲ್ಲಿ ಯಾರೋ ಒಬ್ಬ ಕೂಲಿ ದಢ - ದಢನೆ ಉರುಳಿಸಿಕೊಂಡು ಹೋಗುತ್ತಿದ್ದ ಖಾಲಿ ಡ್ರಮ್ಮನ್ನೇ ಎವೆಯಿಕ್ಕದೆ ನೋಡುತ್ತಾ, ಅದರ ಶಬ್ದವನ್ನೇ ದಿಙ್ಮೂಢ ಳಂತೆ ಕೇಳುತ್ತಾ ಪ್ರತಿಮೆಯಂತೆ ನಿಂತಿದ್ದಳು.

ಆ ಶಬ್ದ ಕೇಳಿದ ಸುಧಾ, ಮನೆಯಿಂದ ಹೊರಗೆ ಓಡಿಬಂದು ಆ ಡ್ರಮ್ಮನ್ನೇ ಅಚ್ಚರಿಯಿಂದ ನೋಡುತ್ತಾ ನಿಂತಿದ್ದಳು. ಕೂಡಲೇ ಅವಳ ಇಷ್ಟು ಹೊತ್ತಿನ ಅಳು ನಿಂತುಹೋಗಿತ್ತು.

ಡ್ರಮ್ ಮಾಡುತ್ತಿದ್ದ ನಾದ ಕೇಳಿಸದಂತೆ ಮೌನವಾದೊಡ ನೆಯೇ, ಶ್ಯಾಮಲಳಿಗೆ ಸುಧಾ ನಿಂತಿರುವುದು ಕಾಣಿಸಿತು. ಮೆಟ್ಟಿಲ ಮೇಲೆ ಕುಳಿತು, ಕೈಯಮೇಲೆ ಕೆನ್ನೆ ಹೊತ್ತು, ಅವಳನ್ನೇ ನೋಡುತ್ತಾ 'ಬಾ' ಎಂದು ತಲೆಹಾಕಿದಳು. ಸುಧಾ ಹತ್ತಿರ ಬಂದಾಗ ಅವಳ ಕೆನ್ನೆಯಮೇಲೆ ಇನ್ನೂ ಒಣಗದಿರುವ ಕಣ್ಣೀರು ಕಂಡು ಬಂತು. ಶ್ಯಾಮಲ ಕುತೂಹಲದಿಂದ,

"ಏನೇ ಸುಧಾ....ಅತ್ತ ಹಾಗೆ ಕಾಣ್ತೀಯಲ್ಲೇ! ಅಮ್ಮ ಹೊಡೆ ದರಾ?" ಎಂದಳು. ಆಗ ಸುಧಾ, ತಮ್ಮ ಚಿಕ್ಕ ಮಾವನನ್ನು ಯಾರೋ ಹೊಡೆದು ಹಾಕಿರುವುದನ್ನೂ, ಆ ಸುದ್ದಿ ತಿಳಿದು ರಾತ್ರಿಯೇ ಆಸ್ಪತ್ರೆಗೆ ಹೋಗಿ ಅವನನ್ನು ನೋಡಿ ಬಂದ ತನ್ನ ತಾಯಿ ಈಗ

ಮನೆಯಲ್ಲಿ ಅಳುತ್ತಾ ಕುಳಿತಿರುವುದನ್ನೂ, ತನ್ನ ಅಜ್ಜಿ ಆಸ್ಪತ್ರೆಯಲ್ಲೇ ಉಳಿದುಕೊಂಡಿರುವುದನ್ನೂ ತಿಳಿಸಿದಳು.

ಅದನ್ನು ಕೇಳಿ ಶ್ಯಾಮಲ ಬೆಂಕಿಯ ನಾಲಿಗೆ ಮುಖಕ್ಕೆರಗಿದವ ಳಂತೆ ಮನೆಯೊಳಕ್ಕೆ ಓಡಿ "ಅಮ್ಮಾ ಪಕ್ಕದ ಮನೆ ರಾಜಣ್ಣನನ್ನು ಯಾರೋ ಹೊಡೆದು ಹಾಕಿದಾರಂತೆ! ಆಸ್ಪತ್ರೆಯಲ್ಲಿದಾನಂತೆ; ಸುಧಾ ಹೇಳ್ತಿದಾಳೆ ನೋಡು!" ಎಂದು ಕೂಗಿಕೊಂಡಳು.

ಒಡೆವೆಯ ಗಂಟು ಹಿಡಿದು ಪತಿಯಬಳಿಗೆ ಬಂದಿದ್ದ ಅವಳ ತಾಯಿಯ ಮುಖ ಆಳವಾಗಿ ಗಂಟಿಕ್ಕಿತು. ಅವರ ನೇತ್ರಗಳು ಶ್ಯಾಮಲಳನ್ನೇ ಕ್ರೂರವಾಗಿ ನೋಡಿದುವು.

ಅದನ್ನು ಕಂಡು ಶ್ಯಾಮಲ ಭಯದಿಂದ ನಾಲಿಗೆ ಕಚ್ಚಿಕೊಂಡಳು. ತಮ್ಮ ಮುಂದಾಗಲೀ, ಮನೆಯಲ್ಲಾಗಲೀ ರಾಜಣ್ಣನ ಸುದ್ದಿ ಎತ್ತಲೇ ಬಾರದೆಂಬ ಅವರ ಕಠೋರ ಆಜ್ಞೆ ಅವಳಿಗೆ ನೆನಪಾಯ್ತು. ಇನ್ನೇನು ಶಿಕ್ಷೆ ಕಾದ್ದಿದೆಯೋ ಎಂದು ಶ್ಯಾಮಲ ತಾಯಿಯ ಕಣ್ಣುಗಳನ್ನೇ ಭಯ-ಭ್ರಾಂತಳಾಗಿ ನೋಡಲಾರಂಭಿಸಿದಳು.

ಅವರ ಕಣ್ಣುಗಳಲ್ಲಿ, ಮುಖದಲ್ಲಿ ಒಂದೆರಡು ಕ್ಷಣಗಳಲ್ಲಿಯೇ ಅಪಾರ ಪರಿವರ್ತನೆಯುಂಟಾಯಿತು. ಅವರ ಮನಸ್ಸು ಯಾರೊಡ ನೆಯೋ ಏಟು ತಿಂದು ಮನೆಗೆ ಬಂದು, ಹಣದೋಚಿ ಪರಾರಿಯಾದ ವರದ; ನಿನ್ನೆಯೇ ರಾಜಣ್ಣನನ್ನು ಯಾರೋ ಹೊಡೆದು ಹಾಕಿದ್ದು-ಈ ಎರಡು ಸಂಗತಿಗಳನ್ನೂ ಒಟ್ಟುಗೂಡಿಸಿತ್ತು. ಅವರ ಕಣ್ಣುಗಳು ಈಗ ಶ್ಯಾಮಲಳನ್ನು ಹೆದರಿಸುತ್ತಿರಲಿಲ್ಲ. ತಾವೇ ಯಾವುದೋ ಅಸ್ಪಷ್ಟ ಭೂತ ಕಂಡಂತೆ ಹೆದರಿ, ತಲ್ಲಣಿಸುತ್ತಿದ್ದುವು. ಇನ್ನೂ ಏನೇನು ಪ್ರಮಾದಗಳು ಸಂಭವಿಸಿವೆಯೋ ಎಂದೆವರು ಅಳುಕಿ, ಪತಿಯನ್ನು ಕೂಗಿದರು.

ಆದರೆ ಕೇಶವಯ್ಯಂಗಾರರ ಮನ, ಚಿಂತೆ, ನಿತ್ರಾಣ, ನಿಸ್ತೇ ಜತೆಗಳಿಂದ ಹಿಂಡಿ ಹಿಪ್ಪೆಯಾಗಿ ಈಗ ಬಳಲಿಕೆಯ ನಿದ್ರೆಯಲ್ಲಿ ಮುಳು ಗಿದ್ದಿತು. ಅವರ ಭುಜ ಹಿಡಿದು ಅಲುಗಿಸುತ್ತಾ ಅವರ ಪತ್ನಿ,

"ಇಲ್ಲಿ ಕೇಳ್ರೀ ಈ ಪ್ರಾರಬ್ಧ ಕರ್ಮ! ಏನು ಕೆಲಸ ಮಾಡಿ

ಓಡಿ ಹೋಗಿದಾನೆ ಆ ವರದ! ಆ ಹುಡುಗನಿಗೆ ಏನಾದರೂ ಹೆಚ್ಚು ಕಡಿಮೆ ಆದರೆ ಏನು ಗತೀಂದ್ರೆ. ಹೋಗಿ... ಹೋಗಿ....ಅವನು ಹೇಗಿದಾನೋ ಮೊದಲು ನೋಡಿಕೊಂಡು ಬನ್ನಿ!"

ಎಂದು ಪತಿಯನ್ನು ಎಬ್ಬಿಸಿದರು. ಕೇಶವಯ್ಯಂಗಾರರು ಗಾಬರಿಯಿಂದ ಕಣ್ಣರಳಿಸಿ, ಪತ್ನಿಯನ್ನು ಮತ್ತೆ ಸಮಾಚಾರವೇನೆಂದು ಕೇಳಿದರು. ಅವರ ಪತ್ನಿ ಮತ್ತೊಮ್ಮೆ ಹೆಚ್ಚಿನ ಗಾಬರಿ - ಭಯದಿಂದ ಸುದ್ದಿ ತಿಳಿಸಿದರು.

ಆಗ ಅವರ ಮುಖ ಮತ್ತೆ ತೀವ್ರ - ಗಾಂಭೀರ್ಯ ತಾಳಿತು. ಅಲ್ಲೇ ಇದ್ದ ಸುಧಾಳನ್ನು ಕರೆದು, ಅವಳಿಂದ ರಾಜಣ್ಣ ಹೇಗಿದ್ದಾನೆಂದು ಕೇಳಿದರು. ಅವಳಿಗೆ ಆಸ್ಪತ್ರೆಯಲ್ಲಿ ರಾಜಣ್ಣನನ್ನು ತೋರಿಸಿರಲೇ ಇಲ್ಲ. ಅವಳು ಸುಮ್ಮನೆ 'ಅಮ್ಮ-ಅಜ್ಜಿ ಬಹಳ ಅತ್ತಿದಾರೆ' ಎಂದೇ ಹೇಳಿದಳು.

ಇಷ್ಟು ಹೊತ್ತಿಗಾಗಲೇ ಶಾಂತಳ ತಾಯಿ ನೆಲಕ್ಕೆ ಕುಸಿದು, ಹಣೆ ಮುಟ್ಟಿಕೊಳ್ಳುತ್ತಾ, "ದೇವರೇ....ಎಂಥ ಮಗನ್ನ ಕೊಟ್ಟೆಯೋ ನನಗೇ!" ಎಂದು ರೋದಿಸುತ್ತಿದ್ದರು.

ಈ ಸುದ್ದಿ ತಿಳಿದ ಶಾಂತ ಹೊಟ್ಟೆಗೆ ಬೆಂಕಿ ಬಿದ್ದವಳಂತೆ, ಎದೆಗೆ ಭರ್ಜಿಯಿಂದ ಇರಿಸಿಕೊಂಡವಳಂತೆ ನರಳಿದಳು. ಬಳಬಳನೆ ಉಕ್ಕಿದ ಕಂಬನಿಗಳನ್ನೊರೆಸಿಕೊಳ್ಳುತ್ತಾ, ಕಂಪಿಸುವ ದೇಹದಲ್ಲಿ ಅವಳು ಉರಿಯುವ ಗೂಡಿನಿಂದ, ಹೊರಗಿನ ಕಾಳ್ಗಿಚ್ಚಿಗೆ ಹಾರಲು ಹೊರಡುವ ಬನಪಕ್ಷಿಯಂತೆ ತನ್ನ ಕೊಠಡಿಗೆ ಧಾವಿಸಿ ಬಂದಳು. ತಂದೆಯೊಡನೆಯೇ ರಾಜಣ್ಣನೆಡೆಗೆ ಹೋಗಲು, ಬೇಗಬೇಗ ಸೀರೆ ಬದಲಿಸಲು ಪ್ರಾರಂಭಿಸಿದಳು.

ಆಗ ಅವಳ ತಾಯಿ, ಮೇಲೆದ್ದು ಬಂದು ಏಕೋ ಒಮ್ಮೆ ತನ್ನನ್ನೇ ಸಂಶಯದಿಂದ ನೋಡಿದಂತಾಯ್ತು. "ಹೊರಗೆ ಹೋಗಕೂಡದೆಂದು ತಡೆಹಾಕುವಳೇನೋ ಹೃದಯವಿಲ್ಲದ ಮಾರಿ!.... ನೋಡೋಣ!!" ಎಂದುಕೊಳ್ಳುತ್ತಾ ಬೇಗಬೇಗ ಸೀರೆ ಉಡುತ್ತಿರುವಾಗಲೇ ಅವಳ ತಾಯಿ ದಢಾರನೆ ಕೊಠಡಿಯ ಬಾಗಿಲೆಳೆದು ಮುಚ್ಚಿ

ಕೊಂಡು, ಚಿಲಕ, ಬೀಗಗಳನ್ನು ಹಾಕಿದಂತಾಯಿತು.

ಮಿಂಚಿನ ವೇಗದಲ್ಲಿ ಬಾಗಿಲ ಬಳಿಗೆ ಹಾರಿದ ಶಾಂತ ಕಾಡಿನಲ್ಲಿ ತನ್ನ ಪತಿ ಗಾಯಗೊಂಡಾಗ ಅವನ ರಕ್ಷಣೆಗೆ ಮುನ್ನುಗ್ಗಿ ಬೇಟೆಗಾರನ ಬಲಿಗುರುಳಿ ಗರ್ಜಿಸುವ ಸಿಂಹಿಣಿಯಂತಾದಳು !

೧೨

ಅಪರಾಹ್ನ ಮೂರು ಗಂಟೆಯ ಸಮಯದಲ್ಲಿ, ಕೈ ಬೆರಳುಗಳನ್ನು ಕಡಿದು, ಉಕ್ಕುಕ್ಕಿ ಬರುವ ಕಣ್ಣೀರನ್ನೊರಸದೆ, ಕಿಟಕಿಯ ಕಂಬಿಗೆ ಹಣೆ ಒರಗಿಸಿ, ದುಗುಡ-ಸಂಶಯ-ಭೀತಿಗಳ ಪ್ರತಿಮೆಯಂತೆ ನಿಂತ ಶಾಂತ ಮನೆಯ ಮುಂದೆ ಬಂದು ನಿಂತ ಮೋಟಾರು ಕಾರಿನ ಶಬ್ದ ಕೇಳಿ ಎಚ್ಚೆತ್ತಳು. ಸೆರಗಿನಿಂದ ಕಣ್ಣೀರೊರೆಸಿಕೊಂಡು ಹೊರಗೆ ನೋಡಿದಳು.

ಆ ಕಾರಿನ ಮುಂದಿನ ಭಾಗದ ಬಾಗಿಲು ತೆರೆಯಿತು. ಅವಳ ತಂದೆ, ಚಂದ್ರಪ್ಪ, ಮತ್ತೊಬ್ಬ ವೃದ್ಧ, ಒಬ್ಬೊಬ್ಬರಾಗಿ ಕೆಳಗಿಳಿದರು. ಶಾಂತಳ ಆತುರದ ನೋಟ, ಹಿಂದಿನ ಸೀಟಿನ ಬಾಗಿಲು ತೆರೆಯುವುದನ್ನೇ ನಿರೀಕ್ಷಿಸತೊಡಗಿತು.

ಆ ಬಾಗಿಲೂ ತೆರೆಯಿತು. ರಾಜಣ್ಣನ ತಾಯಿ ಅವಳಿಗೆ ಮೊದಲು ಕಂಡರು. ನಂತರ ತಲೆ, ಕಪೋಲ, ಗಲ್ಲ, ಬಾಯಿ, ಇವುಗಳೊಂದೂ ಕಾಣಿಸದಂತೆ ಮಫ್ಲರ್ ಸುತ್ತಿಕೊಂಡಿದ್ದ ರಾಜಣ್ಣ ನಿಧಾನವಾಗಿ ಕೆಳಗಿಳಿದ. ಬಳಿಗೆ ಬಂದ ಆ ಹೊಸ ವೃದ್ಧರ ಹೆಗಲ ಮೇಲ ಕೈ-ಹಾಕಿ, ಯಾತನೆಯ ಕಣ್ಣುಗಳಿಂದ ಅತ್ತಿತ್ತ ನೋಡದೆ ಅವನು ಮನೆಯ ಕಡೆಗೆ ಪ್ರಯಾಸದಿಂದ ಅಡಿಯಿರಿಸಿದ.

ಆಗ ಶಾಂತ, ಕೈತಪ್ಪಿ, ಶತೃಧಾಳಿಯಿಂದ ಹಾಳಾದ ಒಲವಿನ ರಾಜ್ಯ ಮತ್ತೆ ಕಂಡ ರಾಣಿಯಂತೆ, ಆನಂದ-ದುಃಖದ ಕಂಬನಿಗಳು ಒತ್ತರಿಸಿ ಬರುವ ಕಣ್ಣುಗಳಿಂದ ರಾಜಣ್ಣನ ಜರ್ಝರಿತ ದೇಹವನ್ನೇ ನೋಡಿ-ನೋಡಿ, ಉದ್ವೇಗದಿಂದ ಅದುರುವ ಗಲ್ಲ, ನಿಶ್ಪ್ರಾಣವಾದ

ಕೈಗಳಿಂದ ಬಾಯಿಗೆ ಸೆರಗು ತುರುಕಿಕೊಂಡಳು.

ರಾಜಣ್ಣ ಕಣ್ಮರೆಯಾದೊಡನೆಯೇ ತನ್ನ ಬಂಧನವನ್ನು ನೆನೆದು, ಸಿಟ್ಟಿನಿಂದ ಬುಸುಗುಟ್ಟುತ್ತಾ ಬಾಗಿಲ ಬಳಿಗೆ ಧಾವಿಸಿ ಕಾಲಿನಿಂದ ಕದವನ್ನೊದೆದಳು. ಅವಳ ತಾಯಿ ತೆಪ್ಪಗೆ ಬಂದು ಬೀಗ ತೆಗೆದರು. ಮಗಳು-ತಾಯಿ ಇಬ್ಬರೂ ಆಜನ್ಮ ಶತೃಗಳಂತೆ ಒಬ್ಬರನ್ನೊಬ್ಬರು ಸುಟ್ಟು ಬಿಡುವವರಂತೆ ನೋಡಿಕೊಂಡರು. ಅನಂತರ ಶಾಂತ, ನಾಗಮ್ಮನ ಮನೆಗೆ ಹೋಗಲು ಮನೆಬಿಟ್ಟು ಹೊರಟಳು. ತಾಯಿ ತನ್ನನ್ನು ಶಪಿಸುತ್ತಿರುವುದು ಹಿಂದಿನಿಂದ ಕೇಳಿಸಿತು. ಮುಂದಿನಿಂದ ತಂದೆ, ಆ ಮತ್ತೊಬ್ಬ ವೃದ್ಧರೊಡನೆ ಮೆಟ್ಟಲೇರಿ ಮನೆಗೆ ಬರುತ್ತಿರುವುದು ಕಾಣಿಸಿತು. ಶಾಂತ ಒಂದು ಕ್ಷಣ ಏನು ಮಾಡಲೂ ತೋಚದೆ ನಿಂತಳು. ಮರುನಿಮಿಷವೇ ಮನೆಗೆ ಹಠಾತ್ತನೆ ಹಿಂತಿರುಗಿ ಬಂದಳು. "ಹಾಗೇ ಹಾಳಾಗಿ ಹೋಗಬೇಕಾಗಿತ್ತು! ಮತ್ತೇಕೆ ಬಂದೆ ಕುಲಪಾತಕಿ?" ಎನ್ನುತ್ತಿದ್ದ ತಾಯಿ, ಬಾಗಿಲಲ್ಲಿ ಕಾಣಿಸಿಕೊಂಡ ಗಂಡ ಮತ್ತು ಅಪರಿಚಯಸ್ಥನನ್ನು ಕಂಡು, ಆ ಕ್ಷಣವೇ ತುಟಿ ಪಿಟಕ್ಕೆನ್ನಿಸದೆ, ಸೆರಗೆಳೆದುಕೊಂಡು ಅಡಿಗೆ ಮನೆಗೆ ನಡೆದರು. ಶಾಂತ ತನ್ನ ಕೊಠಡಿಗೆ ಬಂದು ಕುಳಿತಳು.

ಅವಳ ಗಮನವೆಲ್ಲ ಆ ಇಬ್ಬರು ವ್ಯಕ್ತಿಗಳ ಮಾತಿನ ಕಡೆಗೇ ನಾಟಿತ್ತು. ಅವರಿಬ್ಬರೂ ಪರಸ್ಪರರ ಪರಿಚಯ ಮಾಡಿಕೊಳ್ಳುತ್ತಿದ್ದರು.

ಅವಳಿಗೆ ಆ ಮತ್ತೊಬ್ಬ ವೃದ್ಧ ಯಾರೆಂದು ಈಗಾಗಲೇ ಮಸಕು-ಮಸಕಾಗಿ ಹೊಳೆದಿತ್ತು. ಬಹುಶಃ ಆತನೇ ರಾಜಣ್ಣನನ್ನು ನಿನ್ನೆ ಆಸ್ಪತ್ರೆಗೆ ಸಾಗಿಸಿದ್ದ ವ್ಯಕ್ತಿ ಇರಬಹುದು ಎಂದುಕೊಂಡಳು.

ಟೀ ಕುಡಿದ ನಂತರ ಕೇಶವಯ್ಯಂಗಾರರು, "ಸ್ವಾಮೀ, ಈ ರಾಜಣ್ಣನನ್ನು ಹೊಡೆದ ಹುಡುಗರು ಹೇಗಿದ್ರು? ಏನಾದರೂ ಆರ್.ಎಸ್.ಎಸ್.ನವರಂತೆ ಕಾಣುತ್ತಿದ್ದರಾ?" ಎಂದು ಕೇಳಿದರು. ಆಗ ಆ ವೃದ್ಧ ಸ್ವಲ್ಪ ಯೋಚಿಸಿ, ಹೇಳಿದರು: "ನನಗೆ ಹಾಗೇನೂ ಕಾಣಲಿಲ್ಲ. ಏಕೆ? ಅವರಿಗೂ-ಈ ಹುಡುಗನಿಗೂ ಏನಾದರೂ ದ್ವೇಷವಿತ್ತೇ?"

"ಅಂಥಾದ್ದು ಏನಿಲ್ಲ. ಸುಮ್ಮನೆ ಕೇಳಿದೆ, ಅಷ್ಟೆ" ಎಂದು ತೆಪ್ಪಗಾದರು ಅವಳ ತಂದೆ. ಆ ವೃದ್ಧ ವಿಸ್ಮಯದಿಂದ ಹೇಳತೊಡಗಿದರು : "ಇವನು ತುಂಬಾ ನಿಷ್ಕಪಟ ಹುಡುಗನಂತೆ ಕಾಣ್ತಾನ್ರೀ! ನಿನ್ನನ್ನು ಹೊಡೆದವರು ಯಾರಪ್ಪಾ, ನಿನಗೆ ಗೊತ್ತೆ? ಪೋಲೀಸ್ ಕಂಪ್ಲೇಂಟ್ ಕೊಡೋಣ, ಅವರ ಮೂಳೆ ಮುರಿಸಿ, ಜೈಲಿಗೆ ಹಾಕಿಸೋಣ ಹೇಳು ಎಂದರೆ, ಏನೂ ಹೇಳೋಲ್ಲ ನೋಡಿ. ಅವರು ಯಾರೋ ನನಗೆ ಗೊತ್ತಿಲ್ಲ. ಅಲ್ಲಿ ಕುಳಿತಿದ್ದೆ. ನಾಲ್ಕೈದು ಜನ ಬಂದು ಮೇಲೆ ಬಿದ್ದರು, ಎಂದೇ ಹೇಳ್ತಾನೆ. ಅದನ್ನು ಹೇಗೆ ನಂಬೋದ್ರೀ? ವಿನಾಕಾರಣ ಅಷ್ಟು ಮಂದಿ ಒಬ್ಬನನ್ನು ಯಾಕೆ ಹೊಡೀತಾರೆ, ಹೇಳಿ? ಏನೋ ಸಮಾಚಾರ ಇರಲೇಬೇಕು. ಅಲ್ಲವೆ?"

"ಹೌದು ಸ್ವಾಮಿ ಇರಬಹುದು."

"ನಿಮಗೆ ಗೊತ್ತಿರಬೇಕಲ್ವೆ....ಅವನ ಸಮಾಚಾರಗಳು?"

"ಸ್ವಲ್ಪ ಗೊತ್ತು. ಆದರೆ ಇಂಥ ಮನಸ್ತಾಪದ ವಿಚಾರ ಗೊತ್ತಿರಲಿಲ್ಲ" ಎಂದರು. ಆ ವೃದ್ಧ, ಕೇಶವಯ್ಯಂಗಾರರು ಇತ್ತ ಒಂದು ಸಿಗರೇಟು ಹೊತ್ತಿಸಿ, ಹೊಗೆ ಬಿಡುತ್ತಾ

"ನನಗೆ ಇದೆಲ್ಲಾ ಒಬ್ಬ ಹುಡುಗೀ ದೆಸೆಯಿಂದ ಎಂದು ತೋರುತ್ತೆ ನೋಡಿ. ನನ್ನ ಸ್ನೇಹಿತನ ಕಾರು ತಂದು ಆಸ್ಪತ್ರೆಗೆ ಸಾಗಿಸೋವಾಗ ಮನೆ ಅಡ್ರೆಸ್ ಏನಾದರೂ ಸಿಗಬಹುದೇನೋ ಎಂದು ಜೇಬನ್ನೆಲ್ಲಾ ಹುಡುಕಿದೆ. ಆಗ ಹಳ್ಳಿಯಿಂದ ಯಾರೋ ಒಬ್ಬ ರಾಜಶೇಖರ ಅನ್ನೋರು ಬರೆದಿದ್ದ ಪತ್ರ ಇತ್ತು. ಅದರಿಂದಲೇ ಅವರ ಮನೇಗೆ ಸುದ್ದಿ ತಿಳಿಸಲು ಸಾಧ್ಯವಾಯ್ತು. ಅಲ್ಲದೆ ಅದರ ಜೊತೇಲ್ಲೇ ಇನ್ನೊಂದು ಪತ್ರವೂ ಸಿಕ್ತು. ಯಾರೋ ಹುಡುಗಿ ಬರೆದಿದ್ದಾಳೆ ಅದನ್ನು. ಸಾಧ್ಯವಾದರೆ ನಾಳೆ ಪಬ್ಲಿಕ್ ಲೈಬ್ರರಿಯಲ್ಲಿ ಸಿಗ್ತೀನಿ...." ಎಂದು ಅವರು ಶಾಂತಳ ಪತ್ರದಲ್ಲಿದ್ದ ಒಂದೆರಡು ವಿಚಾರಗಳನ್ನು ತಂದೆಗೆ ಹೇಳುತ್ತಿದ್ದರು.

ಶಾಂತ ಒಂದು ಗಂಡಾಂತರದಿಂದ ಮತ್ತೊಂದು ಗಂಡಾಂತರಕ್ಕೆ ಜಾರಿದವಳಂತೆ ಭಯದಿಂದ ಕಂಪಿಸತೊಡಗಿದಳು. ಅವಳಿಗೆ ತಾನು

ಪತ್ರದ ಕೊನೆಯಲ್ಲಿ ಹೆಸರು ಬರೆದಿದ್ದಳೋ ಬರೆದಿರಲಿಲ್ಲವೋ ಸ್ಪಷ್ಟವಾಗಿ ನೆನಪಾಗಲಿಲ್ಲ. ಆದರೂ ಆ ವೃದ್ಧ, ತಿಳಿಸಿದ್ದ ಕೆಲವು ವಿವರಗಳಿಂದಲೇ ಮನೆಯವರಿಗೆ ಅದು ತನ್ನ ಪತ್ರವೆಂದೇ ಗೊತ್ತಾಗಿ ಹೋಗಿರಬಹುದು ಎಂದು ಅಳುಕಿದಳು. ಹಾಗೆಯೇ ಆ ವೃದ್ಧ, ಮುತ್ತುಗಳು ಮೊದಲಾದ ಸುದ್ದಿಗಳನ್ನು ತಿಳಿಸದೆ, ಸಮ್ಮನೆ, "ಅವರಿಬ್ಬರೂ ತುಂಬಾ ಪ್ರೇಮ ಇಟ್ಟುಕೊಂಡಿರೋ ಹಾಗೆ ಕಾಣುತ್ತೆ ಕಣ್ರೀ" ಎಂದು ಮಾತು ಮುಗಿಸಿದಾಗ. ಶಾಂತ ಸಮಾಧಾನದ ನಿಟ್ಟುಸಿರುಬಿಟ್ಟಳು. ಆ ವೃದ್ಧನಿಗೆ ತನ್ನಲ್ಲಿ ತಾನೇ ಮನಸಾರೆ ವಂದನೆಗಳನ್ನು ಅರ್ಪಿಸಿದಳು.

ಇಷ್ಟು ಹೊತ್ತಿಗೆ ಆ ವೃದ್ಧ ಈಗಿಲ್ಲದ ತಮ್ಮ ಮಡದಿಯೊಂದಿಗೆ ಯೌವನದಲ್ಲಿ ನಡೆಸಿದ್ದ .ಪ್ರೇಮ-ಪತ್ರ-ಪ್ರಕರಣದ ಕೆಲವು ಸ್ವಾರಸ್ಯ ಸಂಗತಿಗಳನ್ನು ಕೇಶವಯ್ಯಂಗಾರರಿಗೆ ಹೇಳಿ ನಕ್ಕು ನಗಿಸುತ್ತಿದ್ದರು. ಕೊನೆ ಕೊನೆಗೆ ವ್ಯಸನಪೂರಿತರಾಗಿ, ವಿಷಾದ ಸ್ವರದಲ್ಲಿ, 'ಮುತ್ತಿನಂಥ ಮಕ್ಕಳನ್ನು ನನಗೆ ಕೊಟ್ಟು ಹೋದಳು' ಎಂದು ಅವಳ ಸ್ಮರಣೆ ಮಾಡುತ್ತಿದ್ದರು.

ಆಗ ಶಾಂತಳ ತಾಯಿ ಅವರ ಮಾತಿನ ನಡುವೆ ಬಾಯಿ ಹಾಕಿ, "ನಿಮಗೆ ಸಿಕ್ಕಿದ ಕಾಗದದಲ್ಲಿ ಹುಡುಗಿ ಹೆಸರಿರಲಿಲ್ಲವೇ?" ಎಂದು ಪ್ರಶ್ನಿಸಿದ್ದನ್ನು ಕೇಳಿ ಶಾಂತ ಉಸಿರಾಡದಂತೆ ಕುಳಿತಳು. ಆಗ ಆ ವೃದ್ಧ, ಸ್ವಲ್ಪವೂ ಯೋಚಿಸದಂತೆ, "ಇಲ್ಲಾ. ಆ ಹುಡುಗಿಯ ಹೆಸರೇ ಇರಲಿಲ್ಲ!" ಎಂದರು.

ಅಷ್ಟರಿಂದಲೇ ತೃಪ್ತಿಯಾಗದ ಶಾಂತಳ ತಾಯಿ, "ಆ ಪತ್ರ ತಮ್ಮ ಹತ್ತಿರವೇ ಇದೆಯೇನು? ಇದ್ದರೆ ಕೊಡಿ. ನಾನು ಕಂಡುಹಿಡಿದು ನಿಮಗೆ ಹೇಳ್ತೀನೆ!" ಎಂದು ನಗುತ್ತಾ ಹೇಳುತ್ತಿದ್ದರು.

ಅದನ್ನು ಕೇಳಿ ಶಾಂತಳಿಗೆ ಭಯಕ್ಕಿಂತಲೂ ಹೆಚ್ಚಾಗಿ ತಾಯಿಯ ಮೇಲೆ ಎಲ್ಲಿಲ್ಲದ ಕೋಪ-ತಿರಸ್ಕಾರಗಳು ಉಕ್ಕಿತು. ತಾನು ಒರೆ-ಹಚ್ಚಿ ಒಂದೆಡೆ ಇಟ್ಟುಕೊಂಡಿದ್ದ ಅವರ ವ್ಯಕ್ತಿತ್ವದ ವಿಕಾರ ಅಂಶಗಳೆಲ್ಲಾ ಈಗವಳ ನೆನಪಿಗೆ ನುಗ್ಗಿದುವು. ಒಟ್ಟಿನಲ್ಲಿ,

ಶತಮಾನಗಳಿಂದಲೂ ಭಾರತೀಯ ಹೆಣ್ಣುಗಳ ರಕ್ತದಲ್ಲೇ ಬೆರೆತು ಬಂದಿರುವ ರೋಗಾಣುಗಳಾದ ಪರತಂತ್ರಜೀವನ, ದಾಸ್ಯಮನೋವೃತ್ತಿ, ಭೋಗಲಾಲಸೆ, ಚಂಚಲತೆ, ಪಿಸುಣತನಗಳ ಒಂದು ಜೀವಂತ ಮೂರ್ತಿಯಂತೆ ಈಗ ಅವರು ಶಾಂತಳಿಗೆ ಕಾಣುತಿದ್ದರು. ಕ್ಷಮೆ, ತ್ಯಾಗ, ಹೃದಯ ವೈಶಾಲ್ಯತೆ, ಸಹನೆ. ಧೀಮಂತತೆಗಳಿಲ್ಲದ ಹೆಣ್ಣಿಗೆ ಎಂಥ ರಕ್ಷಿತ ಬಾಳುವೆಯಲ್ಲಾದರೂ ಹೇಗೆ ಸುಖ ದೊರಕೀತು ? ನಿನ್ನ ಗೋಳಿನ ಬಾಳಿಗೆ ನಿನ್ನ ಮಕ್ಕಳು ಎಷ್ಟು ಕಾರಣರೋ, ನಿನ್ನ ಸನಾತನ ಸಂಪ್ರದಾಯ, ಅಂಧಶ್ರದ್ಧೆ, ಪರತಂತ್ರ ಜೀವನವೂ ಅಷ್ಟೇ ಕಾರಣ ! ಎಂದು ಶಾಂತ, ಪ್ರೇಮದ ಕುಡಿಯೊಡೆದ ತನ್ನ ಹೊಸ ಹೆಣ್ಣುತನದ ಪೀಠದ ಮೇಲೆ, ಹೆಮ್ಮೆ ಆತ್ಮವಿಶ್ವಾಸಗಳಿಂದ ನಿಂತು, ಮನಸ್ಸಿನಲ್ಲೇ ತಾಯಿಯ ಬಾಳನ್ನು ಹೀಯಾಳಿಸಿದಳು, ಕನಿಕರಿಸಿದಳು.

ಆ ವೃದ್ಧ "ಪತ್ರ ನನ್ನಲ್ಲಿಲ್ಲ. ಅದನ್ನು ಅವನಿಗೇ ಕೊಟ್ಟು ಬಿಟ್ಟೆ" ಎಂದು ತಿಳಿಸಿದಾಗ ಶಾಂತಳಿಗೆ ಸಮಾಧಾನವಾಯಿತು. ಇನ್ನು ಹೇಗಾದರೂ ದಬಾಯಿಸಿಕೊಳ್ಳಬಹುದು, ವಿದ್ಯೆಗೆ ಬಂದಿದ್ದ ಕುತ್ತು ಪರಿಹಾರವಾಯಿತು ಎಂದು ಎದೆ ಹಿಡಿದು ಆಳವಾಗಿ ನಿಟ್ಟುಸಿರು ಬಿಟ್ಟಳು.

ಆ ವೃದ್ಧ ಕೆಲವು ಗಂಟೆಗಳಲ್ಲೇ ಒಬ್ಬ ಆಪ್ತನಂತಾಗಿ ಹೊರಟು ಹೋದರು. ಆಗ ಕೇಶವಯ್ಯಂಗಾರರು, ಪ್ರಜ್ಞಾಹೀನರಾಗಿ, ರಕ್ತದಲ್ಲಿ ತೊಯ್ದು, ಬಿದ್ದಿದ್ದ ರಾಜಣ್ಣ, ಆ ಬಂಡೆಯ ಮೇಲೆ ಕುಳಿತುಕೊಳ್ಳಲು ಬಂದಿದ್ದ ಆ ವೃದ್ಧರಿಗೆ ಕಂಡಿದ್ದುದನ್ನೂ, ಅವರು ಬಂದೊಡನೆಯೇ ಅವನ ಸುತ್ತ ಏನನ್ನೋ ಚರ್ಚಿಸುತ್ತಾ ನಿಂತಿದ್ದವರೆಲ್ಲಾ ಓಡಿಹೋದುದನ್ನೂ, ಅವರು ಗಾಬರಿಗೊಂಡು ಅವನಿಗೆ ಪ್ರಥಮ ಚಿಕಿತ್ಸೆ ಮಾಡಿ, ತಮ್ಮ ನೆರೆಯವನೊಬ್ಬನ ಕಾರಿನಲ್ಲಿ ಆಸ್ಪತ್ರೆಗೆ ಸಾಗಿಸಿದುದನ್ನೂ, ರಾಜಣ್ಣನಿಗೆ ಬರೀ ಮೂಕ ಪೆಟ್ಟುಗಳೇ ಹೆಚ್ಚಿಗೆ ಬಿದ್ದಿರುವುದನ್ನೂ, ಅವನು ಪ್ರಜ್ಞಾವಸ್ಥೆಗೆ ಬಂದ ಹತ್ತು ಗಂಟೆಗಳಲ್ಲೇ ಚೇತರಿಸಿಕೊಂಡು ಎದ್ದ ನಂತರ ಸುದ್ದಿಯನ್ನೂ ಮನೆಯವರಿಗೆ ತಿಳಿಸಿ, "ಸಧ್ಯ, ದೇವರ ದಯದಿಂದ ಯಾವ ಗಂಡಾಂತರವೂ ಆಗಲಿಲ್ಲ !"

ಎಂದು ನಿಟ್ಟುಸಿರುಬಿಟ್ಟರು. ಆಗ ಜೀವನೋತ್ಸಾಹಿಯಾಗಿದ್ದ ಅವರ ಪತ್ನಿ,

"ಗಂಡಾಂತರ ಎಂಥಾದ್ದು ಆಗೋದು? ವರದ, ಅವನ ಸ್ನೇಹಿತರು ಯಾರೂ ಹೊಡೆದಹಾಗೆ ಕಾಣೋಲ್ಲ ಎಂದು ಅವರೇ ಹೇಳಲಿಲ್ಲವೇ? ನಿಮಗೊಂದು ಹುಚ್ಚು!" ಎಂದರು.

ಅದಕ್ಕೆ ಕೇಶವಯ್ಯಂಗಾರರು ಯಾವ ಉತ್ತರವನ್ನೂ ಕೊಡ ಲಿಲ್ಲ. ತಮ್ಮ ಪತ್ನಿಯನ್ನೇ ಬೇಡಿಕೆ, ಎಚ್ಚರಿಕೆ, ದೂಷಣೆ, ವಿಷಾದ ಬೆರೆತ ನೋಟದಿಂದ ಒಂದು ನಿಮಿಷ ಗಂಭೀರವಾಗಿ ದಿಟ್ಟಿಸಿ ನೋಡಿ, "ಹುಚ್ಚು ನನ್ನದಲ್ಲ, ನಿನ್ನದು!" ಎಂದು ಉದ್ವಿಗ್ನಭರಿತರಾಗಿ ನುಡಿದು. ತಲೆತಗ್ಗಿಸಿ, ಕಣ್ಣೊರೆಸಿಕೊಂಡರು.

ಬಹಳ ಒತ್ತಾಯ ಮಾಡಿದ್ದ ನಂತರ ಅವರೊಬ್ಬರಿಗೆ ಮಾತ್ರ ರಾಜಣ್ಣ ತನ್ನನ್ನು ಹೊಡೆದವರ ಹೆಸರು-ಗುರುತು ತಿಳಿಸಿದ್ದ.

## ೧೩

ಮಾರನೆಯ ದಿನದಿಂದಲೇ ಕ್ರಿಸ್‌ಮಸ್ ಬಿಡುವು. ಆದರೂ ಶಾಂತಳಿಗೆ ಇಂದು ಕಾಲೇಜಿಗೆ ಹೋಗಲು ಮನಸ್ಸಾಗಲಿಲ್ಲ. ಹತ್ತು ಗಂಟೆಗೆ ಸರಿಯಾಗಿ ಶಕ್ಕು ಮನೆಗೆ ಬಂದು. "ಕಾಲೇಜಿಗೆ ಬರೋ ಲ್ವೇನೇ?" ಎಂದು ಕೇಳಿದಳು. ಅವಳ ಕುಹಕ ಮನೋಭಾವ ಅರಿತ ಶಾಂತ ಏನನ್ನೂ ಹೇಳಲಿಲ್ಲ. ಆಗ ಶಕ್ಕು,

"ಏನೇ ಶಾಂತ! ಆ ನಿಮ್ಮ ಪಕ್ಕದ ಮನೆಯವನಿಗೆ ಯಾರೋ ಹೊಡೆದರಂತೆ, ನಿಜವೇನೇ?" ಎಂದಳು. ಶಾಂತ ತಲೆಯೆತ್ತಿ ಅವಳನ್ನು ಸುಟ್ಟುಬಿಡುವವಳಂತೆ ನೋಡಿ, ಕೆರಳಿದ ಕಂಠದಲ್ಲಿ,

"ಹೌದು, ಹೊಡೆದು ಪ್ರಾಣ ತೆಗೆದಿದಾರೆ!....ಏಕೆ? ನಿನಗೆ ಸಕ್ಕರೆ ಹಂಚಬೇಕಾಗಿತ್ತೇ? ತಂದು ಕೊಟ್ಟೆ ಇರು!" ಎಂದು ಉನ್ಮತ್ತೆ ಯಂತೆ ಅಡಿಗೆ ಮನೆಗೆ ಹೋದಳು.

ಅವಳು ಹಿಂತಿರುಗುವುದರಲ್ಲಿ ಮನೆಯಿಂದ ಶಕ್ಕು ಮಾಯವಾಗಿ

ದ್ದಳು. ಶಾಂತ, ಕೈಲಿದ್ದ ಸಕ್ಕರೆಯನ್ನು ಒಂದು ಕಾಗದದ ಮೇಲಿರಿಸಿ, ತನ್ನ ರೂಮಿಗೆ ಬಂದು ಬಾಗಿಲು ಮುಚ್ಚಿಕೊಂಡಳು.

ಈಗ ಅವಳಿಗೆ ಎಲ್ಲಿಲ್ಲದ ದುಃಖ - ಅಳು ಬಂದುಬಿಟ್ಟಿತು. ಆದಿನ ಎಂಟು ಗಂಟೆಯಿಂದಲೂ, ಅವಳು ರಾಜಣ್ಣನನ್ನು ನೋಡಿ ಬರಲು ಯತ್ನಿಸಿದ್ದಳು. ಹೊರಗೆ ನಾಗಮ್ಮ ಕಾಣಿಸಿಕೊಂಡ ಕೂಡಲೇ ಅಲ್ಲಿಗೆ ಹೋಗಿ ಬಂದಿದ್ದಳು.

ಅದೇಕೋ ನಾಗಮ್ಮ ಅವಳ ಮುಖಕ್ಕೆ ಮುಖಕೊಟ್ಟು ಮಾತಾಡಿರಲಿಲ್ಲ. ನೋಟಕ್ಕೆ ನೋಟ ಬೆರಸಿ ನೋಡಿರಲಿಲ್ಲ. ಅತ್ತ ರಾಜಣ್ಣನೂ ಮಾತಾಡುವ ಸ್ಥಿತಿಯಲ್ಲಿರಲಿಲ್ಲ; ಅವನು ಆಳವಾದ ನಿದ್ರೆಯಲ್ಲಿ ಮುಳುಗಿದ್ದ. ಹಾಸಿಗೆಯ ಬಳಿ ಕಣ್ಣೀರಿಡುತ್ತಾ ಕುಳಿತ ಅವನ ತಾಯಿ ಶಾಂತಳಿಗೆ, ಅವನ ಮೈ - ಮುಖದ ಗಾಯಗಳನ್ನೆಲ್ಲಾ ಹೊದಿಕೆ ಎಳೆದು ತೋರಿಸಿದ್ದರು.

ಆಗವಳ ಎದೆಗೆ ತ್ರಿಶೂಲವಿಟ್ಟು ತಿರುಗಿಸಿದಂತಾಗಿತ್ತು. ಮೂಕ ಶೋಕದಿಂದ ಎದೆ ಕಾದ - ಕುಲುಮೆಯಂತೊತ್ತಿ, ಸೆರೆಬಿಗಿದು ಬಂದಿತ್ತು. ಕಂಬನಿಯ ಸುಡುಧಾರೆ ಕಣ್ಣಿನಿಂದ ಬಳಬಳನೆ ಹರಿದು ಕೆಳಗಿಳಿದಿತ್ತು.

ಅಲ್ಲಿ ಹೆಚ್ಚು ಕಾಲ ಗಂಭೀರವಾಗಿರಲು ಅವಳಿಂದ ಸಾಧ್ಯವಾಗಿರಲಿಲ್ಲ. ಏಕೆಂದರೆ ನಾಗಮ್ಮ ಅವಳು ಮನೆಯಲ್ಲಿರುವಷ್ಟು ಕಾಲವೂ ಎದುರಿಗೆ ಬಂದಿರಲಿಲ್ಲ; ಒಂದು ಮಾತನ್ನೂ ಆಡಿಸಿರಲಿಲ್ಲ. ಈ ಅಂಕುಶದ ಪೆಟ್ಟಿನ ವೇದನೆಯುಂಡಿದ್ದ ಶಾಂತ, ರಾಜಣ್ಣನ ತಾಯಿಗೆ ವಂದಿಸಿ, ಒದ್ದೆ ಕಣ್ಣಿನಲ್ಲೇ ಮನೆಗೆ ಹಿಂತಿರುಗಿದ್ದಳು.

ಅವಳ ಎದೆಯ ಮೇಲೆ ಈಗ ನನು-ದುಃಖದ ಎರಡು ಕಾಯ್ದ ಕಬ್ಬಿಣದ ಪಾದಗಳು ದುರ್ದಮ್ಯವಾಗಿ ನಿಂತು, ಭೂಮಿಗೆ ಅದುಮುತ್ತಿದ್ದುವು. ಅವಳ ಮನ ಜೋಡಿ ಒನಕೆಗಳ ಪೆಟ್ಟಿಗೆ ಸಿಕ್ಕಿದ ಒರಳು ಕಲ್ಲಿನಂತೆ ನಾಗಮ್ಮನ ವಿರಸ, ರಾಜಣ್ಣನ ಜರ್ಝರಿತ ದೇಹ! ಇವುಗಳನ್ನೇ ನೆನೆದು - ನೆನೆದು ತತ್ತರಿಸುತ್ತಿತ್ತು. ಅವಳಿಗೆ ಹತ್ತಾರು ಕೆಂಚೇಳುಗಳು ಕೊಂಡಿ ಎತ್ತಿ ಮನ - ಮೈಗಳ ಮೇಲೆ ಹರಿದಾಡಿ

ದಂತಾಗುತ್ತಿತ್ತು.

ಅತ್ತ ರಾಜಣ್ಣ ಒಂದೊಂದು ದಿನ ಎಚ್ಚರಗೊಂಡು, ನಗೆ ಮುಖದಲ್ಲಿರುತ್ತಿದ್ದ, ಮತ್ತೊಂದು ದಿನ ಘೋರ ಯಾತನೆಗೆ ಬಲಿ ಬಿದ್ದು ನೋವಿನ ನಿದ್ರೆಯಲ್ಲಿ ಆಳವಾಗಿ ಮುಳುಗಿರುತ್ತಿದ್ದ. ಮನೆಗೆ ಬರುತ್ತಿದ್ದ ಡಾಕ್ಟರ್, ಯಾವುದಾದರೂ ಮೂಕಪೆಟ್ಟಿನಿಂದ ದೇಹದ ಒಳಭಾಗದಲ್ಲೇ ರಕ್ತಸ್ರಾವವಾಗುತ್ತಿರಬಹುದು ಎಂದು ಶಂಕಿಸಿದ್ದರು. ಅವನು ಶಕ್ತಿ ಮರುಕಳಿಸಿದ ಕೂಡಲೇ ಮೇಲೆದ್ದು ನಿಂತಿದ್ದು, ಅವನನ್ನು ಅಪಾಯಸ್ಥಿತಿಯಲ್ಲೇ ಮನೆಗೆ ಕರೆತಂದುದು ತಪ್ಪು, ಎಂದು ತಿಳಿಸುತ್ತಿದ್ದರು.

ಆದರೆ ಅವರ ಸಮರ್ಥ ಚಿಕಿತ್ಸೆ ಮಾತ್ರ ಮುಂದುವರೆಯುತ್ತಲೇ ಇತ್ತು.

—ಕೆಲವು ದಿನಗಳಲ್ಲೇ ರಾಜಣ್ಣನ ಕಣ್ - ತುಟಿಯ ಬಾವುಗಳು ಇಳಿದು, ವದನದ ವಿಕಾರತೆ ಅಳಿದು, ಅವನು ನಸುನಕ್ಕಾಗ ಎದುರಿಗೆ ಇದ್ದವರೂ ಹಸನ್ಮುಖರಾಗಲು ಸಾಧ್ಯವಾಯಿತು. ಅವನ ಯಾತನೆಯ ಮೂರ್ಛೆಗಳೂ ಕ್ರಮೇಣ - ಕ್ರಮೇಣ ಕಾಣೆಯಾದವು.

ಈಗ ಅವನನ್ನು ಚಂದ್ರಪ್ಪ ಹೊಡೆದವರ ಗುರುತು ತಿಳಿಸುವಂತೆ ಪೀಡಿಸುತ್ತಿದ್ದರು. ಆದರೆ ರಾಜಣ್ಣ 'ನನಗೊಂದೂ ಗೊತ್ತಿಲ್ಲ' ಎಂದೇ ವಾದಿಸುತ್ತಿದ್ದ. ಆದರೂ ನಾಗಮ್ಮ - ಚಂದ್ರಪ್ಪ ಇವರ ಸಂಶಯ ವರದನ ಮೇಲೆ ಕೇಂದ್ರೀಕೃತವಾಗಿತ್ತು.

ಯಾರೂ ಬಳಿಯಲ್ಲಿಲ್ಲದಾಗ ರಾಜಣ್ಣ, ಶಾಂತಳನ್ನು ಮತ್ತೊಮ್ಮೆ ನೋಡಲು, ತನ್ನ ಚೇತರಿಸಿದ ಮುಖವನ್ನು ಮತ್ತೊಮ್ಮೆ ಅವಳಿಗೆ ತೋರಲು ಹಾತೊರೆಯುತ್ತಿದ್ದ. ಅವನಿಗೆ ಶಾಂತ ಒಮ್ಮೆ ಇಲ್ಲಿಗೆ ಬಂದು ಹೋಗಿದ್ದುದು ತಿಳಿದಿರಲೇ ಇಲ್ಲ. ಅಂದೊಮ್ಮೆ ಅವಳನ್ನೇ ಸ್ಮರಿಸುತ್ತಿರುವಾಗ, ಸುಧಾ ಒಂದು ಪತ್ರ ತಂದು ಅವನ ಕೈಯಲ್ಲಿಟ್ಟಳು. ಅದನ್ನು ಆತುರದಿಂದ ಓದಿದ.

"ರಾಜೂ, ನಿಮಗೆ ನಾನೆಂಥ ಗತಿ ತಂದಿಟ್ಟೆ!! ನೋವಿನ ನಿದ್ದೆಯಲ್ಲಿದ್ದ ನಿಮ್ಮ ಮುಖ ನೋಡಿ ಬಂದ ನೆನಪು ಆದಾಗಲೆಲ್ಲಾ

ನನ್ನ ಎದೆಗೆ ಶೂಲವಿಟ್ಟಂತಾಗುತ್ತದೆ....ನನ್ನಿಂದ ನಿಮಗೆಷ್ಟು ನೋವು, ಎಂಥಾ ಅಪಾಯ! ನಿಮಗೇ ಅಲ್ಲ; ನನ್ನಿಂದ ಸುತ್ತುಮುತ್ತಲೂ ಇರುವ ಎಲ್ಲರಿಗೂ ಎಷ್ಟು ಸಂಕಟ....

"ನಮ್ಮ ತಂದೆಗೆ ನನ್ನ ಮದುವೆಯ ಸಂಕಟ, ನನ್ನ ತಾಯಿಗೆ ನಾನು ಬದುಕಿರುವುದೇ ಒಂದು ಸಂಕಟ. ಅವರು ಹಗಲೆಲ್ಲಾ ನನ್ನನ್ನು ಗೋಳು ಹೊಯ್ದುಕೊಳ್ಳುತ್ತಾರೆ. ಮನಸ್ಸಿಗೆ ಮುಳ್ಳು ಚುಚ್ಚುವಂತೆ ಮಾತಾಡುತ್ತಾರೆ. ರಾತ್ರಿಯಾದ ಕೂಡಲೇ ಏನೇನೋ ಕನವರಿಸಿ ಅಳುತ್ತಾರೆ. ಬೆಳಗಾದ ಕೂಡಲೇ ಸಂಕಟ. ಸುಸ್ತು ಎಂದು ನರಳಾಡಿಕೊಂಡೇ ನನ್ನ ಒಂದೊಂದು ದಿನವನ್ನೂ ನರಕ ಮಾಡಿ ಡುತ್ತಾರೆ....

"ಇದೆಲ್ಲಾ ಏಕೆ ಹೀಗಾಯ್ತು. ಎಲ್ಲ ನನ್ನಿಂದಲೇ ಅಲ್ಲವೇ? ಇಷ್ಟು ಜನರಿಗೆ ನಾನೇಕೆ ಕಷ್ಟ ಕೊಟ್ಟುಕೊಂಡು ಬದುಕಿರಬೇಕು? ಒಂದು ಚೂರು ವಿಷ ತೆಗೆದುಕೊಂಡು ಸಾಯಲೇ ಎನಿಸುತ್ತದೆ.—

"ಆದರೆ ಮರುಕ್ಷಣವೇ ನಿಮ್ಮನ್ನು ನೆನೆಸಿಕೊಳುತ್ತೇನೆ, ನಿಮ್ಮ ಮುತ್ತುಗಳನ್ನು ನೆನೆಸಿಕೊಳ್ಳುತ್ತೇನೆ, ನಮ್ಮಿಬ್ಬರ ಕನಸುಗಳನ್ನು ನೆನೆಸಿಕೊಳ್ಳುತ್ತೇನೆ.. .ಆಗ ಈರೀತಿ ಯೋಚಿಸುವುದೆಲ್ಲಾ ಹೇಡಿತನ ಎನಿಸುತ್ತದೆ. ಮನ - ಮೈಗಳಿಗೆ ಹೊಸ ಚೈತನ್ಯ ಹರಿದು ಬರುತ್ತದೆ. ಏನೇ ಆಗಲಿ, ನಾವು ಈ ಬದುಕಿಗೆ ಹೆದರಬಾರದು, ಬದುಕನ್ನೇ ಹೆದರಿಸಬೇಕು ಎನಿಸುತ್ತದೆ. ಕೆಚ್ಚು ಹುಟ್ಟುತ್ತದೆ. ಆಸೆ ಚಿಗುರುತ್ತದೆ.

"ಆ ಆಸೆಯ ಬಳ್ಳಿ ನಿಮ್ಮನ್ನೇ ಅವಲಂಬಿಸಿ ನಿಂತಿದೆ........ ನಿಮ್ಮ ಚಿಂತಾಜನಕ ಸ್ಥಿತಿ ನೋಡಿ ಬಂದಾಗಿನಿಂದ ಹೊಟ್ಟೆಗೆ ಬೆಂಕಿ ಬಿದ್ದಂತಾಗಿದೆ. ನಿಮಗೆ ಬೇಗನೆ ಗುಣವಾಗಲಿ, ಬೇಗನೆ ನೋವು ಮಾಯವಾಗಲಿ ಎಂದು ಕ್ಷಣಕ್ಷಣವೂ ದೇವರಿಗೆ ಮೊರೆಯಿಡುತ್ತಿದ್ದೇನೆ. ರಾಜು!.... ನಿಮಗೇನಾದರೂ ಒಂದು ವೇಳೆ ಹೆಚ್ಚು-ಕಡಿಮೆ ಆದರೆ ....ನಾನೊಂದು ಘಳಿಗೆಯೂ ಈ ನರಕದಲ್ಲಿ ಜೀವಿಸುವುದಿಲ್ಲ. ನೀವು ಉಸಿರಾಡುತ್ತಿರುವವರೆಗೂ ನಾನು ಉಸಿರಾಡುತ್ತೇನೆ. ನಿಮ್ಮ

ಹೃದಯ ಬಡಿದುಕೊಳ್ಳುತ್ತಿರುವವರೆಗೂ ನನ್ನ ಹೃದಯವೂ ಬಡಿದು ಕೊಳ್ಳುತ್ತಿರುತ್ತದೆ. ನಿಮ್ಮ ಪ್ರಾಣ ಹೋದ ಮರುಗಳಿಗೆಯಲ್ಲೇ ನನ್ನ ಪ್ರಾಣವೂ ಹೋಗುತ್ತದೆ. ನೀವು ಇದನ್ನು ನಂಬಿ. ನೀವು ಈ ಲೋಕದಲ್ಲೇ ಉಳಿದುಕೊಳ್ಳಲಿ, ಉಳಿಯದಿರಲಿ, ನಾನು ಎಂದೆಂದಿಗೂ ನಿಮ್ಮೊಡನೆ ಇರುವವಳೇ. ನಿಮ್ಮ ಹಿಂದೆ ಬರುವವಳೇ... ಈ ಮಾತು ನಿಜ, ಎಂದೆಂದಿಗೂ ಸತ್ಯ.. ..

"ಈ ಕಷ್ಟಗಳೆಲ್ಲಾ ನಮಗೇಕೆ ಬಂದಿವೆಯೋ ಗೊತ್ತಿಲ್ಲ. ಇಂದಿನ ಕಷ್ಟಗಳೇ ಮುಂದಿನ ಸುಖಕ್ಕೆ ಸೋಪಾನಗಳು ಎಂಬ ಭಂಡ ಧೈರ್ಯವೊಂದು ನನ್ನನ್ನು ಕಾಪಾಡುತ್ತಿದೆ. ಆದರೆ ಈ ಬೇಯುವ ಸೋಪಾನಗಳನ್ನು ಹತ್ತಿ ಹೋಗುವಾಗಲೇ ಸುಟ್ಟು ಬೂದಿಯಾಗಿ ಕೆಳಗೆ ಉರುಳುವೆವೋ?....ಇಲ್ಲವೆ, ಸುಖದ ಸಾಮ್ರಾಜ್ಯ ಮರು-ಮೆಟ್ಟಿಲ ಮುಂದೆಯೇ ಇದೆಯೋ, ಏನೇನೂ ನನಗೆ ಕಾಣದು. ಸುತ್ತ ಕಗ್ಗತ್ತಲೆ! ಅದನ್ನು ಬೆಳಗಿಸುವ ಜ್ಯೋತಿ ನೀವು!....ಇದುವರೆಗೂ ಆಗಿದ್ದಿರಿ, ಮುಂದೆಯೂ ಆಗಿರುವಿರಿ: ಎಂದು ನಂಬಿ ಈ ಕಗ್ಗತ್ತಲಲ್ಲೇ ಕೈಯಲ್ಲಿ ಜೀವ ಹಿಡಿದು ಕುಳಿತಿದ್ದೇನೆ....ರಾಜೂ, ನನ್ನ ಪ್ರಾಣ ಹೋಗಾದರೂ ನೀವು ಉಳಿಯಬಾರದೇ? ನಿಮ್ಮ ನೋವೆಲ್ಲಾ ನನ್ನ ಮೈಗೆ ಬರಬಾರದೇ? ಎಂದು ಎಡೆಬಿಡದೆ ಪ್ರಾರ್ಥನೆ ಮಾಡುತ್ತಿದೇನೆ, ಇದು ಬೇಗನೆ ಈಡೇರಲಿ. ನಮ್ಮ ಪ್ರೇಮ ಸಾರ್ಥಕವಾಗಲಿ...." ಎಂದಿತ್ತು.

ರಾಜಣ್ಣ ಅದನ್ನು ಓದಿ ಕಣ್ಣೊರೆಸಿಕೊಂಡ. ಅವಳು ಬರೆದಿರುವುದನ್ನೆಲ್ಲಾ ನೆನೆದು ರಾಜಣ್ಣ, 'ಹೌದು; ನಾವು ಬದುಕಲು ಹೆದರಬಾರದು, ಬದುಕನ್ನೇ ಹೆದರಿಸಬೇಕು! ಸುಖದ ಸಾಮ್ರಾಜ್ಯ ಮರು-ಮೆಟ್ಟಿಲ ಮುಂದೆಯೇ ಇದೆ. ನಾವು ಇಲ್ಲೇ ಕುಸಿದು ಸೋಲಬಾರದು!' ಎಂದು ತನಗೆ ತಾನೇ ಹೇಳಿಕೊಂಡ.

ಆಗ ಅವನ ಯಾತನೆ ಕವಿದ ಮನ ನಿರ್ಮಲವಾಯಿತು, ದೇಹದಲ್ಲಿ ಚೈತನ್ಯ ತುಂಬಿತು, ಹೃದಯ ಹುಮ್ಮಸ್ಸಿನಿಂದ ತುಂಬಿ ತುಳುಕಾಡಿತು.

ಈಗ ಅವನು ತಾನಾಗಿಯೇ ತನ್ನ ತಾಯಿಯ ಮುಂದೆ, ಶಾಂತಳ

ಮೋಲಿದ್ದ ಪ್ರೇಮವನ್ನೆಲ್ಲಾ ಹೇಳಿಕೊಂಡ. ಅವಳ ತಂದೆ-ತಾಯಿ, ಮನೆತನದ ಸದ್ಗುಣಗಳನ್ನೆಲ್ಲಾ ಅವರಿಗೆ ಹೇಳಿದ. ಶಾಂತಳನ್ನು ವಿವಾಹವಾಗದೆ ತನಗೆ ಸುಖವೇ ಇಲ್ಲ; ಜೀವಿಸಲು ಹುಮ್ಮಸ್ಸೇ ಇಲ್ಲ. ಅವಳನ್ನು ನೀವು ಸೊಸೆಯಾಗಿ ಸ್ವೀಕರಿಸಲೇಬೇಕು. ಇಲ್ಲದಿದ್ದರೆ ತಾನು ಸಾಯುವುದೇ ಒಳ್ಳೆಯದು....ಎಂದು ಹೇಳಿದ.

ಶಾಂತಳ ಪರಿಚಯ ಪಡೆದಿದ್ದ ಅವನ ತಾಯಿ ಆಳವಾಗಿ ಕೆಲವು ನಿಮಿಷ ಯೋಚಿಸಿದರು. ಅವರು, ಕಾಲೇಜು ಮೆಟ್ಟಲು ತುಳಿದ ಹುಡುಗಿಯೊಬ್ಬಳು ಅಷ್ಟು ನಿರಾಡಂಬರಳೂ ನಿರಹಂಕಾರಿಯೂ ಆಗಿರುತ್ತಾಳೆ ಎಂದು ಕನಸಿನಲ್ಲೂ ಎಣಿಸಿರಲಿಲ್ಲ. ಅವರು ಅಂಥ ವಳನ್ನು ಈಗ ಕಣ್ಣಾರೆ ಕಂಡಿದ್ದರು.

ಅವಳು ತಮ್ಮ ಕಾಲು ಹಿಡಿದು ಕಣ್ಣೀರಿಟ್ಟು, ಪಾದಧೂಳಿ ಯನ್ನು ಕಣ್ಣಿಗೆ ಒತ್ತಿಕೊಂಡಿದ್ದನ್ನು ನೆನೆದು ಈಗ ಅವರ ಮನ ಪರಿಮಳಿತ ಪುಷ್ಪದಂತೆ ಅರಳಿತು. ಅವಳು ಹಾಗೆ ನೆರಗೊಡ್ಡಿ ಬೇಡಿ ದ್ದಾಗ, ಅವರಿಗೆ ಆನಂದ, ಅಸಹಾಯಕತೆಯ ಎದೆಯಿಂದ ಕಣ್ಣೀರು ಉಕ್ಕಿದ್ದುವು.

ಅಂದಿನಿಂದ ಅವರ ಮನ, ರಾಜಣ್ಣನ ಕಡೆಗೇ ಒಲಿದಿತ್ತು. ಹಿರಿಯ ಸೊಸೆಯ ಕಿರುಕುಳದ ಬಾಣಲೆಯಲ್ಲಿ ಹುರಿದು ನೋವುಂಡಿದ್ದ ಅವರು, ತಮ್ಮ ಪ್ರೀತಿಯ ಕಿರಿಯ ಮಗನಿಗಾದರೂ, ಅಲ್ಪ ವಿದ್ಯೆಯ, ಅಸಂಸ್ಕೃತ, ಶ್ರೀಮಂತ ಹೆಣ್ಣನ್ನು ತರಕೂಡದೆಂದೇ ನಿರ್ಧರಿಸಿದ್ದರು. ಶಾಂತ ಮನೆಗೆ ಸೊಸೆಯಾಗಿ ಬರಲು ಅಪಾರ ಅಡ್ಡಿ-ಅಡಚಣೆ ಗಳಿದ್ದರೂ, ತುಂಬಿದ ಕೊಡದಂತೆ, ಮೃದು–ಸರಸ–ಸ್ನೇಹ–ಸಹಕಾರ ಸ್ವಭಾವದ ಸವಿಯೆರಚುವ ಶಾಂತ ಅವರ ಮನವನ್ನು ಸಂಪೂರ್ಣವಾಗಿ ಸೂರೆಮಾಡಿದ್ದಳು. ಮನೆಯಲ್ಲಿ ತಮ್ಮ ಬೆಂಬಲಕ್ಕೆ ಅಂಥ ಪೂರ್ಣ ವಿದ್ಯಾವಂತೆಯೊಬ್ಬಳಿದ್ದರೆ, ಹಿರಿಯ ಸೊಸೆಯ ಬಾಲ ಕೊಯ್ದುಹಾಕ ಬಹುದು, ಅವಳ ಕಿರುಕುಳದಿಂದ ಪಾರಾಗಬಹುದು ಎಂದವರು ಆಶಿಸಿದ್ದರು.

ಆದರೆ ಅವರಿಗೂ ಶಾಂತಳ ಅಣ್ಣನೇ ತಮ್ಮ ಮಗನಿಗೆ

ಪ್ರಾಣಾಪಾಯವಾಗುವ ರೀತಿಯಲ್ಲಿ ಹೊಡೆದಿರಬಹುದೆಂಬ ಅನುಮಾನ ನಾಗಮ್ಮನ ಮೂಲಕ ಕವಿದುಬಂದಿತ್ತು. ರಾಜಣ್ಣ "ನನ್ನನ್ನು ಹೊಡೆದವನು ಅವನಲ್ಲ" ಎಂದು ಎಷ್ಟು ಹೇಳಿದ್ದರೂ ಆ ಸಂಶಯ, ಪರಿಹಾರವಾಗಿರಲಿಲ್ಲ. ಹಾಗೆಯೇ ವರದನ ದುರ್ಗುಣ-ದುರ್ನಡತೆಗಳಿಗಾಗಿ ಅವರು, ತಮ್ಮ ಮಗಳಂತೆ, ಶಾಂತಳನ್ನೇ ದೂರೀಕರಿಸಲೂ ಸಿದ್ಧರಿರಲಿಲ್ಲ. ಅವರಿಗೆ ಶಾಂತ, ವರದನ ಕರಾಳ ಕಾರ್ಮೋಡ ಕವಿದ ಕೇಶವಯ್ಯಂಗಾರರ ಮನೆಯ ಬಾನಿನ ಪೂರ್ಣಚಂದಿರನಂತೆ ಕಂಡಿದ್ದಳು. ತಮ್ಮ ಮನೆಯನ್ನು ಬೆಳಗಲು ಬರುವ ಬೆಳದಿಂಗಳಂತೆ ತೋರಿದ್ದಳು. ವರದನಂಥ ಒಬ್ಬ ಅಲ್ಲ, ಹತ್ತು ಮಂದಿ ಮರುಳ ಸೋದರರಿದ್ದರೂ ಅವಳ ಕೈ ಬಿಡಕೂಡದೆಂದು ನಿರ್ಧರಿಸಿದ್ದರು.

ಅದಕ್ಕೇ ಈಗ ಅವರು ನಿಟ್ಟುಸಿರುಬಿಟ್ಟು, ರಾಜಣ್ಣನ ಹಣೆಯನ್ನೇ ಪ್ರೇಮದಿಂದ ಸವರುತ್ತಾ, "ನನಗೆ ಏನು ಬೇಕಪ್ಪಾ? ನನ್ನ ಕಣ್ಣು ಮುಂದೆ ನೀನು ಸುಖವಾಗಿರೋದು ಬೇಕು. ನೀನು ನಾಲ್ಕು ಜನ ಸರೀಕರ ಮುಂದೆ ತಲೆಯೆತ್ತಿ ಬಾಳಬೇಕು. ಇಂಥವರ ಮಗ ಎಂದು ಹೆತ್ತವರ ಹೆಸರು ಸಾರ್ಥಕಗೊಳಿಸಬೇಕು. ಆ ಹುಡುಗಿ ಕೈ ಹಿಡಿದರೆ ಅದೆಲ್ಲಾ ಸಾಧ್ಯ ಎಂದು ಕಾಣಿಸಿದ್ರೆ ಹಾಗೇ ಮಾಡು! ನನ್ನ ಅಡ್ಡಿ ಏನೂ ಇಲ್ಲಪ್ಪಾ" ಎಂದರು.

ರಾಜಣ್ಣ ಆನಂದದಿಂದ ಬಿರಿಯುವ ಹೃದಯದಿಂದ ಅವರ ಕೈ ಹಿಡಿದು ಕಣ್ಣಿಗೆ ಒತ್ತಿಕೊಂಡ. ನಂತರ, "ಅಮ್ಮಾ! ಅಪ್ಪನಿಗೂ ಸ್ವಲ್ಪ ಹೇಳಮ್ಮಾ. ನಾನೇ ಹೇಗೆ ಹೇಳೋದು. ಆ ಕೆಲಸಾನೂ ಸ್ವಲ್ಪ ಮಾಡಿಕೊಡು" ಎಂದು ಬೇಡಿದ.

ಅದಕ್ಕೂ ಅವರು, "ಆಗಲಪ್ಪಾ ನೋಡ್ತೀನಿ. ನೀನೀಗ ಆ ಚಿಂತೆ ಇಟ್ಟುಕೋಬೇಡ. ಇಲ್ಲಿಗೆ ಬಂದ ಕೆಲಸ ಏನೈತೋ ಅದನ್ನು ಚೆನ್ನಾಗಿ ಮುಗಿಸ್ಕೊಂಡು ಮನೆಗೆ ಬಾ. ಆಮೇಲೆ ದೇವರಿದ್ದಾನೆ" ಎಂದರು.

ರಾಜಣ್ಣನ ಕಣ್ಣುಗಳಿಂದ ಧನ್ಯತೆಯ ಕಣ್ಣೀರು ಹನಿದುವು.

* * *

ವಿಶ್ವದ ಅನಂತತೆಯಲ್ಲಿ ಪದ್ದು ಸುಳಿವುಗಳಿಲ್ಲದೆ ಕ್ಷಣಕ್ಷಣವೂ ಉರುಳುವ ಕಾಲಚಕ್ರ, ಮಾಯಾವಿಯಂತೆ ಮಾನವಕೋಟಿಯ ಪ್ರತಿ ಜೀವಿಯನ್ನೂ ಒಂದೆಡೆಯಿಂದ ಮತ್ತೊಂದೆಡೆಗೆ ಎಸೆದು, ದುಃಖದಿಂದ ಸುಖಕ್ಕೇರಿಸಿ, ಸುಖದಿಂದ ಸಂಕಟಕ್ಕೆ ತಳ್ಳಿ, ಹೊಸತನ್ನು ಮೇಲೆತ್ತಿ, ಹಳತನ್ನು ಕೆಳಗೆಸೆದು, ಹರಸುವವರಿಗೆ ಹರಸಿ, ಶಪಿಸುವವರಿಗೆ ಶಪಿಸಿ, ಸೋಲುವವರಿಗೆ ಸೋಲಿತ್ತು, ಗೆಲ್ಲುವವರಿಗೆ ಗೆಲುವಿತ್ತು, ಸೃಷ್ಟಿಯ ಆದಿ ಅಂತ್ಯಗಳ ನಡುವಣ ಅಗೋಚರ ಹಾದಿಯಲ್ಲಿ ತನ್ನ ಚಿರಂತನ ಯಾತ್ರೆ ಮುಂದುವರೆಸುತ್ತಿದ್ದಿತು.

ರಾಜಣ್ಣ ಶಾಂತೆಯರ ಬಾಳಿನಲ್ಲಿ ಆಗಲೇ ನೂರೆಂಟುಬಾರಿ ಸೂರ್ಯ ಮೇಲೆದ್ದು ಮುಳುಗಿದ್ದ. ಅವರಿಬ್ಬರ ಪರೀಕ್ಷೆಯೂ ಮುಗಿದು ಹೋಗಿತ್ತು.

ಮೂರು ತಿಂಗಳ ದೀಕ್ಷೆ ದುಡಿಮೆಗಳಿಂದ ಬೆಂದು ಬಳಲಿದ್ದ ಅವರಿಬ್ಬರೂ ಹಾದಿ ತಪ್ಪಿ, ಭಯದ ಮರುಭೂಮಿಯೊಂದನ್ನು ಒಂಟೊಂಟಿಯಾಗಿ ದಾಟಿ ಬಂದು ನೀರು - ನೆರಳಿನ ಭೂಮಿಯಲ್ಲಿ ಮತ್ತೊಮ್ಮೆ ಜೊತೆಗೂಡಿದ ಯಾತ್ರಿಕರಂತೆ ಈಗ ಮುಂದೆ ಮುಂದೆ ನಡೆಯುತ್ತಿದ್ದರು.

ಶಾಂತ ಪರೀಕ್ಷೆಯನ್ನು ತೃಪ್ತಿಕರವಾಗಿಯೇ ಮುಗಿಸಿದ್ದಳು. ಪ್ರತಿ ಬಾರಿಯೂ ಬರುತ್ತಿದ್ದ 'ಕ್ಲಾಸ್'ಗಳ ಆಸೆ ಇಲ್ಲದಿದ್ದರೂ, 'ಪಾಸ್' ಆಗುವುದಂತೂ ನಿಶ್ಚಯವಾಗಿತ್ತು. ಅವಳಿಗೆ ರಾಜಣ್ಣನ ಭಾಗ್ಯ ಹೇಗಿದೆಯೋ ಎಂದು ತಿಳಿಯಲು ತುಂಬಾ ಕಾತುರವಾಗಿತ್ತು. ಒಂದು ಸಂಜೆ ಅವರಿಬ್ಬರೂ ಕೂಡಿ ನಡೆದಿದ್ದಾಗ "ರಾಜು.... ಪರೀಕ್ಷೆಯಲ್ಲಿ ಹೇಗೆ ಮಾಡಿದ್ದೀರಿ ?" ಎಂದು ಕೇಳಿದಳು. ರಾಜಣ್ಣ ಅವಳನ್ನೇ ನಗುಮುಖದಿಂದ ನೋಡುತ್ತಾ, "ಹೇಗೋ ಮಾಡಿದೆ. ಅಂತೂ ಬದನೆಕಾಯಿ, ಕುಂಬಳಕಾಯಿ ಬರೆದು ಬರಲಿಲ್ಲ !" ಎಂದ.

ಶಾಂತಳ ಮುಖ ಸಪ್ಪೆಯಾಯಿತು. ಮುನಿಸಿನಿಂದ ಕೇಳಿದಳು,

"ಪಾಸ್ ಆಗುವುದೋ - ಇಲ್ಲವೋ....?"

"ಅದನ್ನು ನಾನು ಹೇಗೆ ಹೇಳಲಿ ಶಾಂತ ? ನಾನೇ ಏನಾ

ದರೂ ಎಕ್ಸಾಮಿನರ್ ಆಗಿದ್ದಿದ್ದರೆ, ಎಲ್ಲ ಪೇಪರ್‌ಗಳಿಗೂ ನೂರಕ್ಕೆ ನೂರು ನಂಬರ್ ಹಾಕಿಕೊಂಡು, ಈಗಲೇ 'ಫಸ್ಟ್ ರ್ಯಾಂಕ್ ಎಂದು ನಿನಗೆ ಹೇಳಿಬಿಡ್ತಿದ್ದೆ! ರಿಸಲ್ಟ್ ಬರುವವರೆಗೂ ಸ್ವಲ್ಪ ಕಾಯೋಣ... ಇರು" ಎಂದ. ಅದರಿಂದ ಶಾಂತಳಿಗೆ ತುಂಬಾ ವ್ಯಸನ, ಅನುಮಾನವೂ ಉಂಟಾಯಿತು. ಅವಳು ಏನನ್ನೂ ಹೇಳದೆ ತನ್ನ ಮುಖವನ್ನು ಬೇರೆ ಕಡೆಗೆ ತಿರುಗಿಸಿಬಿಟ್ಟಳು

ಆದರೆ, ರಾಜಣ್ಣ ನೋವನ್ನು ಆಹ್ವಾನಿಸುವ ಯಾವ ಕಾರ್ಯವನ್ನೂ ಮಾಡಿರಲಿಲ್ಲ. ಪರೀಕ್ಷೆಯನ್ನು ಹುಡುಗಾಟಿಕೆಯಿಂದಲೂ ಪರಿಗಣಿಸಿರಲಿಲ್ಲ. ಅವನ ಸ್ವಭಾವದಂತೆ, ಹಿಡಿದ ಕೆಲಸವನ್ನು ಪಟ್ಟಾಗಿಯೇ ಹಿಡಿದಿದ್ದ ಬಿಟ್ಟ ಕೆಲಸವನ್ನು ಹಾಗೆಯೇ ಬಿಟ್ಟಿದ್ದ. ಈಗ ಮೂರು ತಿಂಗಳಿಂದಲೂ ಅವನು ಶಾಂತಳ ಸಂಪರ್ಕವನ್ನೇ ಬಿಟ್ಟಿದ್ದುದು, ಪರೀಕ್ಷೆಯ ಉಗ್ರ-ಸಿದ್ಧತೆಗಲ್ಲದೆ ಮತ್ತಾವುದಕ್ಕೂ ಆಗಿರಲಿಲ್ಲ. ಆ ಸಿದ್ಧತೆ ಪರೀಕ್ಷೆಯಲ್ಲಿ ಸಫಲವಾಗುವಂತೆಯೇ ಇತ್ತು. ಅದಕ್ಕೇ ಈಗವನು, "ಶಾಂತ, ನಿನಗೆ ಎಂದಾದರೂ ನಾನು ದ್ರೋಹ ಬಗೆದಿರುವೆನೇ?" ಎಂದು ಕೇಳಿದ. ಅವಳು ಅವನೆಡೆಗೆ ತಿರುಗಿ ನೋಡದೆ, "ಏಕೆ?" ಎಂದಳು.

ರಾಜಣ್ಣ ಮತ್ತೆ ನಿರ್ಧರವಾಗಿ ಕೇಳಿದ, "ಬಗೆದಿರುವೆನೇ, ಹೇಳು!"

"ಇಲ್ಲ. ಯಾವ ವಿಚಾರದಲ್ಲೂ ಬಗೆದಿಲ್ಲ."

"ಸರಿ, ಹಾಗಾದರೆ ಪರೀಕ್ಷೆಯ ವಿಚಾರದಲ್ಲೂ ಬಗೆದಿಲ್ಲ. ನೀನು ಆ ವಿಷಯವನ್ನೇ ಬಿಟ್ಟುಬಿಡು. ಮೂರು ತಿಂಗಳು ಒಬ್ಬರಿಗೊಬ್ಬರು ಮುಖ ತೋರಿಸದಂತೆ ಮಾಡಿದ ಆ ಶತ್ರುವಿನ ಮಾತು ಈಗೇಕೆ?"

ಎಂದ. ಶಾಂತ ಅವನನ್ನು ಅರ್ಥಮಾಡಿಕೊಂಡಳು. ಸಮಾಧಾನದಿಂದ ನಿಟ್ಟುಸಿರು ಬಿಡುತ್ತಾ ಅವನನ್ನೇ ದೂಷಿಸುವವಳಂತೆ ನೋಡಿ, "ಹೀಗೇಕೆ ಮೊದಲೇ ಹೇಳಬಾರದಾಗಿತ್ತು? ಬದನೇಕಾಯಿ, ಕುಂಬಳಕಾಯಿ ಎಂದು ಹೆದರಿಸೇಬಿಟ್ಟಿದ್ರಲ್ಲ. ಈಗೀಗ ತುಂಬಾ ಗೋಳಾಡಿಸುವ ಬುದ್ಧಿ ಬಂದಿದೆ ನಿಮಗೆ!" ಎಂದಳು. ರಾಜಣ್ಣ ಅವಳನ್ನೇ

ವಿನೋದದಿಂದ ನೋಡುತ್ತಾ, "ಬುದ್ಧಿ ಯೇನೋ ಬಂದಿದೆ. ಆದರೆ ನಿಜವಾಗಿಯೂ ಗೋಳಾಡಿಸಲು ಪ್ರಾರಂಭಿಸಿಲ್ಲ. ಈಗ ಬಾ, ಒಂದು ಕಡೆಗೆ ಹೋಗೋಣ" ಎಂದ.

ಶಾಂತ ಅವನ ಸ್ವರದಲ್ಲಿ ಏನೋ ರಹಸ್ಯವನ್ನು ಕಂಡು, ಗಾಬರಿ, ಹುಸಿಕೋಪದಿಂದ ನಿಂತು, 'ಎಲ್ಲಿಗೆ ? ಉಹು, ನಾನು ಬರೋಲ್ಲ !" ಎಂದು ತಲೆಯಾಡಿಸಿದಳು. ರಾಜಣ್ಣನೂ ನಿಂತು ಅವಳನ್ನೇ ನೋಡಿ ನಗುತ್ತಾ, "ಎಲ್ಲಿಗೂ ಇಲ್ರೀ. ಕಾಫಿ ಕುಡಿದು ಬರೋಣ ಬನ್ನಿ. ಇದೇನು, ಇಷ್ಟು ಹೆದರಿಕೆ !" ಎಂದ. ಶಾಂತ ಈಗ ಜೊತೆಗೆ ಬಂದಳು. ರಾಜಣ್ಣ ಅವಳನ್ನೇ ನೋಡುತ್ತಾ, "ಎಲ್ಲಿಗಾದ್ರೂ ನಿನ್ನನ್ನು ಎತ್ತಿ ಕೊಂಡು ಹೋಗಿ, ತಿಂದುಹಾಕ್ತಿದ್ದೆ ಎಂದು ತಿಳಿದುಕೊಂಡಿದ್ದೆಯಾ ?"

ಎಂದು ಕೇಳಿದ. ಅವಳು ನಗುತ್ತಾ "ಹೂ. ನೀವೇನು ಅದಕ್ಕೂ ಹೇಸದವರೇ !" ಎಂದಳು.

ಅವರಿಬ್ಬರೂ ಕ್ವೀನ್ಸ್ ರೋಡನ್ನು ದಾಟಿ, ವಿಕ್ಟೋರಿಯಾ ಚೌಕವನ್ನು ಹಾದು, ಸೌತ್ ಪೆರೇಡಿಗೆ ಕಾಲಿರಿಸಿದರು. ರಾಜಣ್ಣ ಪೆರೇಡ್ ಹೊಟೇಲಿನ ಗಲಭೆಯಲ್ಲಿ ಅವಳನ್ನು ಗೋಳಾಡಿಸಲು ಸಾಧ್ಯ ವಿಲ್ಲವೆಂದು, 'ಗುಡ್-ಓಲ್ಡ್' ಇಂಡಿಯನ್ ಕಾಫಿ ಬಾರ್‌ಗೆ ಕರೆತಂದ.

ಅವರು ಉಪಾಹಾರ ಮುಗಿಸಿ ಹೊರ ಬಂದಾಗ ಶಾಂತ ಅವನ ವಿನೋದಭರಿತ, ಸಂತೃಪ್ತ ವದನವನ್ನೇ ನೋಡಿದಳು. ಅವನ ಹಣೆಯ ಎಡಪಾರ್ಶ್ವದ ಮಚ್ಚೆ ನೋಡಿದ ಕೂಡಲೆ ಅವಳಿಗೆ, ಅವನನ್ನು ಹೊಡೆದವರ ವಿಚಾರ ಅವನಿಂದಲೇ ನಿಷ್ಕರ್ಷೆಯಾಗಿ ತಿಳಿಯುವ ಕುತೂಹಲವಾಯಿತು.

"ರಾಜು....ನಿಮ್ಮನ್ನು ಹೊಡೆದವರು, ಆ ದಿನ ನಮ್ಮನ್ನು ತಡೆದು ಬೈದರಲ್ಲ....ಅವರೇ ಏನು ?" ಎಂದು ಕೇಳಿದಳು.

ರಾಜಣ್ಣ ನಿರಾಸಕ್ತಿಯಿಂದ ಮುಂದೆ ನೋಡುತ್ತಾ ಹೇಳಿದ.

"ಹೌದು."

"ಹಾಗಾದರೆ, ಇದನ್ನೇಕೆ ನೀವು ಯಾರಿಗೂ ತಿಳಿಸಲಿಲ್ಲ ?"

"—ಏಕೆ ತಿಳಿಸಬೇಕಾಗಿತ್ತು ? ಹಾಗೆ ಮಾಡಿದ್ದರೆ ಏನಾಗು

ತ್ತಿತ್ತು ಗೊತ್ತೆ ? ಚಂದ್ರಪ್ಪ ಆ ವರದನನ್ನು ಜೈಲುಕಾಣಿಸದೆ ಬಿಡು ತ್ತಿರಲಿಲ್ಲ. ಅವರಿಗೆ ಅಷ್ಟು ಕೋಪ ಇತ್ತು. ಅದನ್ನು ನಡೆಸಿ ಕೊಳ್ಳುವ ಶಕ್ತಿ ಇತ್ತು ಅವನಿಗೆ ಪೋಲೀಸ್, ಮೆಡಿಕಲ್, ಲೀಗಲ್ ಜನರ ಪರಿಚಯ ಚೆನ್ನಾಗಿದೆ. ಅಲ್ಲದೆ ಅವನಿಗೆ ವರದ ಸುಧಾಳ ತಲೆಯ ಮೇಲೆ ಹೊಡೆದು, ನಮ್ಮ ಅಕ್ಕನಿಗೆ ಬೈದು ಹೋದ ದಿನ ದಿಂದಲೂ ರೊಚ್ಚಿದೆ. ..ಒಂದು ವೇಳೆ ನಾನು ಈ ವಿಚಾರವನ್ನೂ ತಿಳಿಸಿ, ವರದ ಜೈಲು ಕಂಡಿದ್ದರೆ ನಿಮ್ಮ ತಂದೆ-ತಾಯಿಗೆ ಎಷ್ಟು ದುಃಖ ವಾಗ್ತಿತ್ತು ನೋಡು ?" ಎಂದ. ಶಾಂತ ಅವಮಾನ-ಆಲೋಚನೆ-ದುಗುಡದಿಂದ ತಲೆ ತಗ್ಗಿಸಿದಳು. ಅವಳಿಗೆ ವರದನನ್ನು ಕೊಂದು ಬಿಡುವಷ್ಟು ಕೋಪ ಬಂತು. ಅವನ ಕಳ್ಳತನ, ಅದರಿಂದ ತಂದೆಗೆ ಆದ ದುಃಖ, ಅವಮಾನ ; ಈಗಿನ ಅವರ ಅಸಹಾಯಕತೆ ಎಲ್ಲವನ್ನೂ ಅವನಿಗೆ ಹೇಳಿಕೊಂಡಳು. ಅದನ್ನು ಕೇಳಿ ರಾಜಣ್ಣ ತುಂಬಾ ಚಿಂತಾಕ್ರಾಂತನಾದ. ಏನನ್ನೂ ಮಾತಾಡದೆ ಅಡಿಯಿರಿಸಲಾರಂಭಿಸಿದ. ಕೆಲವು ನಿಮಿಷಗಳಾದ ಬಳಿಕ ಕೇಳಿದ,

"ಶಾಂತ, ಈಗ ನಿಮ್ಮ ತಂದೆಯ ಗತಿಯೇನು ? ಅವರು ಏನು ಮಾಡಬೇಕೆಂದಿದ್ದಾರ ?"

"ಏನು ಮಾಡುವಂತಿದೆ ಅವರು ? ನನ್ನ ಪದವಿ ಕೈಗೆ ಬರುವ ವರೆಗೂ ಹೀಗೆ ನರಳಾಡಬೇಕು. ನಂತರ ನಾನು ಅವರ ಊರು ಗೋಲಾಗಿ ನಿಲ್ಲಬಹುದು. ಇದಕ್ಕೆ ನೀವೇನು ಹೇಳುತ್ತೀರಿ ?" ಎಂದಳು.

ಅದಕ್ಕೆ ರಾಜಣ್ಣ ಏನನ್ನೂ ಹೇಳಲಿಲ್ಲ. ಅವನು ಮತ್ತೊಮ್ಮೆ ಆಳವಾದ ಯೋಚನೆಗೆ ಬಿದ್ದ. ಅವನಿಗೆ ಈ ಸಮಸ್ಯೆಯನ್ನು ಹೇಗೆ ಬಗೆಹರಿಸಬೇಕೋ ಅರ್ಥವಾಗಲಿಲ್ಲ. ಅವನಿಗೆ ಶಾಂತಳೂ ಬೇಕಾ ಗಿತ್ತು. ಅವಳ ತಂದೆಯೂ ಅಷ್ಟೇ ಅಗತ್ಯವಾಗಿ ಬೇಕಾಗಿತ್ತು. ಆ ದೇವರಂಥ ಅಸಹಾಯ ವೃದ್ಧರಿಂದ, ಅವರ ಆಸೆಯ ಗೋಪುರ ದಂತಿದ್ದ ಶಾಂತಳನ್ನು , ತನ್ನ ಮನೆಗೆ ಸೆಳೆದೊಯ್ಯಲು ಮನಸ್ಸಾಗ ಲಿಲ್ಲ. ಆಗ 'ಅವರು ಬೆಂಗಳೂರಿನಂಥ ನಿರ್ದಯ-ಹೃದಯ-ಹೀನ

ನಗರದಲ್ಲಿ ಈ ಇಳಿವಯಸ್ಸಿನಲ್ಲಿ ಏನನ್ನು ಮಾಡಲು ಸಾಧ್ಯ ?' ಎಂದು ಚಿಂತಿಸಿದ. ಆಗ ಶಾಂತ, "ನಾನು ನಮ್ಮ ತಂದೆಯ ಬಳಿಯೇ ಇರುವುದು ನಿಮಗೆ ಒಪ್ಪಿಗೆಯಿಲ್ಲವೇ ?" ಎಂದು ಮತ್ತೆ ಕೇಳಿದಳು.

ರಾಜಣ್ಣ ವಿಷಾದದಿಂದ ಪ್ರಶ್ನಿಸಿದ.

"ಹಾಗೇ ಎಷ್ಟು ದಿನ ಇರಬೇಕು ?"

"ಅವರು ಇರುವವರೆಗೂ"

"ನೀನು ಈ ಬೆಂಗಳೂರಿನಲ್ಲೇ ಇರಬೇಕೇನು ?"

"ಹಾಗೇನೂ ಇಲ್ಲ. ಎಲ್ಲಿ ನನಗೆ ಅನುಕೂಲವಾಗಿರೋ ಕೆಲಸ ದೊರೆಯುತ್ತೋ ಅಲ್ಲಿ."

ರಾಜಣ್ಣ ಮತ್ತೆ ಏನನ್ನೋ ಆಳವಾಗಿ ಯೋಚಿಸತೊಡಗಿ, ಕೆಲವು ಕಾಲವಾದ ಮೇಲೆ ಹೇಳಿದ,

"ಶಾಂತ ; ನಾನೊಂದು ಮಾತು ಹೇಳುತ್ತೇನೆ ಕೇಳ್ತೀಯೇನು?"

"ಏನು ?"

"ನಿಮ್ಮ ತಂದೆ-ತಾಯಿ-ಮನೆಯವರೆಲ್ಲರೂ ನಮ್ಮ ಹಳ್ಳಿ ಹತ್ತಿರದ ಊರಿಗೇ ಬಂದಿರಲಿ. ಅವರ ಪೋಷಣೆಯ ಭಾರ ನನ್ನ ಹೆಗಲಮೇಲಿರಲಿ. ನೋಡು ; ಅವರು ಈಗ ನಿನ್ನ ತಂದೆ ಮಾತ್ರ ವಲ್ಲ ; ನನಗೂ ಒಂದು ರೀತಿಯಲ್ಲಿ ತಂದೆಯೇ. ಕೆಲವು ವಿಚಾರ ಗಳಲ್ಲಿ ತಂದೆಗಿಂತಲೂ ಹೆಚ್ಚೇ" ಎಂದ.

ಶಾಂತ, ಆಳವಾಗಿ ಯೋಚಿಸುತ್ತಾ ಮುಂದಿನ ದಾರಿ ನೋಡುತ್ತಾ ಹೇಳಿದಳು,

"ಬೇಡಿ ರಾಜು,....ಆ ಕಷ್ಟಗಳೆಲ್ಲಾ ನಿಮಗೇಕೆ ? .... ನನ್ನನ್ನು ಅವರು ಇಷ್ಟುದಿನವೂ ಹೂವಿನಂತೆ ಸಾಕಿದ್ದಾರೆ .... ಈ ಎರಡು ವರ್ಷ ಗಳಿಂದ ಈ ಗೋಳೆಲ್ಲಾ.... . ಅದೂ ವರದನ ದೆಸೆಯಿಂದ. ಅವನು ನೇರವಾದ ದಾರಿ ಹಿಡಿದಿದ್ದರೆ.... ನಮಗೆ ಈ ಸಂಕಟಗಳೊಂದೂ ಬರು ತ್ತಿರಲಿಲ್ಲ. ಆದರೆ ಹಾಗೆ ಬಂದಿವೆ. ಅದರಲ್ಲೇ ಒಂದೆರಡು ವರ್ಷ ನಾನೂ ಬೆಂದಿದ್ದೇನೆ.....ಕಲ್ಲಾಗಿದ್ದೇನೆ.... ಈಗ ನಾನೂ ನಿಮ್ಮಹಾಗೇ ಹೂವಿಗೆ ಹೂವು, ಕಲ್ಲಿಗೆ ಕಲ್ಲು !.... ನಾನು ಕಷ್ಟಪಟ್ಟು ದುಡಿಯೋಕೆ

ಹಿಂಜರಿಯೋಲ್ಲ .... ನಾನು 'ಪಾಸ್' ಆದ ಕೂಡಲೇ ಮತ್ತೆ ಅವರ ಬಾಳಿಗೆ ಸುಖ ಬಂದೇ ಬರುತ್ತೆ. ಇದಕ್ಕೆ ನೀವೇಕೆ ಶ್ರಮ ಬೀಳಬೇಕು? ನನ್ನ ಕರ್ತವ್ಯ ಪಾಲಿಸೋಕೆ ನನಗೆ ನೀವು ಅವಕಾಶ ಕೊಡ್ತೀರಿ.... ಅಲ್ಲವೇ ?" ಎಂದಳು.

ರಾಜಣ್ಣ ಮೌನವಾದ ಅವನಿಗೆ ಶಾಂತಳ ಎದೆಯ ಹಂಬಲ ಅರ್ಥವಾಗಿತ್ತು. ಅವಳ ಕರ್ತವ್ಯಗಳಲ್ಲಿ ಮೊದಲು ಪಿತೃಸೇವೆಯೂ ಆಡಕವಾಗಿರಲಿಲ್ಲ. ಆದರೆ ವಿಷಮ ಪರಿಸ್ಥಿತಿಗಳು ತಲೆದೋರಿದಾಗ, ಆ ಕರ್ತವ್ಯವೂ ಅವಳ ಹೆಗಲಮೇಲೆ ಬಿದ್ದಿದ್ದಿತು. ಅದರ ನಿರ್ವಹಣೆ ಯಲ್ಲಿ ದುಡಿಮೆ ಮಾತ್ರ ಬೇಕಾಗಿರಲಿಲ್ಲ, ತ್ಯಾಗವೂ ಅಗತ್ಯವಾಗಿತ್ತು. ತನ್ನ ಬಾಳಿನ ಅತ್ಯಂತ ಬೆಲೆಬಾಳುವ ಯೌವನ ಸುಖದ ತ್ಯಾಗ. ಸಂದರ್ಭವೊದಗಿದರೆ ರಾಜಣ್ಣನ ಪ್ರೇಮದ ತ್ಯಾಗ !

ಅವಳು ಅದಕ್ಕೂ ಸಿದ್ಧವಾಗಿರುವಳೇ ? ಎಂಬ ಸಂಶಯ ರಾಜಣ್ಣನ ಎದೆಯಲ್ಲಿ ಮೂಡಿ, ಅವನನ್ನು ಅಡಿಯಿಂದ ಮುಡಿಯ ವರೆಗೂ ನಡುಗಿಸಿತು. ಅವನು ಯಾತನೆಯ ಧ್ವನಿಯಲ್ಲಿ, "ಹಾಗಾದರೆ ಈ ವಿವಾಹ ನಿನಗೆ ಬೇಡವೇ ?" ಎಂದ.

ಅದಕ್ಕೆ ಶಾಂತ ಬೆಚ್ಚಿಬಿದ್ದು, "ಬೇಕು....!" ಎಂದಳು.

ಮರುಕ್ಷಣವೇ ಅವನ ತೋಳು ಹಿಡಿದು, ಅಸಹಾಯತೆಯ ಸ್ವರದಲ್ಲಿ, "ರಾಜೂ,. . ನಾನೇನು ಮಾಡಲಿ . . ನನಗೆ ಒಂದೂ ತೋಚೋಲ್ಲ . ಆದರೆ ನಿಮ್ಮಿಂದ ಮಾತ್ರ ದೂರ ಇರುವುದೂ ನನಗೆ ಬೇಕಿಲ್ಲ. ಅದು ಅಸಾಧ್ಯ" ಎಂದಳು.

ರಾಜಣ್ಣ ಅಸಮಾಧಾನ ಬೆರೆತ ಧ್ವನಿಯಲ್ಲಿ, "ಇದು ಉಪಚಾರದ ಮಾತಲ್ಲ....ತಾನೇ?" ಎಂದ.

ಅದರಿಂದ ಶಾಂತಳಿಗೆ ಅಪಾರ ವೇದನೆಯಾಯ್ತು. ಅವನಿಗೆ ಹೇಗೆ ತನ್ನ ಬಾಳಿನ ಒಳತೋಟಿಯನ್ನು ಹೇಳಿಕೊಳ್ಳಬೇಕೋ, ತನ್ನ ಪ್ರೇಮದ ಆಳ ತೋಡಿ ತೋರಿಸಬೇಕೋ ಅರ್ಥವಾಗಲಿಲ್ಲ. ದುಃಖ ದಿಂದ ಉಬ್ಬಿಬಂದ ಗಂಟಲಲ್ಲಿ ಅವಳು, "ಉಪಚಾರದ ಮಾತಲ್ಲ ರಾಜು !.... ನನ್ನ ಹೃದಯದ ಆಳದಿಂದ ಬಂದ ಮಾತು" ಎಂದು

ಅವನೊಡನೆ ಆಡಿಯಿರಿಸತೊಡಗಿದಳು. ಅವಳ ಕಣ್ಣುಗಳು ಉಕ್ಕಿ ಬರುವ ಕಂಬನಿಯಿಂದ ತೇವವಾಗಿದ್ದುವು.

ಮತ್ತೊಮ್ಮೆ 'ಕ್ವೀನ್ಸ್ ಸ್ಟಾಚ್ಯೂ' ಹಿಂದಿರುವ ಹುಲ್ಲು ಬಯಲಿಗೆ ಬರುವವರೆಗೂ ಅವರು ಮೌನವಾಗಿದ್ದರು. ಶಾಂತ ಉದ್ದಕ್ಕೂ ಆಗಾಗ ಕಣ್ಣೊರಸಿಕೊಂಡೇ ಬಂದಿದ್ದಳು.

ಹುಲ್ಲಿನ ಮೇಲೆ ಕುಳಿತ ನಂತರ, ಇಬ್ಬರೂ ಒಬ್ಬರನ್ನೊಬ್ಬರು ದೀರ್ಘಕಾಲ ನೋಡಿದರು. ರಾಜಣ್ಣನಿಗೆ ಅವಳ ನೋಟದ ಹಿಂದಿನ ಪ್ರೇಮ, ಯಾತನೆಗಳನ್ನು ಕಂಡು ಎದೆಯಲ್ಲಿ ಅನುಕಂಪ ಉದಿಸಿತು. ಅವನು ಅನುನಯದ ಧ್ವನಿಯಲ್ಲಿ,

"ಶಾಂತಾ, ನಾನು ಆಗಲೇ ತೋರಿಸಿದ ಪರಿಹಾರ, ನಿನ್ನ ಆತ್ಮ ಗೌರವಕ್ಕೆ ಕುಂದು ತರೋಲ್ಲ. ನಿಮ್ಮ ಮನೆಯವರ ಭಾರ ಹೊರಲು ನಾನು ಕನಿಕರದಿಂದ ಮುಂದೆ ಬಂದಿಲ್ಲ; ಕರ್ತವ್ಯದೃಷ್ಟಿಯಿಂದ ಬಂದಿದ್ದೇನೆ. ನೀವೇ ಏಕೆ? ನನ್ನ ಹೃದಯಕ್ಕೆ ಹತ್ತಿರದ ಯಾವ ಬಂಧುವಿಗೆ ಆ ಸ್ಥಿತಿ ಒದಗಿದ್ದರೂ ನಾನು ಹಾಗೇ ಮಾಡುತ್ತಿದ್ದೆ. ನನ್ನ ತಂದೆ, ನನ್ನ ಕೈ ಕಾಯುತ್ತಿಲ್ಲ. ನನ್ನ ಅಣ್ಣ ಬೇರೆ ಚೆನ್ನಾಗಿ ದುಡಿಯುತ್ತಿದಾನೆ. ಎಲ್ಲ ಒಟ್ಟಿಗೇ ಇದ್ದೇವೆ. ಹೀಗಿರುವಾಗ ನನ್ನ ದುಡಿಮೆ ನಿಮ್ಮ ಕುಟುಂಬಕ್ಕೆ ನೆರವು ನೀಡಲು ಇರುವ ಅಡ್ಡಿ ಏನು? ನಿಮ್ಮ ಮನೆಯವರೂ ಸಹ ನನ್ನನ್ನೇ ಕಾಯ್ದು ಕುಳಿತಿರಬೇಕಾಗಿಲ್ಲ. ಅವರ ಜೊತೆ ನೀನಿರುತ್ತೀಯ. ಅಲ್ಲೇ ಹೈಸ್ಕೂಲಿನಲ್ಲಿ ಕೆಲಸ ಮಾಡುವ ಮನಸ್ಸು ನಿನಗಿದ್ದರೆ, ಒಂದು ಕೆಲಸ ದೊರಕಿಸಿಕೊಡುವ ಭಾರ ನನಗಿರಲಿ. ಅದನ್ನು ನಾನು, ರಾಜಶೇಖರನ ಸಹಾಯದಿಂದ ಮಾಡಿಕೊಡ್ತೇನೆ.

"ಅಂದು ಆ ದಿನ ಈ ವಿಚಾರವನ್ನು ನೀನೇ ತೆಗೆದಿದ್ದೆಯಲ್ಲವೇ? ಈಗ ಏಕೆ ನನ್ನಿಂದ ದೂರ ಇರಬೇಕು ಎಂದು ಹಾತೊರೆಯುತ್ತೀಯ? ನಮ್ಮ ಮನೆಯವರು ಮಾಂಸಾಹಾರಿಗಳೆಂದೇ?" ಎಂದ

ಶಾಂತ ಈಗ ನಸುನಕ್ಕು ಹೇಳಿದಳು, "ಇಲ್ಲ ರಾಜು, ಹಾಗೆ ನಾನು ಯೋಚಿಸುತ್ತಿಲ್ಲ!"

"ಹಾಗಿದ್ದರೂ ಆ ಚಿಂತೆ ನೀನಿಟ್ಟುಕೋಬೇಡ ಶಾಂತಾ. ನನಗೆ ನಮ್ಮ ತಂದೆಯ ಮನೆಯಲ್ಲೇ ಇರುವ ಮನಸ್ಸಿಲ್ಲ. ನಾವಿಬ್ಬರೇ ಬೇರೆ ಕಡೆ ಇರಬೇಕು. ಪ್ರತ್ಯೇಕವಾದ ಮನೆಯಲ್ಲಿರಬೇಕು. ಅಲ್ಲಿಗೆ ಹೋಗ್ತಾ-ಬರ್‍ತಾ, ಪ್ರೀತಿ, ವಿಶ್ವಾಸಗಳಿಂದ ಒಂದು ಮನೆ ಎಂಬ ಭಾವನೆ ಬೆಳೆಸುತ್ತಿರಬೇಕು. ಅಷ್ಟೇ ನನಗೆ ಬೇಕಾಗಿರುವುದು. ಬಹುಶಃ ನಾನು ಅದೇ ಹಳ್ಳಿಯಲ್ಲೂ ವಾಸಿಸೋದಿಲ್ಲ. ಹತ್ತಿರದ ಆ ಊರಿನಲ್ಲೇ ನಮ್ಮ ತಾಯಿಯ ಮನೆಯೊಂದಿದೆ. ಅವರ ತಂದೆ ಅದನ್ನು ನಮ್ಮ ತಾಯಿಯ ಹೆಸರಿಗೇ ಮಾಡಿಸಿ ತೀರಿಹೋದರಂತೆ. ಈಗ ಆ ಮನೆ ಯಾರೋ ಸರ್ಕಾರೀ ಅಧಿಕಾರಿಗಳಿಗೆ ಬಾಡಿಗೆಗೆ ಕೊಟ್ಟಿದೆ. ಅದು ಚೆನ್ನಾಗಿಯೇ ಇದೆ. ಊರಿನ ಹತ್ತಾರು ಅಂದವಾದ ಮನೆಗಳಲ್ಲಿ ಅದೂ ಒಂದು. ಮುಂದೆ ಕಾಂಪೌಂಡಿದೆ. ಬೇಕಾದರೆ ಉದ್ಯಾನ ಬೆಳೆಸಬಹುದು. ಬಾವಿ, ಲೈಟ್ ಎಲ್ಲಾ ಇದೆ. ಮೂರು ನಾಲ್ಕು ರೂಮುಗಳಿವೆ. ಎಲ್ಲಾ ತೃಪ್ತಿಕರವಾಗಿದೆ. ಅದನ್ನು ನಾವು ಬಿಡಿಸಿಕೊಳ್ಳಬಹುದು ನಿಮ್ಮ ಮನೆಯವರು, ನೀನು, ನಾನು ಎಲ್ಲಾ ಒಟ್ಟಿಗೇ ಇರಬಹುದು. ಅಲ್ಲಿಗೂ ನಮ್ಮ ಹಳ್ಳಿಗೂ ಆರೇ ಮೈಲಿ ದೂರ. ಇಬ್ಬರೂ ಅವರವರ ಕೆಲಸಗಳಿಗೆ ಹೋಗಬಹುದು. ಇದೇ ನಿನ್ನ ಇಷ್ಟವೂ ಅಲ್ಲವೇ ?' ಎಂದ. ಶಾಂತ ಮೌನವಾಗಿದ್ದಳು. ಅದನ್ನು ಕಂಡು ರಾಜಣ್ಣ ಮತ್ತೆ ಹೇಳಿದ, "ನೋಡು, ನಿಮ್ಮ ತಂದೆ ಇದಕ್ಕೆ ಒಪ್ಪದಿದ್ದರೆ, ಅವರಿಗೆ ನಾವಿಬ್ಬರೂ ತಿಂಗಳಿಗೆ ಸಾಲುವಷ್ಟು ಹಣ ಕಳಿಸುತ್ತಿರೋಣ" ಎಂದ.

ಶಾಂತ ನಿಟ್ಟುಸಿರಿಡುತ್ತಾ ತಲೆ ಎತ್ತಿ, "ಬೇಡ, ನೀವು ಮೊದಲು ಹೇಳಿದಂತೆಯೇ ಆಗಲಿ. ನಮ್ಮ ತಂದೆಯವರನ್ನು ಒಪ್ಪಿಸಲು ಪ್ರಯತ್ನ ಮಾಡ್ತೀನೆ" ಎಂದಳು.

ರಾಜಣ್ಣ, "ಹಾಗೆ ಮಾಡು, ನಾನೂ ಅವರನ್ನು ಕೇಳಿಕೊಳ್ತೀನೆ. ನಿಜವಾಗಿಯೂ ಶಾಂತ, ನಿಮ್ಮ ತಂದೆಯವರ ಸೇವೆ ಮಾಡಲೂ ನಮಗೆ ಪುಣ್ಯ ಇರಬೇಕು" ಎಂದ. ಅವನ ನೋಟ ಮುಂದಿನ ವಿಶಾಲ ಪಾತಿಗಳಲ್ಲಿ ಬೆಳೆದು ಅರಳಿದ್ದ ಸುಂದರ ಪುಷ್ಪಗಳ ಕಡೆಗೆ

ನಾಟಿತ್ತು ಅವನ ವದನ ಗಂಭೀರವಾಗಿತ್ತು.

ಶಾಂತ ಅವನನ್ನೇ ಒಲುಮೆ, ಮೆಚ್ಚಿಗೆ, ಹೆಮ್ಮೆ ತುಂಬಿ ತುಳುಕುವ ಕಣ್ಣುಗಳಿಂದ ನೋಡಿದಳು. ಆಗ ಅವಳಿಗೆ ರಾಜಣ್ಣ ನಾಳೆಯೇ ಹಳ್ಳಿಗೆ ಹಿಂತಿರುಗುವ ಸಂಗತಿ ನೆನಪಾಯಿತು. ಅವಳ ಎದೆಯಲ್ಲುಕ್ಕಿದ ಪ್ರೇಮ-ವಿರಹದ ಉತ್ತುಂಗ ಅಲೆ, ಅವಳ ದೇಹಾದ್ಯಂತ ಪಸರಿಸಿತು. ಅವಳಿಗೆ ಅವನ ಆಲಿಂಗನದಲ್ಲಿ ಕರಗಿ ಮೈಮರೆಯಬೇಕೆನಿಸಿತು.

ಆದರೆ 'ಇದು ಒಂದು ಸಾರ್ವಜನಿಕ ಉದ್ಯಾನ; .... ನನ್ನ ಮನೆಯಲ್ಲ!'—ಎಂಬ ಅರಿವು ಬಂದು ಅವನ ಕೈಹಿಡಿದು ಎದೆ ಹಗುರ ವಾಗುವವರೆಗೂ ಹಿಂಡಿದಳು.

ಅವಳೆದೆಯಲ್ಲಿ "ನನ್ನ ಮನೆ! ನಾನು ರಾಜಣ್ಣನೊಡನೆ ಸ್ವಚ್ಛಂದವಾಗಿ ವಿಹರಿಸಬಲ್ಲ, ಅವನ ಬಯಕೆಗಳನ್ನೆಲ್ಲಾ ಸಂಪೂರ್ಣ ವಾಗಿ ತೃಪ್ತಿಪಡಿಸಬಲ್ಲ, ನನ್ನ ಸರ್ವಸ್ವದ ಸವಿ, ಪ್ರೇಮ, ಮಮತೆ ಗಳೆಲ್ಲವನ್ನೂ ಅವನ ಬೆಂದ ಜೀವಕ್ಕೆ ಧಾರೆಯೆರೆಯಲು ಅನುಕೂಲ ವಾಗಿರಬಲ್ಲ, ಒಂದು ಮುದ್ದುಮನೆ!" ಎಂಬ ದುರ್ಭರ ಅಗತ್ಯ ಈಗ ಹೆಡೆಯೆತ್ತಿ ನಿಂತಿತು. ಆ ಅಗತ್ಯದ ಉತ್ಕಟತೆಯ ಸೆಳವಿಗೆ ಸಿಕ್ಕಿದ ಅವಳ ಮನಸ್ಸು ಈಗ ರಾಜಣ್ಣ ಸೂಚಿಸಿದ್ದ ಮಾರ್ಗವನ್ನು ಸಂಪೂರ್ಣ ವಾಗಿ ಕಾತುರದಿಂದ ಒಪ್ಪಿಕೊಂಡಿತು

ಆಗ ಅವಳಿಗೆ ತಾನು ರಾಜಣ್ಣನ ತಂದೆಯ ಮನೆಗೊಮ್ಮೆ ಹೋಗಿ, ಅಲ್ಲಿನ ಜನರ ಪರಿಚಯ ಮಾಡಿಕೊಂಡು, ಅಲ್ಲಿ ತನ್ನ ಸ್ನೇಹದ ಪತಾಕೆಯನ್ನು ಹಾರಿಸಿ ಬರಬೇಕೆಂದಿರುವ ಆಸೆ ನೆನಪಾಯಿತು.

ತನ್ನನ್ನೇ ಬಯಕೆ ತುಂಬಿದ ಕಣ್ಣುಗಳಿಂದ ನೋಡುತ್ತಿದ್ದ ರಾಜಣ್ಣನ ನೋಟದೊಡನೆ ನೋಟಬೆರೆಸಿ, ಕೇಳಿದಳು — "ರಾಜು, ನಿಮ್ಮ ಹಳ್ಳಿಗೆ ಒಂದೆರಡು ದಿನ ಬರಲೇ?"

"ಬಾ....ನಿನಗೆ 'ವೆಲ್-ಕಂ' ಯಾವಾಗಲೂ ಕಾದಿರುತ್ತೆ. ಆದರೆ ಹೇಗೆ ಬರ್‍ತೀಯ, ಹೇಳು?"

"ಹೇಗೋ ಬರ್‍ತೀನೆ!"

" ಯಾವಾಗ ? "

" ಫಲಿತಾಂಶ ಹೊರಬೀಳುವುದರೊಳಗೇ."

" ನೀನೊಬ್ಬಳೇ ಬರುತ್ತೀಯಾ ? "

" ಹು, ನಾನೊಬ್ಬಳೇ ಬರಬೇಕು, ಸಾಧ್ಯವಾದರೆ ನೀವೇ ಬಂದು ನನ್ನನ್ನು ಕರೆದುಕೊಂಡು ಹೋಗಿ "

" ಆಗಲಿ;....ಆದರೆ....ಶಾಂತಾ !....ಈಗಲೇ ಹೇಗೆ ಬರುತ್ತೀಯ ನೀನು ?....ಎರಡು ರಾತ್ರಿ ಮನೆಯ ಹೊರಗೆ ಕಳೆದು ಬಂದರೆ.... ನಿಮ್ಮ ತಂದೆ ಏನು ತಿಳಿದುಕೋತಾರೆ; ನಿಮ್ಮ ತಾಯಿ ನಿನ್ನನ್ನು ಮನೆಗೆ ಸೇರಿಸಿಕೊಳ್ತಾರೇನು ?"

" ಹಾಗೆಲ್ಲ ನಾನು ಬರೋಲ್ಲ; ಒಂದು ಉಪಾಯಮಾಡಿ ಬರ್‍ತೀನೆ. ಸುಮಾ ಇನ್ನೂ ಒಂದು ತಿಂಗಳಾದ ಮೇಲೆ ಅವಳ ಅಜ್ಜಿ ಮನೆಗೆ ಹೋಗ್ತಾಳೆ. ಅವಳ ಜೊತೆ ಅಲ್ಲಿಗೆ ಹೋಗಿ ಬರ್‍ತೀನೆಂದರೆ ನಮ್ಮ ತಾಯಿ ಒಪ್ಪಿಗೆ ಕೊಡ್ತಾರೆ. ಅಲ್ಲಿಗೆ ಹೊರಟ ಹಾಗೆ ಮಾಡಿ, ನಿಮ್ಮ ಹಳ್ಳಿಗೆ ಬಂದು ಬಿಡುತ್ತೇನೆ !....ಆಗಬಹುದೇ ? "

" ಹೋ, ಅದಕ್ಕೇನು ! ಇದನ್ನೆಲ್ಲಾ ನಿನಗೆ ನಾನು ಹೇಳಿಕೊಡ ಬೇಕೇ ?....ನೀನು ಡಾಕು-ಕಿ-ಲಡ್ಕಿ !....ಆದರೆ ನೋಡು ; ನೀನು ಹಳ್ಳಿಗೆ ಬಂದಾಗ ನನ್ನ ಜೊತೆ ಎಲ್ಲದಕ್ಕೂ ಸಿದ್ಧವಾಗಿರಬೇಕು !" ಎಂದು ಅವಳನ್ನೇ ತುಂಟತನದಲ್ಲಿ ನೋಡಿದ. ಅವಳ ಮುಖ ನಾಚಿಕೆಯಿಂದ ಕೆಂಪೇರಿತು. ಅವಳನ್ನೇ ಎವೆಯಿಕ್ಕದೆ ಕಚ್ಚಿ-ತಿಂದುಬಿಡುವವನಂತೆ ನೋಡುತ್ತಿದ್ದ ರಾಜಣ್ಣನ ಮುಖದೆಡೆಗೆ ಒಂದು ಹಿಡಿ ಹುಲ್ಲುಗರಿಕೆ ಕಿತ್ತು ತೂರಿದಳು ಶಾಂತ !

ಮುಖದ ಮುಂದೆ ಕೈ ಇರಿಸಿ, ಆ ಹುಲ್ಲು ಗರಿಕೆಯ ಧಾಳಿ ತಪ್ಪಿಸಿ ಕೊಂಡ ರಾಜಣ್ಣ. ತನ್ನಲ್ಲಿ ತಾನೇ ನಗುತ್ತಾ, ಕೈಗಳನ್ನು ಹಿಂದೆ ಊರಿ, ನೀಲನಭದೆಡೆಗೆ ದೃಷ್ಟಿ ಹೊರಳಿಸಿದ. ಈಗ ಅವನ ಕಣ್ಣು ಗಳಲ್ಲಿ ಯಾವುದೋ ಮಧುರ ನೆನಪುಗಳ ಕಾಂತಿ ತುಳುಕಾಡ ತೊಡಗಿತು. ಅವನು ನಿಧಾನವಾಗಿ ಹೇಳಲಾರಂಭಿಸಿದ.

" ಶಾಂತಾ, ನೀನು ಬೇಗ ಹಳ್ಳಿಗೆ ಬಾ ; ಅಲ್ಲಿ ಎಷ್ಟೋ ಜಾಗ

ಗಳಿವೆ. ನಾನು ಚಿಕ್ಕಂದಿನಲ್ಲಿ ಆಡಿ, ಬೆಳೆದು, ವಿಹರಿಸಿದ ಸ್ಥಳಗಳು, ಅವುಗಳೆಲ್ಲಾ ನನಗೆ ಬೃಂದಾವನ, ಜೋಗ್, ಮೇಕೆ-ದಾಟಗಿಂತಲೂ ರಮ್ಯ, ಆಪ್ತ. ನಾನು ದಿನವೂ ಒಂಟಿಯಾಗಿ ಹೋಗಿ ಕುಳಿತು ಕೊಳ್ಳುತ್ತಿದ್ದ ಗುಡ್ಡದ ಕೋಡುಗಲ್ಲಿದೆ- ಅಲ್ಲಿ ನನ್ನ ಹೆಸರನ್ನು ಕೆತ್ತಿದ್ದೇನೆ. ಆಗ ನಾವಿಬ್ಬರೂ ಅಲ್ಲಿಗೆ ಒಟ್ಟಿಗೆ ಹೋಗೋಣ. ನೀನೂ ನಿನ್ನ ಹೆಸರನ್ನು ಅಲ್ಲಿ ಕೆತ್ತುವೆಯಂತೆ. ಅಲ್ಲಿಂದ ರಾಜಶೇಖರನ ಫಾರಂಗೆ ಹೋಗೋಣ. ಅಲ್ಲಿ; ಹಸುರು ಬೆಟ್ಟದ ತಪ್ಪಲಲ್ಲಿರುವ ಅವನ ಮನೆಯಲ್ಲಿ ಇರೋಣ. ಮುಂಜಾನೆಯೇ ಎದ್ದು, ಇಬ್ಬನಿ ಕವಿದ ಆ ಹಸುರು ಗುಡ್ಡ ಏರೋಣ. ನವಿಲುಗಳ ಕುಣಿತ, ನೋಡೋಣ. ಒಂದು ದಿನ ನಾನು-ನೀನು-ನಮ್ಮ ತಾಯಿ ಎಲ್ಲರೂ ನಮ್ಮ ಊರಿನ ಬಳಿ ಇರುವ ಅಣೆಕಟ್ಟೆಗೆ ಹೋಗೋಣ. ಅಲ್ಲಿನ ಸುತ್ತು-ಮುತ್ತಲೂ ಇರುವ ದೃಶ್ಯಗಳು ಬಹಳ ಚೆನ್ನಾಗಿವೆ. ಅಲ್ಲೇ ಹಗಲೆಲ್ಲಾ ಇದ್ದು, ರುಚಿ-ರುಚಿಯಾದ ಅಡಿಗೆ ಮಾಡಿ, ತಿನ್ನೋಣ. ಅದಾದ ಮೇಲೆ ನಮ್ಮ ತೋಟಕ್ಕೆ ಬರೋಣ. ಅಲ್ಲಿ ಅಂಜೂರ, ಮಾವಿನ ಹಣ್ಣುಗಳನ್ನು ತಿನ್ನೋಣ. ಎಳನೀರು ಕುಡಿಯೋಣ. ಹೀಗೇ ಒಂದೆರಡು ದಿನ ಸ್ವಚ್ಛಂದವಾಗಿ ಇದ್ದು ಬರುವೆಯಂತೆ.... ಬಾ. ನಿನಗೆ ಈ ಪಟ್ಟಣದ ಜೀವನದ ಬೇಸರವಾದರೂ ಕಳೆಯುತ್ತೆ. ಖಂಡಿತ ಬಾ" ಎಂದ.

ಶಾಂತ ಅವನನ್ನೇ ಒಲುಮೆಯಿಂದ ನೋಡುತ್ತಿದ್ದಳು.

ರಾಜಣ್ಣ ಅವಳ ಕೆಂಪೇರಿದ ಕೆನ್ನೆಗಳು, ಮಧುರಾಲೋಚನೆಯ ಕಿರುನಗೆ ಹೊತ್ತ ತುಟಿಗಳು, ನೆಲದೆಡೆಗೆ ಬಾಗಿದ ಸುಂದರ ವದನ, ತಂಗಾಳಿಗೆ ಅಲುಗುತ್ತಿದ್ದ ಮುಂಗುರುಳು, ಕನಸಿನ ನೋಟ ಕಾರುವ ನಯನಗಳು, ಕಂಡೂ ಕಾಣದಂತೆ ಏರಿಳಿಯುತ್ತಿದ್ದ ವಕ್ಷಸ್ಥಳ, ಕೋಮಲ ಉದ್ವೇಗದಿಂದ ಹುಲ್ಲುಗರಿಕೆ ಕೀಳುತ್ತಿದ್ದ ಅವಳ ಗುಲಾಬಿಯ ರಂಗಿನ ಕೈಬೆರಳುಗಳು, ನುಣುಪು ಕೈ, ತೋಳು, ಕೆಂಪು ಹಿಮ್ಮಡಿ, ಪಾದಗಳನ್ನೇ ಭಾವಪರವಶನಾಗಿ ದಿಟ್ಟಿಸಿ ನೋಡಿದ. ಅವನಿಗೆ 'ತಾವಿಬ್ಬರೂ ಹಕ್ಕಿಗಳಂತೆ ಫಕ್ಕನೆ ಮೇಲೆ ಹಾರಿ, ಯಾವು

ದಾದರೂ ದೂರದ ಹಸುರು ಬೆಟ್ಟದ ಶಿಖರವೇರಿ ಕ್ರೀಡಿಸಬಾರದೇ....!' ಎನಿಸಿತು

೧೩

ಬೇಸಿಗೆಯ ಬಿಡುವು ಮುಗಿಯುತ್ತಾ ಬಂತು. ಮುಂಗಾರು ಮಳೆ ವಿಶೇಷ ಆರ್ಭಟದಿಂದ ಕಾಲಿರಿಸಿತು.

ರಾಜಣ್ಣ ತನ್ನ ಹಳ್ಳಿಯಲ್ಲಿ ಶಾಂತಳಿಗಾಗಿ ಕಾಯುತ್ತಿದ್ದ. ಇನ್ನು ಒಂದೆರಡು ದಿನಗಳಲ್ಲೇ ಅಲ್ಲಿಗೆ ಬರುವುದಾಗಿ ಶಾಂತ ಅವನಿಗೆ ಪತ್ರ ಬರೆದಿದ್ದಳು.

ಈ ಸುದ್ದಿಯನ್ನು ಅವನು ತನ್ನ ತಾಯಿಗೆ ತಿಳಿಸಿದ. ಅದರಿಂದ ಅವರು ಸಂತೋಷಗೊಂಡರು. ಹಾಗೆಯೇ ಸ್ವಲ್ಪ ಚಿಂತೆಗೂ ಒಳಗಾದರು. ಏಕೆಂದರೆ ಅವರ ಹಿರಿಯ ಮಗ ಮತ್ತು ಸೊಸೆ, ಬೇರೆ ಜಾತಿಯವಳು ಮನೆಯಲ್ಲಿ ಕಾಲಿರಿಸಿದರೆ, ಆ ದಿನವೇ ನಾವು ಬೇರೆ ಮನೆ ಮಾಡಬೇಕಾಗುವುದಾಗಿ ಬೆದರಿಕೆ ಹಾಕಿದ್ದರು.

ಹಳ್ಳಿಗೆ ಬಂದಿದ್ದ ಕೂಡಲೇ ಅವರೊಡನೆ ರಾಜಣ್ಣ ಶಾಂತಳ ಪ್ರಸ್ತಾಪವೆತ್ತಿದ್ದ. ಅವರಿಗೆ ಬಹು ಪ್ರಿಯವಾಗಿದ್ದ ಕಾಂಗ್ರೆಸ್ಸಿನ ತತ್ವಗಳು, ದಯಾನಂದ ಸರಸ್ವತಿಯವರ ಭೋಧನೆಗಳನ್ನು ನೆನಪಿಗೆ ತಂದು, ಅವರ ಮನ ಒಲಿಸಿಕೊಳ್ಳಲು ಪ್ರಯತ್ನಿಸಿದ್ದ. ಆದರೆ ಸಿದ್ಧಾಂತಗಳಿಗೂ ಆಚರಣೆಗಳಿಗೂ ಎರಡು ಧೃವಗಳಷ್ಟು ಅಂತರವಿದ್ದ ಅವರ ಆಡಂಬರದ ಆದರ್ಶ ಮನಸ್ಸು, ಅವನ ವಾದವನ್ನಾಗಲೀ, ದೃಷ್ಟಿಕೋನವನ್ನಾಗಲೀ ಮೆಚ್ಚಿಕೊಂಡಿರಲಿಲ್ಲ. ಆ ವಿಚಾರದಲ್ಲಿ ರಾಜಣ್ಣ ಸ್ವಲ್ಪ ಕಟುವಾಗಿ, ನಿಷ್ಠುರವಾಗಿ ಮಾತಾಡಿದ್ದುದರಿಂದ, ಅವರು ಈಗ ಅವನೊಡನೆ ಮಾತಾಡುವುದನ್ನೇ ನಿಲ್ಲಿಸಿಬಿಟ್ಟಿದ್ದರು. ಅವರ ತಂದೆಯಂತೂ ಕಿರಿಯ ಮಗನ ಆಲೋಚನೆ, ಯೋಜನೆಯನ್ನು ಪತ್ನಿಯಿಂದ ಅರಿತು ಅವನನ್ನು ಕಂಡರೇ ರೋಷಭೀಷಣರಾಗುತ್ತಿದ್ದರು.

ಇದೆಲ್ಲವನ್ನೂ ಕಂಡು ಒಮ್ಮೊಮ್ಮೆ ರಾಜಣ್ಣನಿಗೆ ತಾನೇ ಈ ಮನೆಯಿಂದ ಈಗಿನಿಂದಲೇ ಬೇರೆಯಾಗಿ, ಸ್ವತಂತ್ರನಾಗಿ ಇದ್ದುಬಿಡುವುದು ಮೇಲು ಎನಿಸುತ್ತಿತ್ತು. ಆದರೆ ಇನ್ನೊಂದು ಕ್ಷಣದಲ್ಲೇ ಆ ಮಾರ್ಗ ಪಿಸುಣತನ ಎಂದು ತೋರುತ್ತಿತ್ತು. ಅವನು ಅವಳೊಡನೆ ಹಳ್ಳಿಯಲ್ಲೇ ಇರಲಿ, ಸ್ವತಂತ್ರವಾಗೇ ಇರಲಿ, ತಂದೆ-ಅಣ್ಣಂದಿರ ಒಪ್ಪಿಗೆ ಪಡೆದೇ ನಂತರ ಮುಂದಿನ ಕೆಲಸ ಮಾಡಬೇಕೆಂದು ನಿರ್ಧರಿಸಿದ್ದ. ಅದಕ್ಕಾಗಿ ಕಟ್ಟಕಡೆಯುವರೆಗೂ ಹೋರಾಡಲು ಸಿದ್ಧವಿದ್ದ. ನಂತರ ತನ್ನ ಮಾರ್ಗ-ಈ ಮನೆಯವರ ಮಾರ್ಗ ಬೇರೆ ಬೇರೆಯಾಗುವಂತಿದ್ದರೆ, ಆಗಲಿ, ಎನ್ನಲೂ ಸಿದ್ಧವಿದ್ದ. ಅಂತೂ ಶಾಂತಳನ್ನೇ ವರಿಸುವ ತೀರ್ಮಾನ ಮಾತ್ರ ಒಂದು ವಜ್ರಸಂಕಲ್ಪವಾಗಿತ್ತು, ಉಗ್ರ ಪ್ರತಿಜ್ಞೆಯಾಗಿತ್ತು.

ತನ್ನ ಜೀವನ ಮತ್ತೊಂದು ರೀತಿಯಲ್ಲಿ ನಡೆದುಹೋಗಲು ಸಿದ್ಧವಾಗುತ್ತಿದ್ದ ಈ ಪರ್ವಕಾಲದಲ್ಲಿ ಅವನ ಮನ-ಹೃದಯಗಳೆರಡೂ ಭೀಕರ ಸಂಶಯಗಳ, ಪ್ರಚಂಡ ಒಳತೋಟಿಗಳ, ರೌದ್ರ-ಭಾವೋದ್ರೇಕದ ಹಿಡಿತಕ್ಕೆ ಸಿಕ್ಕಿ ತಲ್ಲಣಿಸುತ್ತಿದ್ದುವು. ಆ ಯಾತನೆಯ ಮುಷ್ಟಿಯಲ್ಲಿ ಬಂದಿಯಾದಾಗ ಅವನಿಗಿರುತ್ತಿದ್ದ ವಿಮೋಚನೆಯ ಹಾದಿ ಒಂದೇ. ತೋಟದಲ್ಲಿ ಮೈ-ಕೈ ಸೋತುಹೋಗುವಂತೆ ದುಡಿಯುವುದು.

ಉನ್ಮತ್ತನಂತೆ ದೇಹ ಶ್ರಮಿಸಿದರೆ ಮಾತ್ರ ಅವನಿಗೆ ಶಾಂತಿ-ವಿಸ್ಮೃತಿಗಳು ದೊರೆಯುತ್ತಿದ್ದುವು. ಬೆವರಿನಲ್ಲಿ ನೆನೆಸಿದಾಗಲೇ ಅವನಿಗೆ ಜೀವನ ಹಿತಕರವಾಗಿ ಕಾಣುತ್ತಿತ್ತು.

* * *

ಮುಂಗಾರು ಮಳೆ ತುಂಬಾ ಜಾಸ್ತಿಯಾಯಿತು. ಕೆರೆಕಟ್ಟೆಗಳು ತುಂಬಿ ತುಳುಕುತ್ತಿದ್ದುವು. ಅದಕ್ಕಿಂತಲೂ ಮಿಂಚು ಸಿಡಿಲಿನ ಆರ್ಭಟವೇ ಇನ್ನೂ ಅಧಿಕವಾಗಿತ್ತು. ಬಿರುಗಾಳಿಯಿಂದ ರಾಜಣ್ಣನ ತೋಟದಲ್ಲಿ ಹತ್ತು ಹನ್ನೆರಡು ತೆಂಗಿನ ಮರಗಳು ಮುರಿದುಹೋದುವು. ಸಿಡಿಲಿಗೆ ಸಿಕ್ಕಿ ತೋಟದಲ್ಲಿದ್ದ ಪಂಪಿನ ಮನೆ ಸುಟ್ಟುಹೋಯಿತು.

ಶಾಂತ ನಗುನಗುತ್ತಾ ಒಂದು ದಿನ ಬೆಳಿಗ್ಗೆ ಮನೆಯೊಳಕ್ಕೆ ಬಂದಳು. ಆದರೆ ಮನೆಗೆ ಬಂದಕೂಡಲೇ ಆ ನಗು ಮಾಯವಾಯಿತು. ರಾಜಣ್ಣ, ಅವನ ತಾಯಿ ಇಬ್ಬರನ್ನು ಬಿಟ್ಟು ಇನ್ನಾರೂ ಅವಳನ್ನು ಮಾತಾಡಿಸಲಿಲ್ಲ. ತಮ್ಮ ಮಗನ ಹೆಂಡತಿಯಾಗುವವಳು ಒಂಟಿಯಾಗಿ ತಮ್ಮ ಮನೆಗೆ ಬಂದದ್ದು ಅವರಿಗೆ ವಿಚಿತ್ರವಾಗಿ ತೋರಿತು. ಅಸಾಮಾನ್ಯವಾಗಿ ತೋರಿತು. ಹಾಗೆಯೇ ಹುಡುಗಾಟದಂತೆ, ಹಾಸ್ಯಾಸ್ಪದವಾಗಿಯೂ ತೋರಿತು. ಅಂದು ರಾಜಣ್ಣನ ತಂದೆ ಹಳ್ಳಿಯಲ್ಲಿರಲಿಲ್ಲ. ಅವನ ಅತ್ತಿಗೆ ಮತ್ತು ಅಣ್ಣ ಇಬ್ಬರಿಗೂ ಶಾಂತಳ ಆಗಮನ, ತಮ್ಮ ಸ್ವಪ್ರತಿಷ್ಟೆಗೂ, ಹಕ್ಕಿಗೂ ಧಕ್ಕೆ ತಂದಹಾಗೇ ತೋರಿಬಂತು. ಅದಕ್ಕೋಸ್ಕರವೇ ಅವರು ಶಾಂತಳನ್ನು ಹೀನರೀತಿಯಲ್ಲಿಯೇ ಕಂಡರು. ಆದರೆ ರಾಜಣ್ಣನ ಅಣ್ಣನ ಈ ವರ್ತನೆ ಕೆಲವು ನಿಮಿಷಗಳಲ್ಲಿಯೇ ಬದಲಾಯಿಸಿತು. ಸದಾಕಾಲವೂ ಗೆಲುವಿನಿಂದಿರುವ ಶಾಂತಳ ಮುಖದಲ್ಲಿ ಬೇರೆಯವರ ಮನಸ್ಸನ್ನು ಒಂದು ಕ್ಷಣದಲ್ಲಿ ಸಂಪ್ರೀತಿಗೊಳಿಸುವ ಶಕ್ತಿಯಿತ್ತು. ಅವಳ ನಡೆ-ನುಡಿಗಳೂ ಸಹ ಈಗ ಎಂದಿಗಿಂತಲೂ ಆಕರ್ಷಕವಾಗಿದ್ದುವು, ಪರಿಣಾಮಕಾರಿಯಾಗಿ ಇದ್ದುವು.

ಅವಳು ಬಂದ ಕೂಡಲೇ ರಾಜಣ್ಣನ ತಾಯಿಯ ಬೆನ್ನು ಹತ್ತಿದಳು. ಅವರು ಮಾಡುವ ಕೆಲಸಗಳನ್ನು ಕ್ಷಣ ಮಾತ್ರದಲ್ಲಿ ಅರಿತು, ತಾನೂ ಮಾಡಲಾರಂಭಿಸಿದಳು. ಹಿರಿಯ ಸೊಸೆಯನ್ನು ಬಹಳ ಮರ್ಯಾದೆ, ಭಗಿನೀ ಪ್ರೇಮದಿಂದ ಮಾತಾಡಿಸಿದಳು. ಅವಳ ಮನಸ್ಸು ಎಷ್ಟೋ ವಿಷಮಯವಾಗಿದ್ದರೂ ಶಾಂತಳ ಅಮೃತಮಯ ಮಾತುಗಳನ್ನು ಕೇಳಿ, ವರ್ತನೆಯ ಸವಿಯುಂಡು ಒಂದು ಒಣನಗುವನ್ನೂ ಬೀರದೆ, ಒಂದು ಸ್ನೇಹದ ಮಾತನ್ನಾದರೂ ಆಡದೆ ಇರಲು ಅಸಾಧ್ಯವಾಯಿತು. ಶಾಂತ, ಅವಳ ಮಕ್ಕಳಿಗೆ ಬೆಲೂನ್‌ಗಳು, ತಾನು ತಂದಿದ್ದ ಕೇಕ್, ಚಾಕಲೆಟ್, ಮುಂತಾದುವನ್ನೆಲ್ಲಾ ಚಮತ್ಕಾರದಿಂದ ಕೊಟ್ಟು ಅವರನ್ನು ತನ್ನ ಸುತ್ತಲೇ ಇರುವಂತೆ ಮಾಡಿಕೊಂಡಳು. ಅವರಿಗೆ ಸ್ನಾನ ಮಾಡಿಸಿ, ಕ್ರಾಪ್ ಬಾಚಿ, ಶುಭ್ರ

ಬಟ್ಟೆಗಳನ್ನು ಹಾಕಿದಳು. ಬಾಯಿನಲ್ಲಿ ಬೆರಳಿಟ್ಟು ಉಗುರು ಕಡಿಯ ಬೇಡಿರೆಂದು ಆಜ್ಞಾಪಿಸಿದಳು. ಅವಳು ಹೇಳಿದ ಮಾತನ್ನೆಲ್ಲಾ ಅವರು ಆಸಕ್ತಿಯಿಂದ ಕೇಳುತ್ತಿದ್ದರು, ಕೊಟ್ಟ ಕೆಲಸವನ್ನೆಲ್ಲಾ ಕುಣಿದಾಡುತ್ತಾ ಮಾಡುತ್ತಿದ್ದರು. ಹುಡುಗರ ತಾಯಿಗೆ ಅಸೂಯೆ ಉಕ್ಕಿ, ಅವರನ್ನು ಅಡಿಗೆ ಮನೆಗೆ, ಉಗ್ರಾಣಕ್ಕೆ ಕರೆದು ಕಿವಿ ಹಿಂಡಿ, ಒಳಶುಂಠಿ ಕೊಟ್ಟು ಶಾಂತಳ ಬಳಿಗೆ ಹೋಗಬೇಡಿರೆಂದು ಉಪದೇಶ, ಶಿಕ್ಷೆ ಏಕಕಾಲದಲ್ಲೇ ಮಾಡಿದರೂ ಅವರು ಈಗಾಗಲೇ ತಮ್ಮ ಪ್ರೀತಿಯ 'ಚಿಕ್ಕಿ' ಆಗಿದ್ದ ಶಾಂತಳ ಸಹವಾಸವನ್ನು ತ್ಯಜಿಸಲಿಲ್ಲ; ಇನ್ನೂ ಅಧಿಕ ಗೊಳಿಸಿದರು. ತಾಯಿ ಕರೆದರೂ ಅವಳ ಬಳಿಗೆ ಹೋಗುತ್ತಿರಲಿಲ್ಲ. ಆಗ ಶಾಂತಳೇ ಅವರಿಗೆ ಬುದ್ಧಿ ಹೇಳಿ ಜೊತೆ ಬಿಟ್ಟುಬಿಡುವುದಾಗಿ ಹೆದರಿಸಿ, ತಾಯಿಯ ಬಳಿಗೆ ಹೋಗುವಂತೆ ಪ್ರೇರೇಪಿಸಬೇಕಾಗುತ್ತಿತ್ತು.

ಹೀಗೆ ಒಂದಾದ ಮೇಲೆ ಇನ್ನೊಂದು ಕಾರ್ಯದಲ್ಲಿ ಭಾಗವಹಿಸಿ ಶಾಂತ ಜಯಭೇರಿಯನ್ನು ಹೊಡೆಯುತ್ತಾ ಮುಂದೆ ಸಾಗಿದಳು; ಮನೆಯಲ್ಲಿ ಬೇರು ಬಿಡತೊಡಗಿದಳು. ಅದನ್ನು ಯಾರಿಂದಲೂ ತಡೆ ಯಲು ಆಗಲಿಲ್ಲ.

ಈ ವ್ಯವಹಾರ ಚತುರತೆ ರಾಜಣ್ಣನನ್ನೇ ಬೆರಗುಗೊಳಿಸಿತು. ಅವನು ಇಂದು, ಇಷ್ಟುದಿನದ ಶಾಂತಳನ್ನೇ ಇನ್ನೊಂದು ರೂಪದಲ್ಲಿ ಕಾಣುತ್ತಿದ್ದ. ಅವನ ಅಣ್ಣನೂ ತನ್ನ ಹಳೆಯ ವಿರೋಧವನ್ನು ಒಂದೆರಡು ಗಂಟೆಗಳಲ್ಲೇ ಸಂಪೂರ್ಣವಾಗಿ ತ್ಯಜಿಸಿದ. ಈ ಮಂತ್ರ ಹಾಕಿದ ಶಾಂತಳನ್ನು ಕಂಡು ರಾಜಣ್ಣನ ತಾಯಿಗೆ ಅಪಾರ ಸಂತೋಷ ವಾಯಿತು.........ಆದರೆ ಮನೆಯ ಹಿರಿಯ ಸೊಸೆಯ ಎದೆಯಲ್ಲಿ ಭಯಂಕರ ಅಸೂಯೆ, ದ್ವೇಷ, ಪ್ರತೀಕಾರಗಳು ಹೆಡೆಯೆತ್ತಿದುವು. ಯಾವ ಕೆಲಸವನ್ನೂ ಮಾಡದೆ, ತಲೆನೋವು ಎಂದು ರಾಜಣ್ಣನ ತಂದೆಯ ಮನೆಯ 'ಕೋಪ-ಗೃಹ'ವಾಗಿದ್ದ ಉಗ್ರಾಣದಲ್ಲಿ ಮಲಗಿ ಬಿಟ್ಟಳು.

ಅವಳ ಬಳಿ ಸುಳಿದ ಮಕ್ಕಳಿಗೆಲ್ಲಾ ಮಾರಮ್ಮನಂತೆ ಹೊಡೆದು ಕಳಿಸಿದಳು. ವಿಚಾರಿಸಲು ಬಂದ ಗಂಡನ ಮೇಲೆಯೂ ರೇಗಿಬಿದ್ದಳು.

ರಾಜಣ್ಣನ ತಾಯಿ ಶಾಂತಳನ್ನು ಕರೆದು, 'ಅದನ್ನೆಲ್ಲಾ ತಲೆಗೆ ಹಚ್ಚಿಕೊಳ್ಳಬೇಡ....ಬಾಮ್ಮಾ—' ಎಂದು ತಮ್ಮೊಡನೆಯೇ ಅಡಿಗೆ ಮನೆಗೆ ಕರೆದೊಯ್ದರು. ಅವರ ಜೊತೆಯಲ್ಲೇ ಅಡಿಗೆ ಮಾಡುತ್ತಿರಬೇಕಾದರೆ ತಮ್ಮ ಆಸೆ-ಸಂಶಯಗಳನ್ನೆಲ್ಲಾ ಶಾಂತಳಿಗೆ ಹೇಳಿದರು. "ಅವರು ನಿನ್ನೆಯೇ ಪೇಟೆಗೆ ಹೋದರು ಕೋರ್ಟಿನ ಕೆಲಸ ಮುಗಿಸಿಕೊಂಡು ಹಿಂತಿರುಗಿ ಬಂದಮೇಲೆ ಏನಾಗುತ್ತೋ ನೋಡಬೇಕು.. .....ನಮ್ಮ ಪುಟ್ಟಣ್ಣನ ಹಾಗೇ ಮನಸ್ಸು ಬದಲಾಯಿಸಿದರೆ ಬಹಳ ಒಳ್ಳೆಯದು. ಇಲ್ಲದಿದ್ದರೆ ಸ್ವಲ್ಪ ಕಷ್ಟ............ನೋಡೋಣ ದೇವರು ಹೇಗೆ ಮಾಡ್ತಾನೋ...." ಎಂದರು. ಶಾಂತಳೂ ಬಹಳ ಕಾತುರದಿಂದ ರಾಜಣ್ಣನ ತಂದೆಯನ್ನು ಎದುರುನೋಡಲಾರಂಭಿಸಿದಳು.

ಆಗಲೇ ಹತ್ತಾರು ಹೆಂಗಸರು ರಾಜಣ್ಣನ ಮನೆಯೊಳಕ್ಕೆ ಮೆಲ್ಲ ಮೆಲ್ಲನೆ ಬಂದು, ಕೆಲವರು ಶಾಂತಳನ್ನು ಆಪಾದಮಸ್ತಕ ನೋಡುತ್ತಿದ್ದರು. ರಾಜಣ್ಣ ಬೆಂಗಳೂರಿಂದ ಯಾರೋ 'ಇಂಗ್ಲೀಷ್ ಹುಡುಗಿ'ಯನ್ನು ಕರೆತಂದಿರುವನೆಂದು ಭಾವಿಸಿದ್ದ ಅವರೆಲ್ಲರಿಗೂ, ಅವರಂತೆಯೆ ಸೀರೆಯುಟ್ಟು, ಜಡೆಹಾಕಿದ್ದ ಶಾಂತಳನ್ನು ಕಂಡು ವಿಸ್ಮಯವಾಯಿತು. ಕೆಲವರು ಕೂಡಲೇ ಹಿರಿಯ ಸೊಸೆಯ ಬಳಿಗೆ ಧಾವಿಸಿ, ಅವಳಿಂದ ನಿಷ್ಕರ್ಶೆಯಾಗಿ ಸಮಾಚಾರ ಗ್ರಹಿಸತೊಡಗಿದರು. ಒಬ್ಬಿಬ್ಬರು ಶಾಂತಳಿಗೆ ಕನ್ನಡ ಬರುವುದೇನೋ ಎಂದು ಪರೀಕ್ಷೆಮಾಡಿ ಸಂತೃಪ್ತರಾದರು. ಹೀಗೆ ಬಂದಿದ್ದವರೆಲ್ಲರೂ ಕುತೂಹಲ, ಸಂಶಯ, ವಿರೋಧ ಮುಂತಾದ ಪ್ರವೃತ್ತಿಗಳನ್ನು ಕೆರಳಿಸಿಕೊಂಡು ಬಂದಿದ್ದರಿಂದ ಅವರ ಎದುರಿಗೆ ಒಬ್ಬ ಆದರ್ಶ ಸೊಸೆಯೇ ನಿಂತಿದ್ದರೂ ಅನೇಕರಿಗೆ ಶಾಂತ ಒಬ್ಬ ವಿಚಿತ್ರ ಸ್ತ್ರೀಯಂತೆ ಕಂಡುಬಂದಳು. .... ಕೆಲವರು ಮಾತ್ರ ಶಾಂತಳ ನಿಜಸ್ವಭಾವದ ಪರಿಚಯ ಮಾಡಿಕೊಂಡು, ಅವಳನ್ನು ಮೆಚ್ಚಿ, ಅಂತಹ ವಿದ್ಯಾವತಿಯನ್ನು ತಮ್ಮ ನಡುವೆ ಕರೆತಂದುದಕ್ಕಾಗಿ ರಾಜಣ್ಣನನ್ನೂ ಮೆಚ್ಚಿ, ತಮ್ಮ ಮನೆಗಳಿಗೆ ಹಿಂತಿರುಗಿದರು. ಆದರೆ ತಮ್ಮ ಜಂಬ, ಅಹಂಕಾರ, ಅಸಹನೆ, ಕೀಳುಬುದ್ಧಿ, ಒಂದು ಅಡ್ಡಿಕೆ, ಒಂದು ಚೈನು, ನಾಲ್ಕು ಬಳೆಗಳೇ ಜೀವನ ಸರ್ವಸ್ವ ಎಂದು ತಿಳಿದಿದ್ದ

ಅನೇಕ ಮೂಢೆಯರು ತಮ್ಮ ತಮ್ಮಲ್ಲೇ ಬಾಯಿಗೆ ಬಂದಂತೆ ಆಡಿ ಕೊಂಡರು.

“ಏನು ದೂರು ಬಿದ್ದಿತೋ....ಇಷ್ಟೊಂದು ರಂಗು-ರಂಗಾಗಿ ರೋಳು ಯಾವ ಗುಂಡಿಗೆ ಬಿದ್ದಿದ್ದಳೋ. ಅದಕ್ಕೇ ಹೀಗೆ ಸಾಯಿ ಇದ್ದಂಗೆ ಇದ್ದಾಳೆ....” ಎಂದು ಒಬ್ಬ ಸೀತೆ ಹೇಳಿದಳು. ಇನ್ನೊಬ್ಬ ಸಾವಿತ್ರಿ “ಇವಳೇನಾ ಆ ವಯ್ಯಾರಿ–ಆ ರಾಜಣ್ಣನಿಗೆ ‘ವಶೀಕರಣ-ಮಂತ್ರ’ ಆಕಿಸಿರೋಳು.... ಅಗೋ ನೋಡು! ಅವಳ ಸೊಂಟದಲ್ಲಿ ಸಿಕ್ಕಿಸಿಕೊಂಡಿರೋ ಚೌಕದಲ್ಲೇ ಆ ‘ತಾಯತ’ ಇಟ್ಟುಕೊಂಡವಳೆ!” ಎಂದಳು- ಮತ್ತೊಬ್ಬ ಗೃಹಲಕ್ಷ್ಮಿ “ಅವಳು ಮನೆಗೆ ಕಾಲಿಡಲಿ, ಅವತ್ತೇ ಮನೆಯೆಲ್ಲಾ ಕೆಟ್ಟು, ನಾಶನ ಎದ್ದೊಗತ್ತೆತೆ....” ಎಂದು ಭವಿಷ್ಯ ನುಡಿದಳು. ಇವರೆಲ್ಲರನ್ನೂ ಮೀರಿಸಿದ ಉದ್ದಾಮ ಸಾಧ್ವಿ ಇನ್ನೊಬ್ಬಳು–ರಾಜಣ್ಣನ ಅಣ್ಣನ ಉಪ - ಪತ್ನಿಯಾಗಲು ಮಿಸು ಕಾಡುತ್ತಿದ್ದವಳು—“ಅವಳು ನನ್ನ ಮನೆಗೇನಾದರೂ ಕಾಲಿಡಲಿ; ಮೂಲೇಲಿರೋ ಬರಲಿನಲ್ಲೇ ಜುಟ್ಟು ಹಿಡಿದು ರುಬ್ಬಳಿಸಿಬಿಡ್ತೀನಿ.... ಆ ಮನೇಲಿ ನಾನು ಹಿರಿಯಸೊಸೆ ಆಗಬೇಕಾಗಿತ್ತು....ಆಗ ತೋರಿಸು ತ್ತಿದ್ದೆ” ಎಂದು ಘೋಷಿಸಿದಳು.

ಹಳ್ಳಿಯ ಮೂಢೆಯರ ಉಸಿರು ಹೀಗೆ ವ್ಯರ್ಥವಾಗುತ್ತಿದ್ದರೆ, ಅವರ ಮೂಗಿಗೆ ರಾಜಣ್ಣನ ಅಡಿಗೆ ಮನೆಯಿಂದ ‘ಈರುಳ್ಳಿ-ಬೇಳೆ-ಹುಳಿ’ಯ ಘಮ - ಘಮ ವಾಸನೆ ಬರತೊಡಗಿತು. ಶಾಂತ ತಾನೇ ಸಾರು ಮಾಡಿ, ಒಗ್ಗರಣೆ ಹಾಕಿ; ಅದನ್ನು ಒಲೆಯಮೇಲೆ ಕುದಿಸು ತ್ತಿದ್ದಳು! ಊಟ ಮಾಡಿದಾಗ ರಾಜಣ್ಣನ ಅಣ್ಣ ನಾಲಿಗೆ ಚಪ್ಪರಿಸಿದ.

ರಾತ್ರಿ ಹೆಂಡತಿಯೊಂದಿಗೆ ಮಲಗಿದಾಗ ಅವಳಿಗೆ; “ನೋಡು; ಆ ಕಾಲೇಜು ಹುಡುಗಿ ಮಾಡುವ ಹಾಗೆ ಸಾರು ಮಾಡಲು ನಿನ್ನ ಹಣೆಯಲ್ಲೇನಾದರೂ ಬರೆದಿದೆಯೇ?....ಹೈಸ್ಕೂಲು - ಮುಕ್ಕ!.... ಕಾಲ ಕೆಳಗೆ ತೂರು.” ಎಂದು ಹೇಳಿ ಅವಳನ್ನು ಇನ್ನೂ ಕೆರಳಿಸಿದ. ಅವಳು, “ಛೀ! ನಿಮಗೇನಾದರೂ ಒಂದಿಷ್ಟು ಮಾನ-ಮರ್ಯಾದೆ-

ಛಲ ಇದ್ದರೆ ಹೀಗೆಲ್ಲಾ ಮಾತಾಡುತ್ತಿದ್ದಿರಾ?.... ಈಗೇಕೆ; ನಾವ ಬರಲಿ" ಎಂದು ಅವನ ಕಡೆಗೆ ಬೆನ್ನು ತಿರುಗಿಸಿದಳು.

ಆ ರಾತ್ರಿ ರಾಜಣ್ಣನ ತಂದೆ ಮನೆಗೆ ಹಿಂತಿರುಗಲಿಲ್ಲ. ಕೋರ್ಟಿನ ತೀರ್ಪು ಕೇಳಿ ಬರಲು ಅಲ್ಲೇ ಉಳಿದಿದ್ದರು. ಶ್ಯಾನ ಭೋಗ ನರಹರಿಶಾಸ್ತ್ರಿ ಅವರ ಮೇಲೆ ಹೇರಿದ್ದ ತಕರಾರು ಬಗೆಹರಿಸಿ ಕೊಳ್ಳುವವರೆಗೂ ಅವರಿಗೆ ಮನಶ್ಶಾಂತಿ ಇರಲಿಲ್ಲ.

ಅವರ ಪತ್ನಿಯ ಸಂಗಡ ಶಾಂತ ಒಂದು ಕೊಠಡಿಯಲ್ಲಿ ಮಲ ಗಿದಳು. ರಾಜಣ್ಣ ಬೇರೆಡೆಯಲ್ಲಿ ಮಲಗಿ, ಶಾಂತಳ ವ್ಯವಹಾರ ಕುಶಲತೆಯನ್ನೂ, ಅವಳು ಮನೆಯಲ್ಲೆಲ್ಲಾ ಸ್ಥಾಪಿಸಿದ್ದ ತನ್ನ ರಮ ಣೀಯ ಸ್ವಾಮ್ಯವನ್ನೂ ಕಂಡು ಆನಂದ ಪಡುತ್ತಿದ್ದ. ತಂದೆಯ ಆಗಮನವನ್ನೂ, ಅತ್ತಿಗೆಯ ಕುಸಂಸ್ಕೃತ ಪ್ರತಿ-ಕ್ರಿಯೆಯನ್ನೂ ತೀವ್ರವಾಗಿ ಆಲೋಚಿಸುತ್ತಿದ್ದ.

ರಾತ್ರಿಯೆಲ್ಲಾ ಯೋಚಿಸಿದ. ಅವನ ಯೋಚನೆಯ ಜೊತೆಗೇ ರಾತ್ರಿಯೆಲ್ಲಾ ಗುಡುಗು-ಸಿಡಿಲಿನ ಆರ್ಭಟದೊಡನೆ ಧಾರಾಕಾರವಾದ ಹುಚ್ಚುಮಳೆ.... ಒಂದು ಬಾರಿ ಸಿಡಿಲು ಮನೆಯ ಸಮೀಪದಲ್ಲೇ ಹೊಡೆಯಿತು. ಆಗ ಮಗ್ಗುಲಾಗಿ ಮಲಗಿದ್ದ ಶಾಂತ ಮೇಲೆ ಹಾರಿ ನೆಟ್ಟಗೆ ಮಲಗಿದಳು! ಅಷ್ಟು ಭಯಂಕರ ಸಿಡಿಲು ಅದು!! ಅದು ಹೊಡೆದು ಐದಾರು ನಿಮಿಷಗಳಾದರೂ ಅವಳ ಕೈ-ಕಾಲುಗಳು ಅದುರುತ್ತಿದ್ದುವು.

* * *

ಮಾರನೆಯ ಮಧ್ಯಾಹ್ನ ಬಿಸಿಲು ಝಳ-ಝಳಿಸುತ್ತಿರುವಾಗ ರಾಜಣ್ಣನ ತಂದೆ ಪೇಟೆಯಿಂದ ಹಳ್ಳಿಗೆ ನಡೆದು ಬಂದರು. ಬೆವರಿನಲ್ಲಿ ಅವರ ಬಟ್ಟೆಗಳೆಲ್ಲವೂ ತೊಯ್ದುಹೋಗಿದ್ದುವು. ಅವರ ಮುಖ ಸಪ್ಪೆಯಾಗಿತ್ತು. ಕೋರ್ಟಿನಲ್ಲಿ ಅವರ ಕೇಸು ಸೋತಿದ್ದಿತು. ಐದು ಸಾವಿರ ರೂಪಾಯಿ ಬೆಲೆಬಾಳುವ ಒಂದು ತೋಟ ಕೈಬಿಟ್ಟು ಹೋಗಿ ದ್ದುದಲ್ಲದೆ ಎಂಟುನೂರು ರೂಪಾಯಿ ಕೋರ್ಟು ವೆಚ್ಚವನ್ನೂ ಶ್ಯಾನುಭೋಗ ನರಹರಿಶಾಸ್ತ್ರಿಗೆ ಕಟ್ಟಿಕೊಡಬೇಕಾಗಿತ್ತು.

ಮನೆಗೆ ಅವರು ಆ ಅವಸ್ಥೆಯಲ್ಲಿ ಬಂದಿದ್ದನ್ನು ಕಂಡು ರಾಜಣ್ಣ, ಭಯ, ಸಂಶಯಗಳಿಂದ ಅಳುಕಿದ. ಅವನ ಅತ್ತಿಗೆ ತುಂಬಾ ಸಂತೋಷ ಗೊಂಡಳು.

ಕೂಡಲೇ ಉಗ್ರಾಣ ಸೇರಿ, ಕದತೆರದು ಅಳತೊಡಗಿದಳು. ಅದನ್ನು ಕೇಳಿ ಅವರು ಅಸಮಾಧಾನ-ಕೋಪ, ಬೇಸರಗಳಿಂದ,

" ಏನೇ ! ಏನೇ ಇದು ಗೋಳು ? ಮನೆಗೆ ಸತ್ತು-ಸುಣ್ಣವಾಗಿ ಬಂದರೂ ಒಂದು ಚೂರು ನೆಮ್ಮದಿ ಬೇಡ್ವೇ? ಏನು ಅವಳ ಗೋಳು?" ಎಂದು ಹೆಂಡತಿಯನ್ನು ಕೇಳಿದರು. ಅವರಿಗೆ ಹಿರಿಯ ಸೊಸೆಯ ವರ್ತನೆಯನ್ನು ಕಂಡು ಮನೆಯಲ್ಲಿ ಏನೋ ಸಮಾಚಾರ ನಡೆದಿದೆ ಎಂದು ಅನುಮಾನವಾಯಿತು. ಅದಕ್ಕೆ ಸರಿಯಾಗಿ ಅವಳ ಅಳು ಕೂಡ ಜಾಸ್ತಿಯಾಯಿತು,

" ಮನೇಲ್ಲಿ, ಹೇಳೋರು-ಕೇಳೋರು ಯಾರೂ ಇಲ್ಲಪ್ಪಾ ! ಸಿಕ್ಕಿ-ಸಿಕ್ಕಿದ ಹಾಳು ಜಾತಿಯವರನ್ನೆಲ್ಲಾ ಅಡಿಗೆ ಮನೆಗೆ ಸೇರಿಸಿ ಬಿಟ್ಟಿದಾರೇ ! ಮನೆ ಸೊಸೇನೇ ಹೊರಕ್ಕೆ ತಳ್ಳಿದಾರೇ ! ಇಂಥ ಮನೆಗೆ ನಾನು ಯಾವ ಪಾಪಮಾಡಿ ಬಂದೆ ಶಿವನೇ !!" ಎಂದು ಕೂಗುತ್ತಿದ್ದಳು.

ರಾಜಣ್ಣ-ಶಾಂತ ತುಟಿಕಚ್ಚಿ ಇದನ್ನೆಲ್ಲಾ ಕೇಳುತ್ತಿದ್ದರು. ರಾಜಣ್ಣನ ತಂದೆಗೆ ಶಾಂತಳನ್ನು ನೋಡಿದ ಕೂಡಲೇ ಎಲ್ಲಾ ಅರ್ಥ ವಾಯಿತು. ಹಲ್ಲು ಕಡಿಯುತ್ತಾ ರಾಜಣ್ಣನಿದ್ದೆಡೆಗೆ ಧಾವಿಸಿ ಬಂದರು,

" ಏನೋ ಇದು ; ಮನೇಲಿ ನಿನ್ನ ಹೇಳೋರು-ಕೇಳೋರು ಯಾರೂ ಇಲ್ಲವೇನೋ ? ನಿನ್ನದೇ ದರ್ಬಾರ್ ಆಗ್ಹೋಗಿದೆಯಲ್ಲಾ ! ಏನಿದು ? ಯಾರು ಆ ಹುಡುಗಿ ? ಯಾರನ್ನು ಕೇಳಿ ಕರೆತಂದೆ ? ಹು ; ಬೊಗಳು !" ಎಂದರು.

ರಾಜಣ್ಣನಿಗೆ ಇಷ್ಟು ಕ್ರೋಧೋನ್ಮತ್ತರಾದವರಿಗೆ ಏನು ಉತ್ತರ ಹೇಳಬೇಕೋ ತೋಚಲಿಲ್ಲ. ಆದರೂ ಅವರ ಕೆರಳಿದ ಮೂರ್ತಿ ಯನ್ನೇ ತಾಳ್ಮೆ-ಆತ್ಮವಿಶ್ವಾಸದಿಂದ ದಿಟ್ಟಿಸಿ ನೋಡಿದ. ವಿನಯ ಪೂರ್ಣ, ಹಾಗೂ ಸ್ಥಿರ ಕಂಠದಲ್ಲಿ ಹೇಳಿದ,

"ಅವಳು ಮುಂದೆ ನನ್ನ ಹೆಂಡತಿಯಾಗುವ ಹುಡುಗಿ. ಅದಕ್ಕೇ ಈಗ ಅವಳನ್ನು ನಿಮಗೆ ತೋರಿಸಿ; ನಿಮ್ಮ ಒಪ್ಪಿಗೆ-ಆಶೀರ್ವಾದ ಪಡೆಯಲು ಇಲ್ಲಿಗೆ ಕರೆದುಕೊಂಡು ಬಂದಿದ್ದೇನೆ" ಎಂದ.

ಅವನ ತಂದೆ ಅವನನ್ನೇ ಅಸಮ್ಮತಿಯಿಂದ ನುಡುನವರಂತೆ ನೋಡುತ್ತಾ ಕೇಳಿದರು,

"ಅವಳು ಯಾವ ಜಾತಿ? ಯಾರ ಮಗಳು? ಅವಳ ತಂದೆ ತಾಯಿಗಳೆಲ್ಲಿ? ಅವರೇನು ಮಾಡ್ತಾರೆ?"

"ಇದೆಲ್ಲಾ ನಿಮಗೆ ಹೇಳ್ತೀನೆ. ಎಲ್ಲಾ ಹೇಳಬೇಕೆಂದೇ ಅವಳನ್ನು ಇಲ್ಲಿಗೆ ಕರೆತಂದಿರೋದು."

"ನೀನೇನು ಹೇಳಬೇಕಾಗಿಲ್ಲ! ನೀನು ಅವಳನ್ನು ಇಲ್ಲಿಗೆ ಯಾರನ್ನು ಕೇಳಿ ಕರೆತಂದೆ? ಅವಳನ್ನು ಕರೆದುಕೊಂಡು ಬಾ ಎಂದು ನಿನಗ್ಯಾರು ಹೇಳಿದ್ದರು? ನಮ್ಮನ್ನೇನಾದರೂ ಕೇಳಿದ್ದೀಯಾ? ನಾವೆಲ್ಲಾ ಸತ್ತುಹೋಗಿದ್ವೇ? ಅವಳನ್ನು ಮನೆಯೊಳಕ್ಕೆ ಕರೆ ತರೋಕೆ ನಿನಗೆಷ್ಟೋ....ಧೈರ್ಯ! ಈ ಮನೆಯಲ್ಲೇ ನೀನಿರಬೇಕು, ಮುಂದಕ್ಕೂ ನನ್ನ ಮಗನಾಗಿ ಉಳಿಯಬೇಕು ಎಂದು ನಿನಗೆ ಇಷ್ಟ ಇದ್ದರೆ; ಅವಳನ್ನು ಅವಳ ಮನೆಗೆ ಕಳಿಸಿಬಿಡು, ನಾನು ಒಪ್ಪಿದ ಹೆಣ್ಣನ್ನು ಮದುವೆ ಆಗು. ಅವಳೂ ನಮ್ಮ ಜಾತಿಯವಳೇ. ಇವಳ ಹಾಗೇ 'ಬೀಯೇ'ನೂ ಓದಿದಾಳೆ. ಇಬ್ಬರೂ ಬೆಂಗಳೂರಲ್ಲೇ 'ಧಿಮಾಕ್' ಮಾಡಿಕೊಂಡು ಇರ್ರಿ. ನಾನು ಸಾಯೋವರೆಗೂ ನಿಮಗೆ ಒಂದು ಚೂರು ಕೊರತೆ ಮಾಡೋಲ್ಲ. ಇವಳನ್ನು ಇವತ್ತೇ ಮನೆಯಿಂದ ಕರಕೊಂಡ್ಹೋಗು. ಅವಳ ಅಪ್ಪ-ಅಮ್ಮನ ಮನೆಗೆ ಮುಟ್ಟಿಸಿ ಬಾ....ಹು; ನಡೀ."

"....ಇಲ್ಲ ಅಪ್ಪ....ನಾನು ಇವಳನ್ನೇ ಮದುವೆ ಆಗೋದು. ಈ ಮನೆಯಲ್ಲಿದ್ದರೆ ಇವಳ ಜೊತೆಯಲ್ಲೇ ಇರಬೇಕು. ಇನ್ನ್ಯಾವ ಹೆಣ್ಣೂ ನನಗೆ ಬೇಡ!"

"ಏಕೋ....ಬೇಡ! ಇವಳಿಗೇ ಬೇರೆ ಏನಾದರೂ ಇದೆಯೋ ಜಾತಿಯವರ ಹತ್ರ ಇಲ್ಲದಿದ್ದು! ನೀನು ತಿರುಗ ಇನ್ನೊಂದು ಮಾತಾಡ

ಬೇಡ !....ಇವಳನ್ನು ಕರಕೊಂಡ್ಹೋಗಿಬಿಡು."

"ಇಲ್ಲ...ನಾನಿವಳನ್ನು ಕರೆದುಕೊಂಡು ಹೋಗೋಲ್ಲ !.... ನಾನು ಇವಳನ್ನೇ ಪ್ರೇಮಿಸಿರೋದು. ಪ್ರೇಮಿಸಿದವಳನ್ನೇ ಮದುವೆ ಯಾಗೋದು ! ಅದಕ್ಕೆ ನೀವು ಒಪ್ಪಿಗೆ ಕೊಡಲೇಬೇಕು....ನನ್ನ ಸುಖ-ಉದ್ಧಾರ ನಿಮಗೆ ಬೇಕಾಗಿದ್ದರೆ ನೀವು ಈ ಮದುವೆಗೆ ಒಪ್ಪಿಗೆ ಕೊಡಲೇಬೇಕು. ಹಾಗೆ ಕೊಡದಿದ್ದರೆ....ನನ್ನನ್ನು ನೀವೇ ಕೈಯಾರೆ ಕೊಂದ ಹಾಗೆ !" ಎಂದು ಉದ್ವಿಗ್ನತೆ-ಸ್ಥೈರ್ಯದಿಂದ ನುಡಿದ. ಅವನ ತಂದೆ ಅವನನ್ನೇ ನೋಡಿ ಒಮ್ಮೆ ನಿಟ್ಟುಸಿರಿಟ್ಟು, ಹೇಳ ಲಾರಂಭಿಸಿದರು.

"ಅದೆಲ್ಲಾ ಹೇಗೋ....ಸಾಧ್ಯ ? ಗುರುಗಳು ಹಿರಿಯರು, ಅಪ್ಪ-ಅಮ್ಮ, ಜಾತಿ, ಕುಲ....ಯಾರೂ ಇಲ್ಲದೆ ಇವಳನ್ನು ಹೆಂಗೋ ಮದುವೆ ಆಗ್ತೀಯ ? ಈ ಜಾತೀಲಿ ನಿನ್ನ ಇಟ್ಟುಕೊತಾರೇನೋ ? ನಿಮ್ಮಪ್ಪ, ನಿಮ್ಮ ತಾತ ಮಾಡದಿರೋ ಕೆಲಸ ಮಾಡೋಕೆ ಹೊಗ್ತಿದ್ದೀ ಯಲ್ಲೋ....ಇಡೀ ವಂಶಾನೇ ಹಾಳುಮಾಡ್ತೀಯಲ್ಲೋ ?"

"ಹಾಗೆಲ್ಲಾ ಆಗೋದಿಲ್ಲಪ್ಪಾ. ನೀವು ಸುಮ್ಮನೆ ಅವನ್ನೆಲ್ಲಾ ಕಲ್ಪಿಸಿಕೊಳ್ತಿದೀರಿ. ನೀವೆಲ್ಲರೂ ಒಪ್ಪಿ, ನಮ್ಮ ಮದುವೆ ನಡೆಯಲಿ ಎಂದೇ ಶಾಂತ ಇಲ್ಲಿಗೆ ಬಂದಿರೋದು" ಎಂದ. ಅದನ್ನು ಕೇಳಿ ಅವರ ಕೋಪ ಮತ್ತೆ ಕೆರಳಿತು. ಅವರು ಉಬ್ಬಿ ಬಂದ ಗಂಟಲಲ್ಲಿ ಘರ್ಜಿಸಿದರು,

"ನಾನು ಬದುಕಿರೋವರೆಗೂ ಈ ಮದುವೆ ನಡೆಯಲು ಸಾಧ್ಯ ವಿಲ್ಲ ! ಇದೇ ಹಠ ಹಿಡಿಯೋದಾಗಿದ್ದರೆ ನಿನ್ನನ್ನು ಮನೆಯಲ್ಲೂ ಇಟ್ಟ್ಕೊಳ್ಳೋದಿಲ್ಲ ನನ್ನ ಮಗನಾಗಿದ್ದರೆ ನನ್ನ ಮಾತಿಗೆ ನೀನು ಬೆಲೆ ಕೊಡಬೇಕು ! ಇಲ್ಲದಿದ್ದರೆ ತೆಪ್ಪಗೆ ಮನೆ ಬಿಟ್ಟು ಹೋಗಿಬಿಡು ಯಾವೋಳ್ನಾದ್ರೂ ಕಟ್ಟಿಕೋ, ಎಲ್ಲಾದ್ರೂ ಹಾಳಾಗ್ಹೋಗು, ಏನು ? ಇವಳನ್ನು ಮನೆಯಿಂದ ಹೊರಕ್ಕೆ ಕಳಿಸ್ತೀಯೋ ? ಇಲ್ಲ, ಜೊತೇಲೇ ಇಬ್ಬರೂ ಹೊರಟೋಗ್ತೀರೋ ?"

"ನೀವು ವಿಚಾರ ಮಾಡಿ ಮಾತಾಡ್ತಿಲ್ಲ ಅಪ್ಪ. ನಾನು ಮನೆ

ಬಿಟ್ಟು ಹೋಗಬೇಕು ಎಂದು ನಿಮ್ಮ ಇಷ್ಟ ಇದ್ದರೆ ಸಂತೋಷವಾಗಿ ಹೊರಟುಹೋಗ್ತೇನೆ. ನಾನು ನಿಮ್ಮ ಮಗ ಅಲ್ಲ ಎಂದು ನೀವು ಹೇಳಿದರೂ ನಾನು ಹಾಗೆ ಎಂದಿಗೂ ಹೇಳೋದಿಲ್ಲ. ಎಂದಿದ್ದರೂ ನೀವು ನನ್ನ ತಂದೆಯೇ! ನಾನು ನಿಮ್ಮ ಮಗನೇ! ನನ್ನನ್ನು ಹುಟ್ಟಿಸಿ, ಬೆಳಸಿ, ವಿದ್ಯಾ-ಬುದ್ಧಿ ಕಲಿಸಿದವರೂ ನೀವೇ! ಇಂದು ನನ್ನನ್ನು ಕತ್ತು ಹಿಡಿದು ಮನೆಯಿಂದ ಹೊರಕ್ಕೆ ನೂಕುತ್ತಿರುವವರೂ ನೀವೇ! ನಾನು ಒಬ್ಬ ಬ್ರಾಹ್ಮಣ ಹುಡುಗಿಯನ್ನು ಮದುವೆ ಆದರೆ, ನಿಮಗಾಗುವ ಪ್ರಮಾದವಾದರೂ ಏನು?"

"ಪ್ರಮಾದವೂ ಇಲ್ಲ, ಏನೂ ಇಲ್ಲ! ನೀನು ಆ ಕಳ್ಳ ಬ್ರಾಮ್ರ ಜಾತಿ ಹುಡುಗಿ ಬಿಟ್ಟು, ಮನೆಯೊಳಗೆ ಇರೋ ಹಾಗಿದ್ರೆ ಇರು, ಇಲ್ಲದಿದ್ದರೆ ಈಗಲೇ ತೊಲಗಿ ಹೋಗು! ನಿನ್ನನ್ನು ಕಷ್ಟಪಟ್ಟು ಸಾಕಿ ವಿದ್ಯಾ-ಬುದ್ಧಿ ಕಲಿಸಿ, ಕುಣಿದಂತೆಲ್ಲಾ ಕುಣಿಯಲು ಬಿಟ್ಟರೆ....ಕಡೆಗೂ ತೋರಿಸಿದಲ್ಲಾ ನಿನ್ನ 'ನಮ್ಮಕ್-ಹರಾಮ್' ಬುದ್ಧೀನ! ಹಾಳಾಗಿ ಹೋಗು! ಆ ಬ್ರಾಮ್ರನ್ನ ನಂಬಿ ಇನತ್ತು ನಾನು ತೋಟ ಕಳಕೊಂಡೆ. ನೀನು ಜೀವಾನೇ ಕಳಕೋಬೇಕೇನೋ! ಹೋಗು, ಎಲ್ಲಾರ ಹೋಗು!"

"ಅಪ್ಪಾ! ನಿಮ್ಮ ಮನಸ್ಸೆಲ್ಲಾ ಬ್ರಾಹ್ಮಣರನ್ನು ಕಂಡು ದ್ವೇಷ ದಿಂದ ಕೂಡಿದೆ. ಅದಕ್ಕೆ ನೀವು ಕಾರಣರಲ್ಲ ಇಂದಿನ ಸಮಾಜ ಕಾರಣ!"

"ನೀನು ನನಗೆ ಅವೆಲ್ಲಾ ಹೇಳಬೇಡ, ಹೋಗೋ. ಯಾವು ದಾದ್ರೂ ಕಾರಣ ಆಗ್ಲೀ. ನೀನು, ನನ್ನ ಅಪ್ಪ ಎಂದೂ ಕರೀಬೇಡ. ನೀನು ನನ್ನ ಮಗನೂ ಅಲ್ಲ!" ಎಂದುಬಿಟ್ಟರು.

ರಾಜಣ್ಣನ ಮುಖ ಕೆಂಪಗಾಯಿತು. ದೃಷ್ಟಿ ತೀಕ್ಷ್ಣವಾಯಿತು. ಅವುಡು ಕಚ್ಚಿದುವು.

ತಾಯಿಯ ಕಡೆಗೆ ನೋಡಿದ. ಅವರ ಕಣ್ಣಲ್ಲಿ ನೀರು ಹನಿ ಯುತ್ತಿದ್ದುವು. ನೇರವಾಗಿ ಅವರ ಬಳಿಗೆ ಹೋಗಿ ಕಾಲು ಮುಟ್ಟಿ ನಮಸ್ಕರಿಸಿ ಮೇಲೆದ್ದ ಅವರು ಅಳುತ್ತಾ, "ರಾಜೂ! ಏನು

ಮಾತ್ತೀಯೋ ? ಹೋಗಬೇಡಪ್ಪಾ ! ರಾಜೂ !!" ಎಂದು ಅವನ ಹಿಂದೆಯೇ ಬಂದರು. ರಾಜಣ್ಣ ಶಾಂತಳ ಕೈಹಿಡಿದುಕೊಂಡು ಹೊರಟೇಬಿಟ್ಟ. ಮನೆಯ ಜಗುಲಿಯ ಬಳಿ ತಾಯಿಯ ಕೈ ಹಿಡಿದು,

"ನೀನು ಅಳಬೇಡಮ್ಮಾ ! ನಾನು ಈಗ ಯಾವ ಹುಚ್ಚು ಕೆಲಸಕ್ಕೂ ಕೈಹಾಕುತ್ತಿಲ್ಲ, ಸುಮ್ಮನೆ ಮನೆಬಿಟ್ಟು ಹೋಗುತ್ತಿದ್ದೇನೆ. ಈ ಮನೆ, ನೀನು, ಅಪ್ಪ, ಅಣ್ಣ, ಅತ್ತಿಗೆ, ಅವರ ಮಕ್ಕಳು ಇವರನ್ನು ನಾನೆಂದಿಗೂ ಮರೆಯೋಲ್ಲ. ಅಪ್ಪನ ಕೋಪ ಇಳಿದ ಮೇಲೆ ಅವರ ಮನಸ್ಸು ತಿಳಿಯಾಗಬಹುದು. ಆಗ ಅವರೇ ಹೇಗೆ ಒದ್ದಾಡುತ್ತಾರೆ ನೋಡ್ತೀರು ! ಮನೆಗೆ ಬಾ ಎಂದು ಅವರೇ ನನ್ನನ್ನು ಖಂಡಿತ ಕರೀತಾರೆ. ಅಲ್ಲಿಯವರೆಗೂ ನಾನು ಆತ್ಮಗೌರವ ಕಾಪಾಡಿಕೊಳ್ಳ ಬೇಕು. ಅದಕ್ಕೇ ಈಗ ಹೋಗುತ್ತಿದೇನೆ. ನೀನೇನೂ ಹೆದರ ಬೇಡಮ್ಮಾ. ನಾನು ನಿನ್ನನ್ನು ಮರೆಯೋಲ್ಲ. ಅಪ್ಪನನ್ನೂ ಮರೆಯೋಲ್ಲ. ಹೊಸ ಜೀವನ ಪ್ರಾರಂಭಿಸಬೇಕಾದ್ರೆ ಹೀಗೆಲ್ಲಾ ದುಃಖ ನೋವು ಉಂಟಾಗಲೇಬೇಕು ! ಅದಕ್ಕಲ್ಲಾ ನೀನು ಹೆದರಬೇಡ" ಎಂದ. ಎಷ್ಟು ಪ್ರಯತ್ನಿಸಿದರೂ ಆಗ ಅವನ ಕಂಠ ಗದ್ಗದಿತವಾ ಯಿತು. ಕಣ್ಣುಗಳಲ್ಲಿ ನೀರುಕ್ಕಿದುವು. ಅವನು-ಶಾಂತ ಮತ್ತೊಮ್ಮೆ ತಾಯಿಗೆ ನಮಸ್ಕರಿಸಿ ಹೊರಗೆ ಹೊರಟರು. ಅವನ ತಾಯಿಯೂ ಕಣ್ಣೀರಿಡುತ್ತಾ ಅವರೊಡನೆಯೇ ಹೊರಟರು. ಅವನ ತಂದೆ, ತವುಡುಕಚ್ಚಿ, ಕಣ್ಣನ್ನು ಕೆಂಪಗೆ ಮಾಡಿಕೊಂಡು ಅವರನ್ನೇ ದಿಙ್ಮೂಢ ರಂತೆ ನೋಡುತ್ತಿದ್ದರು.

ಬೀದಿಯವರಿಗೆಲ್ಲಾ ಇದೊಂದು ನಾಟಕವಾಯಿತು. ಕೆಲವರಿಗೆ ರುದ್ರನಾಟಕ. ಅನೇಕರಿಗೆ ವಿನೋದ !

ಹಳ್ಳಿಯ ಹೊರಗೆ ಕೊನೆಯ ಬಾರಿ ತಾಯಿಯ ಅನುಮಾನ, ಭಯ, ದುಃಖವನ್ನು ಪರಿಹರಿಸಲೆತ್ನಿಸಿ, ತಾವು ಹೋಗುತ್ತಿರುವುದೆ, ಮುಂದೆ ಏನು ಮಾಡುತ್ತೇವೆ ಎಂಬುದನ್ನುವಿಷದವಾಗೇ ತಿಳಿಸಿ, ಅವರು ಮೈಮೇಲಿಂದ ತೆಗೆದುಕೊಡಲು ಬಂದ ಬಳೆ-ಒಡವೆಗಳನ್ನು ನಿರಾಕರಿಸಿ, ಅವರಿಂದ ಆಶೀರ್ವಾದ ಪಡೆದು ಮುಂದೆ ಹೊರಟರು.

ಸೂರ್ಯನ ತೀಕ್ಷ್ಣ ಬಿಸಿಲು ಮೈ ಸುಡುತ್ತಿತ್ತು. ಆಕಾಶದ ಅಂಚಿನಲ್ಲೆಲ್ಲಾ ಕಾರ್ಮುಗಿಲಿನ ರಾಶಿ. ಅವರು ಒಂದು ತೊರೆಯ ದಡದಲ್ಲಿಯೇ ನಡೆದು ಮೂರು ಗಂಟೆಯ ಹೊತ್ತಿಗೆ ತಾವು ಬಹು ದಿನಗಳಿಂದಲೂ ನೋಡಬೇಕೆಂದಿದ್ದ ದೊಡ್ಡ ಜಲಾಶಯವನ್ನು ಸಮೀಪಿಸಿದರು. ಅದು ತುಂಬಿ ಕೋಡಿ ಬಿದ್ದಿತ್ತು. ಅದು ಒಂದು ಮೈಲಿ ದೂರವಿರುವಾಗಲೇ ಭಯಂಕರ ಮೊರೆದಾಟದ ಶಬ್ದ ಕೇಳುತ್ತಿತ್ತು! ಮಹಾನದಿಯಂತೆ ಕೋಡಿ ಭೋರ್ಗರೆದು, ಬಂಡೆಗಳಿಗಪ್ಪಳಿಸಿ ಹರಿಯುವುದನ್ನೇ ಬಹು ಹೊತ್ತು ನೋಡಿದರು. ಕಡೆಗೆ ಅಣೆಕಟ್ಟಿನ ಬಳಿಗೆ ಹೋಗಿ, ಅಲ್ಲಿ ಕೆರೆಯ ನೀರು ಇಪ್ಪತ್ತು-ಇಪ್ಪತ್ತೆರಡು ಅಡಿಗಳಷ್ಟು ಎತ್ತರವಿದ್ದ ಗೋಡೆಯ ಮೇಲಿನಿಂದ ಹಾರಿ, ಮುಂದೆಯೇ ಇದ್ದ ಪ್ರಪಾತವೊಂದರ ವಕ್ರ-ಶಿಲೆಗಳ ನಡುವೆ ಧುಮುಕಿ, ಕುದಿದು, ಕೆರಳಿ, ಧೂಮ ರೂಪದ ತುಂತುರು ಹನಿಯ ಮುಗಿಲೆಬ್ಬಿಸುವುದನ್ನು ನೋಡಿ, ಆ ಶೀತಲ ಗಾಳಿಯನ್ನು ಸೇವಿಸಿ, ಆ ಭಯಂಕರ ಮೊರೆದಾಟವನ್ನು ಆಲಿಸುತ್ತಾ ನಿಂತರು.

ಹೀಗೆ ಕೋಡಿ ಬಿದ್ದಾಗ, ಜಲಪಾತ ಮತ್ತು ಅಣೆಕಟ್ಟುಗಳ ನಡುವೆ ಒಂದು ಜಲಗುಹೆ ಏರ್ಪಡುವುದು ರಾಜಣ್ಣನಿಗೆ ಗೊತ್ತಿತ್ತು. ಅದಕ್ಕೆ ಪ್ರವೇಶಮಾರ್ಗ ಬಹಳ ಕಿರಿದು ಮತ್ತು ಅಪಾಯಕರ. ಆದರೂ ಆ ಗುಹೆ ಈ ಜಗತ್ತಿನಲ್ಲೇ ಒಂದು ಅದ್ಭುತ ಸ್ಥಳ! ರಾಜಣ್ಣ ಅನೇಕ ಬಾರಿ ಅದರೊಳಕ್ಕೆ ಹೋಗಿ ಬಂದಿದ್ದ. ಈಗ ಶಾಂತಳಿಗೆ "ಅದರಲ್ಲಿ ಹೋಗೋಣವೇ?" ಎಂದು ಕೇಳಿದ. ಅವಳು ಸಂಪೂರ್ಣವಾಗಿ ಸಮ್ಮತಿಸಿದಳು.

ಜಲಗುಹೆಯ ಒಳಗಡೆ ಗಭೀರಮೌನ, ಮಂಕು ಬೆಳಕು, ದಿವ್ಯ ಪ್ರಶಾಂತತೆ, ಯಾವುದೋ ಬೇರೊಂದು ಲೋಕದಲ್ಲಿದ್ದಂತೆ ಭಾಸ! ಆ ರೌದ್ರ-ಗರ್ಭದಲ್ಲಿ ನೆಲಸಿ ಅವರು ಬಾಹ್ಯಪ್ರಪಂಚವನ್ನೇ ಮರೆತರು. ಅಣೆಕಟ್ಟಿನ ಕಲ್ಲುಗೋಡೆಗೆ ತಲೆಯನ್ನು ಹಾಕಿ, ರಾಜಣ್ಣ ಕೆಳಗಿನ ನುಣುಪಾದ ಶೀತಲ ಶಿಲೆಯ ಮೇಲೆ ಮಲಗಿದ. ಶಾಂತ ಅವನ ಎದೆಯ ಮೇಲೆ ಒರಗಿ ಮಲಗಿದಳು. ಕೆಳಗೆ ಶೀತಲವಾದ ಬಂಡೆ,

ಮೇಲೆ ಸಹಸ್ರ–ಸಹಸ್ರ ಜೂಜುಕುದುರೆಗಳಂತೆ, ಜಿಗಿದು ಜಿಗಿದು ಹಾರುವ ಅದ್ಭುತ ಜಲಪ್ರವಾಹ, ಮುಂದೆ ಆಳವಾದ, ಕುದಿ-ಕುದಿದು ಘೋರ್ಗರೆಯುವ ಪ್ರಪಾತ. ಹಿಂದೆ ಗಂಭೀರವಾಗಿ, ಸಶಕ್ತವಾಗಿ, ಮೌನವಾಗಿ, ತುಂಬಿ ನಿಂತಿರುವ ಅನಂತ ಶಕ್ತಿಯ ವಿಶಾಲ ಜಲಾಶಯ! ರಾಜಣ್ಣ ತುಂಬಿಬಂದ ಗಂಟಲಲ್ಲಿ ಮೃದುವಾಗಿ ಕರೆದ,

"ಶಾಂತಾ,"

"ಏನು ?"

" ಈಗ ಈ ಅಣೆಕಟ್ಟು ಒಡೆದು ಹೋದರೆ ಬಹಳ ಚೆನ್ನಾಗಿರುತ್ತೆ ....ಅಲ್ಲವೇ ?"

" ಹು ;....ತುಂಬಾ ಚೆನ್ನಾಗಿರುತ್ತೆ."

" ಆಗ ನಾವೇನಾಗಬಹುದು... ಶಾಂತ ?"

" ವಿಮುಕ್ತರಾಗುತ್ತೇನೆ. . "

" ನಿನಗೀಗಲೇ ಮುಕ್ತಿ ಬೇಕೆನಿಸಿತೆ... ಶಾಂತ!"

" ಹು....ನಿಮಗೆ ಹೇಗೆನ್ನಿಸುತ್ತೆ....?"

" ನಮ್ಮಿಬ್ಬರಿಗೂ ಅಂಥ ವಿಮುಕ್ತಿ ಬೇಡ... ಎನಿಸುತ್ತೆ.... ಈ ಅಣೆಕಟ್ಟು ಈಗ ಒಡೆದುಹೋದರೂ ಅದನ್ನು ತಡೆದು ನಿಲ್ಲಿಸೋಣ ಎನ್ನಿಸುತ್ತೆ "

" ಹೂ....ಹಾಗೇ... ಹೇಳಿ "

" ಹೌದು ಶಾಂತ! ..ನಾವು ಇಷ್ಟಕ್ಕೇ ಹೆದರಿಕೊಳ್ಳಬಾರದು.... ಇಡೀ ಪ್ರಪಂಚಕ್ಕೇ ಹೆದರಬಾರದು. ಏಕೆಂದರೆ ನಮ್ಮನ್ನು ಒಟ್ಟುಗೂಡಿಸಿರುವ ಶಕ್ತಿ ಅಷ್ಟು ಪವಿತ್ರವಾದದ್ದು, ಅಷ್ಟು ಪ್ರಚಂಡವಾದದ್ದು.... ಆ ಶಕ್ತಿಯ ಮುಂದೆ ಜಗತ್ತಿನ ಇನ್ನೆಲ್ಲ ಶಕ್ತಿಗಳೂ ಮಣಿಯಲೇಬೇಕು. ಜನರ ಮನದ ಕಗ್ಗತ್ತಲೆಲ್ಲಾ ಅಳಿಯಲೇಬೇಕು.. ಅವರ ಮನಸ್ಸನ್ನು ಬೆಳಗಿಸುವ ದಿವ್ಯಜ್ಯೋತಿಯೇ ನಮ್ಮ ಪ್ರೇಮ! ಆ ಜ್ಯೋತಿಯನ್ನಾರಿಸಲು ಯಾರಿಂದಲೂ ಸಾಧ್ಯವಿಲ್ಲ. .... ಆ ಜ್ಯೋತಿಗೆ ನಮ್ಮ ಎರಡು ಹೃದಯಗಳೇ ಒಂದು ಸುಂದರ ಹಣತೆ. ನಮ್ಮ ಜೀವನ ಸರ್ವಸ್ವವೇ ಅದರ ತೈಲ ನಮ್ಮ ದೇಹಗಳೇ ಅದರ ಬತ್ತಿ. ಅದನ್ನು ಪ್ರಕಾಶಿ

ಸಲು ಇನ್ನೇನೂ ಬೇಡ ಶಾಂತಾ....ಇನ್ನೇನೂ ಬೇಡ...."

ಅವನನ್ನೇ ನೋಡುತ್ತಿದ್ದ ಶಾಂತ, ತನ್ನ ಕೈಗಳನ್ನು ಅವನ ಕೊರಳಿನ ಸುತ್ತಲೂ ಹೂಮಾಲೆಯಂತೆ ಹಾಕಿ, ಮುಖವನ್ನು ಅವನ ಎದೆಯಲ್ಲಿರಿಸಿ, "ಹು, ರಾಜು....ಮುಂದಕ್ಕೆ...." ಎಂದಳು.

"ಶಾಂತಾ, ನಾವು ಈ ಹುಳುಕು ಸಮಾಜದ ಕೊಳಕು ವ್ಯಕ್ತಿಗಳಿಗೆ ಹೆದರಬೇಕಾಗಿಲ್ಲ. ಅವರ ಹೊಲಸು ನಾಲಿಗೆ, ಮುಳ್ಳಿನ ಮುಷ್ಟಿಗೆ ಅಳುಕಬೇಕಾಗಿಲ್ಲ. ನಮ್ಮ ಪ್ರೇಮವನ್ನು ನಾಶಮಾಡಲು ಅವರಿಂದ ಸಾಧ್ಯವಿಲ್ಲ.....ಪ್ರೇಮವನ್ನು ಜಾತಿಯ ಕೃತಕ ಬಂಧನದಿಂದ ಸ್ತಂಭನಗೊಳಿಸಬಹುದೆಂದು ತಿಳಿದಿರುವ ಮೂರ್ಖರು ಅವರು. ಪ್ರೇಮಕ್ಕೆ ಇರುವ ಅಮರತ್ವ, ಅನಂತತೆ ಅವರಿಗೆ ಗೊತ್ತಿಲ್ಲ. ಅವರ ಪಾಲಿಗೆ ಹೆಣ್ಣು-ಗಂಡುಗಳಿಬ್ಬರು, ಹೊಟ್ಟೆಪಾಡಿಗೋಸ್ಕರ, ಪರಸ್ಪರ ಅನುಕೂಲಕ್ಕೋಸ್ಕರ, ವ್ಯಾಪಾರ ನಿಯಮದಂತೆ ಜೊತೆಯಲ್ಲಿ ಕಚ್ಚಾಡಿಕೊಂಡು ಜೀವಿಸುವುದೇ....ಪ್ರೇಮ! ........ ಕೇಳಿದೆಯೋ ಇಲ್ಲವೋ ನಮ್ಮ ತಂದೆ ಹೇಳಿದ್ದು...'ಅನಕ್ಷ್ಯಾರೋ ಬಿ ಎ ಪ್ಯಾಸ್ ಮಾಡಿರುವವಳಲ್ಲಿ ಇಲ್ಲದಿರುವುದು, ನಿನ್ನಲ್ಲೇನಿದೆ ?'....ಎಂದರಲ್ಲ !....ಅವರಿಗೆ ಹೇಗೆ ಅರಿವಾಗಬೇಕು ನಮ್ಮ ಪ್ರೇಮ? ಅವರೊಬ್ಬರಿಗೇ ಅಲ್ಲ, ನಮ್ಮ ಇಂದಿನ ಸಮಾಜಕ್ಕೇ ಪ್ರೇಮವೆಂದರೇನೆಂದು ಗೊತ್ತಿಲ್ಲ. ಅವರಿಗೆ ಪ್ರೇಮ ಬೇಕಾಗೂ ಇಲ್ಲ." ಕ್ಷಣಕಾಲ ಮೌನತಾಳಿ ಉದ್ವಿಗ್ನತೆಯಿಂದ ಮತ್ತೆ ಹೇಳತೊಡಗಿದ. "ಅವರಿಗೆ ಬೇಕಾಗಿರುವುದು ಪ್ರೇಮವಲ್ಲ .... ಕಾಮ ಮತ್ತು ವ್ಯಾಪಾರ ! ನಮಗೆ ಆ ಕೊಳಕು ಸಂಬಂಧ ಬೇಡ........ ಪುಷ್ಕಳ ಭೋಜನ ಹೊಡೆದು, ಗಂಡು ಹೆಣ್ಣುಗಳು ಹಸೆಯ ಮೇಲೆ ಕುಳಿತಿರುವುದನ್ನು ನಿರಾಸಕ್ತ ಕಣ್ಣುಗಳಿಂದ ನೋಡಿ. ತಮ್ಮ ಮನೆಗೆ ಹಿಂತಿರುಗಿ ಹೋಗಿ, ಪುನಃ ಆ ದಂಪತಿಗಳನ್ನು ಸಾಯುವವರೆಗೂ ತಿರುಗಿ ಸಹ ನೋಡದೆ ಇರುವ ಸಾವಿರಾರು ಮಂದಿಯ ಮುಂದೆ ನಮ್ಮ ವಿವಾಹ ಆಗುವ ಅಗತ್ಯವಿಲ್ಲ....ಹೊಟ್ಟೆಪಾಡಿಗಾಗಿ ನಾಲ್ಕು ಮಂತ್ರಗಳನ್ನು ಯಾರಿಗೂ ತಿಳಿಯದಂತೆ ತಪ್ಪುತಪ್ಪಾಗಿ ಗೊಣಗುಟ್ಟಿ, ನಡು ಹಗಲಲ್ಲೇ ಅರುಂಧತೀ ನಕ್ಷತ್ರವನ್ನು ವಧೂ-ವರರಿಗೆ ತೋರಿಸಿ,

ಸಿಕ್ಕಿದಷ್ಟು ದಕ್ಷಿಣೆ, ಕಾಯಿ, ಅಕ್ಕಿ, ಉಡುಗೊರೆಗಳನ್ನು ಗಿಟ್ಟಿಸಿ ಕೊಂಡು ಹೋಗಲು ಬರುವ ತುಚ್ಛ ಉದ್ದೇಶದ ಪುರೋಹಿತನೂ, ಪವಿತ್ರ ಉದ್ದೇಶವುಳ್ಳ ನಮ್ಮ ವಿವಾಹಕ್ಕೆ ಬೇಡ....ನಮ್ಮ ವಿವಾಹವು ನಮ್ಮ ಪ್ರೇಮವನ್ನು ಅರ್ಥಮಾಡಿಕೊಳ್ಳುವ ಮನುಷ್ಯರ ಮುಂದೆ ಸಹೃದಯರ ಮುಂದೆ, ನನ್ನ ತಾಯಿ, ನಿನ್ನ ತಂದೆಯಂಥವರ ಮುಂದೆ ಆಗಲಿ.... ಅದೂ ಸಾಧ್ಯವಿಲ್ಲದಿದ್ದರೆ, ನಾವಿಬ್ಬರೇ ಆಗೋಣ ........ ನಮ್ಮೆಲ್ಲರ ಮಾತೆಯಾದ ಪ್ರಕೃತಿಯೇ ನಮಗೆ ಸಾಕ್ಷಿಯಾಗಿರಲಿ.... ಕಾಡಿನ ತರುಲತೆಗಳು, ತಿಳಿಯಾದ ತಂಗಾಳಿ, ಬೆಟ್ಟ ಗುಡ್ಡಗಳು, ಹರಿಯುವ ನದಿಗಳು, ಹಾಡುವ ಹಕ್ಕಿಗಳು, ಹೊಳೆಯುವ ನಕ್ಷತ್ರಗಳು, ಅವುಗಳ ನಡುವೆ ಬೆಳಗುವ ಪೂರ್ಣಚಂದ್ರ, ಇಲ್ಲಿರುವ ರೌದ್ರಗರ್ಭದ ಪ್ರಶಾಂತತೆ, ನೀನು, ನಾನು ನಮ್ಮ ಅನಂತವಾದ ಅಮರಪ್ರೇಮ.... ಇವರೇ ನಮ್ಮ ವಿವಾಹಕ್ಕೆ ಬರುವ ಅಥಿತಿಗಳಾಗಲಿ! ಇಷ್ಟೆಲ್ಲಾ ಸಾಲದೇ ಶಾಂತ ?....ಎಷ್ಟು ಸಹಜವಾದ, ಸುಂದರ ವಿವಾಹ!" ಎಂದು ಒಂದೇ ಉಸುರಿಗೆ ಹೇಳಿದ. ಅವನ ಕಣ್ಣುಗಳಲ್ಲಿ ಕನಸಿನ ಸೊಬಗು ತುಂಬಿತ್ತು. ಶಾಂತಳ ನೈಸ ನವಿರೆದ್ದು ಅವನನ್ನು ಚುಂಬಿಸಿದಳು. ಮಾತು- ಆನಂದದಿಂದ ಕಟ್ಟಿಹೋದ ಗಂಟಲಲ್ಲಿ 'ರಾಜಾ!'ಎಂದವನನ್ನು ಗಾಢವಾಗಿ ಆಲಿಂಗಿಸಿ ತನ್ನೆದೆಯಲ್ಲಿ ಅವುಚಿಕೊಂಡಳು. ಒಬ್ಬರ ತೋಳ ತೆಕ್ಕೆಯಲ್ಲೊಬ್ಬರು ಕರಗಿ, ಮಧುರ ಮಿಲನದಲ್ಲಿ ಮೈಮರೆತರು.

* * *

ಹೊರಗಡೆ ಗುಡುಗು, ಮಳೆ ಪ್ರಾರಂಭವಾಗಿ ಗವಿಯೆಲ್ಲಾ ಕತ್ತಲೆಯಾಯಿತು. ಮಳೆ ಧಾರಾಕಾರವಾಗಿ ಸುರಿದರೂ ಗವಿಯೊಳಗೆ ಒಂದು ಹನಿ ಮಳೆಯೂ ಇಲ್ಲ. ಮಧ್ಯಾಹ್ನ-ಸಂಜೆಯಾಯಿತು; ಸಂಜೆ - ರಾತ್ರಿಯಾಗತೊಡಗಿತು. ಮಳೆ, ಘೋರ್ಮಳೆಯಾಯಿತು. ಘೋರ್ಮಳೆ-ಪ್ರಳಯವರ್ಷವಾಯಿತು. ಜಲಾಶಯದ ನೀರು ಕ್ಷಣ ಕ್ಷಣಕ್ಕೂ ಹೆಚ್ಚಿ, ಅದು ಹಾರುವ ರಭಸ, ಮಾಡುವ ಗರ್ಜನೆ, ತೋರುವ ರೌದ್ರತೆ ಮತ್ತೂ ಅಧಿಕವಾಯಿತು ಹಾಗೆಯೇ ರಾಜಣ್ಣ ಶಾಂತೆಯ ನಿದ್ರೆ ಇನ್ನೂ ಗಾಢವಾಯಿತು ಸುಖವಿಸ್ಮೃತಿ ಇನ್ನೂ

ಆಳವಾಯಿತು.

ಒಮ್ಮೆ ಭಾರಿ ಸಿಡಿಲೊಂದು ಹೊಡೆದಾಗ ಶಾಂತಳಿಗೆ ಎಚ್ಚರ ವಾಯಿತು. ಉದ್ರೇಕಗೊಂಡ ಜಲಧಾರೆಯ ರಭಸ, ನೋಡಿದರೆ ತಲೆತಿರುಗುವಂತಾಗುತ್ತಿತ್ತು. ಹೂಟ್ಟೆ ತೊಳಿಸಲು ಪ್ರಾರಂಭಿಸುತ್ತಿತ್ತು ....ಸುತ್ತಲೂ ಗಾಡಾಂಧಕಾರ! .... ರಾಜಣ್ಣ ಇನ್ನೂ ನಿದ್ರಿಸಿದ್ದ. ಅವನ ಬಾಹುಗಳು ಅವಳನ್ನು ಇನ್ನೂ ತಬ್ಬಿ ಹಿಡಿದಿದ್ದುವು. ಶಾಂತ ಮೃದುವಾಗಿ ಪಕ್ಕಕ್ಕೆ ಹೊರಳಿ, ಅವನ ಉಗ್ರಸೌಂದರ್ಯದ ಪ್ರಶಾಂತ ವದನವನ್ನೇ ದಿಟ್ಟಿಸಿ ನೋಡಿದಳು. ಅವಳ ಎದೆ ತೃಪ್ತಿ ಆನಂದದಿಂದ ಉಬ್ಬಿತು. ಈಗ ಅವಳನ್ನೂ ಅವನನ್ನೂ ಬೇರ್ಪಡಿಸುವ ಯಾವ ಶಕ್ತಿಯೂ ಜಗತ್ತಿನಲ್ಲಿರಲಿಲ್ಲ. ಅವಳು ತನ್ನ ಜೀವನ ಸರ್ವಸ್ವದಂತಿದ್ದ ಕೌಮಾರಿತ್ವದ ಅಪೂರ್ವ ಕುಸುಮವನ್ನು ಅವನಿಗೆ ಅರ್ಪಿಸಿದ್ದಳು. ಅದರ ಸೌರಭಗರ್ಭದಲ್ಲಿ ಈಗವನು ಮತ್ತನಾಗಿ ಮಲಗಿದ್ದ. ಶಾಂತ ಅವನ ಮುಂಗುರುಳನ್ನು ಹಿಂದೆ ತೀಡಿ, ಹಣೆ, ತುಟಿ, ಕಣ್ಣೆವೆಗಳೆಲ್ಲ ವನ್ನೂ ಹೂವಿನಂತೆ ಚುಂಬಿಸಿದಳು. ಅನಂತರ ಮೇಲೆದ್ದು ನಿಂತಳು.

ಆಗವಳಿಗೆ ತಾನೆಲ್ಲಿರುವೆನೆಂಬ ಅರಿವಾಯ್ತು. ಸುತ್ತು-ಮುತ್ತಲೂ ಧೀಂಕಿಡುವ ಜಲರಾಶಿಯನ್ನು ನೋಡಿ ಅವಳ ಬಗೆ ಕದಡಿ. ಕಣ್ಣು ಮಂಕಾಗಿ, ತೊಡೆಗಳು ನಿತ್ರಾಣವಾದವು. ಅವಳು ಮೇಲೆ ಎದ್ದಂತೆಯೇ ಕೆಳಕ್ಕೆ ಕುಸಿದು. ರಾಜಣ್ಣನನ್ನು ಮತ್ತೆ ಅಪ್ಪಿ ಭಯ ದಿಂದ ಕಂಪಿಸತೊಡಗಿದಳು. ಅವಳಿಗೆ ತಾವಿಬ್ಬರೂ ಧುಮಿ-ಧುಮಿ ಸುವ ಕೋಟ್ಯಾಂತರ ನಗಾರಿಗಳ ನಡುವೆ ಇರುವಂತೆ ಭಾಸವಾಯಿತು! ಸೋತ ಕೈಗಳಿಂದ ರಾಜಣ್ಣನನ್ನು ಅಲುಗಿಸಲು ಪ್ರಾರಂಭಿಸಿದಳು.

ರಾಜಣ್ಣ ಎಚ್ಚರಗೊಂಡ. ಕಣ್ತೆರೆದ ಸುತ್ತಲೂ ಕಗ್ಗತ್ತಲೆ. ಶಾಂತ ಅವನನ್ನಪ್ಪಿ ಭಯ-ಭ್ರಾಂತಳಾಗಿ ನಡುಗುತ್ತಿದ್ದಳು. ಅದನ್ನು ಕಂಡ ರಾಜಣ್ಣ,

"ಇದೇನು, ಇಷ್ಟು ಹದರಿಕೆಯಾ, ಶಾಂತ!....ಭಯವಾದರೆ ಬಾ, ಹೊರಗೆ ಹೋಗೋಣ." ಎಂದು ಮೇಲೆದ್ದು ನಿಂತ. ಶಾಂತ ಮೇಲೇಳಲೂ ಶಕ್ತಿಯಿಲ್ಲದೆ ಅವನ ಕೈಹಿಡಿದು ಮೌನವಾಗಿದ್ದಳು.

ಅದನ್ನು ಗಮನಿಸಿದ ರಾಜಣ್ಣ ಅವಳನ್ನು ಮೇಲೆಬ್ಬಿಸುತ್ತಾ,

"ಇಷ್ಟು ಹೆದರುತ್ತೀಯ, ಎಂದು ತಿಳಿದಿದ್ದರೆ ಇಲ್ಲಿಗೆಲ್ಲ ನಿನ್ನನ್ನು ಕರೆತರುತ್ತಲೇ ಇರಲಿಲ್ಲ. ಬಾ.... ಬೇಗಬೇಗ ಹೋಗೋಣ.. ಎಷ್ಟು ಕತ್ತಲೆಯಾಗಿಹೋಗಿದೆ!" ಎಂದು ಮುಂದೆ ಕರೆದೊಯ್ದ.

ಕಗ್ಗತ್ತಲಿನಲ್ಲಿಯೇ ತಡವರಿಸಿಕೊಂಡು ಇಕ್ಕಟ್ಟು ಪ್ರವೇಶ ವಿದ್ದೆಡೆಗೆ ಬಂದರು. ಆದರೆ ಆ ಜಲಗುಹೆಯ ಬಾಗಿಲು ಮುಚ್ಚಿ ಹೋಗಿತ್ತು!....ಮೃತ್ಯುಬಂಧ ಬಿಗಿಯಾಗಿತ್ತು!! ಆ ಸ್ಥಳದಲ್ಲಿಯೇ ಮುಂದುವರೆದು, ಆ ಮೃತ್ಯು-ಮಂದಿರದಿಂದ ತಪ್ಪಿಸಿಕೊಳ್ಳುವ ಸಾಧ್ಯತೆ-ಅಸಾಧ್ಯತೆಗಳನ್ನು ಪರೀಕ್ಷಿಸಲು, ಧಾರಾಕಾರವಾಗಿ ಸುರಿಯು ತ್ತಿದ್ದ ಆನೆಯ ಗಾತ್ರದ ನೀರಿನಲ್ಲಿ ಕೈತೂರಿಸಿ, ಒಂದು ಬಂಡೆಯನ್ನು ಹಿಡಿಯಲು ಹೋದ. ಆ ಕೈಯನ್ನು ಹತ್ತಾರು ಮದಕರಿಗಳು ಒಟ್ಟಿಗೇ ಘೀಳಿಟ್ಟು ತುಳಿದಂತಾಯ್ತು! ಶಾಂತ ಅವನನ್ನು ಹಿಂದಕ್ಕೆ ಎಳೆದು ಹಿಡಿದುಕೊಂಡಳು... ಕಾಲ ಮಿಂಚಿಹೋದ ಮೇಲೂ ಅವರು ವಿಮುಕ್ತಿಯ ಮಾರ್ಗವನ್ನು ಅರಸುತ್ತಲೇ ಇದ್ದರು. .... ಹಿಂದೆ ಆಗಲೋ-ಈಗಲೋ ಬಿರಿಯುವಂತಿದ್ದ ಜಲಾಶಯದ ಅಣೆಕಟ್ಟು!.... ಮುಂದೆ ಆಳವಾಗಿ, ಕುದಿ-ಕುದಿದು, ಹಲ್ಲು ಕಡಿಯುತ್ತಾ ಭೋರ್ಗರೆ ಯುತ್ತಿರುವ ಪ್ರಪಾತ!!....ಮೇಲೆ ಆ ಪ್ರಚಂಡ ಜಲಶಕ್ತಿಯ ಭೀಕರ ಹಸ್ತ!!!

ಹೊರಗಡೆ ಭಯಂಕರ ವರ್ಷಧಾರೆ. ಕರಾಳ ನಭದಲ್ಲಿ ಕೂರ ಲುಗಿನ ಝಳಪಿನಂತೆ, ಸರ್ಪದ ಸಂಮೋಹಕ ಜಿಹ್ವೆಯಂತೆ, ಕವಲ್ಮಿಂಚುಗಳು ತೀಕ್ಷ್ಣ ಪ್ರತಿಭೆಯಿಂದ ಹೊಳೆದು, ಉಗ್ರಲೀಲೆ ಯಲ್ಲಿ ಮಾಯವಾಗುತ್ತಿದ್ದುವು; ಲೋಕದ ಜನರ ಕಣ್ಣನ್ನು ಕುಕ್ಕಿ-ಕುಕ್ಕಿ ಕಣ್ಮರೆಯಾಗುತ್ತಿದ್ದುವು, ವಿಶಾಲಾಕಾಶದಲ್ಲಿ ಗುಡುಗು-ಸಿಡಿಲು ಗಳು ಪ್ರಳಯ ರುದ್ರನ ಡಮರುವಿನಂತೆ, ಶತಕೋಟಿ ಸಿಂಹಗಳ ಘರ್ಜನೆ ಯಂತೆ ಉರುಳುರುಳಿ ಬಂದು, ಜನರ ನೆತ್ತಿಯ ಮೇಲೆ ತಾಂಡವ ಭೈರವನಂತೆ ಕುಣಿದು, ಆರ್ಭಟಿಸಿ, ಮುಂದೆ ಸಾಗುತ್ತಿದ್ದುವು. ಬಿರು ಗಾಳಿ ಪೈಶಾಚಿಕ ರೋಷದಿಂದ ಹೆಮ್ಮರಗಳಿಗೆ ಅಪ್ಪಳಿಸಿ, ಭೈರವಿ

ಯಂತೆ ಕೇಕೆ ಹಾಕಿ, ಅಬ್ಬರಿಸಿ ಚೀರುತ್ತಾ ಹಾರಿ ಓಡುತ್ತಿತ್ತು. ಖಠ್ ಖಠಿಲ್ಲನೆ! ಹೊಡೆದ ಸಿಡಿಲೊಂದು ಹಳ್ಳಿಯ ನಡುವೆಯ ತೆಂಗಿನ ಮರವೊಂದನ್ನು ಮತಾಪು ಬತ್ತಿಯಂತೆ ಉರಿಸಿ ಕೆಡವಿತು. ಅದನ್ನು ನೋಡಲು ಹೊರಬಂದ ಜನರೆಲ್ಲರನ್ನೂ ತಲ್ಲಣಿಸುವಂತಹ ಮತ್ತೊಂದು ಅದ್ಭುತವೂ ನಡೆಯಿತು!

ದೂರದ ದಿಗಂತದೆಡೆಯಿಂದ ಏಕೈಕ ಭಾರಿ-ಮಿಂಚೊಂದು ಲಾಸ್ಯವಾಡುತ್ತಾ ಮೇಲೇರಿ, ಕ್ಷಣ ಮಾತ್ರದಲ್ಲಿ ನಾಲ್ಕೈದು ಕವಲುಗಳಾಗಿ ಸಿಡಿದು, ಖಠ್-ಖಠ್-ಖಠಿಲ್! ಎಂದು ನಭದ ನೆತ್ತಿಯನ್ನೇರಿತು.

ಮರುಕ್ಷಣದಲ್ಲಿಯೇ ಅಲ್ಲಿದ್ದವರೆಲ್ಲರೂ ಬೆಚ್ಚಿ–ಬೆದರಿದರು!.... ಬೆವರಿ ನಡುಗಿದರು!!....ನಾಲ್ಕೈದು ಘೋರ ಸಿಡಿಲುಗಳು ಹಳ್ಳಿಯ ಉತ್ತರಕ್ಕೆ, ಅಣೆಕಟ್ಟಿನ ಕಡೆಗೆ ಒಂದಾದಮೇಲೊಂದು ಬಾರಿಸಿದವು.

ಮನೆಯೊಳಗೆ ಕಠಿಣ ಹೃದಯಿಗಳಾಗಲು ಯತ್ನಿಸುತ್ತಾ, ಪ್ರಚಂಡ-ಒಳತೋಟಿಯ ಮನದಿಂದ, ಬೇಕಿಲ್ಲದ ಊಟಮಾಡುತ್ತಿದ್ದ ರಾಜಣ್ಣನ ತಂದೆಯ ಬಾಯಿ ಭಯದಿಂದ ಹಾಗೇ ತೆರೆದುಕೊಂಡಿತು! ಕಣ್ಣುಗಳೂ ವಿಶಾಲವಾಗಿ ಅರಳಿ, ನೀರು ತುಂಬಿ, ಅಲೌಕಿಕ ನೋಟವೊಂದು ಅದರಲ್ಲಿ ಮೂಡಿತು. ಅದನ್ನು ಕಂಡ ಅವರ ಪತ್ನಿ ಭೀತಿಯಿಂದ "ಅಯ್ಯೋ!.... ಇದೇನ್ರೀ.... ಪುಟ್ಟೂ!.... ಚೆನ್ನೀ!.... ಇಲ್ಲಿ....ನಿಮ್ಮ ತಂದೆಯ ಪ್ರಾಣ....!" ಎಂದು ಚೀತ್ಕರಿಸಿ, ಗಂಡನನ್ನು ಹಿಡಿದುಕೊಂಡರು. ರಾಜಣ್ಣನ ತಂದೆ ವಿಕಾರ ಸ್ವರದಲ್ಲಿ,

"ರಾಜೂ!....ಎಲ್ಲಿದ್ದೀಯೋ!!....ನಿನ್ನನ್ನು ನಾನೇ ಕೈಯಾರೆ ಕೊಂದೆನಲ್ಲೋ!!!....ಎಲ್ಲಿ ಹೋದೆಯೋ?" ಎಂದು ತಮ್ಮ ಜೀವಮಾನದಲ್ಲೇ ಎಂದೂ ಅಳದಿದ್ದವರು ಎಳೆಯ ಮಗುವಿನಂತೆ ಅಳತೊಡಗಿದರು. ಅವರಿಗೆ ರಾಜಣ್ಣನ ಮೇಲಿದ್ದ ಪ್ರೇಮ, ಹೆಮ್ಮೆ, ಮಹದಾಸೆಗಳೆಲ್ಲಾ ಒಡೆದ ಅಣೆಕಟ್ಟಿನಂತೆ ಮರುಕಳಿಸಿ ಬಂದಿದ್ದುವು. ಸಮಾಧಾನ ಮಾಡುವವರನ್ನೆಲ್ಲಾ ಹೊಡೆದು ಹುಚ್ಚರಂತೆ ಮನೆಯಿಂದ ಹೊರಗೆ ಓಡಿದರು.

ಬೀದಿಯಲ್ಲೆಲ್ಲಾ ಮಂಡಿಯುದ್ದ ನೀರು ನಿಂತು, ಎಷ್ಟೋ ಮನೆಗಳ ಒಳಕ್ಕೂ ಹೊರಟುಹೋಗಿತ್ತು. ಎಲ್ಲೆಲ್ಲೂ ಕಗ್ಗತ್ತಲೆ. ಜನರ ಕೂಗಾಟ. ಲಾಟೀನುಗಳ ಬೆಳಕು....ಗಲಭೆ. ಆ ಗಲಭೆಯ ಮಧ್ಯೆ ಅವರು "ರಾಜಣ್ಣನನ್ನು ನೋಡಿದರೇನ್ರೋ?.... ಅವನು ಎಲ್ಲಿ ಹೋಗಿದಾನೆ ಗೊತ್ತೇನ್ರೋ?....ಅಯ್ಯೋ!....ದೇವರೇ....ನನ್ನ ರಾಜಣ್ಣನನ್ನು ಬದುಕಿಸಿರಪ್ಪಾ!....ಎಲ್ಲಿದಾನಪ್ಪ ಅವನು....?" ಎಂದು ಸುತ್ತ ಸೇರಿದ ಜನರನ್ನೆಲ್ಲಾ ಬೇಡಿದರು. ಎಲ್ಲರೂ ಅವರನ್ನು ನೋಡಿ ಆಶ್ಚರ್ಯಚಕಿತರಾದರು. ಆ ಕರುಣಾದ್ರ ಕೂಗು ಅಲ್ಲಿದ್ದ ಕಠಿಣ ಹೃದಯಿಗಳ ಕಣ್ಣುಗಳಲ್ಲೂ ನೀರನ್ನು ತಂದಿತ್ತು. ದನಕಾಯುವ ಹುಡುಗನೊಬ್ಬ ರಾಜಣ್ಣ-ಶಾಂತ ಆ ಜಲಗುಹೆಯೊಳಕ್ಕೆ ಹೋದ ಸಮಾಚಾರವನ್ನು ತಿಳಿಸಿದ.

ಅದನ್ನು ಕೇಳಿದ ಕೂಡಲೇ ಅವರ ಸಂಶಯ ಖಚಿತವಾಯಿತು. ಚಿಕ್ಕಂದಿನಲ್ಲೊಮ್ಮೆ ಅವನಿಗೆ ಹೊಡೆದಿದ್ದಾಗ ಅವನು ಹೀಗೆಯೇ ಆ ಗುಹೆಯಲ್ಲಿ ಹೋಗಿ ಅಡಗಿದ್ದ. ಅದನ್ನು ನೆನೆದು ಈಗವರು ಜಲಾಶಯದ ಕಡೆಗೆ ಉನ್ಮತ್ತರಂತೆ ಓಡಿದರು. ಮಂಡಿಯುದ್ದ ನೀರಿನಲ್ಲಿ ಕಗ್ಗತ್ತಲಲ್ಲಿ, ಎಡವಿ ಬೀಳುತ್ತಾ, ಮೇಲೆದ್ದು-ಮೇಲೆದ್ದು ಓಡಿದರು. ಅವರ ಹಿಂದೆಯೇ ಪತ್ನಿ, ಮಗ, ಅನೇಕ ಆಪ್ತೇಷ್ಟರೂ ಓಡಿ; ಅವರನ್ನು ಹಿಡಿಯಲು ಯತ್ನಿಸಿದರು. ನೀರು ಕ್ಷಣ-ಕ್ಷಣಕ್ಕೂ ಹೆಚ್ಚುತ್ತಿತ್ತು. ಲಾಟೀನಿನ ಬೆಳಕಿನಲ್ಲಿ ದೂರದಲ್ಲಿರುವುದೇನೂ ಕಾಣುತ್ತಿರಲಿಲ್ಲ. ದೂರದ ಕಗ್ಗತ್ತಲಲ್ಲಿ,

"ರಾಜೂ!.... ಅಲ್ಲಿಗೇಕೆ ಮತ್ತೆ ಹೋದೆಯೋ.... ನಿನ್ನನ್ನು ನಾನೇ ಕೊಂದೆನಲ್ಲೊ!" ಎಂಬ ಹೃದಯವಿದ್ರಾವಕ ಕೂಗು ಕ್ಷಣ-ಕ್ಷಣಕ್ಕೂ ಕ್ಷೀಣವಾಗಿ ಹೋಗುತ್ತಿತ್ತು. ಎಲ್ಲರೂ ಆ ಧ್ವನಿಯನ್ನೇ ಅನುಸರಿಸಿ ಓಡಿದರು, ಅವರನ್ನು ಹಿಡಿದರೂ ಹಿಂತಿರುಗಿಸಲಾಗಲಿಲ್ಲ. ಲಾಟೀನಿನ ಬೆಳಕಿನಲ್ಲಿ ಅವರ ಉನ್ಮತ್ತ ಕಣ್ಣುಗಳ ಹೊಳಪನ್ನು ನೋಡಿ ಎಲ್ಲರೂ ಹೆದರಿ ನಿಂತರು. ಪರಿಪರಿಯಾಗಿ ಬೇಡಿಕೊಂಡರು.

ಆಗ ಪಕ್ಕದ ಹಳ್ಳಿಯಿಂದ ಒಬ್ಬ ನೀರುಗಂಟೆ ಓಡಿಬಂದು

ಮೇಲುಸಿರು ಕೆಳಉಸಿರು ಬಿಡುತ್ತಾ....

"ಅಣೆಕಟ್ಟು! ಒಡೆದು ಹೋಯ್ತಂತೆ!!" ಎಂದ.

"ಏನು? ಅಣೆಕಟ್ಟು ಒಡೀತೆ!"

"ಹು, ಸಿಡಿಲು ಅದಕ್ಕೇ ಅಂತೆ ಹೊಡೆದಿದ್ದು-ಬನ್ನಿ, ಎಲ್ಲರೂ ಎತ್ತರದ ಜಾಗಕ್ಕೆ ಹೋಗೋಣ ಹೆಂಗಸರು ಮಕ್ಕಳನ್ನೆಲ್ಲಾ ಕರ ಕೊಂಡು ದಿಬ್ಬಕ್ಕೆ ಓಡಿ....ಇನ್ನೇನು ಸ್ವಲ್ಪಹೊತ್ತು .... ನೀರು ಇಲ್ಲಿಗೂ ನುಗ್ಗಿಬಿಡುತ್ತೆ!" ಎನ್ನುತ್ತಿದ್ದ. ಅವನ ಮೇಲೆ ರಾಜಣ್ಣನ ತಂದೆ ರೇಗಿ ಬಿದ್ದು, ಅವನ ಕತ್ತು ಹಿಸುಕುವುದಕ್ಕೇ ಪ್ರಯತ್ನಿಸಿದರು. ವಿಫಲರಾಗಿ, ಯಾರು ಎಷ್ಟೇ ಹೇಳಿದರೂ ಕೇಳದೆ, ಅಣೆಕಟ್ಟಿನ ಕಡೆಗೆ ಓಡಿಹೋದರು. ಅವರ ಭ್ರಾಂತಿಯ ಮನ, 'ರಾಜೂ, ನೀನು ಇನ್ನೂ ಬದುಕೇ ಇದ್ದೀಯ... ಅಣೆಕಟ್ಟು ಒಡೆದಿರುವುದು ಸುಳ್ಳು! ಸುಳ್ಳು!! ಸುಳ್ಳು!!!....' ಎಂದು ಕೂಗಿಕೊಳ್ಳುತ್ತಿತ್ತು. ಅವರು ಮಂಡಿಯುದ್ದ ನೀರಿನಲ್ಲಿ ಬೀಳುತ್ತಾ, ಏಳುತ್ತಾ ಓಡಿದರು.

ಜನರೆಲ್ಲರೂ ಹಳ್ಳಿಯ ಕಡೆಗೆ ಓಡಿದರು. ಅವರ ಪತ್ನಿ, ಹಿರಿಯ ಮಗ, ಕೆಲವು ಆಳುಗಳೂ ಅವರನ್ನು ಹಿಡಿದು ತರಲು ಹಿಂದೆಯೇ ಓಡಿದರು. ಎಷ್ಟು ಪ್ರಯತ್ನಿಸಿದರೂ ಅವರನ್ನು ಸಮೀಪಿಸಲು ಆಗುತ್ತಿರಲಿಲ್ಲ. ಮಿಂಚಿನಂತೆ ಓಡುತ್ತಿದ್ದರು, ಉನ್ಮತ್ತರಂತೆ ಓಡುತ್ತಿದ್ದರು!

ಹಳ್ಳಿಯಲ್ಲೆಲ್ಲಾ ಕೋಲಾಹಲ, ಗಾಬರಿ, ಭೀತಿ! ಎಲ್ಲರೂ ಮನೆ-ಮಠಗಳನ್ನು ಬಿಟ್ಟು ಓಡಲಾರಂಭಿಸಿದರು. ಕೈಗೆ ಸಿಕ್ಕಿದ ವಸ್ತುಗಳನ್ನೆತ್ತಿಕೊಂಡು ಓಡಿದರು. ಜಗಳ, ಹೊಡೆದಾಟ, ಕೂಗು, ಬೈಗುಳ, ಚೀತ್ಕಾರ, ಗೊಂದಲಗಳ ಮಧ್ಯೆ ನೀರು ಈಗ ಸೊಂಟದುದ್ದ ಏರಿತು. ಒಂದೆರಡು ಹಳೆಯ ಮನೆಗಳು ನೀರಿನಲ್ಲಿ ನೆನೆದು ಬುಡ ಕಳಚಿ ದಾರಿಗೆ ಉರುಳಿದುವು. ಅದನ್ನು ದಾಟಿ, ದಾರಿಗಾಗಿ ಹೋರಾಡುತ್ತಾ, ಭಯಭೀತರಾದ ಹಳ್ಳಿಯ ಜನರು ಎಳೆಯ ಮಕ್ಕಳು ಪೆಟ್ಟಿಗೆ, ಚಾಪೆಯ ಸುರಳಿ, ಬಟ್ಟೆ ಗಂಟುಗಳನ್ನೆತ್ತಿಕೊಂಡು, ಹಳ್ಳಿಯಾಚೆಗೆ ಧಾವಿಸುತ್ತಿದ್ದರು.

ರಾಜಣ್ಣನ ತಂದೆ ದೊಡ್ಡ ಕಾಲುವೆಯೊಂದರ ತೆವರಿನ ಮೇಲೆ

ಜಾರಿ ಜಾರಿ ಬೀಳುತ್ತಾ ಓಡಿದರು ಮುಂದೇನಿದೆ ಎಂಬ ಪ್ರಜ್ಞೆ ಇಲ್ಲದೆ ಓಡಿದರು. ಅಣೆಕಟ್ಟಿನ ಭೋರ್ಗರೆಯುವ ಭೀಕರಗರ್ತ ಅವರನ್ನು ಕೂಗಿ ಕೂಗಿ ಕರೆಯುತ್ತಿತ್ತು. ಅದನ್ನು ಸಮೀಪಿಸಿದಾಗ ಅದು ಸುದೃಢವಾಗಿ ನಿಂತಿದ್ದರೂ, ಆ ಜಲಗುಹೆಯ ಮೇಲೆ ಸಹಸ್ರ ಸಹಸ್ರ ಮದಕರಿಗಳಂತೆ ನೀರು ಹಾರಿ ಬರುತ್ತಿತ್ತು. ಕರಾಳ ರಾತ್ರಿಯಲ್ಲಿ ಪ್ರಪಾತಕ್ಕೆ ಧುಮುಕಿ ಬಿಳಿಯ ಧೂಮಲೋಕದಂತೆ, ಕುದಿಯುವ ನೊರೆಹಾಲಿನ ಕಡಲಿನಂತೆ ಕಾಣುತ್ತಿತ್ತು.

ಅಣೆಕಟ್ಟು ಒಡೆಯದೆ ನಿಂತಿದ್ದನ್ನು ಕಂಡಾಗ ಉಂಟಾದ ಆನಂದ, ಈ ಜಲಪಾತವನ್ನು ನೋಡಿ ನಿರ್ನಾಮವಾಯಿತು. ಮಳೆ ನಿಂತಿದ್ದರೂ, ಕಾರ್ಮುಗಿಲು ಕೋಪದಿಂದ ಗುಡುಗುತ್ತಲೇ ಇತ್ತು. ರಾಜಣ್ಣನ ತಂದೆ ಕಣ್ಣೀರಿಡುತ್ತಾ,

"ರಾಜಣ್ಣಾ ! ನಿನ್ನ ಕೈಯಾರೆ ಕೊಂದೆನಲ್ಲೋ ! ಎಂಥಾ ಪಾಪಿಯೋ ಈ ಜನ್ಮ ! ಹೊರಗೆ ಬಾರೋ....ಬದುಕಿ ಬಾರೋ... ನೀನು ಇಷ್ಟಬಂದವಳನ್ನು ಮದುವೆಯಾಗುವಂತೆ ಬಾ ! ದೇವರೇ, ನನ್ನ ಮಗನನ್ನು ಉಳಿಸಿಕೊಡಪ್ಪಾ !!" ಎಂದು ಪರಿಪರಿಯಾಗಿ ಹಲುಬುತ್ತಿದ್ದರು ಆದರೆ ಈ ವಿಳಂಬದ ಪ್ರಾರ್ಥನೆಯೆಲ್ಲಾ ಜಲಪಾತದ ಅಟ್ಟಹಾಸದ ಘರ್ಜನೆಯಲ್ಲಿ ಕರಗಿಹೋಗುತ್ತಿತ್ತು.

ಅವರ ಪತ್ನಿ, ಮಗ, ಅಲ್ಲಿಗೆ ಬಂದರು. ಮಳೆ, ಕೆಸರಿನಲ್ಲಿ ನೆನೆದು ಮುದ್ದೆಯಾದ ಪತಿಯನ್ನು ಆ ದೀನ ಸ್ಥಿತಿಯಲ್ಲಿ ನೋಡಿ, ಅವರ ಪತ್ನಿಗೂ ಕಣ್ಣೀರಿನ ಕೋಡಿ ಉಕ್ಕಿತು. ಅವರು ನಿಸ್ಸಹಾಯಕತೆಯಿಂದ ಪತಿ ಮತ್ತು ಮಗನಿಗಾಗಿ ದೇವರನ್ನು ಪ್ರಾರ್ಥಿಸತೊಡಗಿದರು ; ಹಲುಬಿದರು. ಹಿರಿಯ ಮಗನೂ ತಂದೆತಾಯಿಗಳ ಈ ಅವಸ್ಥೆ ನೋಡಲಾರದೆ, ತಾನು ಆ ಗುಹೆಯ ಬಳಿಗೆ ಹೋಗಿ ಪರೀಕ್ಷಿಸುತ್ತೇನೆಂದು ಲಾಟೀನು ಎತ್ತಿಕೊಂಡ ಅವನ ತಾಯಿ ಅವನನ್ನು ತಡೆದು,

"ಬೇಡ. ಬೇಡ ಪುಟ್ಟೂ ! ಅವನನ್ನು ಉಳಿಸೋದೂ, ಸಾಯಿಸೋದೂ ಈಗ ನಮ್ಮ ಕೈಯಲ್ಲಿಲ್ಲ. ಎಲ್ಲಾ ಆ ದೇವರ

ಕೈಯಲ್ಲಿದೆ. ಬೇಡ, ನೀನು ಹೋಗಬೇಡ. ಅದನ್ನು ನೋಡಿದರೇ ತಲೆ ತಿರುಗುತ್ತೆ" ಎಂದು ಅವನನ್ನು ಹಿಡಿದು, ತೋಳನ್ನಪ್ಪಿ ಗೋಳಾಡಿದರು. ಕಣ್ಣೀರನ್ನು ಹಿಂದೆ ಹಿಡಿಯುತ್ತಾ ಅವನೂ ಕಲ್ಲಿನಂತೆ ನಿಂತ. ಮಂತ್ರಮುಗ್ಧಗೊಂಡವನಂತೆ ಆ ವಿದ್ಯುತ್ ವೇಗದ ಜಲಪಾತವನ್ನೇ ಎವೆಯಿಕ್ಕದೆ ನೋಡುತ್ತಾ ನಿಂತ. ದಿಗ್ಭ್ರಮೆಗೊಂಡವನಂತೆ ಆ ಬೀಭತ್ಸ ಗರ್ಜನವನ್ನೇ ಕೇಳುತ್ತಾ ನಿಂತ.

ನಿಜಸ್ಥಿತಿ ಹಳ್ಳಿಯವರಿಗೆ ಈಗ ತಿಳಿದಿದ್ದಿತು. ಹಳ್ಳಿಗೆ ನುಗ್ಗಿದ ನೀರು ಒಡೆದ ಅಣೆಕಟ್ಟಿನದ್ದಲ್ಲ. ಯಾವುದೋ ಕಟ್ಟೆ ಒಡೆದ ಕಾಲುವೆಯದು.

ಈಗ ಅವರೆಲ್ಲರೂ ಅಣೆಕಟ್ಟಿನ ಬಳಿಗೆ ಓಡಿಬಂದು, ಆ ಜಲಗುಹೆಯ ಪ್ರವೇಶವನ್ನೇ ಎವೆಯಿಕ್ಕದೆ ನೋಡುತ್ತಾ, ರಾಜಣ್ಣ ಮತ್ತು ಶಾಂತಳಿಗಾಗಿ ಕಾಯುತ್ತಾ ಕುಳಿತರು.

ಮಳೆ ನಿಂತಿತು. ಮೋಡಗಳು ಚೆದುರಿ, ಚಂದ್ರ ಮೂಡಿಬಂದ. ಆದರೂ ಏನು? ಆ ಜಲಪ್ರವಾಹಕ್ಕೆ ಅಂತ್ಯವಿಲ್ಲ. ಶಾಂತ-ರಾಜಣ್ಣ ಇನ್ನೂ ಬದುಕಿದ್ದರೂ ಹೊರಗೆ ಬರುವಂತಿಲ್ಲ!

ಇಷ್ಟುಹೊತ್ತಿಗೆ ಅಪಾರ ಜನಸಂದಣಿ ಅಲ್ಲಿ ಸೇರತೊಡಗಿತು. ಜನ ಸೇರಿದಂತೆಲ್ಲಾ ನೀರಿನ ಪ್ರವಾಹ, ಅಬ್ಬರ ಕಡಿಮೆಯಾಗಲಾರಂಭಿಸಿತು. ಮುಂಜಾನೆಯಾಗಿ, ಚಂದ್ರ ಕಣ್ಮರೆಯಾಗಿ ಹೋಗುವಾಗ ಜಲಗುಹೆಯ ಪ್ರವೇಶ ಸ್ವಲ್ಪ ತೆರೆದುಕೊಂಡಿತು. ಎಲ್ಲರೂ ಕಾತುರದಿಂದ ಸ್ತಬ್ಧರಾಗಿ ಗುಹೆಯ ಕಡೆ ನೋಡುತ್ತಿದ್ದರು. ಅವರ ಎದೆಗಳ ಬಡಿತ ಕ್ಷಣಕ್ಷಣಕ್ಕೂ ಹೆಚ್ಚುತ್ತಿತ್ತು....ಎಷ್ಟು ಹೊತ್ತಾದರೂ ರಾಜಣ್ಣ-ಶಾಂತ ಬರಲಿಲ್ಲ.

ಕೊನೆಗೆ ಜನರ ತಾಳ್ಮೆ, ಕುತೂಹಲ ಮೇರೆ ಮೀರಿತು. ಕೆಲವು ಸಾಹಸಿಗಳು ಗವಿಯೊಳಕ್ಕೆ ನುಗ್ಗಿ ಕಣ್ಮರೆಯಾದರು.

ಹೊರಗಡೆ ಜನಸಮೂಹ ಉಸಿರಾಡುವುದನ್ನೂ ನಿಲ್ಲಿಸಿ, ಕಾದು ನೋಡುತ್ತಿತ್ತು.

ಒಳಗೆ ಹೋದವರು ಕೈಯನ್ನಲ್ಲಾಡಿಸುತ್ತಾ, "ಇಲ್ಲಿ ಅವರು

ಇಲ್ಲಾ....!" ಎಂದು ಕಿರಿಚಿದ್ದು ಜನರಿಗೆ ಕೇಳಿಸದಿದ್ದರೂ ನಡೆದಿದ್ದ ದುರಂತ ಅರ್ಥವಾಯಿತು. ಎಲ್ಲರ ತಲೆಯೂ ತಗ್ಗಿತು. ರಾಜಣ್ಣನ ತಂದೆ ನೆಲಕ್ಕೆ ಕುಸಿದುಹೋದರು. ಅವರ ಪತ್ನಿ ಕಣ್ಣೀರಿನಲ್ಲಿ ತೇಲಿ ಮುಳುಗುತ್ತಾ ಗೋಳಿಡುತ್ತಿದ್ದರು.

ಆಗ ಜನಸಮೂಹದಲ್ಲೆಲ್ಲಾ ಗುಜುಗುಜು ಶಬ್ದ ಪ್ರಾರಂಭವಾಯಿತು. ಪಕ್ಕದ ಹಳ್ಳಿಯಿಂದ ಆಗತಾನೇ ಬಂದಿದ್ದ ಹಳ್ಳಿಯವನೊಬ್ಬ ರಾಜಶೇಖರನ ಮನೆಯಲ್ಲಿ ಶಾಂತ - ರಾಜಣ್ಣ ಇದ್ದಾರೆಂದು ಹೇಳಿದ!

ಇದನ್ನು ಕೇಳಿದ ರಾಜಣ್ಣನ ತಂದೆ ಚೇತರಿಸಿಕೊಂಡು, ಮಂಡಿಯ ಮೇಲೆ ಎದ್ದು ಕುಳಿತರು. ಆಗ ತಾನೇ ವಿಶಾಲ ಜಲಾಶಯದ ದೂರದ ತೀರದಲ್ಲಿ ಮೂಡುತ್ತಿದ್ದ ಉದಯ ರವಿಗೆ ಕೈಜೋಡಿಸಿ ವಂದಿಸಿದರು. ಅವರ ಕಣ್ಣುಗಳಿಂದ ಆನಂದಭಾಷ್ಪಗಳು ಹನಿದುವು.



# ಈವರೆಗಿನ ಕೈಹೊತ್ತಿಗೆಗಳು

| | | |
|---|---|---|
| *೧. | ಗೃಹಲಕ್ಷ್ಮಿ | ಅ. ನ. ಕೃ. |
| *೨. | ಮಲ್ಲಿ | ದೇವುಡು |
| *೩. | ವಿಮೋಚನೆ | ನಿರಂಜನ |
| *೪. | ಪರದೇಶಿ | ಕುಲಕರ್ಣಿ ಬಿಂದುಮಾಧವ |
| *೫. | ಸ್ವರ್ಣರೇಖೆ | ವೀರಕೇಸರಿ |
| *೬. | ಅಪಸ್ವರ | ತ್ರಿವೇಣಿ |
| *೭. | ರಾಯರು ಕಂಡ ರಂಗು | ಬೆಳ್ಳಿ ರಾಮಚಂದ್ರರಾವ್ |
| ೮. | ರುಕ್ಮಿಣಿ | ಅ. ನ. ಕೃ. |
| *೯. | ವಜ್ರದುಂಗುರ | ನಾ. ರಾಜಣ್ಣ |
| ೧೦. | ಕೇದಿಗೆ ವನ | ತ. ರಾ. ಸು. |
| ೧೧. | ಸಮಾಜ ಗರ್ಭದಲ್ಲಿ | ಸಿ. ಬಿ. ಚಂದ್ರಶೇಖರ್ |

† "ದೇವದಾಸಿ"—"ಎಚ್ಚಮನಾಯಕ" — ಹಿರಣ್ಣಯ್ಯ

## ಮುಂಬರುವ ಕೈಹೊ

| | | |
|---|---|---|
| ರಂಗನ್ಮನ ವಠಾರ | .. | ನಿರಂಜನ |
| ನಾಟ್ಯಸರಸ್ವತಿ ಶಾಂತಲಾದೇವಿ | | ಅ. ನ. ಕೃ. |
| ತಾಯಿ ಮಕ್ಕಳು | ... | ಅ. ನ. ಕೃ. |

---

* ಪ್ರತಿಗಳು ಮುಗಿದಿವೆ

† ಈ ಎರಡು ನಾಟಕಗಳನ್ನೂ ಒಂದೊಂದಾವರೆ ರೂಪಾಯಿಗೆ ಒಂದೇ ಕೈಹೊತ್ತಿಗೆಯಾಗಿ ಪ್ರಕಟಿಸಿ, ನಿವ್ವಳ ಉತ್ಪನ್ನವನ್ನು 'ಶ್ರೀ ಹಿರಣ್ಣಯ್ಯ ಸ್ಮಾರಕ ನಾಟಕ ಮಂಡಳಿ'ಯವರಿಗೆ ಒಪ್ಪಿಸಲಾಗುವುದು.